

ಕನ್ನಡ ಕವಿಕಾವ್ಯಮಾಲೆ

ನೇಮಿಚಂದ್ರನ

# ಲೀಲಾವತೀ ಪ್ರಬಂಧಂ

ಸಂಪಾದಕರು
ಕೆ. ವೆಂಕಟರಾಮಪ್ಪ, ಎಂ.ಎ.
ದೆ. ಜವರೇಗೌಡ, ಎಂ.ಎ.



ಶಾರದಾ ಮಂದಿರ
ರಾಮಯ್ಯರ್ ರಸ್ತೆ, ಮೈಸೂರು–4

ಕನ್ನಡ ಕವಿಕಾವ್ಯಮಾಲೆ

ನೇಮಿಚಂದ್ರನ

# ಲೀಲಾವತೀ ಪ್ರಬಂಧಂ


ಸಂಪಾದಕರು

ಕೆ. ವೆಂಕಟರಾಮಪ್ಪ, ಎಂ.ಎ.

ದೇ. ಜವರೇಗೌಡ, ಎಂ.ಎ.



ಶಾರದಾ ಮಂದಿರ

ರಾಮಯ್ಯರ್ ರಸ್ತೆ, ಮೈಸೂರು–4

ಈ ಮಾಲೆಯ ಸಂಪಾದಕರು ಮತ್ತು ಪ್ರಕಾಶಕರು

H. M. SHANKAR NARAYAN RAO, M.A.
*Professor and Head of the Department of Kannada*
*Sarada Vilas Callege, Mysore-4*







ಬೆಲೆ :

ಸಾಧಾರಣ ಪ್ರತಿ : 15.00

ಕ್ಯಾಲಿಕೊ ಪ್ರತಿ : 20.00

ಮುದ್ರಕರು
ವೆಸ್ಲಿ ಪ್ರೆಸ್, ಮೈಸೂರು

# ಮೊದಲ ಮಾತು

ನಮ್ಮ ದೇಶಕ್ಕೆ ಪಾಶ್ಚಾತ್ಯಜನಾಂಗದ ಸಂಪರ್ಕದೊಡನೆ ಅಚ್ಚಿನ ಮತ್ತು ಕಾಗದದ ಸೌಕರ್ಯ ದೊರಕಿದಾಗ, ಓಲೆಯ ಗರಿಗಳಲ್ಲಿ ಅಡಗಿದ್ದ ಕನ್ನಡ ಸಾಹಿತ್ಯ ನಿಧಿಯನ್ನು ಹೊರತೆಗೆದು, ಅದರ ವಿಸ್ತಾರ ವೈವಿಧ್ಯಗಳನ್ನು ಕಂಡು, ಆಶ್ಚರ್ಯ ಹಾಗೂ ಸಡಗರಪಟ್ಟುಕೊಳ್ಳುವ ಕಾರ್ಯ, ಕಳೆದ ಶತಮಾನದ ಮೊದಲ ಭಾಗದಲ್ಲಿ ಪ್ರಾರಂಭವಾಗಿ, ಈ ಶತಮಾನದ ಮೊದಲ ಪಾದದವರೆಗೂ ನಡೆದು ಬಂದಿತು. ಈ ಸಾಹಿತ್ಯೋತ್ಸವಕ್ಕೆ ನಮ್ಮ ದೇಶದ ಮತ್ತು ಯೂರೋಪ್ ದೇಶದ ವಿದ್ವಾಂಸರು ತಮ್ಮ ಕೈಲಾದ ಕಾಣಿಕೆಯನ್ನು ಸಲ್ಲಿಸಿದ್ದಾರೆ. ೧೮೬೮ ರಲ್ಲಿ ಬೆಂಗಳೂರಿನ ಸರ್ಕಾರದ ಮುದ್ರಣಾಲಯದಲ್ಲಿ, ಆಗ ವಿದ್ಯಾಭ್ಯಾಸದ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ಜೆ. ಗ್ಯಾರೆಟ್ ಅವರು 'ಶಬ್ದಮಣಿದರ್ಪಣ'ವನ್ನು ಮುದ್ರಿಸಿದುದು ನಿಜವಾಗಿಯೂ ಸೋಜಿಗದ ಸಂಗತಿ. ಹಳೆಯ ಹಸ್ತಪ್ರತಿಗಳನ್ನು ಸಂಗ್ರಹಿಸಿ, ಪ್ರತಿಮಾಡಿಸಿ, ಸಂಪಾದಿಸಿ, ಆಗ ದೊರೆತ ಸಾಧನ ಸಂಪತ್ತಿನೊಡನೆ, ಸಂಪಾದಿಸಿದ ಗ್ರಂಥಗಳಿಗೆ ಪೀಠಿಕೆಗಳನ್ನು ಬರೆದು, ಅಚ್ಚಿಟ್ಟು, ನಮ್ಮ ವಿದ್ವಾಂಸರಿಗೆ ಮಾರ್ಗದರ್ಶನ ಮಾಡಿದ ಕೀರ್ತಿ ಯೂರೋಪಿಯನ್ ವಿದ್ವಾಂಸರಿಗೆ—ಅದರಲ್ಲೂ ಮುಖ್ಯವಾಗಿ ಲೂಯಿರೈಸ್ ಮತ್ತು ಕಿಟ್ಟೆಲ್—ಅವರಿಗೆ ಸಲ್ಲುತ್ತದೆ. ವಿದ್ವಾಂಸರ ಸಹಾಯ ಸಹಕಾರಗಳಿಂದ ಕನ್ನಡ ನಾಡಿನ ಶಾಸನ ಸಂಪತ್ತನ್ನೂ 'ಕವಿರಾಜಮಾರ್ಗ' 'ಪಂಪ ಭಾರತ' 'ಪಂಪ ರಾಮಾಯಣ' 'ಶಬ್ದಾನುಶಾಸನ' 'ಕರ್ಣಾಟಕ ಭಾಷಾಭೂಷಣ'ಗಳನ್ನು ರೈಸರು ಹೊರತಂದರೆ, 'ಶಬ್ದಮಣಿದರ್ಪಣ' 'ಛಂದೋಂಬುಧಿ'ಗಳನ್ನು ಪೀಠಿಕೆಗಳೊಡನೆ ಸಂಪಾದಿಸಿ, ರೆ. ಕಿಟ್ಟೆಲ್ ಅವರು ಹೊರತಂದುದಲ್ಲದೆ, ಕನ್ನಡಕ್ಕೆ ಪ್ರಮಾಣ ಭೂತವಾದ ನಿಘಂಟೊಂದನ್ನು ಒದಗಿಸಿಕೊಟ್ಟರು. ಲೂಯಿ ರೈಸರ ತಮ್ಮಂದಿರಾದ ಇ. ಪಿ. ರೈಸರು ಕನ್ನಡ ಸಾಹಿತ್ಯ ಚರಿತ್ರೆಯನ್ನು ಇಂಗ್ಲೀಷಿನಲ್ಲಿ ಬರೆದು, ಕನ್ನಡವರಿಯದ ಭಾಷಾ ಬಂಧುಗಳಲ್ಲಿ ನಮ್ಮ ಸಾಹಿತ್ಯವನ್ನು ಪ್ರಚಾರಮಾಡಿದರು. ನಷ್ಟವಾಗಿ ಹೋಗುತ್ತಿದ್ದ ಕನ್ನಡದ ಮೊಟ್ಟಮೊದಲನೆಯ ಪ್ರೇಮ ಕಥೆಯಾದ 'ಕರ್ಣಾಟಕ ಕಾದಂಬರಿ'ಯನ್ನು ಒಂದೇ ಒಂದು ಹಸ್ತಪ್ರತಿಯಿಂದ, ಗ್ರಂಥಪಾತವಾಗಿದ್ದ ಭಾಗಗಳನ್ನು ವಿದ್ವಾಂಸರಿಂದ ತುಂಬಿಸಿ, ಉಳಿಸಿಕೊಟ್ಟ ಕೀರ್ತಿ ಶಾಶ್ವತವಾಗಿ ಟಿ. ಮಲ್ಲಪ್ಪನವರಿಗೆ ಸಲ್ಲುತ್ತದೆ. ಇದಲ್ಲದೆ 'ಕಾವ್ಯಮಂಜರಿ' 'ಕಾವ್ಯಕಲಾನಿಧಿ' ಪತ್ರಿಕೆಗಳ ಸಂಪಾದಕರಾದ ಎಂ. ಎ. ರಾಮಾನುಜ ಐಯಂಗಾರರು, ಎಸ್. ಜಿ. ನರಸಿಂಹಾಚಾರ್ಯರ ಸಹಕಾರದಿಂದ ಅನೇಕ ಕನ್ನಡ ಕಾವ್ಯಗಳನ್ನು ಹೊರತಂದರು. ಮೈಸೂರಿನ ಪ್ರಾಚ್ಯಕೋಶಾಗಾರದವರು ಅನೇಕ ಕಾವ್ಯಗಳನ್ನು ಸುಂದರವಾಗಿ ಮುದ್ರಿಸಿ, ಪ್ರಕಟಿಸಿದ ಅಂಶವನ್ನು ನಾವು ಇಲ್ಲಿ ಮರೆಯಬಾರದು. ಕರ್ಣಾಟಕ ಕವಿ ಚರಿತ್ರೆಕಾರರಾದ ಆರ್. ನರಸಿಂಹಾಚಾರ್ಯರು 'ಕಾವ್ಯಾವಲೋಕನ' 'ಶಬ್ದಾನುಶಾಸನ'ಗಳಿಗೆ

ವಿದ್ವತ್ಪೂರ್ಣವಾದ ಪೀಠಿಕೆಗಳನ್ನು ಬರೆದು ರೈಸರ ಕೆಲಸವನ್ನು ಮುಂದುವರಿಸಿದರು. ಕನ್ನಡ ಸಾಹಿತ್ಯನಿಧಿಯ ಶೋಧನೆಯ ಈ ಕೆಲಸ ಮೈಸೂರಿಗೆ ಮತ್ತು ಕೆಲವು ಸಂಸ್ಥೆಗಳಿಗೆ ಮಾತ್ರ ಸೀಮಿತವಾಗಿರಲಿಲ್ಲ. ಕನ್ನಡ ನಾಡಿನ ಇತರ ಕಡೆಯೂ ಈ ಕೆಲಸ ತಕ್ಕಮಟ್ಟಿಗೆ ನಡೆಯಿತು.

ಹೀಗೆ ಕನ್ನಡ ಸಾಹಿತ್ಯನಿಧಿಯನ್ನು ಹೊರತಂದು ಹೆಮ್ಮೆ ಪಡುವಂತಾದ ಮೇಲೆ, ಸಾಹಿತ್ಯ ಕಲಾಪುತ್ರರ ಆತ್ಮ ಪುಷ್ಟಿಗಾಗಿ, ನಮ್ಮ ಸಾಹಿತ್ಯವನ್ನು ಬೆಲೆ ಕಟ್ಟುವ ಕಾರ್ಯ ಮೊದಲಾಯಿತು. ಮೈಸೂರು ಬೆಂಗಳೂರು ಧಾರವಾಡ ಮುಂತಾದ ಸ್ಥಳಗಳಲ್ಲಿ ಸಂಘ ಸಂಸ್ಥೆಗಳು ಮೇಲಾಟವಾಡಿ ವಿದ್ವಾಂಸರ ಸಹಾಯದಿಂದ ಮುದ್ದಣ, ರನ್ನ, ಕುಮಾರ ವ್ಯಾಸ, ನಾಗಚಂದ್ರ ಮುಂತಾದ ಕವಿಗಳ ಮೇಲೆ ಪ್ರಶಸ್ತಿ ಗ್ರಂಥಗಳನ್ನು ಹೊರ ತಂದವು. 'ನಾಡೋಜಪಂಪ' ಎಂಬ ಹೆಬ್ಬೊತ್ತಿಗೆ ಒಬ್ಬ ವ್ಯಕ್ತಿಯ ಸಾಹಿತ್ಯ ವ್ಯವಸಾಯದ ಸಾಹಸದ ಪ್ರತೀಕ. 'ಶಬ್ದಮಣಿದರ್ಪಣ' 'ಪಂಪರಾಮಾಯಣ' ಗಳಸ್ನಲ್ಲದೆ, ಪೀಠಿಕೆ ಶಬ್ದಕೋಶಗಳೊಡನೆ ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ 'ಪಂಪಭಾರತ' ಗ್ರಂಥಸಂಪಾದನೆಯ ಕಾರ್ಯದಲ್ಲಿ ಒಂದು ಮೈಲುಗಲ್ಲು.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಭಾಷಾಸಾಹಿತ್ಯಗಳ ಪ್ರೌಢ ವಿದ್ಯಾ ವ್ಯಾಸಂಗದ ಕ್ರಮ ಏರ್ಪಟ್ಟು, ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯ ಯೋಜನೆ ಕಾರ್ಯಗತವಾದಾಗ ಕನ್ನಡ ವ್ಯಾಸಂಗಕ್ಕೆ ಉತ್ತೇಜನ ದೊರಕಿ, ಅದರ ಸಾರಸ್ವತ ಕ್ಷೇತ್ರ ವಿಸ್ತಾರವಾಯಿತು. ವಿಶ್ವವಿದ್ಯಾನಿಲಯದ ಕನ್ನಡ ಗ್ರಂಥಮಾಲೆಯಲ್ಲಿ ಶುದ್ಧವಾದ ಪಾಠಗಳನ್ನು ಒಳಗೊಂಡು, ಪೀಠಿಕೆ ಶಬ್ದಕೋಶಗಳೊಡನೆ ಹೊರಬಿದ್ದ ಕಾವ್ಯಗಳೂ, ಕಾವ್ಯಸಂಗ್ರಹಗಳೂ ವಿಶ್ವವಿದ್ಯಾನಿಲಯದ ಗೌರವವನ್ನು ಕಾಯ್ದು, ಉತ್ತಮ ವಿಮರ್ಶೆಯ ಅಭಿರುಚಿಗೂ, ಗ್ರಂಥ ಸಂಪಾದನಕಾರ್ಯಕ್ಕೂ ಮಾರ್ಗ ದರ್ಶಕಗಳಾದವು. ಪ್ರಚಾರೋಪನ್ಯಾಸಮಾಲೆಯಲ್ಲಿ ಸಂಗ್ರಹವಾಗಿ, ಸಾರವತ್ತಾಗಿ, ಸಪ್ರಮಾಣವಾಗಿ ಹೊರಬಂದ ಕವಿಕಾವ್ಯ ವಿಷಯಕವಾದ ಹೊತ್ತಗೆಗಳು, ನಮ್ಮ ಜನರಿಗೆ ಕವಿಗಳಲ್ಲಿದ್ದ ಕುತೂಹಲವನ್ನು ಕೆರಳಿಸಿದವು. ವಿದ್ವತ್ತಿಗೂ ಸರಳತೆಗೂ ಹಗೆತನ. ಆದರೆ ಈ ಹೊತ್ತಗೆಗಳು ಒಂದು ಹದವಾದ ಪ್ರಮಾಣದಲ್ಲಿ ಈ ಗುಣಗಳನ್ನು ಮೈಗೂಡಿಸಿ ಕೊಂಡಿವೆ. ಇತ್ತೀಚಿಗೆ ಅಸ್ತಿತ್ವಕ್ಕೆ ಬಂದ ಕರ್ನಾಟಕ ವಿಶ್ವವಿದ್ಯಾನಿಲಯವೂ ಈ ಮಾರ್ಗದಲ್ಲಿ ದಿಟ್ಟ ಹೆಜ್ಜೆಯನ್ನಿಟ್ಟು, ಶಬ್ದಕೋಶ ಪೀಠಿಕೆಗಳೊಡನೆ ಉತ್ತಮವಾಗಿ ಸಂಪಾದಿಸಿದ ಕಾವ್ಯಗಳನ್ನು ಹೊರತಂದಿದೆ. ಇದಿಷ್ಟೂ ಸಂಘಸಂಸ್ಥೆಗಳ ಮಾತಾದರೆ ಕನ್ನಡ ವಿದ್ವಾಂಸರು ಭಾಷಾಭಿಮಾನದಿಂದಲೋ, ಕವಿಯ ಮೇಲಣ ಪ್ರೇಮ ದಿಂದಲೋ, ಅಚ್ಚಾದ ಉದ್ಗ್ರಂಥಗಳನ್ನೇ ಮತ್ತೆ ಕೈಗೆ ತೆಗೆದುಕೊಂಡು, ಹೊಸ ಹಸ್ತಪ್ರತಿಗಳೊಡನೆ ಸಂಪಾದಿಸಿ, ಕವಿಕಾವ್ಯ ವಿಮರ್ಶೆಯನ್ನು ಸೇರಿಸಿ, ಹೊರತರು ತ್ತಿದ್ದಾರೆ. ಇದರಿಂದ ಕನ್ನಡ ಸಾಹಿತ್ಯ ಚರಿತ್ರೆಯ ರಚಕರಿಗೆ ಎಂಥ ಸಹಾಯ ವಾಗುವುದೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ. 'ಆದಿಪುರಾಣ' 'ಸಿದ್ಧರಾಮಚರಿತ್ರೆ' 'ಸಂಬಿಯಣ್ಣನ ರಗಳೆ' 'ಗದಾಯುದ್ಧ' 'ಗದಾಯುದ್ಧ ಸಂಗ್ರಹ' 'ವಡ್ಡಾರಾಧನೆ'— ನೆನಪಿಗೆ ಬಂದ ಈ ಕೆಲವು ಕಾವ್ಯಗಳ ಸಂಪಾದನ ಕಾರ್ಯ ಎಷ್ಟು ವೇಗದಿಂದ,

ಎಷ್ಟು ಚೆನ್ನಾಗಿ ಸಾಗುತ್ತಿದೆ ಎಂದು ಸುವ್ಯಕ್ತವಾಗುತ್ತದೆ. ಈ ಸಾಲಿನಲ್ಲಿ ಕೆಲಸ ಮಾಡುತ್ತಿರುವ ವಿದ್ವಾಂಸರಲ್ಲಿ ಪ್ರೊ. ದೇ. ಜವರೇಗೌಡರು ಅಗ್ರಗಣ್ಯರಾಗಿದ್ದಾರೆ.

ನೇಮಿಚಂದ್ರನ 'ಲೀಲಾವತೀ ಪ್ರಬಂಧಂ' ಸುಮಾರು ಅರ್ಧಶತಮಾನದ ಹಿಂದೆ ಅಚ್ಚಾಗಿತ್ತು. ಈಗ ಹೊಸ ಹಸ್ತಪ್ರತಿಗಳೊಡನೆ ಪ್ರೊ. ಜವರೇಗೌಡರು, 'ಕನ್ನಡ ಭಾಗವತ'ವನ್ನು ಸಂಪಾದಿಸಿ ಕೀರ್ತಿಪಡೆದಿರುವ ಶ್ರೀ. ಕೆ. ವೆಂಕಟರಾಮಪ್ಪನವರೊಡನೆ ಇದನ್ನು ಸಂಪಾದಿಸಿ ಹೊರತಂದಿದ್ದಾರೆ. ಗ್ರಂಥಸಂಪಾದನ ಕಾರ್ಯದಲ್ಲಿ, ಕೃತಿಗಳನ್ನು ತೂಗಿ ಬೆಲೆ ಕಟ್ಟುವುದರಲ್ಲಿ ಪ್ರೊ. ಜವರೇಗೌಡರದು ಪಳಗಿದಕೈ. ಕನಕದಾಸನ 'ನಳಚರಿತ್ರೆ' 'ರಾಮಧ್ಯಾನ ಚರಿತ್ರೆ' ಆಂಡಯ್ಯನ 'ಕಬ್ಬಿಗರ ಕಾವಂ' ಕಾವ್ಯಗಳನ್ನು ಅವರು ಸಂಪಾದಿಸಿ ಶಬ್ದಕೋಶ ಪೀಠಿಕೆಗಳೊಡನೆ ಹೊರತಂದಿದ್ದಾರೆ; ನಯಸೇನನ 'ಧರ್ಮಾಮೃತ'ವನ್ನು ಸಂಗ್ರಹಿಸಿ ಅದಕ್ಕೆ ವಿದ್ವತ್ಪೂರ್ಣವಾದ ಪೀಠಿಕೆಯನ್ನು ಬರೆದಿದ್ದಾರೆ. ಇತರರೊಡನೆ ಇವರು ಸಂಪಾದಿಸಿ ಹೊರತಂದಿರುವ ರನ್ನನ 'ಅಜಿತಪುರಾಣ', ಹರಿಹರನ 'ಗಿರಿಜಾಕಲ್ಯಾಣ ಸಂಗ್ರಹ' ಈಗಾಗಲೇ ವಿದ್ವಾಂಸರ ಮೆಚ್ಚಿಗೆಯನ್ನು ಪಡೆದಿವೆ. ಪ್ರೊ. ಜವರೇಗೌಡರ ವಿದ್ವತ್ಪೂರ್ಣವಾದ ಕವಿಕಾವ್ಯ ವಿಮರ್ಶೆಯನ್ನು ಒಳಗೊಂಡು, ಈ ಇಬ್ಬರು ವಿದ್ವಾಂಸರಿಂದ ಸಂಪಾದಿತ ಈ ಕಾವ್ಯ ನನ್ನ ಮಿಕ್ಕ ಪ್ರಕಟನೆಗಳಂತೆ ಕನ್ನಡ ನಾಡಿನಲ್ಲಿ ಮನ್ನಣೆ ಪಡೆಯಲೆಂದು ಆಶಿಸುತ್ತೇನೆ.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಆಚಾರ್ಯ ಶ್ರೀಯವರು ಹುಟ್ಟುಹಾಕಿದ ಕನ್ನಡಶಾಖೆ ಪ್ರೊ. ಟಿ. ಎಸ್. ವೆಂ.; ಡಾ. ಎ. ಆರ್. ಕೃ ಅವರ ಕಾಲದಲ್ಲಿ ಕುಡಿವಡೆದು ಚಿಗುರಿ, ಡಾ. ಕುವೆಂಪು ಅವರ ಕಾಲದಲ್ಲಿ ಹೆಮ್ಮರನಾಗಿ ಬೆಳೆದು, ಪ್ರೊ. ತೀ. ನಂ. ಶ್ರೀಯವರ ಅಧಿಕಾರಾವಧಿಯಲ್ಲಿ ನಾಲ್ಕು ಕಡೆಗೂ ಶಾಖೆಗಳನ್ನು ಚಾಚಿ, ಪ್ರೊ. ದೇ. ಜವರೇಗೌಡರ ಕಾಲದಲ್ಲಿ ಹಣ್ಣು ಬಿಡಲು ತೊಡಗಿದೆ. ವಿದ್ವಾಂಸರಾದ ಅವರು ತಾವೇ ಗ್ರಂಥಕರ್ತರಾಗಿರುವುದಲ್ಲದೆ, ಹತ್ತಾರು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುತ್ತ, ತಮ್ಮ ಸುತ್ತಲೂ ವಿದ್ವತ್‌ಲೇಖಕರ ಪಡೆಯೊಂದನ್ನು ಕಟ್ಟಿಕೊಂಡಿದ್ದಾರೆ. ನಮ್ಮೆಲ್ಲರ ಗುರುಗಳಾದ ಪ್ರೊ. ತೀ. ನಂ. ಶ್ರೀಯವರು ರೂಪಿಸಿದ ಸಾಹಿತ್ಯ ಚರಿತ್ರೆಯ ರಚನೆಯನ್ನು ಕೈಗೆತ್ತಿಕೊಂಡು ಪ್ರೊ. ಗೌಡರು ಅದರ ಮೊದಲ ಸಂಪುಟವನ್ನು ಇಷ್ಟರಲ್ಲೇ ಹೊರತರುವವರಿದ್ದಾರೆ. ಅದರ ರಚನೆ ಕನ್ನಡ ಶಾಖೆಯಿಂದ ಮುಗಿದಾಗ ವಿಶ್ವವಿದ್ಯಾನಿಲಯಕ್ಕೆ ಎಂದೂ ಮಾಸದ ಕೀರ್ತಿ ಬರುತ್ತದೆ. ಇದೂ ಅಲ್ಲದೆ ಕನ್ನಡ ಏಳ್ಗೆಗಾಗಿ ಹತ್ತಾರು ಯೋಜನೆಗಳು ಅವರ ಬತ್ತಳಿಕೆಯಲ್ಲಿವೆ. ಎಲ್ಲಿ ಕನ್ನಡ ಕೆಲಸವಿದೆಯೋ--ಅದು ಸಂಘವನ್ನು ಕಟ್ಟುವುದಾಗಿರಬಹುದು, ಉಪನ್ಯಾಸವಾಗಿರಬಹುದು, ಪ್ರಕಟನೆಯಾಗಿರಬಹುದು, ಬೇರೆ ಏನೇ ಆಗಿರಬಹುದು—ಅದಕ್ಕೆ ಅವರ ಮೂರ್ತ ಸಹಕಾರ ಬೆಂಬಲ ಸದಾಸಿದ್ಧ. ಅವರ ಸಹಕಾರಹಸ್ತ ಕನ್ನಡ ಶಾಖೆಗೆ ಮಾತ್ರ ಸೀಮಿತವಾಗಿಲ್ಲ. ವಿಶ್ವವಿದ್ಯಾನಿಲಯದ ಕಲಾಶಾಖೆಗೆ ಡೀನರಾಗಿರುವ ಅವರು ಇತರ ಶಾಖೆಗಳಿಗೂ ತಮ್ಮ ಸಹಕಾರ ಹಸ್ತವನ್ನು ನೀಡಿದ್ದಾರೆ. ಹೆಚ್ಚು ಮಾತಿನಿಂದೇನು? 'ಕನ್ನಡಕುಲ'ದ ಆಚಾರ್ಯರಾದ ಶ್ರೀಯವರು ಹೊತ್ತಿಸಿ, ಇತರರು

ಬೆಳಗಿದ ಪಂಜನ್ನು ಪ್ರೊ. ಜವರೇಗೌಡರು ಪ್ರಜ್ವಲಿಸಿದ್ದಾರೆ. ಅವರ ಕಾರ್ಯಕ್ಷೇತ್ರವನ್ನು ಕಂಡ ಹಿರಿಯರು ಸಂತೋಷಗೊಂಡಿರುವುದೇ ನನ್ನ ಈ ಮಾತಿಗೆ ಸಾಕ್ಷಿ.

ನಲವತ್ತು ವರ್ಷಗಳಿಂದ ಕನ್ನಡದ ಆಗುಹೋಗುಗಳನ್ನು ಕಂಡಿದ್ದೇನೆ. ಕನ್ನಡದ ವಿಷಯದಲ್ಲಿ ಅಸಡ್ಡೆಯನ್ನು ತೊಲಗಿಸಿ, ಅದರಲ್ಲಿ ಗೌರವ ಮೂಡುವಂತೆ ಮಾಡಿ, ವಿಶ್ವವಿದ್ಯಾನಿಲಯದಲ್ಲಿ, ನಾಡಿನಲ್ಲಿ ಅದಕ್ಕೆ ಗೌರವ ಪದವಿ ಸಲ್ಲುವಂತೆ ಮಾಡಲು ಅನೇಕ ಹಿರಿಯರು ಶ್ರಮಿಸಿದ್ದಾರೆ. ಆಗಿನ ದುರ್ದಿನಗಳೆಲ್ಲಿ; ಈಗಿನ ವೈಭವದ ದಿನಗಳೆಲ್ಲಿ? ಈ ಎರಡನ್ನೂ ಕಂಡವರಿಗೆ ಕನ್ನಡದ ಭವಿಷ್ಯದ ವಿಷಯದಲ್ಲಿ ಹರ್ಷ ತಾನೇ ತಾನಾಗಿ ಉಕ್ಕುತ್ತದೆ. ಈ ವೈಭವಕ್ಕೆ ಕಾರಣರಾದ ಮಹನೀಯರಲ್ಲಿ ಈ ಕಾವ್ಯದ ಸಂಪಾದಕರ ಹೆಸರು ಉನ್ನತವಾದ ಸ್ಥಾನದಲ್ಲಿ ನಿಲ್ಲುತ್ತದೆಯೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಇನ್ನು ಕೃತಜ್ಞತೆಯ ಎರಡು ಮಾತುಗಳು. ನನ್ನ ವಿದ್ಯಾಗುರುಗಳಾದ ಶ್ರೀ ಕೆ. ವೆಂಕಟರಾಮಪ್ಪನವರೂ, ಪ್ರಿಯ ಮಿತ್ರರಾದ ಪ್ರೊ. ಜವರೇಗೌಡರೂ ಈ ಗ್ರಂಥದ ಪ್ರಕಟನೆಗಾಗಿ ಒಪ್ಪಿಗೆ ಇತ್ತು ನನ್ನ ಮಾಲೆಯ ತೂಕವನ್ನು ಹೆಚ್ಚಿಸಿದ್ದಾರೆ. ಈ ಗ್ರಂಥ ಬಹುದಿನದ ಗರ್ಭವಾಸವನ್ನು ಅನುಭವಿಸಿ ಹೊರಬರುತ್ತಿದೆ. ಇದನ್ನು ಇಷ್ಟು ದಿನ ಸಾಕಿ ಸಲಹಿದ ತಾಳ್ಮೆ ವೆಸ್ಲಿ ಪ್ರೆಸ್ಸಿನ ಅಧಿಕಾರವರ್ಗದ್ದು. ನನ್ನಿಂದಾದ ತೊಂದರೆಗಳನ್ನು ಸಹಿಸಿಕೊಂಡು, ಗ್ರಂಥವನ್ನು ಮುದ್ದಾಗಿ ಮುದ್ರಿಸಿಕೊಟ್ಟ ವೆಸ್ಲಿ ಪ್ರೆಸ್ಸಿಗೂ, ನನ್ನ ಮೇಲೆ ಅಮಿತವಾದ ವಿಶ್ವಾಸವನ್ನಿಟ್ಟಿರುವ ಸಂಪಾದಕರಿಗೂ ಅತ್ಯಂತ ಕೃತಜ್ಞನಾಗಿದ್ದೇನೆ.

ಶಾರದಾ ಮಂದಿರ
ರಾಮಯ್ಯರ್‌ರಸ್ತೆ, ಮೈಸೂರು-4
8-12-66

**ಎಚ್. ಎಂ. ಶಂಕರನಾರಾಯಣರಾವ್**



# ವಿಷಯಾನುಕ್ರಮಣಿಕೆ


| | ಪುಟ |
|---|---|
| ಮೊದಲ ಮಾತು .... .... .... | 3 |
| ಕವಿ-ಕಾವ್ಯವಿಮರ್ಶೆ .... .... .... | i |
| ಲೀಲಾವತೀ ಪ್ರಬಂಧಂ .... .... .... | |
| ೧. ಪ್ರಥಮಾಶ್ವಾಸಂ .... .... .... | ೩ |
| ೨. ದ್ವಿತೀಯಾಶ್ವಾಸಂ .... .... .... | ೨೦ |
| ೩. ತೃತೀಯಾಶ್ವಾಸಂ .... .... .... | ೪೮ |
| ೪. ಚತುರ್ಥಾಶ್ವಾಸಂ .... .... .... | ೬೬ |
| ೫. ಪಂಚಮಾಶ್ವಾಸಂ .... .... .... | ೯೩ |
| ೬. ಷಷ್ಠಾಶ್ವಾಸಂ .... .... .... | ೧೧೭ |
| ೭. ಸಪ್ತಮಾಶ್ವಾಸಂ .... .... .... | ೧೪೬ |
| ೮. ಅಷ್ಟಮಾಶ್ವಾಸಂ .... .... .... | ೧೭೨ |
| ೯. ನವಮಾಶ್ವಾಸಂ .... .... .... | ೧೯೭ |
| ೧೦. ದಶಮಾಶ್ವಾಸಂ .... .... .... | ೨೨೧ |
| ೧೧. ಏಕಾದಶಾಶ್ವಾಸಂ .... .... .... | ೨೪೨ |
| ೧೨. ದ್ವಾದಶಾಶ್ವಾಸಂ .... .... .... | ೨೬೬ |
| ೧೩. ತ್ರಯೋದಶಾಶ್ವಾಸಂ .... .... .... | ೨೮೩ |
| ೧೪. ಚತುರ್ದಶಾಶ್ವಾಸಂ .... .... .... | ೩೧೧ |
| ಶಬ್ದಕೋಶ .... .... .... | ೩೪೩ |

# ಕವಿ-ಕಾವ್ಯವಿಮರ್ಶೆ

## ೧. ಕವಿ ವಿಷಯ

ನೇಮಿಚಂದ್ರ ಎಲ್ಲಿಯೂ ಸ್ವವಿಷಯವನ್ನು ಹೇಳಿಕೊಂಡಿಲ್ಲ. ಲೀಲಾವತಿಯನ್ನು "ಒಂದೆ ಗಡ ಬರಿಸಕ್ಕೆ ಬರೆದಂ" ಎಂದು ಹೇಳಿಕೊಂಡಿದ್ದಾನೆಯೇ ಹೊರತಾಗಿ, ಎಂದು ಆ ಕೃತಿಯನ್ನು ಬರೆದ ಎನ್ನುವ ವಿಷಯದಲ್ಲಿ ಅವನ ಕೃತಿಗಳಿಂದ ನೆರವು ದೊರೆಯುವುದಿಲ್ಲ. ಅವನು ಪೂರ್ವಕವಿಗಳನ್ನಾದರೂ ಸ್ಮರಿಸಿದ್ದರೆ ಅವನ ಕಾಲವನ್ನು ಊಹಿಸಬಹುದಿತ್ತು. ಅದೂ ಇಲ್ಲ. ಕಾವ್ಯಾವಲೋಕನದಲ್ಲಿ ನೇಮಿಚಂದ್ರನ ಪದ್ಯಗಳಾವುವೂ ದೊರೆಯುವುದಿಲ್ಲ. ಶಬ್ದಮಣಿದರ್ಪಣದಲ್ಲಿ ಒಂದೆರಡಾದರೂ ಸಿಗುತ್ತವೆ. ಸೂಕ್ತಿಸುಧಾರ್ಣವದಲ್ಲಂತು ಇವನ ಪದ್ಯಗಳು ಯಥೇಚ್ಛವಾಗಿ ಉದ್ಧೃತವಾಗಿವೆ. ಜನ್ನ (1209) ಇವನನ್ನು ಸ್ಮರಿಸಿದ್ದಾನೆ. ಆದ್ದರಿಂದ ನೇಮಿಚಂದ್ರ 1145 ರಿಂದ 1209 ರವರೆಗಿನ ನಡುವಣ ಅವಧಿಯಲ್ಲಿ ಜೀವಿಸಿದ್ದಿರಬೇಕೆಂದು ಊಹಿಸಬಹುದಾಗಿದೆ.

ಲೀಲಾವತಿಯ 14 ನೆಯ ಆಶ್ವಾಸದ 136 ಮತ್ತು 150 ನೆಯ ವೃತ್ತಗಳಲ್ಲಿ ಲಕ್ಷ್ಮಣದೇವನ ಪ್ರಶಸ್ತಿಬರುತ್ತದೆ. ನೇಮಿನಾಥ ಪುರಾಣದ ಪ್ರತಿ ಆಶ್ವಾಸಾಂತ ಗದ್ಯದಲ್ಲಿ "ಶ್ರೀಮತ್ಪ್ರತಾಪ ಚಕ್ರವರ್ತಿ ವೀರಬಲ್ಲಾಳದೇವ ಪ್ರಸಾದಾಸಾದಿತ ಮಹಾಪ್ರಧಾನ ಸಜ್ಜಿವಳ್ಳ ಪದ್ಮನಾಭದೇವ ಕಾರಿತಮುಮಪ್ಪ ನೇಮಿನಾಥ ಪುರಾಣದೊಳ್" ಎಂಬ ವಾಕ್ಯ ಸೇರಿದೆ. ಇದೇ ಕಾವ್ಯದ 6 ನೆಯ ಆಶ್ವಾಸದ 38 ಮತ್ತು 39 ನೆಯ ಪ್ರಾಕೃತ ಪದ್ಯಗಳಲ್ಲಿ ಈ ಸಜ್ಜಿವಳ್ಳ ಪದ್ಮನಾಭನ ಪ್ರಶಂಸೆಯಿದೆ. ಈ ಕಾರಣಗಳಿಂದ ನೇಮಿಚಂದ್ರ ಲಕ್ಷ್ಮಣರಾಜ ಮತ್ತು ವೀರಬಲ್ಲಾಳನ ಆಸ್ಥಾನದಲ್ಲಿದ್ದಿರಬೇಕೆಂದೂ, ಸುಮಾರು 1170 ರಲ್ಲಿ ಅವನು ಜೀವಿಸಿರಬೇಕೆಂದೂ ಕವಿಚರಿತಕಾರರು ನಿರ್ಣಯಿಸಿದ್ದಾರೆ. 1185—1195 ರ ಅವಧಿಯಲ್ಲಿ ಕವಿ ಈ ಗ್ರಂಥಗಳನ್ನು ರಚಿಸಿರಬೇಕೆಂದು ಡಾ. ಎ. ವೆಂಕಟಸುಬ್ಬಯ್ಯನವರು ಹೇಳುತ್ತಾರೆ.

ಇವನಿಗೆ ಕಲಾಕಾಂತ, ಕವಿರಾಜಮಲ್ಲ, ಕವಿಧವಳ, ಶೃಂಗಾರ ಕಾರಾಗೃಹ, ಕವಿರಾಜಕುಂಜರ, ಸಾಹಿತ್ಯವಿದ್ಯಾಧರ, ವಿಶ್ವವಿದ್ಯಾವಿನೋದ, ಭಾರತೀಚಿತ್ತಚೋರ, ಚತುರ್ಭಾಷಾಚಕ್ರವರ್ತಿ, ವಾಗ್ವಲ್ಲಕೀವೈಣಿಕ—ಮೊದಲಾದ ಬಿರುದುಗಳಿದ್ದಂತೆ ತೋರುತ್ತದೆ. ಈ ಬಿರುದುಗಳು ಯಾರಾದರೂ ಕೊಟ್ಟದ್ದೋ ಅಥವಾ ಇವನೇ ಇಟ್ಟುಕೊಂಡದ್ದೋ ಗೊತ್ತಿಲ್ಲ.

ನೇಮಿಚಂದ್ರ ತನ್ನ ಚಂಪೂಕಾವ್ಯಗಳಲ್ಲಿ ಅನೇಕ ಹೊಸ ಛಂದಸ್ಸುಗಳನ್ನು ಬಳಸಿದ್ದಾನೆ: ಪ್ರಸಿದ್ಧ ವೃತ್ತಗಳ ಜೊತೆಗೆ ಸ್ವಾಗತ, ಭುಜಂಗ ಪ್ರಯಾತ, ಖಚರಪ್ಲುತ, ಛಂದ, ಪ್ರಹರ್ಷಿಣೀ, ರುಚಿರ, ಪುಷ್ಪಿತಾಗ್ರ, ದ್ರುತವಿಳಂಬಿತ, ಸುಮಂಗಲೀ, ವಸಂತತಿಳಕ, ರಥೋದ್ಧತ ಮುಂತಾದ ಅಪರೂಪವಾದ ವೃತ್ತಗಳನ್ನು ಬಳಸಿದ್ದಾನೆ. ಅಚ್ಚಗನ್ನಡದ ತ್ರಿಪದಿ ಲಯೋತ್ತರಗಳನ್ನು ರಚಿಸಿದ್ದಾನೆ. ಉತ್ಸಾಹರಗಳೆಯ ಸವಿ

ತೋರಿಸುತ್ತಾನೆ. ಮೇಲಾಗಿ 11 ನೆಯ ಆಶ್ವಾಸದಲ್ಲಿ 10 ನೆಯ ಕಂದ ಪದ್ಯವಾದನಂತರ ಹೊಸರಗಳೆಯ ಪ್ರಯೋಗ ನಡಸಿದ್ದಾನೆ. ಅದು ಲಲಿತರಗಳೆಯೇ ಸರಿ. ಪ್ರಾಸ ಸಕ್ರಮವಾಗಿಲ್ಲ. ಪ್ರಾಸರಹಿತ ರಗಳೆಯನ್ನು ಆಗಿನ ಕಾಲದಲ್ಲಿ ಬಳಸಿದುದು ಕವಿಯ ಆತ್ಮವಿಶ್ವಾಸಕ್ಕೂ ಕ್ರಾಂತಿ ಮನೋಭಾವನೆಗೂ ಸಾಕ್ಷಿಯಾಗಿದೆ.

ಇವನು ಬರೆದಿರುವ ಗ್ರಂಥಗಳು ಎರಡು: ಲೀಲಾವತಿ ಮತ್ತು ನೇಮಿನಾಥ ಪುರಾಣ. ಮೊದಲನೆಯದು ಕಲ್ಪಿತಕಥೆ; ಎರಡನೆಯದು 22 ನೆಯ ತೀರ್ಥಂಕರನಾದ ನೇಮಿನಾಥನನ್ನು ಕುರಿತದ್ದು.

ಲೀಲಾವತಿ ಭಾರತೀಯರಿಗೆ ಬಹುಪ್ರಿಯವಾದ ಹೆಸರು; ಆ ಹೆಸರಿನಲ್ಲಿ ಕಲ್ಪನಾಸಾಧ್ಯವಾದ ರಸಸಂಪತ್ತು ತುಂಬಿದೆ. ಆದ್ದರಿಂದ ಆ ಹೆಸರಿನ ಅನೇಕ ಕೃತಿಗಳು ಭಾರತೀಯ ಭಾಷೆಗಳಲ್ಲಿ ವಿಪುಲವಾಗಿವೆ; ಆ ಹೆಸರಿನ ವ್ಯಕ್ತಿಗಳು ಪ್ರಾಚೀನ ಪುರಾಣ ಕಾವ್ಯಗಳಲ್ಲಿ ಆಗಾಗ್ಗೆ ಕಾಣಿಸಿಕೊಳ್ಳುತ್ತಾರೆ. ಬೃಹತ್ಕಥೆಯಲ್ಲಿ ಮಾಯ ಎಂಬ ರಾಕ್ಷಸನ ಹೆಂಡತಿಯ ಹೆಸರು ಲೀಲಾವತಿ. ಪುರಾಣಗಳಲ್ಲಿ ಉಕ್ತವಾಗಿರುವ ಅವೀಕ್ಷಿತನ ಹೆಂಡತಿಯ ಹೆಸರು ಲೀಲಾವತಿ. ಜಿನೇಶ್ವರನಿಂದ (1038) ಪ್ರಾಕೃತದಲ್ಲಿ ರಚಿತವಾದ 'ನಿರ್ವಾಣ ಲೀಲಾವತಿ' ಎಂಬ ಹೆಸರಿನ ಕಾವ್ಯವೊಂದಿದೆ. ಆದರೆ ಅದು ಜೈನಮತದ ತತ್ತ್ವೋಪದೇಶಕ್ಕೆ ಮೀಸಲಾದ ಕೃತಿಯಾದ್ದರಿಂದ ಅದಕ್ಕೂ ಕುತೂಹಲನ ಲೀಲಾವತಿಗೂ ಯಾವ ಸಂಬಂಧವೂ ಇದ್ದಂತೆ ಕಾಣುವುದಿಲ್ಲ. ಶ್ರೀವತ್ಸಾಚಾರ್ಯ (1025) ನೆಂಬುವನು ಕಣಾದ ಸೂತ್ರಕ್ಕೆ 'ಲೀಲಾವತಿ' ಎಂಬ ಭಾಷ್ಯವನ್ನೂ, ವಲ್ಲಭಾಚಾರ್ಯನೆಂಬುವನು (1150) ನ್ಯಾಯ ಲೀಲಾವತಿ ಎಂಬ ವೈಶೇಷಿಕ ದರ್ಶನಗ್ರಂಥವನ್ನೂ ಬರೆದಿದ್ದಾರೆ. ಭಾಸ್ಕರಾಚಾರ್ಯ (1150) ನ 'ಲೀಲಾವತಿ' ಗಣಿತ ಜಗತ್ಪ್ರಸಿದ್ಧವಾಗಿದೆ. ನೇಮಿಚಂದ್ರನ ಲೀಲಾವತಿ ಪ್ರಬಂಧಕ್ಕೂ ಕುತೂಹಲನ ಲೀಲಾವತಿಗೂ ಹೆಚ್ಚು ಸಂಬಂಧವಿರುವಂತೆ ಕಾಣುವುದಿಲ್ಲ. ರಾಮ ಪಾಣಿವಾಡನೆಂಬ ಕೇರಳದ ನಾಟಕಕಾರ 18 ನೆಯ ಶತಮಾನದ ಮಧ್ಯಭಾಗದಲ್ಲಿ ಪ್ರಾಕೃತದಲ್ಲಿ ಲೀಲಾವತಿಯೆಂಬ ವೀಥಿಯನ್ನು ರಚಿಸಿದ್ದಾನೆ. ಇವನು ಕುತೂಹಲನ ಕಾವ್ಯವನ್ನು ನೋಡಿದ್ದಿರಬಹುದಾದರೂ, ಈ ಇಬ್ಬರ ಕಾವ್ಯಗಳಲ್ಲಿ ಎದ್ದು ಕಾಣುವಂಥ ಸಾದೃಶ್ಯಗಳಿಲ್ಲ. ಒಟ್ಟಿನಲ್ಲಿ ಲೀಲಾವತಿ ಎಂಬ ಹೆಸರಿನ ಪ್ರಾಚೀನ ಕಾವ್ಯವೆಂದರೆ ಕುತೂಹಲನದೆಂದು ಧಾರಾಳವಾಗಿ ಹೇಳಬಹುದು.[1]

## ೨. ಲೀಲಾವತಿ ಪ್ರಬಂಧದ ಕಥಾಸಾರ

ಚಂದ್ರಚೂಡಾಮಣಿನಿಭನೂ ದುಷ್ಟನಿಗ್ರಹ ಶಿಷ್ಟಪ್ರತಿಪಾಲನ ಸಮರ್ಥನೂ ಆದ ಚೂಡಾಮಣಿ ಭೂಲೋಕದ ದೊರೆ. ಅಪೂರ್ವ ರೂಪಶೋಭಾವತಿಯೂ ಪುಣ್ಯಶೀಲವತಿಯೂ ಆದ ಪದ್ಮಾವತಿ ಅವನ ಸತಿ. ವಿಷ್ಣು ಲಕ್ಷ್ಮಿಯರನ್ನು

1 ಈ ಪೀಠಿಕೆಯಲ್ಲಿ ಬರುವ ಪ್ರಾಕೃತ ಲೀಲಾವತಿ ಈ ಸಂಬಂಧವಾದ ವಿಷಯಗಳನ್ನು ಡಾ. ಎ. ಎನ್. ಉಪಾಧ್ಯೆಯವರು ಸಂಪಾದಿಸಿ, ಭಾರತೀಯ ವಿದ್ಯಾಭವನ ಪ್ರಕಟಿಸಿರುವ ಅದೇ ಹೆಸರಿನ ಗ್ರಂಥದಿಂದ ಸಂಗ್ರಹಿಸಿದೆ.

ಸೋಲುವ ಆ ಸತಿಪತಿಗಳಿಗೆ ಶೃಂಗಾರ ಕಾರಾಗೃಹನೂ ಪ್ರತ್ಯಕ್ಷ ತೀರ್ಥೇಶ್ವರನೂ ರೂಪಕಂದರ್ಪನೂ ಕವಿತಾವಿಲಾಸನೂ ಜನತಾನಂದೈಕನೇತ್ರನೂ ಪುರುಷಾರ್ಥ ಪರಮಪಂಡಿತನೂ ಯೌವನವನಕೇಳಿ ಕಾಮಕುಂಜರನೂ ಶೃಂಗಾರಸಾರ ಸರ್ವಜ್ಞನೂ ನೀತಿನಿಪುಣನೂ ಆದ ಕಂದರ್ಪದೇವ ಮಗ. ಗುಣಗಂಧಾಢ್ಯ ಪ್ರಧಾನಾತ್ಮಜನಾದ ಮಕರಂದ ಕಂದರ್ಪದೇವನ ಪ್ರಿಯಮಿತ್ರ.

ಒಂದುದಿನ ಚೆಲ್ವುವಡೆದ ಚಂದ್ರೋದಯದ ದಿಸದಲ್ಲಿ ಪುರಪುರಂಧ್ರೀಜನದ ಚಂದ್ರಿಕಾಮಹೋತ್ಸವವನ್ನು ನೋಡಲುತ್ಸುಕನಾಗಿ ಕಂದರ್ಪದೇವ ಮಕರಂದ ನೊಡನೆ ಹೂವಿನ ಸಂತೆಯನ್ನು ಹೊಕ್ಕು ಮಾಲೆಗಾತಿಯರ ಬೆಡಗನ್ನು ನೋಡುತ್ತ, ಸೂಳೆಗೇರಿಯಲ್ಲಿ ಸೂಳೆ ಸಿದ್ಧಾಂತವನ್ನು ಒನಕೆವಾಡಾಗಿ ಹಾಡುತ್ತಿದ್ದ ಹೆಂಗಳೆಯರ ವಿನೋದವನ್ನು ಕಂಡು ನಿರ್ವಿಕಾರಸ್ವಾಂತನಂತೆ ಆನಂದಪಡುತ್ತ, ರಾತ್ರಿಯ ಕೊನೆಯ ಜಾವದ ವೇಳೆಗೆ ಮನೆಗೆ ಹಿಂದಿರುಗಿಬಂದು ಪವಡಿಸಿದನು.

ಕುಮಾರ ನಿದ್ರಾಂಗನಾಸಂಗದಿಂದ ಪರವಶನಾಗಿರುವಾಗ ದಕ್ಷಿಣಭುಜ ಸ್ಪಂದಿಸಿದಂತೆ ವಾಮಪಾರ್ಶ್ವದ ಶಯನದಲ್ಲಿ ಹರೆಯದ ಯುವತಿಯನ್ನು ಕಂಡಂತೆ ಕನಸುಕಂಡನು. ವಶೀಕರಣಮಂತ್ರಸಿದ್ಧಿಯೇ ಮೂರ್ತಿವೆತ್ತಂತೆ ಕಾಮನ ಚಿಂತಾಮಣಿಯಂತೆ ರಾರಾಜಿಸುತ್ತಿದ್ದ ಕುಸುಮ ಕೋಮಲೆಯ ಅಂಗಾಂಗಗಳ ರೂಪಾತಿಶಯವನ್ನು ಮನಸ್ಸೆ ಕಣ್ಣಾಗಿ ಚಪ್ಪರಿಸುತ್ತಿದ್ದ ರಾಜಕುಮಾರ ಮಂಗಳ ತೂರ್ಯರಭಸದಿಂದ ಎಚ್ಚರಗೊಂಡು, ಮೋಹಗ್ರಹದ ಸೋಂಕಿನಿಂದ ಕಳವಳಿಸಿ ನೋಡಿ, ನಿಡುದೋಳಿನಿಂದ ಬಯಲನ್ನಪ್ಪಿಕೊಳ್ಳುತ್ತಿದ್ದನು. ಅವಳು ತನ್ನ ಅಂಗಾಂಗಗಳಲ್ಲಿ ಲೀನವಾದಳೊ, ಕರಣಗಳು ಅವಳನ್ನು ತಂತಮ್ಮೊಳಗೆ ಹಂಚಿಗೊಂಡುವೊ, ಚಿತ್ತ ಅವಳನ್ನು ನುಂಗಿಬಿಟ್ಟಿತೊ ಎಂದು ಶಂಕಿಸಿ, ಅವಳನ್ನು ಕಾಣದೆ, ತಾನು ಕಂಡದ್ದು ಕನಸೆಂದು ತರಿಸಂದು, ಸುಯ್ಯುತ್ತ ಮತ್ತೆ ಶಯ್ಯಾತಳದಲ್ಲಿ ಮೆಯ್ಯನೀಡಾಡಿ, ಕನಸಿನ ತರುಣಿಯಲ್ಲಿ ಮಗ್ನನಾದನು.

ಉದಯಾದ್ರಿಯಲ್ಲಿ ಬಾಲಾರ್ಕಮಂಡಲ ತಿಪ್ಪತಿಪ್ಪ ಹೆಜ್ಜೆಯಿಡುತ್ತಿದ್ದಂತೆ ಪಾಠಕಮಾಗಧರ ಮೃದುಮಧುರ ಗಂಭೀರ ಧ್ವನಿ ಹೊರಹೊಮ್ಮಲು ಕಾಮಕಾಳಾನಲ ಜ್ವಾಲೆಗಳುಕಿ, ಧೈರ್ಯವನ್ನವಲಂಬಿಸಿ ಬಿಸುಸುಯ್ದು ಶಯ್ಯಾತಳದಿಂದ ಹೇಗೋ ಎದ್ದು, ಶುಚಿ ಸುರಭಿಸೋಷ್ಣ ಸಲಿಲಸ್ನಾನ ಸಂಪೂತನಾಗಿ, ನಿರ್ಮಲದುಕೂಲ ಪರಿವೇಷ್ಟಿತನಾಗಿ, ಜಿನಾಲಯಕ್ಕೆ ಹೋಗಿ ಮೂರುಸೂಳು ಪ್ರದಕ್ಷಿಣೆಮಾಡಿ, ಜಿನಬಿಂಬಕ್ಕೆ ನಮಸ್ಕರಿಸಿ, ಜಿನಾಧೀಶ್ವರನನ್ನು ನಾನಾ ವಿಧವಾಗಿ ಸ್ತುತಿಸಿದನು.

ಅಂದಿನಿಂದ ತರುಣಿ ತುಂಬಿದ ಮನಸ್ಸಿನಲ್ಲಿ ಅನ್ಯಭಾವನೆಗೆಡೆಯಿರಲಿಲ್ಲ. ಮತ್ತೆ ಮತ್ತೆ ಕನಸನ್ನು ನೆನೆದು, ಅವಳು ತಪ್ಪಿಸಿಕೊಂಡು ಹೋದಾಳೆಂಬ ಭೀತಿಯಿಂದ ಕಣ್ಣುಮುಚ್ಚುತ್ತಿದ್ದನು. ತಾನು ನಿದ್ರಾಂಗನೆಗೆ ವಶವಾದರೆ ಅವಳೆಲ್ಲಿ ವಿವಶಳಾಗುತ್ತಾಳೆಯೋ ಎಂಬ ಭಯದಿಂದ ಅವನು ಸದಾ ಎಚ್ಚತ್ತಿದ್ದನು. ವಿರಹತಾಪ ನಿವಾರಣೆಗಾಗಿ ಅವನು ಓಲಗಶಾಲೆ ಚಿತ್ರಶಾಲೆ ಮಂತ್ರಣಸಾಲೆ ಚಂದ್ರಶಾಲೆ ನಾಟ್ಯಶಾಲೆ ಕೇಳೀಗೃಹಶಾಲೆ ವಿನೋದಶಾಲೆಗಳಲ್ಲಿ, ವೀಣಾವಾದ್ಯ ಸಂಗೀತ

ನೃತ್ಯಕಥೋಕ್ತಿ ಕಾವ್ಯಬಂಧನ ನಾಟಕ ಪುರಾಣಾದಿಗಳಲ್ಲಿ, ದ್ಯೂತ ಖಗಯುದ್ಧ ನಿಯುದ್ಧಕೇಳಿಗಳಲ್ಲಿ, ಕೊಳ ಮೆಳೆ ಮಾವಿನಜೊಂಪ ಹೊಂಗೆಯುಗುಂಪು ಶೀತಳ ಕದಳೀಗೃಹ ಕೇತಕೀತಳ ಮೊದಲಾದ ತಂಪುದಾಣಗಳಲ್ಲಿ ಕಾಲ ಕಳೆಯುತ್ತಿದ್ದನು.

ವಿರಹತಾಪದ ಉಲ್ಬಣತೆಯನ್ನು ತಾಳಲಾರದೆ ಕೃತಕಾದ್ರಿಯ ಶೀತಕೋಶ ಗೃಹವನ್ನು ಹೊಕ್ಕು ಕೃತಕನಿರ್ಝರ ಜಲಧಾರೆಗಳ ತುಂತುರ್ವನಿಗೆ ಮೆಯ್ಯೊಡ್ಡಿ ಮಲಗಿದ್ದ ಭೂಲೋಕಕಂದರ್ಪದೇವನನ್ನು ಕಂಡ ಮಕರಂದ ಪ್ರಾಣಸ್ನೇಹಿತನ ಕಾಮವಿಕಾರದ ತೀವ್ರತೆಯನ್ನು ಕಂಡು ಮರುಗಿದನು. “ವರವಿದ್ಯ ರಾಜವಿದ್ಯಾ ವಿರಿಂಚನೆನಿಸಿರುವ ನಿನಗೆ ನೀತಿಯ ಮಾತನ್ನು ಹೇಳುವುದೆಂದರೆ ತುಂಬಿಗೆ ಪರಿಮಳ ವನ್ನು ಕೊಂಡುಕೊನೆದು ಹೇಳಿದಂತಾಗುತ್ತದೆ, ಪಯೋರಸದಿಂಪನ್ನು ಹಂಸನಿಗುಪದೇಶಿಸಿದ ಗಾಂಪತನವಾಗುತ್ತದೆ. ನಿನಗನುರೂಪೆಯಾದ ನಿನ್ನೊಲ್ಮೆಗೆ ಪಾತ್ರಳಾದ ಭುವನಮೋಹಿನಿ ಮಾನಿನಿ ಯಾವಳು? ಉಂಗುರದಳೆದ ಕಣ್ಣು ಕುಳಿ ಬಿದ್ದಕೆನ್ನೆ ಬತ್ತಿದಗಲ್ಲ ಬಿಳುಪೇರಿದಮುಖ ಚಿಂತೆಯನ್ನು ಹೊದ್ದ ಮನಸ್ಸು ಮೊದಲಾದುವು ನಿನ್ನ ದಾರುಣಾವಸ್ಥೆಗೆ ಸಾಕ್ಷಿಯಾಗಿವೆ. ನಿನ್ನ ಮನಸ್ಸನ್ನು ಸೂರೆಗೊಂಡಿರುವ ಸ್ವಪ್ನಲಕ್ಷ್ಮಿ ಯಾರು?” ಎಂದು ಮಂತ್ರಿಕುಮಾರ ಪ್ರಶ್ನಿಸಿದನು. ಆಗ ಬಗೆಯ ಬೈಕೆಗೆ ನಾಲಗೆ ಹಿಸುಣನಾದಂತೆ ರಾಜಕುಮಾರ ಸ್ವಪ್ನವೃತ್ತಾಂತ ವನ್ನು ತಿಳಿಸಿದನು. ದರಸ್ಮಿತ ಮುಖಿಯಾದ ಮಕರಂದ ಕನಸಿನ ಬತ್ತಕ್ಕೆ ಗೋಣಿ ಯೊಡ್ಡುವ ಈ ಸಾಹಸ ಭ್ರಮಾಮೂಲವಾದದ್ದೆಂದು ಸಂತೈಸಲು ಪ್ರಯತ್ನಿಸಿದನು.

ಹೀಗೆಯೇ ಕಾಲಕಳೆಯುತ್ತ ಒಂದು ದಿನ ಒಡ್ಡೋಲಗದಲ್ಲಿರುವಾಗ ಪ್ರತೀ ಹಾರಿಯೊಬ್ಬಳು ಮಹೀತಳನಿಹಿತಕರತಳೆಯಾಗಿ ಸವಿನಯದಿಂದ ಕೌತುಕಜನಕನೂ ಚಮತ್ಕೃತಿಖನಿಯೂ ಮಂತ್ರಸಿದ್ಧನೂ ಆದ ಅಪೂರ್ವ ಇಂದ್ರಜಾಲಿಗನೊಬ್ಬ ಬಂದು ದ್ವಾರಪ್ರದೇಶದಲ್ಲಿ ನಿಂತಿದ್ದ ಸುದ್ದಿಯನ್ನು ಅರಿಕೆಮಾಡಿದಳು. ಎಳಮಿಂಚನರೆದು ಒಳಿದಂತೆ ತೊಳಗುತ್ತಿದ್ದ ಮೆಯ್ಯು, ಹೊನ್ನಪಟ್ಟೆಗೆಯ ಕೊರಳ, ಹೊಸಟೊಪ್ಪರದ ತಲೆಯು, ಅರುಣಮಂಡಲವನ್ನು ತೇದು ಬೊಟ್ಟಿಟ್ಟಂತೆ ಮಿರುಗುತ್ತಿದ್ದ ಚಂದನಗಂಧದ ನೊಸಲಿನ, ಮಿಂಚುವಲ್ಗಳ, ಹುಲಿದೊವಲನ್ನುಟ್ಟ ಕುಂಚವನ್ನು ತಿರಗಿಸುತ್ತಿದ್ದ ಮಹಾಭುಜಂಗ ಶೀವಿಯಿಂದ ನೃಪಸಭೆಯನ್ನು ಪ್ರವೇಶಿಸಿದನು. ಉಗುರಿಸಿ ಬೆನ್ನಿಗೆ ಬಿಟ್ಟ ಹಿಣಿಲಿನ, ತಿದ್ದಿದ ಬೈತಲೆಯ, ಸಣ್ಣ ಹುಬ್ಬಿನ, ನುಣ್ಗದಪಿನ, ನಿಡುಗಣ್ಣಿನ ಜೋಗಿಣಿ ವಿದ್ಯಾವಿಡಂಬವನ್ನು ಪ್ರದರ್ಶಿಸಲೆಂಬಂತೆ ಸಭೆಗೆ ಆಗಮಿಸಿದಳು. ಜಟಿಳಿತ ಕೇಶಿಯೂ ವೇಷ್ಟಿತ ಪಟಚ್ಛದನೂ ದೀರ್ಘದೇಹಿಯೂ ಆದ ಭಟನೊಬ್ಬ ಕೌತುಕದ ಧ್ವಜವನ್ನು ಹೊತ್ತು ಕುಟಿಲಗತಿಯಿಂದ ಅವರನ್ನು ಹಿಂಬಾಲಿಸಿದನು.

ಮಾಯಾಭುಜಂಗ ಬಿರುದಿನ ಗಳೆಯನ್ನು ದೂರದೊಳಿರಿಸಿ, ಜೋಗಿಣಿಯೊಡನೆ ರಂಗಮಂಟಪವನ್ನು ಪ್ರವೇಶಿಸಿ ನಡುವಿನ ಮೇಲೆ ಎಡಗೈಯಿಟ್ಟು, ಬಲಗೈಯನ್ನು ನಭಕ್ಕೆ ನೆಗಹಿ, ಮಹೇಂದ್ರನನ್ನು ಸ್ತುತಿಸಿ, ಮಹೀಪಾಲನ ಕಡೆಗೆ ಮುಖ ತಿರುಗಿಸಿ “ದೇವ, ನೀನು ನಿಖಿಲ ಕಲಾಕೋವಿದ, ನೀನರಿಯದ ವಿದ್ಯೆಯಿಲ್ಲ, ನೀನು ಕಾಣದ ಕೌತುಕವಿಲ್ಲ, ಆದರೂ ನನ್ನ ಇಂದ್ರಜಾಲ ವಿದ್ಯೆಯನ್ನು ಪರಾಂಬರಿಸಬೇಕು,

ದಿವಿಜೇಂದ್ರ ವೈಭವವನ್ನಾದರೂ ನಾನು ತೋರಿಸಬಲ್ಲೆ” ಎಂದು ನುಡಿದನು. ಇಂದ್ರ ಲೋಕವನ್ನೆ ತೋರುವುದೆಂದು ಮಹೀಪತಿಯು ಇಚ್ಛೆಯನ್ನರಿದು ಮಕರಂದ ಸೂಚಿಸಿದನು. ಮಾಯಾಭುಜಂಗ ಕುಂಚಿಗೆಯನ್ನು ಬೀಸಿದೊಡನೆಯೆ ಅಷ್ಟದಿಕ್ಪಾಲಕರೊಡಗೂಡಿದ ಇಂದ್ರನ ಸಭಾಸ್ಥಾನ ಕಣ್ಣಿಗೆ ಕಟ್ಟಿದಂತೆ ಮೆರೆಯಿತು; ರಂಭೆಯು ನರ್ತನ ನಯನಮನೋಹರವಾಗಿತ್ತು.

ಸಭಾಸದರು ಆ ದೃಶ್ಯವನ್ನು ನೋಡಿ ವಿಸ್ಮಯಚಕಿತರಾಗಿ ತಲೆತೂಗಿದರೂ ಉತ್ಸಾಹಶೂನ್ಯನಾದ ನರಪತಿಯ ಚಿತ್ತವನ್ನರಿತ ಮಕರಂದ ಜೋಗಿಯನ್ನು ಕುರಿತು “ನೀನು ಸಾಮಾನ್ಯನಲ್ಲ, ವ್ಯಾಪಕ; ಮೂರುಲೋಕಗಳಲ್ಲಿ ಮೇಲೆನಿಸುವ ವನಿತಾರತ್ನವನ್ನು ಕಂಡುದುಂಟಾದರೆ ತೋರಿಸು; ನಿನ್ನ ಸಾಮರ್ಥ್ಯವನ್ನು ನೋಡುತ್ತೇವೆ” ಎಂದನು ಜೋಗಿ ಜೋಗಿಣಿಯ ಮುಖವನ್ನು ನೋಡಿದ ಕೂಡಲೆ, ಅವಳು ಮನಸಿಜನ ವಿಜಯಪತಾಕೆಯನ್ನೆತ್ತುವಂತೆ ವಿರಹಸಂತಪ್ತೆಯಾದ ಕನ್ಯೆಯೊಬ್ಬಳನ್ನು ನಭೋವಿಭಾಗದಲ್ಲಿ ತೋರಿಸಿದಳು. ಬಿಸುಸುಯ್ಲಿಂದ ಕಂದಿ ಬಾಡಿದ್ದ ತುಟಿಯ, ಕಣ್ಣೀರ ಕೋಡಿಯಿಂದ ಬಸಿದ ಮುಖದ, ಅಂಗಯ್ ಅಚ್ಚೊತ್ತಿದಂತಿದ್ದ ಗಲ್ಲದ, ಹಣೆಯ ಮೇಲೆ ಜೋಲುಬಿದ್ದಿದ್ದ ಕೂದಲಿನ ಕನ್ಯೆಯನ್ನು ನೋಡುತ್ತಿದ್ದಂತೆ ನರಪತಿಯ ಎದೆ ಝಲ್ಲೆಂದಿತು, ಮೈ ನವಿರೆದ್ದಿತು. ಜೋಗಿ ಜೋಗಿಣಿಯರು ಮೆಲ್ಲನೆ ಅದೃಶ್ಯರಾದರು. ರಾಜ ದ್ವಿಗುಣಿತವಿರಹ ದುಃಖನಾಗಿ ಸೆಜ್ಜೆವನೆಗೆ ಹೋಗುತ್ತಿದ್ದುದನ್ನು ಕಂಡ ಮಕರಂದ ಮಜ್ಜನ ಭೋಜನಾದಿಗಳನ್ನು ಮೊದಲು ಮುಗಿಸುವಂತೆ ಪ್ರೋತ್ಸಾಹಿಸಿದನು.

ಮಂತ್ರಿಸುತನ ಮಾತಿಗೊಡಂಬಟ್ಟು, ಏಂದುಟ್ಟು, ಹಂಸತೂಲಿಕಾತಲ್ಪದಲ್ಲಿ ಮಲಗಿರುತ್ತ, ಜೋಗಿಣಿ ಮೆರೆದ ದೃಶ್ಯವನ್ನು ಇಲುಗು ಇಲುಗಾಗಿ ಮತ್ತೆಮತ್ತೆ ಮೆಲುಕಿಸುತ್ತ, ಕನಸಿನ ಕನ್ನೆ ಬೇರೆಯಲ್ಲವೆಂದೂ, ತನ್ನ ಸ್ಥಿತಿ ಬಿಸಿಲಿಂದ ಬೆಂದವರನ್ನು ಕೇಸುರಿಯಿಂದ ಕಾಸಿದಂತಾಯಿತೆಂದೂ ಮಕರಂದನೊಡನೆ ತನ್ನ ದುಃಖ ತೋಡಿಕೊಂಡನು. ಆಗ ಮಕರಂದ “ಈ ಹೆಣ್ಣು ಹುಸಿಯಲ್ಲ, ಹುಸಿಯಾದರೆ ವಿದ್ಯಾಧರಿ ತೋರಿಸುತ್ತಿರಲಿಲ್ಲ. ಅನಿರೀಕ್ಷಿತವಾಗಿ ವಿಶೇಷ ಕಾರಣವಿಲ್ಲದೆ ಈ ಮಾಯಕಾರರು ಈ ದೃಶ್ಯವನ್ನು ತೋರಿಸಿರಲಾರರು” ಎಂದು ಅಭಿಪ್ರಾಯಿಸಿದನು. “ಅವಳ ನೆನಕೆಯಲ್ಲಿಯೇ ನಾನು ಸತ್ತುಹೋಗುತ್ತೇನೆ. ಅವಳನ್ನು ನನಗೆ ತಂದುಕೊಡುವವರು ಯಾರು? ಮನ್ಮಥನ ಗೋರಿ ಬೇಟೆಯಿಂದ ತಪ್ಪಿಸಿಕೊಳ್ಳುವುದೆಂತು? ಅವಳು ಈ ಭೂಭಾಗದ ಯಾವ ಮೂಲೆಯಲ್ಲಿದ್ದಾಳೆ? ಇಲ್ಲಿದ್ದರೆ ನನಗೆ ಹೊತ್ತುಹೋಗದು; ವನಿತಾವಾರ್ತೆಯೂ ಸಿಗದು. ಸುಖವಿಲ್ಲದ ರಾಜ್ಯದಿಂದೇನು ಪ್ರಯೋಜನ?” ಎಂದು ರಾಜಕುಮಾರ ಮಕರಂದನನ್ನೊಡಂಬಡಿಸಿ, ಮರುದಿನ ಬೆಳಗ್ಗೆ ಬಡಗದಿಕ್ಕಿಗೆ ಪಯಣ ಬೆಳೆಸಿದನು.

ಹಗಲಲ್ಲಿ ಊರುಕೇರಿ ನಗರಖರ್ವಡಗಳನ್ನು ದಾಟಿ, ಇರುಳು ಕವಿದೊಡನೆ ಆಶ್ರಮಗಳಲ್ಲಿ ವಿಶ್ರಮಿಸಿಕೊಳ್ಳುತ್ತ, ಮನೋಹರ ವನಪ್ರದೇಶಗಳಲ್ಲಿ ಭ್ರಮಿಸುತ್ತಿರುವಾಗ ದೇಶ ಯಾತ್ರಾಸುಖೋತ್ಸವವನ್ನು ಅಧಿಕಗೊಳಿಸುವಂತೆ ಶರತ್ಕಾಲ ಪ್ರಾಪ್ತವಾಯಿತು. ಅವರು ಪ್ರಕೃತಿಯ ಸೊಬಗನ್ನು ಸವಿಯುತ್ತ ದಾರಿಯಲ್ಲಿ ಬುತ್ತಿಯನ್ನು

ಣ್ಣುತ್ತ, ಪಾಮರಿಯರ ಚೆಲುವನ್ನೀಂಟುತ್ತ ಮುಂದೆ ಮುಂದೆ ಸಾಗುತ್ತ ಗೊಲ್ಲರ ದೊಡ್ಡಿಯನ್ನು ಹೊಕ್ಕು ರಾತ್ರಿ ವಿಶ್ರಮಿಸಿಕೊಂಡರು. ಬೆಳಗಿನ ಜಾವ ಮಹಾ ಸೂಕರವೊಂದು ದೊಡ್ಡಿಗೆ ನುಗ್ಗಿ ತಡೆದ ಗೊಲ್ಲರನ್ನು ಕೊಂದು, ದನಗಳನ್ನೊಕ್ಕಲಿಕ್ಕಿ ಹಾಹಾಕಾರವನ್ನುಂಟುಮಾಡಿತು. ಆ ಹಂದಿಯನ್ನಟ್ಟಿಸಿಕೊಂಡು ಬಂದ ಬೇಟೆಗಾರರ ಬೊಬ್ಬೆ ಅಂಬರಕ್ಕೇರಿತು. ಕೋಲಾಹಲದಿಂದೆಚ್ಚತ್ತ ರಾಜಕುಮಾರ ಬಿಲ್ಲನ್ನು ಜೇವೊಡೆದು ಭೂಮಿ ಕಂಪಿಸುವಂತೆ ಆ ಹಂದಿಯ ಮೇಲೆ ಬಾಣಪ್ರಯೋಗ ಮಾಡಿದನು. ಆ ಹಂದಿ ತಪ್ಪಿಸಿಕೊಂಡು ವಿಂಧ್ಯಾಟವಿಯ ಕಡೆಗೆ ಓಡಿಹೋಯಿತು. ರಾಜಕುಮಾರನೂ ಅದನ್ನಟ್ಟಿಸಿಕೊಂಡು ಹೋದನು. ಅದು ಹಳುವದಲ್ಲಿ ಬೆಟ್ಟಗುಡ್ಡಗಳ ಇರುಕಿನಲ್ಲಿ ಕಣ್ಮರೆಯಾಯಿತು.

ಅಷ್ಟರಲ್ಲಿ ನಡುಹಗಲಾಗಿ, ನೀರಡಿಕೆಯಿಂದ ಸೋರಿಹೋಗಿ, ಜಲಾಶಯವನ್ನರಸುತ್ತ, ಘೋರಾಂಧಕಾರದ ಕಾನನದಲ್ಲಿ ಕಂದರ್ಪದೇವ ಮಕರಂದನೊಡನೆ ಅಡ್ಡಾಡಿದನು. ಎಲ್ಲಿ ಹೋದರೂ ಕಾಡುಮೃಗಗಳು ಕುಡಿಯಲು ಯೋಗ್ಯವಾದ ನೀರು ಕಾಣುತ್ತಿತ್ತೇ ಹೊರತು, ಮಾನವಮದನನ ಪಿಪಾಸೆಯನ್ನು ತಣಿಸತಕ್ಕ ನೀರು ಸಿಗಲಿಲ್ಲ. ರಾಜಕುಮಾರನ ಸಂಕಟವನ್ನು ಪರಿಹರಿಸುವ ಬಗೆ ಯಾವುದೆಂದು ಮಂತ್ರಿಕುಮಾರ ಯೋಚಿಸುತ್ತಿರುವಷ್ಟರಲ್ಲಿ ವನವಿಹಾರ ವಿನೋದಾಸಕ್ತರಾಗಿ ಅಲೆದಾಡುತ್ತಿದ್ದ ಮುನಿಕುಮಾರಿಯರು ದೃಷ್ಟಿಗೋಚರವಾದರು. ಅವರು ಕುಮಾರನ ಬಳಲಿಕೆಯನ್ನು ಕಳೆಯುವ ಸಲುವಾಗಿ ಮಕರಂದನ ಕೈಗೆ ಕಳಶಜಲವನ್ನು ನೀಡಿದರು.

ಆ ಸಮಯಕ್ಕೆ ಸರಿಯಾಗಿ ಹಳ್ಳಬಿದ್ದ ಕೆನ್ನೆಯ, ಬತ್ತಿದ ಕೊರಳಿನ, ನಾರುತ್ತಿದ್ದ ಕೇಸಿವಲ್ಲಿನ, ಗೂಡಾಗಿದ್ದ ಕಣ್ಣಿನ, ಒತ್ತಿದ ಬಾಯಿಯ, ಬಳಲಿದ ಮೆಯ್ಯ, ಬೆನ್ನಿಗೆ ಸೇರಿಕೊಂಡಿದ್ದ ಹೊಟ್ಟೆಯ, ತುದಿನಾಲಗೆಯಿಂದ ಬೆವರನ್ನು ನೆಕ್ಕುತ್ತಿದ್ದ ಹಾರುವನೊಬ್ಬ ನೀರಿಗಾಗಿ ಹಾತೊರೆಯುತ್ತ, ಗೋಳಾಡುತ್ತ ಅವರ ಮುಂದೆ ಕುಕ್ಕರಬಡಿದು, ಬಾಯೊಳಗೆ ಅಡ್ಡಗೈಯಿಟ್ಟನು. ಮಕರಂದ ಕಳಶದ ನೀರನ್ನು ಹೊಯ್ಯಲು, ಒಂದು ಹನಿವುಳಿಯದಂತೆ ಆ ಹಾರುವ ಹೀರಿಬಿಟ್ಟನು. ಪರಿಹೃತಾಯಾಸನಾದ ಬ್ರಾಹ್ಮಣ ಸಂತೃಪ್ತಿಯಿಂದ ರಾಜಕುಮಾರನನ್ನು ಹರಸಿಹೋದ ನಂತರ ಅವರಿಬ್ಬರೂ ಮುನಿಕುಮಾರಿಯರು ಮರಳಿದ ಜಾಡಿನಲ್ಲಿಯೇ ಮುಂದುವರಿದರು. ಬಹುದೂರ ದಾರಿ ನಡೆದ ಮೇಲೆ ಮುಂದೆ ವನಲಕ್ಷ್ಮಿಯ ಕನ್ನಡಿಯಂತೆ ತುಂಬಿಯ ಜೇವಣಸಾಲೆಯಂತೆ ಸಿರಿಯ ಸಜ್ಜೆಯಂತೆ ವಿರಾಜಮಾನವಾಗಿದ್ದ ಸರೋವರವನ್ನು ಕಂಡರು. ಸಂತೋಷದ ಸುಗ್ಗಿಯನ್ನು, ಮನೋರಥದ ಸೀಮೆಯನ್ನು, ಚೆಲುವಿನ ಕಣಿಯನ್ನು ಕಾಣುವಂತೆ ದೊರೆ ಕುಮುದಾಕ್ಷಿಯೆಂಬ ಕೊಳವನ್ನು ಕಂಡನು. ದಿಕ್ಕುಂಭಿಗಳಂತೆ ನೀರನ್ನು ಹೀರಿ ಪಿಪಾಸಾನಲ ನಂದುತ್ತಿದ್ದಂತೆ ಮಾನವಮದನನ ಮದನತಾಪತೃಷ್ಣೆ ಸೂರ್ಮಡಿಯಾಯಿತು. ಮಾವಿನ ಮರವನ್ನಪ್ಪಿದ್ದ ಮಲ್ಲಿಕಾ ಮಂಟಪದಲ್ಲಿ ಮಕರಂದ ತಂದುಹಾಸಿದ ಹೊಸತಳಿರ ಹಸೆಯಲ್ಲಿ ರಾಜಕುಮಾರ ವಿಶ್ರಮಿಸಿಕೊಳ್ಳುತ್ತ, ಮೃದು ಮಧುರಫಲಗಳನ್ನು ಭುಂಜಿಸುತ್ತ ಮಂತ್ರಿಸುತನಿಂದ ಕಾಲೊತ್ತಿಸಿಕೊಳ್ಳುತ್ತ ಸಂಜೆಯತನಕ ಸುಖವಾಗಿದ್ದನು.

ಕತ್ತಲು ಮುತ್ತುತ್ತಿದ್ದಂತೆ ಬಾಲಚೂತದ ತಳಿರ ತೂಗು ತೊಟ್ಟಿಲಲ್ಲಿ ವಾಸಿಸುತ್ತಿದ್ದ ವಸಂತದೋಹಳಿಯೆಂಬ ಶಾರಿಕೆ ನಿಜಪ್ರಿಯನಿಗಾಗಿ ಕಾತರತೆಯಿಂದ ಹಾದಿ ಕಾಯುತ್ತ ತಪಿಸುತ್ತಿದ್ದಳು. ಪತಿ ಚೂತಪ್ರಿಯ ಬಂದಾಗ ಶಾರಿಕೆ ಕೋಪಾವಿಷ್ಟಳಾಗಿ ಚಂಚುವಿಂದ ಬಡಿದು ಹತ್ತಿರ ಸೇರಗೊಡದೆ ನೂಕಿದಳು. ಕೀರಪತಿ ಗದ್ಗದನಾಗಿ ನಡುಗಿ ಸತಿಯ ಕಾಲು ಹಿಡಿದುಕೊಂಡು, ಹೊತ್ತಾಗಿ ಬಂದದ್ದಕ್ಕೆ ಕಾರಣ ವಿವರಿಸಿದನು: "ನಿನ್ನಾಣೆ ನಾನು ಸುಳ್ಳು ಹೇಳುತ್ತಿಲ್ಲ. ತ್ರಿಭುವನಸುಂದರಿಯಾದ ವಾಸವದತ್ತೆ ವಿರಹಾನಲತಪ್ತೆಯಾಗಿ ಅಸ್ತವ್ಯಸ್ತವಾಗಿದ್ದಳು. ಅವಳ ಸಖಿಯರೊಡನೆ ನಾನೂ ಅವಳ ಶಿಶಿರೋಪಚಾರಕಾರ್ಯದಲ್ಲಿ ಮಗ್ನನಾಗಿದ್ದೆನು. ಅವಳು ಯಾರು ಗೊತ್ತೆ? ಅವಳು ಕುಸುಮ ಪುರದ ಶೃಂಗಾರಶೇಖರ ಮತ್ತು ವಿಭ್ರಮಲೇಖೆಯರ ಮಗಳು; ಬಹಳ ದಿನಗಳ ತನಕ ಮಕ್ಕಳಾಗದಿರಲು, ಚಕ್ರವರ್ತಿಯ ಸತಿಯಾಗುವಂಥ ಮಗಳನ್ನು ಪಡೆಯುವ ಹಂಬಲದಿಂದ ತಂದೆತಾಯಿಯರು ವ್ರತ ಕೈಗೊಂಡಿರಲು ಕುಲದೇವತೆ ಪದ್ಮಾವತಿಯ ವರದಿಂದ ಹುಟ್ಟಿದವಳು. ಅವಳ ಮೆಯ್ಯಲ್ಲಿ ಯೌವನ ಕೊನರುತ್ತಿದ್ದಂತೆ ಚಂದ್ರ ಕುಂದುತ್ತಿದ್ದನು; ಮನ್ಮಥನೇ ಅವಳ ಹುಬ್ಬುಗಳನ್ನು ನಿರ್ಮಿಸಿದನು; ಪ್ರಕೃತಿನಿಹಿತವಾಗಿದ್ದ ಸೌಂದರ್ಯವೆಲ್ಲ ಅವಳ ಅಂಗಾಂಗಗಳಲ್ಲಿ ಪಲ್ಲವಿಸುತ್ತಿದ್ದಂತೆ ಲೀಲಾವತಿಯೆಂಬ ಹೆಸರಿಗೆ ತಕ್ಕಂತೆ ಜಗನ್ಮೋಹಿನಿಯಾಗಿ ವರ್ಧಿಸುತ್ತಿದ್ದಳು. ವಾಸವದತ್ತೆ ಅವಳ ಮತ್ತೊಂದು ಹೆಸರು. ಶೃಂಗಾರಶೇಖರ ಮಾರಾಕಾರರಾದ ರಾಜಕುಮಾರರನ್ನು ಬರಿಸಿ ಸ್ವಯಂವರವನ್ನೇರ್ಪಡಿಸಲು, ತನಗನುರೂಪನಾದ ವರನನ್ನು ರಾಜಸಮಾಜದಲ್ಲಿ ಕಾಣದೆ ಅವಳು ಮಮ್ಮಲ ಮರುಗಿದಳು. ಹೀಗಿರುವಾಗ ಒಂದು ದಿನ ನಿಶಾವಸಾನ ಸುಪ್ತಿಯಲ್ಲಿ ಶೋಭಾಕರ ರೂಪಾಕಾರನನ್ನು ಕನಸಿನಲ್ಲಿ ಕಂಡು, ಕನಸನ್ನೇ ನನಸೆಂದು ಬಗೆದು, ಮಣಿಸ್ತಂಭದ ಮರೆಯಲ್ಲಿ, ಶಯ್ಯಾತಳದಲ್ಲಿ, ಪಾಂಚಾಲಿಕಾ ಸಂಚಯದಲ್ಲಿ, ಜೊನ್ನದಲ್ಲಿ, ಕನ್ನಡಿಯಲ್ಲಿ, ಸುಂದರಸ್ಥಾನಗಳಲ್ಲೆಲ್ಲ ಹುಡುಕಿ ಹುಡುಕಿ ಹತಾಶಳಾಗಿ ಕೊರಗುತ್ತಿದ್ದಳು. ಮೂಗರು ಕಂಡ ಕನಸಿನಂತೆ, ಯಾರಿಗೂ ಹೇಳಲಾರದೆ, ಒಳಗೊಳಗೆ ಬೆಂದು ಬಾಡುತ್ತಿದ್ದಳು. ಕೊನೆಗೊಂದು ದಿನ ಬೇರೆ ದಾರಿಗಾಣದೆ ತಮಾಲಿಕೆ ಕಳಾವತಿಯರೆಂಬ ಸಖಿಯರನ್ನು ಏಕಾಂತಕ್ಕೆ ಕರೆದು, ಅನ್ಯೋಕ್ತಿಯಿಂದ ತನ್ನ ಕನಸನ್ನು ವಿವರಿಸಿದಳು. ಆತನ ರೂಪವನ್ನು ಬರೆದು ತೋರಿಸುವುದಾದರೆ ಅವನ ನೆಲೆಯನ್ನು ಗುರುತಿಸಬಹುದೆಂದು ತಿಳಿಸಿ, ಪಳುಕಿನ ಹಲಗೆಯನ್ನೂ ಬಣ್ಣದ ಬಟ್ಟಲುಗಳನ್ನೂ ಕಳಾವತಿ ತಂದುಕೊಟ್ಟಳು. ಮನಸ್ಸಿನಲ್ಲಿ ನೆಲಸಿದ್ದ ಮದನ ಕುಂಚಿಕೆಯಲ್ಲಿಳಿದು ಚಿತ್ರಸ್ಥನಾದನು. ಪ್ರತಿಮಾಗತ ನಿಜರಮಣನನ್ನು ಕಂಡ ಲೀಲಾವತಿಯ ಕೈ ನಡುಗಿತು, ಮೈ ಬೆವರಿತು, ಚಿತ್ರ ಮನೋಭವ ಗ್ರಹಪೀಡಿತವಾಯಿತು" ಎಂದು ನೇಳುತ್ತ ಹೇಳುತ್ತ ಗಿಳಿ ಶೂಕಡಿಸಿತು.

ಬಹಿರಂಗವರಿಯದುದನ್ನು ಅಂತರಂಗವರಿಯುವಂತೆ ಕಂದರ್ಪದೇವ ಗಿಳಿ ಹೇಳಿದ ಸುಖದ ಕಥೆಯನ್ನು ಕೇಳಿ ನಿಜ ಮನೋಹರಿಯ ಮನೋಹರ ರೂಪಾತಿಶಯವನ್ನು ಚಪ್ಪರಿಸುತ್ತ ಬಾಹ್ಯಶೂನ್ಯನಾಗಿರುವಾಗ, ಮಕರಂದ ಅವನನ್ನೆಚ್ಚರಿಸಿ ಅದು ಅವನ

ವೃತ್ತಾಂತವೆಂದೇ ನಿಶ್ಚಯಿಸಿ, ವಿಧಾತ್ರನ ಸಂವಿಧಾನ ವೈದಗ್ಧತೆಗೆ ಮೆಚ್ಚಿ ಧ್ಯಾನ ಮಗ್ನನಾದನು. ಅಷ್ಟರಲ್ಲಿ ಸೂರ್ಯೋದಯವಾಗಲು, ಇಬ್ಬರೂ ಸರೋವರದ ತಡಿವಿಡಿದು ಕರಚರಣ ಮುಖಪ್ರಕ್ಷಾಳನಂಗೆಯ್ದು, ಉತ್ತರ ತೀರದಲ್ಲಿದ್ದ ಜಿನಪ್ರತಿಮೆ ಯನ್ನು ವಂದಿಸಿ, ಪದ್ಮಾವತೀ ಪ್ರೇರಿತಮಾರ್ಗದಿಂದ ಮುಂದೆ ಸಾಗಿದರು. ದಾರಿ ಯಲ್ಲಿ ಸಿಕ್ಕಿದ ವನ್ಯಮೃಗಗಳನ್ನೂ ಪುಳಿಂದಿಯರನ್ನೂ ನೋಡುತ್ತ, ನ್ಯಗ್ರೋಧದ ತಣ್ಣೆಳಲಿನಲ್ಲಿ ಶೋಭಿಸುತ್ತಿದ್ದ ಯಕ್ಷನನ್ನು ಮೂರುಸಾರಿ ಪ್ರದಕ್ಷಿಣೆಮಾಡಿ ಕೈಮುಗಿದು ಪ್ರಾರ್ಥಿಸಿ, ತುಸು ವಿಶ್ರಮಿಸಿ, ತಳಿಗೋಲನ್ನು ತಳೆಹಿಡಿದು ಮುಂದೆ ಪ್ರಯಾಣಿಸಿದರು.

ತುಸು ದೂರ ನಡೆದನಂತರ ದೈವಶೈಲದ ತಪ್ಪಲಲ್ಲಿ ಪಾವನ ಜೀವನ ಪ್ರಸವೆಯೂ, ಪಾಪ ವಿನಾಶಿನಿಯೂ, ಧೌತಜಿನಚರಣ ಪಾವನೆಯೂ ಆದ ಗಂಧನದಿಯನ್ನು ಕಂಡು ಅವರು ಹರ್ಷಿಸಿದರು. ಅಂಜಿಕೆಯ ವನದಲ್ಲಿ ಯಕ್ಷಿಯನ್ನು ಪೂಜಿಸಿದರು. ದೇವಗಿರಿಯೆ ಪಶ್ಚಿಮ ಪ್ರಾಕಾರವಾಗಲು, ಗಂಧಾಕರೋದ್ಯಾನವೆ ಬಾಳ್ವೇಲಿ ಯಾಗಲು, ಗಂಧನದಿಯೆ ಪರಿಖಾವಳಯವಾಗಲು ರಂಜಿಸುತ್ತಿದ್ದ ಕನಕ ಪ್ರಾಕಾರದ ಇಂದ್ರಕೂಟದಲ್ಲಿ ಸುರರಾಜನ ಬೆಸದಿಂದ ಧನಪತಿ ನಮೆಸಿದ ಪದ್ಮಜ ತೀರ್ಥಂಕರ ಗೃಹ ಶೋಭಿಸುತ್ತಿತ್ತು. ಧೌತಕರ ಚರಣನಾದ ದೊರೆ ಚಂದ್ರಪ್ರಭನನ್ನು ವಿವಿಧ ವಾಗಿ ಸ್ತುತಿಸಿ, ಪೂಜಿಸಿ, ಬೋಧಸಿಂಧುಗಳೆಂಬ ಭಟ್ಟಾರಕರಿಗೆ ಭಕ್ತಿಯಿಂದೆರಗಿ ಶಾಂತಿ ಸಂತೃಪ್ತಿಗಳಿಂದ ಹೃಷ್ಟಚಿತ್ತನಾದನು.

ಹೇಮಂತಋತದ ಕೊರೆಯುವ ಚಳಿಯಲ್ಲಿಯೂ ಪರಮಾತ್ಮಧ್ಯಾನರತರಾದ ಜೈನಯೋಗೀಶ್ವರರಿಗೆ ಮತ್ತೆ ಮತ್ತೆರಗಿ ಇಂದ್ರಕೂಟಗಿರಿಯಿಂದ ಶೃಂಗಾರ ಕ್ರೀಡೆ ಯಲ್ಲಿ ಮಗ್ನರಾಗಿದ್ದ ಖೇಚರ ದಂಪತಿಗಳನ್ನು ನೋಡುತ್ತ ದೇವಗಿರಿಗೆ ನಡೆದರು. ಅಲ್ಲಿ ಜಿನಬಿಂಬಸಂದೋಹವನ್ನು ಪೂಜಿಸಿ, ಗಂಧರ್ವವಿದ್ಯಾಧರರ ಆಡುಂಬೊಲವಾದ ಮಯೂಖನಿರ್ಝರಾದ್ರಿಯನ್ನು ತಲುಪಿದರು. ವಿದ್ಯುಲ್ಲೇಖೆ ಚಂದ್ರಲೇಖೆಯರೆಂಬ ವಿದ್ಯಾಧರಿಯರು ಅವರನ್ನು ಸ್ವಾಗತಿಸಿ, ಸತ್ಕರಿಸಿ, ಚಕ್ರೇಶ್ವರಿಯ ಸನ್ನಿಧಿಗೆ ಕೊಂಡೊಯ್ದರು. ಮರುದಿನ ಕೃಷ್ಣಚತುರ್ದಶಿಯಾದ್ದರಿಂದ ಅವರು ಅಲ್ಲಿಯೇ ನಿಂತು ರಾತ್ರಿ ಗಂಧಪುಷ್ಪಾದಿಗಳಿಂದ ದೇವತೆಯನ್ನು ಆರಾಧಿಸಿದರು. ಸಿದ್ಧರಸದ ಹೊಂಗೊ ಡವೂ ಕಾಳಾವಲೋಕಿನೀ ಫಳಕವೂ ದೊರೆಗೆ ಲಭ್ಯವಾದುವು. ಅಷ್ಟರಲ್ಲಿ ಅಲ್ಲಿಗೆ ಬಂದ ಗಜಭಟ್ಟನೆಂಬ ಪಂಡಿತ ದೇವತೆಯ ಮುಂದಿದ್ದ ಫಲಕದ ಸಿದ್ಧಾದೇಶವನ್ನೋದಿ. ಸಿದ್ಧರಸದ ಮಹಿಮೆಯನ್ನು ವರ್ಣಿಸಿದನು.

ಬಿಸಿಲು ಚಳಿಯನ್ನು ಕುರುಕಿ, ತೆಂಕಣಗಾಳಿ ಮೆಲ್ಲಮೆಲ್ಲನೆ ಹೆಜ್ಜೆಯಿಟ್ಟು, ಕೋಗಿಲೆಯ ಸಪ್ತಸ್ವರ ಹೊಸದಾಗಿ ಹುಟ್ಟಿ, ಜಗತ್ತಿನ ಸಚರಾಚರ ವಸ್ತುಗಳಲ್ಲಿ ನೂತನಶಕ್ತಿ ಸಂಚರಿಸುತ್ತಿದ್ದುದನ್ನು ಕಂಡ ಮಾನವಮದನ ಮದನತಾಪದಿಂದ ಬಳಲಿ ಬೆಂಡಾಗಿ ಸತ್ತು ಹುಟ್ಟುತ್ತಿದ್ದನು. ಆಕಡೆ ವಾಸವದತ್ತೆಯೂ ಗುಣಪ್ರಿಯನ ರೂಪವನ್ನು ಹಗಲಿರುಳು ಮನಸ್ಸಿನಲ್ಲಿ ಭಾವಿಸುತ್ತ ಹಂಬಲಿಸುತ್ತ ದಿನೇ ದಿನೇ ಬಡ ವಾಗುತ್ತಿದ್ದಳು. ಕಿಚ್ಚಿನಲ್ಲಿ ಬಿದ್ದ ಕೀಡೆಯಂತೆ ಕರಗಿ ಕೊರಗುತ್ತಿದ್ದ ಕುಮಾರಿಯನ್ನು

ಕುರಿತು ಕಳಾವತಿ ನಾನಾ ರೀತಿಯಾಗಿ ಶಿಶಿರೋಪಚಾರಮಾಡಿ, 'ಸಖಿ, ನಿನ್ನ ಬಳಿ ಎಷ್ಟುಜನ ಬೇಕಾದವರಿದ್ದರೂ ಮದನತಾಪವನ್ನು ಹಿಂಗಿಸುವವರಿಲ್ಲ. ಯಾರಿಂದಲೂ ಈ ಕಾರ್ಯ ಸಾಧ್ಯವಾಗದು. ವ್ಯರ್ಥವಾಗಿ ಸಖಿಯರ ಹಂಗಿಗೊಳಗಾಗಬೇಡ. ದೈವಬಲವುಳ್ಳ ಜನರಿಗೆ ಅಂತಿಮ ಜಯ ಸಿದ್ಧ. ಪದ್ಮಾವತಿಯನ್ನು ಆರಾಧಿಸಿದರೆ ಶುಭೋದಯವಾಗುತ್ತದೆ' ಎಂದು ಸಂತೈಸಿದಳು. ಕೂಡಲೆ ಕುಮಾರಿ ಕುಸುಮಪುರದ ಹೊರಹೊಲಲ ಮಹೋದ್ಯಾನದ ನಡುವೆ ವಸಂತಲಕ್ಷ್ಮಿಯಂತಿದ್ದ ಪದ್ಮಾವತಿಯನ್ನು ಬಲಗೊಂಡು ಕೈಮುಗಿದು, ಪತಿಲಾಭಕಾಂಕ್ಷೆಯಿಂದ ಪೂಜಿಸಿದಳು. ಗಾನದೇವತೆಯಂತೆ ವೀಣೆಯನ್ನು ಬಾಜಿಸಿದಳು. ಸ್ವರರಾಗಮಾಧುರ್ಯ ಮತ್ತು ವಿಪಂಚಿಯಿಂಚರಗಳು ಪಂಚಶರದಂತೆ ಅವಳ ಚಿತ್ತಗರ್ಭವನ್ನು ತಾಗಲು ಲೀಲಾವತಿ ಕೆಲದಲ್ಲಿದ್ದ ಕಳಾವತಿಯ ಮೇಲೆ ಮರೆದೊರಗಿದಳು. ಆಗ ಪದ್ಮಾವತಿ ದರ್ಶನವಿತ್ತು "ನಿನ್ನಿನಿಯನ ಬರವು ದೂರವಿಲ್ಲ. ಸಾಲಂಕೃತೆಯಾಗಿ ಸಿಂಗರಿಸಿದ ಕನ್ನೆವಾಡದಲ್ಲಿ ನಿಜೇಶನಿಗಾಗಿ ಕಾದಿರು. ಅವನು ಈ ದಿನ ಬಂದೇ ಬರುತ್ತಾನೆ" ಎಂದು ನುಡಿದಳು.

ದೇವಿಯ ಸ್ವಪ್ನಾದೇಶದಿಂದ ಎಚ್ಚತ್ತ ಲೀಲಾವತಿ ಸಂಜೆಯ ವೇಳೆಗೆ ಮಿಂದು ಸಾಲಂಕೃತೆಯಾಗಿ ಮಸೆದೆಳಮಿಂಚಿನಂತೆ, ಕಾಮದೇವನ ಪುಷ್ಪಬಾಣದಂತೆ, ಅಮೃತಾಂಶುಲೇಖೆಯಂತೆ ಕಂಗೊಳಿಸುತ್ತಿದ್ದಳು. ಕನ್ನೆವಾಡದ ಅಪರಾಂಗಣದಲ್ಲಿ ಸಖಿಯರು ಕೈಗೈದ ಹಂಸತೂಲಿಕಾ ತಲ್ಪದಲ್ಲಿ ಕುಳಿತು ನಲ್ಲನ ಬರವಿಗಾಗಿ ಕಾತರಿಸುತ್ತಿದ್ದಳು.

ಆಕಡೆ ಮಕರಂದ ಕಾಮಜ್ವರತಪ್ತನಾದ ದೊರೆಯ ಶಿಶಿರೋಪಚಾರಕ್ಕೆಂದು ಕಮಲದಳಗಳನ್ನು ತರುವ ನಲುವಾಗಿ ಹೊರಗೆ ಹೋದನು. ಅದೇ ಸಮಯಕ್ಕೆ ಸರಿಯಾಗಿ ರತ್ನಕೂಟಾದ್ರಿಯಲ್ಲಿ ಅಜಿತ ಜಿನಸ್ನಾನ ಮುಹೂರ್ತವನ್ನು ಭೇರೀನಿನಾದ ಘೋಷಿಸಿತು. ನಂದೀಶ್ವರ ಪರ್ವ ಪೂಜೆಯನ್ನು ನೋಡುವ ತವಕದಿಂದ ಹೋಗ ಉದ್ಯುಕ್ತರಾಗಿ ಚಂದ್ರಲೇಖೆ ವಿದ್ಯುಲ್ಲೇಖೆಯರು ದೊರೆಯನ್ನು ಏಕಾಕಿಯಾಗಿ ಬಿಡಲಾರದೆ ಪರ್ಣ ಲಘುವಿದ್ಯೆಯಿಂದೆತ್ತಿಕೊಂಡು ಹೋಗಿ ಲೀಲಾವತಿಯ ಸಜ್ಜೆಯ ಮೇಲೆ ಬಿಸಾಡಿ ಹೋದರು. ನೃಪತಿ ಲೀಲಾವತಿಯಿಬ್ಬರೂ ಘೋಂಕನೆಚ್ಚತ್ತು ತಳವೆಳಗಾಗಿ ತಲ್ಲಣಿಸಿ ಮೆಯ್ಮೆಯ್ಯನೊರಸಿ ಬೆರಸಿ ಕುಳ್ಳಿರ್ದು, ಒಬ್ಬೊಬ್ಬರ ಕೊರಳ ಮಣಿಹಾರವನ್ನು ಒಬ್ಬೊಬ್ಬರ ಕೊರಳಿನಲ್ಲಿಕ್ಕಿದರು. ವಿಸ್ಮಯತರಂಗದೊಳಂತರಂಗವು ಮುಳುಗಲು, ಪರಸ್ಪರ ಸ್ಪರ್ಶನ ಲೋಲುಪ್ತಿಯಿಂದ ಮನಸ್ಸಿ ತನುವಾದುದನ್ನು ತಿಳಿಸುವಂತೆ ಮೆಯ್ನವಿರ್ ಪೊಗಸಲು, ಮೆಯ್ಮೆಯ್ಯಲ್ಲಿ ಹತ್ತಿಕೊಂಡಂತೆ, ಮನ ಮನದಲ್ಲಿ ಸಿಕ್ಕಿದಂತೆ, ಕಣ್‌ಕಣ್ಣಲ್ಲಿ ತೊಡರಿಕೊಂಡಂತೆ, ಮದನ ಮಂತ್ರವಾದಿ ಗಾತ್ರ ಸ್ತಂಭಂಗೆಯ್ದಂತೆ ಇಬ್ಬರೂ ಪರಸ್ಪರಕೂಡಿದರು.

ಅಷ್ಟರಲ್ಲಿ ವಿದ್ಯಾಧರಿಯರು ಜಿನಪತಿ ಪೂಜೆಯನ್ನು ಮುಗಿಸಿ ಮತ್ತೆ ನೃಪತಿಯನ್ನೆತ್ತಿಕೊಂಡುಬಂದು, ಚಕ್ರೇಶ್ವರಿಯ ನಿಳಯದಲ್ಲಿ ಚಕ್ರೇಶ್ವರನನ್ನು ಕಾಣದೆ ಹೊರವಳಯದಲ್ಲಿ ವ್ಯಾಕುಲನಾಗಿ ನಿಂತಿದ್ದ ಮಂತ್ರಿಕುಮಾರನ ಮುಂದಣ ಚಂದ್ರಕಾಂತದ ಶಿಲಾತಳದೊಳೀಡಾಡಿ ನಿಜನಿವಾಸಕ್ಕೆ ಹೋದರು. ತುಸುಹೊತ್ತಿನಲ್ಲಿಯೇ

ಎಚ್ಚತ್ತ ಲೀಲಾವತಿ ಮಂಚದಲ್ಲಿ ಪತಿಯನ್ನು ಕಾಣದೆ ವಿರಹ ಸಂತಾಪದಿಂದ ಮಮ್ಮಲ ಮರುಗಿ ರೋದಿಸಿ ಮೈಮರೆತಳು. ಕೆಳದಿಯರು ಒಂದು ಸತ್ತಂತೆ ಬಿದ್ದಿದ್ದ ಕಾಮಿನಿ ಯನ್ನು ಕಂಡು ಕಳವಳಿಸಿ ಪರೀಕ್ಷಿಸಿ, ಉಸಿರಿದ್ದುದನ್ನು ಗಮನಿಸಿ, ಶೈತ್ಯೋಪಚಾರ ದಿಂದ ಬದುಕಿಸಿದರು. ಅನಂತರ ಸುತ್ತಣ ಪರಿಸರಣವನ್ನೂ, ಅವಳ ದೈಹಿಕಸ್ಥಿತಿಯನ್ನೂ ವೀಕ್ಷಿಸಿ, ಅವಳ ಕೊರಳಲ್ಲಿದ್ದ ಭಿನ್ನಹಾರವನ್ನು ಗಮನಿಸಿ, ಕುಲದೇವತೆಯ ಹರಕೆ ಸಫಲವಾಯಿತೆಂದು ಸ್ಪಷ್ಟಪಡಿಸಿದರು. ಆ ಕಡೆ ಬೆಳಕು ಹರಿಯುವ ವೇಳೆಗೆ ದೊರೆ ಎಚ್ಚರಗೊಂಡಾಗ ಮಕರಂದ ಅವನ ಕೊರಳಲ್ಲಿದ್ದ ಹೊಸ ಹಾರವನ್ನೂ ಅವನ ದೈಹಿಕ ಸ್ಥಿತಿಯನ್ನೂ ಗಮನಿಸಿ, ತಾನಿಲ್ಲದಾಗ ವಿದ್ಯಾಧರಿಯರ ನೆರವಿನಿಂದ ನಿಜಸತಿಯನ್ನು ಕೂಡಿರಬೇಕೆಂದೂಹಿಸಿ, ಗೆಳೆಯನಿಗೆ ನೆನಪುಮಾಡಿಕೊಟ್ಟನು. ಕನಸಿನಂತೆ ನಡೆದು ಹೋದ ಘಟನೆಯನ್ನು ಸ್ಮರಿಸಿಕೊಂಡು ಶೋಕಾಕುಲನಾಗಿದ್ದ ದೊರೆಯನ್ನು ಮಕರಂದ ಕೈಗೊಟ್ಟು ಮಯೂರಪಿಸಿರ್ಭುರಗಿರಿಯಿಂದಿಳಿಸಿ, ಮೆಲ್ಲಮೆಲ್ಲನೆ ನಡೆಯಿಸಿ, ಕುಸುಮ ಪುರದ ಹೊರವಳಯದಲ್ಲಿ ಪದ್ಮಾವತೀ ಮಂದಿರವಿದ್ದ ಉದ್ಯಾನವನಕ್ಕೆ ಕರೆದೊಯ್ದನು.

ಪ್ರಿಯವಿರಹ ಸಂತಾಪದಗ್ಧೆಯಾದ ಲೀಲಾವತಿಯನ್ನು ಕೆಳದಿಯರು ಕರೆತಂದು ಪದ್ಮಾವತೀ ದೇವಿಯ ಪಾದೋಪಾಂತದಲ್ಲಿ ಕೆಡಹಿ, ತಾಪ ಶಮನ ಪರಿಕರಗಳನ್ನು ತಂದು, ಶಿಶಿರೋಪಚಾರಮಾಡಿದರು. ಆದರೂ ಆಕೆಯ ತಾಪ ಆರಲಿಲ್ಲ. ಆಗ ಕಳಾವತಿ ಸಖಿಯರನ್ನು ಕರೆದು 'ನಿಮಗೆ ಈಕೆಯಲ್ಲಿ ಕರುಣವಿರುವುದಾದರೆ ಈಗಲೆ ಹೋಗಿ ಚಂದ್ರಕಾಂತದಿಂದ ಕೂಡಿದ ಮಯೂರಮೇಘವೆಂಬ ಕೇಳೀಶೈಲದ ಹಿಮಹಾಸವೆಂಬ ಗುಹಾಗೇಹದ ಮುಂದೆ ಪರಾಗಪುಳಿನಿಯೆಂಬ ಕೃತಕ ತರಂಗಿಣಿಯ ತಡಿಯಲ್ಲಿ ತಳಿರು ಹಂದರವನ್ನಿಕ್ಕಿ, ಅದರೊಳಗೆ ಪುಷ್ಪಮಂಟಪವನ್ನು ನಮೆದು ಸಕಲ ಪರಿಕರಗಳನ್ನಳ ವಡಿಸಿ ಅಲ್ಲಿಗಿವಳನ್ನು ಬಿಜಯಗೈಸಿದರೆ ಒಳಿತಾಗುತ್ತದೆ' ಎಂದು ತಿಳಿಸಿದಳು. ಒಡನೆಯೆ ಅಪೂರ್ವ ಸುಂದರವಾದ ಮಂಟಪ ಸಿದ್ಧವಾಯಿತು. ಲೀಲಾವತಿ ಸಖಿಯರ ನಡುವೆ ಒಂದು ಉತ್ತುಂಗವಾದ ಹಸೆಯ ಮೇಲೆ ರತಿಯಂತೆ ಮಂಡಿಸಿದಳು. ತಮ್ಮ ಕೆಳದಿಯನ್ನು ಭಂಗಪಡಿಸಿ ದುಃಖಕ್ಕೀಡುಮಾಡಿದ ಕಂದರ್ಪನನ್ನು ಸೆರೆಹಿಡಿದು ತರುತ್ತೇವೆಂದು ಪಣತೊಟ್ಟುವನಿತೆಯರು ಅನ್ವೇಷಣಾಸಕ್ತರಾಗಿ ವನದಲ್ಲೆಲ್ಲ ಸುತ್ತಾಡು ತ್ತಿದ್ದರು. ಆಗ ನಾಗಸಂಪಗೆಯ ನೆರಳಿನಲ್ಲಿದ್ದ ಕಂದರ್ಪದೇವನನ್ನು ಕಂಡ ತರುಣಿ ಯರು ಅವನನ್ನು ಮುತ್ತಿಕೊಂಡು 'ಎದ್ದೇಳು, ಸ್ಮರ ನನ್ನೊಡತಿಯ ಬಳಿಗೆ ಬಾ. ಬರದಿದ್ದರೆ ಹೂವಿಂದ ಹೆಡಮುರಿಕಟ್ಟಿ ಎಳೆದೊಯ್ಯುತ್ತೇವೆ' ಎಂದು ಗುಡುಗಿದರು. ಕಂದರ್ಪದೇವ ಸಿಕ್ಕಿದುದನ್ನೂ, ಅವನ ರೂಪಲಾವಣ್ಯ ವರ್ಣನೆಯನ್ನೂ ತಮಾಳಿಕೆ ಯಿಂದ ಲೀಲಾವತಿ ಕೇಳಿ ಸೋತ್ಕಂಠೆಯಾಗಿ ಸಸಂಭ್ರಮೆಯಾಗಿ ತನ್ಮಾರ್ಗದತ್ತ ದೃಷ್ಟಿಯಾಗಿ ಕುಳಿತಳು.

ಲಾವಣ್ಯವತಿಯರ ನಡುವೆ ಲಾವಣ್ಯವೇ ಮೂರ್ತಿಗೊಂಡಂತೆ ಬರುತ್ತಿದ್ದ ಕಂದರ್ಪದೇವ ದೂರದಲ್ಲಿ ಕಾಣಿಸಿಕೊಂಡೊಡನೆಯೆ ಲೀಲಾವತಿಯ ಚಿತ್ತಾಂಬುಧಿ ಯಿಂದ ಉಕ್ಕಿದ ಮೋಹರಸ ಕಣ್ಣಿನ ಮೂಲಕ ತುಳುಕಿದಂತೆ ಆನಂದಬಾಷ್ಪ ಸುರಿದುವು. ವಿರಹತಾಪದಿಂದ ಅನಿಮಿಷತೆ ದೊರೆಕೊಂಡಿತೋ ಎಂಬಂತೆ ಎವೆಯಿಕ್ಕದೆ ನೋಡು

ತ್ತಿದ್ದ ಮನೋರಮೆಯನ್ನು ನರೇಂದ್ರಚೂಡಾರತ್ನ ನೋಡಿದನು. ಕಳಾವತಿ ಮೊದಲಾದ ಕೆಳದಿಯರು ವಧೂವರರ ಸಮಾನುರೂಪಾನುರಾಗಕ್ಕೆ ಸಂತೋಷಪಟ್ಟು ಗಾಂಧರ್ವವಿಧಿಯಿಂದ ಮದುವೆ ನಡೆಸಲು ಸನ್ನದ್ಧರಾದರು. ವಧೂವರರನ್ನು ಬಿಸಿ ನೀರಿಂದ ಮೀಯಿಸಿ, ಪರಿಪರಿಯಾಗಿ ಸಿಂಗರಿಸಿ, ಹೂವಿನ ಹಸೆಯಲ್ಲಿರಿಸಿ, ಹೊಸ ಮುತ್ತಿನ ಸೇಸೆಯನ್ನು ವರ್ಷಿಸಿ, ಹೂವಿನ ಸೆಜ್ಜೆವನೆಗೆ ಕಳುಹಿಸಿದರು. ದರ್ಪಕನ ಆಜ್ಞಾನುಸಾರಿಯಾಗಿ ವಸಂತಕ ವನಲಕ್ಷ್ಮಿಯನ್ನು ಕೂಡುವಂತೆ ಅವರಿಬ್ಬರೂ ಪರಸ್ಪರ ಕೂಡಿದರು.

ಬೆಳಗಿನ ಜಾವದಲ್ಲಿ ಸಖೀಜನಸಹಿತ ಕಳಾವತಿ ತಮಾಳಿಕೆಯರು ಬಂದು ರತಿಕಾಮರಿಗೆ ಪೊಡಮಡುವಂತೆ ಲೀಲಾವತಿ ಕಂದರ್ಪ ದೇವರಿಗೆ ನಮಸ್ಕರಿಸಿದರು. ಅನಂತರ ಎಲ್ಲರೂ ವಾಸವದತ್ತೆಯ ಅಪೇಕ್ಷೆಯಂತೆ ಕುಸುಮಾಕರೋದ್ಯಾನಕ್ಕೆ ಹೋಗಿ, ಪುಷ್ಪಸಂಪತ್ತನ್ನು ನೋಡಿ ಆನಂದತುಂದಿಲರಾಗಿ, ಬಗೆಬಗೆಯ ಹೂಗಳನ್ನು ಮೆಚ್ಚಿದರು. ದೊರೆ ಕಳಾವತಿಯ ರಸಿಕತೆಯನ್ನೂ ಕಾವ್ಯಕಳಾವಿಳಾಸವನ್ನೂ ಪ್ರಶಂಸಿಸಿದನು. ಉಳಿದ ತರುಣಿಯರು ಪುಷ್ಪಾಪಚಯದಲ್ಲಿ ಮಗ್ನರಾಗಿ ತಮಗೆ ಪ್ರಿಯವೆನಿಸಿದ ಹೂಗಳನ್ನು ತಿರಿದು ತಂದು ಲೀಲಾವತಿಯನ್ನು ಸಿಂಗರಿಸಿದರು.

ಅನಂತರ ಲೀಲಾವತಿ ಜಲಕೇಳಿಗೆಳಸಿ ಹಂಸಹಾರವೆಂಬ ಸರೋವರಕ್ಕೆ ಗಣಿಕೆಯರ ಗಡಣದಲ್ಲಿ ಬಂದಳು. ಕಾಂತಕಾಂತೆಯರು ನಾನಾ ರೀತಿಯಾಗಿ ವಿಶೇಷ ವೈಭವದಿಂದ ಸ್ವರ್ಗಸುಖವನ್ನಣಕಿಸುವಷ್ಟರ ಮಟ್ಟಿಗೆ ದೀರ್ಘಕಾಲ ನೀರಾಟವಾಡಿದ ನಂತರ ಮತ್ತೆ ಮಲ್ಲಿಕಾಮಂಟಪಕ್ಕೆ ಬಂದು, ಕೆಳದಿಯರ ಶುಶ್ರೂಷೆಯಲ್ಲಿ ನಿರಂತರ ಸ್ಮರಸಾಮ್ರಾಜ್ಯ ಸುಖವನ್ನನುಭವಿಸುತ್ತಿದ್ದರು. ಹೀಗಿರಲು ಒಂದು ದಿನ ಪ್ರಾತಃ ಸಮಯದಲ್ಲಿ ಮಕರಂದ ಕಾಳಾವಲೋಕಿನೀಫಲಕವನ್ನು ತಂದು ನರೇಂದ್ರನ ಕೈಗೆ ಕೊಟ್ಟು, ಅವನು ನೋಡಿದ ನಂತರ ಮತ್ತೆ ತನ್ನ ಕೈಗೆ ತೆಗೆದುಕೊಂಡನು. ಓಪರೆಡೆಯಲ್ಲಿ ಮುಚ್ಚು ಅಚ್ಚಿಗವನ್ನು ಮಾಡದಿರುತ್ತದೆಯೆ? ತನಗೆ ತೋರಿಸದೆಯೆ ಹಲಗೆಯನ್ನು ಮುಚ್ಚಿಕೊಂಡದ್ದಕ್ಕಾಗಿ ಲೀಲಾವತಿ ಕನಲಿ ಕಿಡಿಕಿಡಿಯಾದಳು. ಕೋಪಸಲ್ಲದೆಂದು ಮಕರಂದ ಬಗೆ ಬಗೆಯಾಗಿ ಬೇಡಿಕೊಂಡರೂ ಅವಳ ಕಿಚ್ಚು ನಂದಲಿಲ್ಲ. ತನ್ನ ಕೆಳದಿಯರನ್ನು ಕರೆದು ಆ ಮಾಯಾವಿಯ ಕೆಯ್ಯ ಹಲಗೆಯನ್ನು ಹೇಗಾದರೂ ಕಸಿದುಕೊಳ್ಳುವಂತೆ ಬೆಸಸಿದಳು.

ಆಗ ಕೆಳದಿಯರು ಮಕರಂದನನ್ನು ಎಕ್ಕಟಿಗೆಳೆದು, ಒಬ್ಬಳು ಅವನ ಕೂದಲನ್ನು ಮತ್ತೊಬ್ಬಳು ಅವನ ಕೈಯನ್ನು, ಮಗುದೊಬ್ಬಳು ಅವನ ಮೀಸೆಯನ್ನು ಹಿಡಿದೆಳೆಯುವಲ್ಲಿ, ಉಳಿದವರು ಅವನ ಕಂಕುಳಲ್ಲಿದ್ದ ಫಲಕವನ್ನು ಕಿತ್ತು ಲೀಲಾವತಿಗಿತ್ತರು. ತನ್ನ ಪತಿ ಕಾಲು ಹಿಡಿದರೂ ಲೆಕ್ಕಿಸದ ಕಲ್ಮಾನಸೆ ಆ ಫಲಕವನ್ನು ಕೊಂಡು, ಅದರಲ್ಲಿ ಕಂಡ ಆತ್ಮಪ್ರತಿಚ್ಛಾಯೆಯನ್ನು ಪರವಧುವೆಂದೆ ಭಾವಿಸಿ, ತನ್ನ ಪ್ರಿಯ ಬೇರೊಬ್ಬಳು ಹೆಣ್ಣನ್ನು ಪ್ರೀತಿಸುತ್ತಿದ್ದಾನೆಂದೇ ಜಗೆದು, ಬಹು ಕುಪಿತೆಯಾಗಿ ಆ ಹಲಗೆಯನ್ನು ಪಾದಾಗ್ರದಿಂದ ತೇದು ಒದೆದು, ಕೆಮ್ಮಡದಿಂದೊರಸಿ, ಹಸ್ತದಿಂದ ಮೋದಿ ತೀಡಿದಳು. ಆದರೂ ಆತ್ಮಪ್ರತಿಬಿಂಬ ಹಾಳಾಗದಿರಲು ಆ ಹಲಗೆಯನ್ನು

ಕೂಪದಲ್ಲಿ ಬಿಸಾಡಿ, ಕಾರಕಾದಂಬಿನಿಯಂತೆ ಗರ್ಜಿಸಿ, ಬೆಂಕಿಹೆಣ್ಣಿಂತೆ ಕನಲಿ, ನೆಲ ಬಾಯ್ದೆರೆದರೆ ಪ್ರವೇಶಿಸುವ ಕಾತರತೆಯಿಂದ ಮುಂದೆ ಮುಂದೆ ನಡೆದಳು. ತನ್ನ ಸಖಿಯ ಉನ್ಮಾದಾವಸ್ಥೆಯಿಂದ ಕಳವಳಗೊಂಡ ಕಲಾವತಿ ಓಡಿಬಂದು ಅವಳ ಕೈ ಹಿಡಿದಾಗ ತನ್ನ ಗಂಡನೇ ಕೈ ಹಿಡಿದನೆಂದು ಭಾವಿಸಿ "ಕೈಬಿಡು ಅಸತೀಪ್ರಿಯ, ಇದು ಆ ಫಲಕವಲ್ಲ. ನಿನ್ನ ಜಾರತನದ ಸಖಿ ಯಾರು? ಎಲ್ಲಿಯವಳು?" ಎಂದು ಕೂಗಾಡಿದಳು. ಕೈಹಿಡಿದವಳು ಕಳಾವತಿಯೆಂದು ತಿಳಿದಾಗ ಲೀಲಾವತಿ ಸಮ್ಮುಖಿಯಾದಳು. ಎಳವೇಟದಲ್ಲಿಯೇ ತೊಡಕು ತಂದುಕೊಂಡು ಸುಖದ ಬೇರಿಗೆ ಬಿಸಿನೀರು ಹೊಯ್ಯುವುದು ವಿವೇಕವಲ್ಲವೆಂದು ಸಖಿ ವಿನಯವಿನಮ್ರಳಾಗಿ ನುಡಿದಳು. ಮುಗಿಲಂತಿರುವ ಸ್ತ್ರೀ ಯೌವನವನ್ನು ನಚ್ಚಿ, ಪತಿಯ ಮೇಲೆ ಇಲ್ಲದ ದೋಷವನ್ನು ಹೊರಿಸಿ, ಚಲಕ್ಕೆ ಮನವನ್ನು ಮಾರಿ ಮೋಸ ಹೋಗಬಾರದೆಂದು ಮತ್ತೊಬ್ಬಳು ಸಖಿ ಎಚ್ಚರಿಸಿದಳು. ಶಾಶ್ವತವಲ್ಲದ ಜೀವವನ್ನು ಒಂದೆರಡು ಗಳಿಗೆಯ ಹುರುಡಿಗಾಗಿ ತೆತ್ತು ವಿಯೋಗವಹ್ನಿಯಿಂದ ಬೇಯುವುದು ತರವಲ್ಲವೆಂದೂ ಗರ್ವವನ್ನು ತ್ಯಜಿಸಿ ಬೇಡಿದುದನ್ನು ಕೊಟ್ಟು ನಾಚಿಕೆಯನ್ನು ಸುಟ್ಟು ಹೊಚ್ಚ ಹೊಸ ಜೀವನವನ್ನನುಭವಿಸಿದ ಪಾಳ್ಮೆಗವನ್ನು ನೋಡಬಾರದೆಂದೂ ಇತರ ತೀವೆಯರು ಮಾರ್ಮಿಕವಾಗಿ ಮಾತುಗುಟ್ಟಿದರು. ಆದರೂ ಲೀಲಾವತಿ ಕಾಡಿನೊಳಗೆ ಮುಂದುವರಿಯುತ್ತ, ಅಶ್ರುಬಿಂದುಗಳನ್ನು ತೊಡೆಯುತ್ತ, ಬಿಸುಸುಯ್ಯುತ್ತ, ತನ್ನ ಪತಿ ತನ್ನ ಪ್ರೇಮದ ಗಾಢತೆಯನ್ನರಿಯದೆ ಹೋದನಲ್ಲ ಎಂದು ತಳಮಳಗೊಳ್ಳುತ್ತ, ಕಣ್ಣ ಬೇನೆಗಾರದೆ ತಲೆಯನ್ನು ತಿವಿಸಿಕೊಂಡರಂಬಂತೆ ಪರುಷರೋಷಿತೆಯಾಗಿ ಲತೆಯಾದಳು. ಆ ದೃಶ್ಯವನ್ನು ನೋಡಿ ಸಮದುಃಖಿಯರಾದ ಸಖಿಯರೂ ಲತಾಕೃತಿಯನ್ನು ತಾಳಿದರು.

ನಿಜಪತ್ನೀವಂಚಿತನಾದ ದೊರೆ ಕಿಂಕರ್ತವ್ಯತಾಮೂಢನಾಗಿ ಶೂನ್ಯಮತಿಯಾಗಿ ಲತಾಮಂಟಪದಲ್ಲಿ ರತಿಶಿಕ್ಷಾವನದಲ್ಲಿ ಪದ್ಮಾವತೀಕೂಟದಲ್ಲಿ ನದೀಪುಲಿನದಲ್ಲಿ ಕ್ರೀಡಾದ್ರಿಯಲ್ಲಿ ಹುಡುಕಿ ಹುಡುಕಿ ಕಾಣದೆ, ಸ್ವರ್ಗನರಕಗಳನ್ನು ಆ ಶರೀರದಲ್ಲಿ ಕಂಡುದಾಗಿ ಹಂಬಲಿಸುತ್ತ, ತೋರಗೆಂಡಗಳ ತೊರೆಯನ್ನೀಸಿದಂತೆ ಕಂಗೆಟ್ಟು, ಮಕರಂದನ ಸಾಂತ್ವನ ವಾಣಿಯನ್ನು ಗಣಿಸದೆ, ಕೋಗಿಲೆಯ ಸ್ವರವನ್ನು ಕೇಳಿ ತನ್ನ ಪ್ರಿಯೆಯ ದನಿಯೆಂದೇ ಬಗೆದು ದನಿಬಂದ ದಿಕ್ಕಿಗೆ ಓಡಿಹೋದನು. ಸಂಪಗೆಯ ಕಂಪನ್ನು ನಲ್ಲಳ ಮೆಯ್ಯುಕಂಪೆಂದು ಬಗೆದು ಆ ಕಡೆಗೆ ತೆರಳಿದನು. ಹಿಂದೆ ನೀರಾಟವಾಡಿದ ಸರೋವರದ ಬಳಿಹೋಗಿ, ಅದು ತನ್ನ ಮಡದಿಯ ನಗೆಮೊಗವೆಂದೇ ಭಾವಿಸಿ ಹುಚ್ಚನಂತೆ ಅಲ್ಲೆಗರೆದನು. ಅವಳು ಮಲ್ಲಿಕಾಮಂಟಪಕ್ಕೆ ಬಾರದಿರಳೆಂದು ಧೈರ್ಯಹೇಳಿ ಮಕರಂದ ದೊರೆಯನ್ನು ಹಿಂದಿರುಗಿಸಿ ಒಡಗೊಂಡು ಬರುವಾಗ ತರುಣತರುಷಂಡದ ನಡುವೆ ಬಾಡಿಬಿದ್ದಿದ್ದ ಹೊಸಲತೆ ದೊರೆಯ ಗಮನ ಸೆಳೆಯಿತು.

ಆ ಲತೆ ತನ್ನ ಸತಿಯಂತೆ ತೋರಲು ದೊರೆ 'ಲೀಲಾವತಿ, ಲೀಲಾವತಿ' ಎಂದು ಕರೆದು, ಅದರಮೇಲೆ ಹಾಡು ತಕ್ಕೈಸಲು ಒಡನೆಯೆ 'ಸಿತಪುಷ್ಪ ಸ್ಮಿತ ನೇತ್ರವಾಯಿತು, ಎಳದಳಿರು ಬಾಯಿಯಾಯ್ತು, ಬಿಸ್ಗೊಂಚಲು ಉನ್ನತ ಕುಚ

ವಾಯಿತು, ತುಂಬಿ ಕುರುಳಾಯಿತು, ಕೊಂಬೆ ತೋಳಾಯಿತು, ಲತೆ ಲೀಲಾವತಿಯಾಯಿತು, ಲೀಲಾವತಿ ಮತ್ತೊಂದು ಲತೆಯನ್ನಪ್ಪಿಕೊಳ್ಳಲು ಅದು ಕಳಾವತಿಯಾಯಿತು. ಹೀಗೆಯೇ ಪರಸ್ಪರಾಲಿಂಗನ ಕ್ರಮದಿಂದ ಲತಾಕೃತಿಗಳೆಲ್ಲ ನಿಜಾಕೃತಿಗಳಾಗಿ, ಮತ್ತೆ ಮಾನಸಲೋಕವನ್ನು ಕೂಡುದಕ್ಕಾಗಿ ಅವರು ಕಂದರ್ಪದೇವನನ್ನು ಹರಸಿ, ರಾಜದಂಪತಿಗಳನ್ನು ಮಲ್ಲಿಕಾಮಂಟಪಕ್ಕೆ ಕಳುಹಿ, ಲತಾನಿಕೇತನಗಳಲ್ಲಿ ನಿಜಪ್ರಿಯರೊಡನೆ ಬೆರೆದು ಸುಖವಾಗಿದ್ದರು.

ಒಂದುದಿನ ಸಂಜೆ ಗಂಧಗಿರಿಯ ದೊರೆ ವಸಂತಶೇಖರನೆಂಬ ವಿದ್ಯಾಧರನ ಹೆಂಡತಿ ಮದನಮಂಜರಿ ಕಂದರ್ಪದೇವನ ರೂಪಸಂಪತ್ತಿಗೆ ಮರುಳಾಗಿ ಗಂಡನನ್ನು ಕಣ್ತಪ್ಪಿಸಿ ಬಂದು, ವಾಸವದತ್ತೆ ಸಾಯಂತನಮಜ್ಜನಕ್ಕೆ ಹೋದ ಸಂಧಿಯನ್ನೆ ಸಾಧಿಸಿ, ಅವನಮೇಲೆ ಬಿದ್ದಳು. ಒಡನೆಯೆ ಅವನು ಅವಳ ಬಾಹುಪಾಶದಿಂದ ಬಿಡಿಸಿಕೊಂಡು, ಪುರುಷವ್ರತದ ಮಹಿಮೆಯನ್ನು ವಿವರಿಸಿ, ನೀತಿಬೋಧೆ ಮಾಡಿದನು. ಸೌಂದರ್ಯದಲ್ಲಿ ಲೀಲಾವತಿಗಿಂತ ನಾಲ್ಕುಬೆರಳು ಮಿಗಿಲಾಗಿದ್ದ ಮದನಮಂಜರಿ ಅವನ ಉಪದೇಶಕ್ಕೆ ಹೇಸಿ, 'ಎಲ್ಲೈ ಗಾಂಪ, ಗುಣಕ್ಕೆ ಮಾರುಹೋಗಿ ಸ್ವರ್ಗಸುಖವನ್ನು ಬಲಿಗೊಡಬೇಡ. ಸುಂದರಾಂಗಿಯರನ್ನೊಲಿಸಿಕೊಳ್ಳುವುದಕ್ಕಾಗಿ ಜನ ಜಾರದ ಭವದಲ್ಲಿ ಒರುತ್ತಾರೆ. ತಾವಾಗಿಯೆ ಪ್ರೀತಿಸಿ ಬರುವ ಸ್ತ್ರೀಯರನ್ನು ತಿರಸ್ಕರಿಸುವ ಜನ ಪಾಪಿಗಳಲ್ಲವೆ?' ಎಂದು ಹಲುಬಿ ಹಂಬಲಿಸಿ ಕೂಡೆಂದು ಕಾಲು ಹಿಡಿದಳು. ಆದರೆ ಅವನು ಜಗ್ಗಲಿಲ್ಲ. ಕೋಪದಿಂದ ಕುದಿಯುತ್ತಿದ್ದ ಆ ಹೆಣ್ಣು ಮಾಯಾವಿದ್ಯೆಯ ಬಲದಿಂದ ಅವನು ಕುರವಕವಾಗುವಂತೆ ಮಾಡಿದಳು.

ಇತ್ತ ಲೀಲಾವತಿ ಮಲ್ಲಿಕಾಮಂಟಪದಲ್ಲಿ ತನ್ನ ಪ್ರಿಯನನ್ನು ಕಾಣದೆ ಲತಾಭವನಗಳಲ್ಲಿ ಹುಡುಕಿ ಬಸವಳಿದು, ಕಳಾವತಿಯನ್ನು ಕರೆದು ಹಂಸ ಶುಕಪಿಕ ಹರಿಣಿಗಳನ್ನು ಚೆನ್ನಾಗಿ ನೋಡಿಕೊಳ್ಳುವಂತೆಯೂ, ಹೊಸಮಾವು ಮಲ್ಲಿಗೆಗಳಿಗೆ ಮದುವೆ ಮಾಡುವಂತೆಯೂ ತಿಳಿಸಿ, ತಾನು ದೇಹತ್ಯಾಗ ಮಾಡುವುದಾಗಿ ಘೋಷಿಸಿದಳು. ಯಾರು ಪರಿರಂಭಿಸಿದರೂ ಚಿಗುರದ ಕುರವಕವನ್ನಪ್ಪಿ, ಅದರ ಬಯಕೆಯನ್ನು ಪರಿಹರಿಸುವಂತೆ ಕಳಾವತಿ ಪ್ರಾರ್ಥಿಸಿದಳು. ಅದರ ಬಯಕೆಯನ್ನು ತೀರಿಸಿದ ನಂತರ ಲತೆಯಿಂದ ಕೊರಳನ್ನು ಬಿಗಿದುಕೊಳ್ಳುವುದಾಗಿ ನಿಶ್ಚಯಿಸಿ ಲೀಲಾವತಿ ಕುರವಕವನ್ನಪ್ಪಿದಳು. ಒಡನೆಯೆ ಅದು ಸೌಂದರ್ಯಸಂಕ್ರಂದನವಾಯಿತು. ಅನ್ಯಸ್ತ್ರೀಯನ್ನಪ್ಪಿದ ಹೊಲೆ ಮಾಸಿತೆಂದು ಕಂದರ್ಪದೇವ ಸಂತುಷ್ಟನಾಗಿ ಸತಿಯನ್ನು ಮುದ್ದಿಸಿದನು. ಸುತ್ತ ನೆರೆದಿದ್ದ ರಮಣಿಯರು 'ದೇವಿ, ನೀನು ಲಕ್ಕದೀವಳಿಗೆಗಾಣು; ನಿನ್ನೋಲೆ ಕಲ್ಲೋಲೆಯಕ್ಕೆ' ಎಂದು ಹರಸಿ, ದಂಪತಿಗಳನ್ನು ಮಲ್ಲಿಕಾಮಂಟಪಕ್ಕೆ ಕರೆದೊಯ್ದರು.

ಚೂಡಾಮಣಿ ಶೃಂಗಾರಶೇಖರರಿಗೆ ತಮ್ಮ ಮಕ್ಕಳ ವೃತ್ತಾಂತ ಗೊತ್ತಾಗಿ, ಅವರನ್ನು ವಿಶೇಷ ಸಂಭ್ರಮದೊಡನೆ ಕರೆಸಿಕೊಂಡು, ಅನೇಕ ರೀತಿಯಿಂದ ಸತ್ಕರಿಸಿದರು. ಕಂದರ್ಪ ಲೀಲಾವತಿಯರು ಜಯಂತಿಪುರ (ಬನವಾಸಿ)ದಲ್ಲಿ ಸುಖವಾಗಿದ್ದರು.

## ೩. ಸುಬಂಧುವಿನ ವಾಸವದತ್ತಾ ಕಾವ್ಯದ ಸಾರಾಂಶ

ಚಿಂತ್ರಾಮಣಿಯೆಂಬ ದೊರೆಯ ಮಗ ಕಂದರ್ಪಕೇತು. ಅವನೊಂದು ದಿನ ಬೆಳಗಿನ ಜಾವದ ವೇಳೆಗೆ ಅಪೂರ್ವ ಸುಂದರಿಯಾದ ಹದಿನೆಂಟು ವರ್ಷದ ತರುಣಿಯನ್ನು ಸ್ವಪ್ನದಲ್ಲಿ ಕಂಡನು. ಅವನು ಎಚ್ಚತ್ತಾಗ ವಿಷಸಮುದ್ರದಲ್ಲಿ ಮುಳುಗಿದವನಂತೆ ಕಂದಿಕುಂದಿದ್ದನು. ಮರುಕ್ಷಣದಲ್ಲಿಯೇ ಅವನು ಆಕಾಶವನ್ನಪ್ಪಿಕೊಂಡು, ಪ್ರಸಾರಿತ ಬಾಹುಯುಗಳನಾಗಿ "ಹಾ ಪ್ರಿಯತಮೆ, ಹೋಗಬೇಡ, ಹೋಗಬೇಡ" ಎಂದು ಕೂಗಿಕೊಂಡನು. ಗಂಧಲೇಪನ ಭೋಜನ ತಾಂಬೂಲ ವರ್ಜ್ಯನಾಗಿ, ಪರಿಜನರನ್ನು ಪರಿಹರಿಸಿ, ಬಾಗಿಲು ಹಾಕಿಕೊಂಡು ಅವನು ನಿಮೀಲಿತನೇತ್ರನಾಗಿ ಆ ರಾತ್ರಿಯನ್ನು ಅದೇ ಸ್ಥಳದಲ್ಲಿ ಕಳೆದನು.

ಆಗ ಅವನ ಆಪ್ತಮಿತ್ರ ಮಕರಂದ ಹೇಗೊ ಅಲ್ಲಿಗೆ ಬರುತ್ತಾನೆ. ಮದನಾಸ್ತ್ರದಿಂದ ಆಘಾತಗೊಂಡಿದ್ದ ಕಂದರ್ಪಕೇತುವನ್ನು ಕುರಿತು "ಪ್ರಿಯಸಖ ಅಸಾಧುಜನೋಚಿತವಾದ ಈ ಅವಸ್ಥೆಗೇಕೆ ನೀನು ಗುರಿಯಾದೆ? ನಿನ್ನ ಈ ಅವಸ್ಥೆಯನ್ನು ನೋಡಿದ್ದಾದರೆ ಸಜ್ಜನರು ಗಾಬರಿಗೊಳ್ಳುತ್ತಾರೆ, ದುರ್ಜನರು ದೂರುತ್ತಾರೆ. ಆದ್ದರಿಂದ ಸಾಧು ಜನೋಚಿತವಾದ ವರ್ತನೆಯ ಕಡೆಗೆ ನಿನ್ನ ಗಮನ ಹರಿಯಲಿ" ಎಂದವನು ವಿವೇಕ ಹೇಳುತ್ತಾನೆ.

ಅನಂತರ ಕುಸುಮಾಸ್ತ್ರ ಜರ್ಝರಿತ ದೇಹಿಯಾದ ಕಂದರ್ಪಕೇತು ಹೇಗೊ ಸಂವರಿಸಿಕೊಂಡು "ಪ್ರಿಯ ಮಿತ್ರ, ನನ್ನ ಹೃದಯ ಶತಮನ್ಯುವಿನಿಂದ ಆಕುಲಗೊಂಡಿದೆ. ಉಪದೇಶ ಶ್ರವಣಕ್ಕೀಗ ಕಾಲವಲ್ಲ. ನನ್ನ ಸರ್ವಾಂಗಗಳಿಗೂ ಅಗ್ನಿಸ್ಪರ್ಶವಾದಂತಿದೆ. ನನ್ನ ಹೃದಯ ಬೇಯುತ್ತಿದೆ; ನನ್ನ ಉಸಿರು ನಿಂತು ಹೋದಂತಿದೆ; ವಿವೇಕ ನಷ್ಟವಾದಂತಿದೆ; ಸ್ಮೃತಿ ಜಾರಿದಂತಿದೆ. ನನ್ನ ಸುಖದುಃಖಗಳಲ್ಲಿ ನೀನು ಸಮಭಾಗಿಯಾಗುವಂಥ ಪ್ರಿಯಮಿತ್ರನಾದರೆ, ನೀನು ಮರುಮಾತಾಡದೆ ನನ್ನೊಡನೆ ಬಾ" ಎಂದು ಹೇಳಿ ನಗರ ಪರಿಚ್ಯುತನಾಗಿ ಮಕರಂದನೊಡನೆ ಹೊರಡುತ್ತಾನೆ.

ಅನೇಕ ಯೋಜನ ಪ್ರಯಾಣಮಾಡಿದ ನಂತರ ಅವರಿಬ್ಬರೂ ವಿಂಧ್ಯಾದ್ರಿಯನ್ನು ತಲುಪುತ್ತಾರೆ. ಕಂದರ್ಪಕೇತು ವಿಶ್ರಾಂತಿಗಾಗಿ ಪನ್ನೇರಳೆ ಮರದ ನೆರಳಿನಲ್ಲೊರಗುತ್ತಾನೆ. ಮಕರಂದ ಕಂದಮೂಲ ಫಲಾದಿಗಳನ್ನು ಶೇಖರಿಸಿಕೊಂಡು ಬಂದು ಗೆಳೆಯನ ಮುಂದಿರಿಸುತ್ತಾನೆ; ಕಂದರ್ಪಕೇತು ತಿಂದುಳಿದ ಹಣ್ಣು ಹಂಪಲನ್ನು ತಿನ್ನುತ್ತಾನೆ. ಮಕರಂದ ಸಿದ್ಧಪಡಿಸಿದ ಎಳೆದಳಿರ ಹಾಸಗೆಯ ಮೇಲೆ ಕಂದರ್ಪಕೇತು ಸ್ವಪ್ನಸುಂದರಿಯನ್ನೆ ಧ್ಯಾನಿಸುತ್ತ ಮಲಗುತ್ತಾನೆ. ಅರ್ಧಯಾಮಾನಂತರ ನೇರಳೆ ಮರದ ತುದಿಯಲ್ಲಿದ್ದ ಶುಕಸಾರಿಕೆಯರ ಕಲಹ ಕಂದರ್ಪಕೇತುವಿಗೆ ಕೇಳಿಸಿತು. "ಎಲ, ಕಿತವ, ನೀನೆಲ್ಲಿ ಹೋಗಿದ್ದೆ. ಯಾವ ಹೆಣ್ಣಿನ ಬಳಿ ರಾತ್ರಿ ಕಳೆದೆ" ಎಂದು ಸಾರಿಕೆ ಪ್ರಕೋಪಗದ್ಗದ ಕಂಠೆಯಾಗಿ ತನ್ನ ಗಂಡನನ್ನು ಕುರಿತು ಜಟಕರಿಸಿತು. "ಪ್ರಿಯೆ, ಅಪೂರ್ವವಾದೊಂದು ಸಂಗತಿ ನಡೆದದ್ದರಿಂದ ತಡವಾಯಿತು" ಎಂದು ಶುಕ ಆ ಸಂಗತಿಯನ್ನು ಹೇಳಲುದ್ಯುಕ್ತನಾದನು: ಧವಳ ಸೌಧಗಳಿಂದ

ತುಂಬಿದ ಕುಸುಮಪುರವೆಂಬೊಂದು ನಗರವಿದೆ. ಶೃಂಗಾರಶೇಖರ ಆ ನಗರದ ದೊರೆ. ಅನಂಗವತಿ ಆತನ ಹೆಂಡತಿ. ಮಧ್ಯವಯಸ್ಸಿನಲ್ಲಿ ಅವರಿಬ್ಬರಿಗೆ ತ್ರಿಲೋಕ ಸುಂದರಿಯಾದ ವಾಸವದತ್ತೆ ಎಂಬ ಮಗಳು ಜನಿಸಿದಳು. ಪ್ರಾಪ್ತವಯಸ್ಕಳಾದ ಮಗಳಿಗೆ ಮದುವೆ ಮಾಡುವ ಉದ್ದೇಶದಿಂದ ದೊರೆ ಭೂಲೋಕದ ದೊರೆಗಳನ್ನು ಸ್ವಯಂವರ ಮಂಟಪದಲ್ಲಿ ಸೇರಿಸಿದನು. ವಾಸವದತ್ತೆ ವಿವಾಹವೇದಿಕೆಯನ್ನೇರಿ ನಿಂತು ಸುತ್ತಲೂ ನೆರೆದ ರಾಜಕುಮಾರರ ಕಡೆಗೆ ಕಣ್ಣು ಹರಿಸಿದಳು. ಆದರೆ ಯಾವ ರಾಜಕುಮಾರನೂ ಅವಳ ಕೃಪಾಕಟಾಕ್ಷಕ್ಕೆ ಪಾತ್ರವಾಗಲಿಲ್ಲ. ಅದೇ ರಾತ್ರಿ ಅವಳೊಂದು ಕನಸು ಕಂಡಳು; ಆ ಕನಸಿನಲ್ಲೊಬ್ಬ ಅಪೂರ್ವ ಸುಂದರನಾದ ಯುವಕ ಅವಳಿಗೆ ಕಾಣಿಸಿಕೊಂಡನು. ಕಂದರ್ಪಕೇತುವೆಂಬ ಹೆಸರೂ ಅವಳ ಕಿವಿಗೆ ಬಿದ್ದಂತಾಯಿತು. ಕನಸಿನಲ್ಲಿ ಕಂಡ ಪುರುಷನ ಸುಂದರಾಕಾರವನ್ನು ಸ್ಮರಿಸಿಕೊಳ್ಳುತ್ತಿದ್ದಂತೆಯೇ, ವಿಯೋಗಾಗ್ನಿ ಅವಳನ್ನಾವರಿಸಿದಂತಾಯಿತು. ಬಡಬಾಗ್ನಿ ಅವಳನ್ನು ಮುಕ್ಕಿದಂತಾಯಿತು. ಒಡನೆಯೇ ಅವಳು ತನ್ನ ಸಖಿ ಅನಂಗಲೇಖೆಯನ್ನು ಕರೆದು "ಪ್ರಿಯ ಸಖಿ, ನಿನ್ನ ಹಸ್ತಕಮಲಗಳನ್ನು ನನ್ನ ಎದೆಯ ಮೇಲಿಡು. ವಿಯೋಗದುಃಖ ಅಸಹನೀಯವಾಗಿದೆ. ಎಲೆ ಮದನ ಮಂಜರಿ, ಶ್ರೀಗಂಧವನ್ನು ಲೇಪಿಸು. ಎಲೆ ಮುಗ್ಧೆ ವಸಂತಸೇನೆ, ನನ್ನ ಕೇಶಪಾಶವನ್ನು ಸಂಹರಿಸು, ಎಲೆ ರಾಗಿಣಿ ರಾಗಲೇಖೆ, ಕಮಲದಳಗಳಿಂದ ನನ್ನ ವಕ್ಷಸ್ಥಳವನ್ನಾಚ್ಛಾದಿಸು. ಒಳ್ಳಿದ್ದೆಯೆ, ಬಾ; ನನಗಾಗಿ ಕರುಣಿಸು" ಎಂದವಳು ನಾನಾ ಪ್ರಕಾರವಾಗಿ ಹಲುಬಿ ಹಂಬಲಿಸಿ ಮೂರ್ಛೆಗೊಂಡಳು.

"ಅನಂತರ ಸಖಿಯರು ಅತಿಶಿಶಿರಘನಸಾರ ಲೇಪನದಿಂದ ಮತ್ತು ಅತಿ ತುಹಿನ ಶ್ರೀಗಂಧ ಲೇಪನದಿಂದ ಆ ಮದನತಾಪ ಸಂತಪ್ತೆಯನ್ನು ಉಪಚರಿಸಿದರು, ನದೀತಟದ ತರುಸಮೂಹದ ನೆರಳಿಗೆ ಕೊಂಡೊಯ್ದರು; ಎಳೆವಾಳೆಯ ಸುಳಿಯನ್ನು ಹೊದಿಸಿದರು. ತುಸು ಹೊತ್ತಿನಲ್ಲಿ ಅವಳು ಮೂರ್ಛೆ ತಿಳಿದೆದ್ದು, ಕಂದರ್ಪಕೇತುವನ್ನು ಆಕಾಶಪಟದಲ್ಲಿ ಬರೆದಿರಬಹುದೆಂಬಂತೆ, ಮುಗಿಲಿನಲ್ಲಿ ಚಿತ್ರಿಸಿರಬಹುದೆಂಬಂತೆ ಆಕಡೆಯೆ ನೋಡುತ್ತ, ತಾನೂ ಅವನ ಪ್ರತಿಬಿಂಬವನ್ನು ಬರೆದಳು; ತನ್ನ ಸಖಿ ತಮಾಲಿಕೆಯನ್ನು ಕರೆದು, ಕಂದರ್ಪಕೇತುವಿನ ಮನೋಗತವನ್ನು ತಿಳಿದು ಬರುವಂತೆ ಕಳುಹಿಸಿದಳು. ಅಗೋ ಅವಳಲ್ಲಿ ಮರದ ಕೆಳಗೆ ನಿಂತಿದ್ದಾಳೆ" ಎಂದು ಗಿಳಿ ಸುಮ್ಮನಾಯಿತು.

ಅನಂತರ ಮಕರಂದ ಸಾನಂದಾತಿಶಯದಿಂದ ತನ್ನ ಸಖನ ವೃತ್ತಾಂತವನ್ನು ತಮಾಲಿಕೆಗೆ ತಿಳಿಸಿದನು. ಅವಳು ಗೌರವಸೂಚನಾರ್ಥವಾಗಿ ಪದ್ಯಮಾಲಿಕೆಯನ್ನರ್ಪಿಸಿದಳು. ಅದನ್ನು ಮಕರಂದ ವಾಚಿಸಿದನು:

ಪ್ರತ್ಯಕ್ಷ ದೃಷ್ಟಭಾವಾಪಿ ಅಸ್ಥಿರಹೃದಯಾ ಹಿ ಕಾಮಿನೀ ಭವತೀ
ಸ್ವಪ್ನಾನುಭೂತಭಾವಾ ದೃಢಯತಿ ನ ಪ್ರತ್ಯಯಮ್ ಯುವತಿಃ

ಈ ಮಧುರಗಾನ ಕಿವಿದೆರೆಯ ಮೇಲೆ ಸುರಿಯುತ್ತಿದ್ದಂತೆ ಕಂದರ್ಪಕೇತು ಆನಂದ ಪರವಶನಾಗಿ ತನ್ನ ಕೈಬಾಚಿ ತಮಾಲಿಕೆಯನ್ನಪ್ಪಿಕೊಂಡನು. "ಅವಳೆಂತಿ

ದ್ದಾಳೆ? ಏನು ಹೇಳುತ್ತಾಳೆ? ಏನು ಮಾಡುತ್ತಿದ್ದಾಳೆ?" ಎಂಬುದಾಗಿ ಪ್ರಶ್ನಿಸುತ್ತ, ಅವರ ಕತೆಯನ್ನು ಕೇಳುತ್ತ, ಅವನು ಇರುಳು ಕಳೆದನು.

ಮಾರನೆಯ ದಿನ ಕಂದರ್ಪಕೇತು ಮಕರಂದ ತಮಾಲಿಕೆಯರೊಡನೆ ವಾಸವ ದತ್ತೆಯ ನಗರಕ್ಕೆ ಹೋದನು. ಗಗನ ಚುಂಬಿಯಾದ ಕೋಟೆಯಿಂದ ಸುತ್ತುವರಿದ ಅರಮನೆಯನ್ನು ಹೊಕ್ಕು ಸೌಂದರ್ಯವೇ ಚರಾಚರರೂಪವನ್ನು ಪಡೆದಂತಿದ್ದ ವಾಸವದತ್ತೆಯ ಸೌಧವನ್ನು ನೋಡಿ ಆನಂದ ಭರಿತನಾದನು. ಸೌಂದರ್ಯ ಸ್ಪರ್ಧೆ ಯಲ್ಲಿ ಭಾಗವಹಿಸಿದಂತಿದ್ದ ತರುಣಿಯರ ಶೃಂಗಾರ ರಸ ಸಮೃದ್ಧವಾದ ಸರಸ ಸಲ್ಲಾಪವನ್ನು ಕೇಳುತ್ತ ಸಿಶ್ಚೇಷ್ಟಿತನಾದನು. ಆ ತರುಣಿಯರ ಹೆಸರುಗಳೊ! ನಿಗಲಿತಾ, ಚಪಲಾ, ಸುರೇಖಾ, ಕಲಹಾ, ಮಲಯ, ಕಲಿಕಾ, ಅವಂತಿಸೇನಾ, ಲವಂಗಿಕಾ, ಅನಂಗಲೇಖಾ, ಸತಿವ್ರತಾ, ಕುಂತಲಿಕಾ, ಕೇರಲಿಕಾ, ಮುರಲಿಕಾ, ಮದನಮಾಲಿನಿ, ಕುರಂಗಿಕಾ, ಕಿಶೋರಿಕಾ, ತರಲಿಕಾ, ಕರ್ಪೂರಿಕಾ, ಮಾತಂಗಿಕಾ, ಶಶಿಲೇಖಾ, ಕೇತಕಿಕಾ, ಶಕುನಿಕಾ, ಮದನಮಂಜರಿ, ಶೃಂಗಾರಮಂಜರಿ, ಸಂಜೀವಿಕಾ, ಪಲ್ಲವಿಕಾ, ಸಹಕಾರ ಮಂಜರಿ, ಮೃಣಾಲಿಕಾ, ವಿಲಾಸವತಿ, ತಮಾಲಿಕಾ, ಕಾಂಚ ನಿಕಾ, ಪ್ರವಾಲಿಕಾ. ಇವರ ನಡುವೆ ಸೌಂದರ್ಯನಿಧಿಯಂತೆ ವಿರಾಜಿಸುತ್ತಿದ್ದ ವಾಸವ ದತ್ತೆಯನ್ನು ನೋಡುತ್ತ ನೋಡುತ್ತ ಕಂದರ್ಪಕೇತು ಮೈಮರೆತನು. ಅಭಿನವ ಮನ್ಮಥನನ್ನು ನೋಡಿದ ವಾಸವದತ್ತೆಯೂ ಮೂರ್ಛಾಗತಳಾದಳು. ಮಕರಂದ ಮತ್ತು ಸಖೀಜನರ ಶೈತ್ಯೋಪಚಾರದಿಂದ ಲಬ್ಧಚೇತನರಾದ ಪ್ರಣಯಿಗಳನ್ನು ಏಕಾಸನದಲ್ಲಿ ಕೂರಿಸಿದರು.

ಅಷ್ಟರಲ್ಲಿ ವಾಸವದತ್ತೆಯ ಪ್ರಾಣಾಧಿಕೆಯಾದ ಕಲಾವತಿಯೆಂಬ ಸಖಿ ಕಂದರ್ಪಕೇತುವನ್ನು ಕುರಿತು 'ಆರ್ಯಪುತ್ರ, ನಿಮ್ಮನ್ನೇ ಕುರಿತು ಹಂಬಲಿಸುತ್ತಿರುವ ಈ ರಾಜಕುಮಾರಿಯ ದುಃಖವನ್ನು ಹೇಳತೀರದು. ಸಂಕ್ಷೇಪವಾಗಿ ಹೇಳುವು ದಾದರೆ ಆಕಾಶ ಪತ್ರವಾಗಿ, ಆದಿಶೇಷ ಕತೆಗಾರನಾಗಿ ಬ್ರಹ್ಮ ಲಿಪಿಕಾರನಾಗಿ ಸಪ್ತಸಾಗರಗಳೇ ಮಸಿಯಾಗಿ ಸಾವಿರಾರು ವರ್ಷ ಲೇಖಿಸಿದರೂ ಅವಳ ಮದನ ಯಾತನೆಯನ್ನು ವರ್ಣಿಸಲಶಕ್ಯವಾಗುತ್ತದೆ. ಈ ರಾತ್ರಿ ಕಳೆದು ಬೆಳಗಾದರೆ ಸಾಕು, ಇವಳ ತಂದೆ ಇವಳಿಗಿಷ್ಟವಿಲ್ಲದಿದ್ದರೂ ಇವಳನ್ನು ವಿದ್ಯಾಧರ ರಾಜಕುಮಾರ ನಾದ ಪುಷ್ಪಕೇತುವಿಗೆ ಕೊಟ್ಟು ಮದುವೆ ಮಾಡುತ್ತಾನೆ. ಕಾಲ ಮಿಂಚುವ ಮುಂಚೆಯೇ ತಮಾಲಿಕೆ ನಿಮ್ಮನ್ನಿಲ್ಲಿಗೆ ಕರೆತಂದಿದ್ದಾಳೆ' ಎಂದು ಹೇಳಿ ಅವಳು ತೆಪ್ಪಗಾದಳು.

ತ್ರೈಭುವನ ಸಾಮ್ರಾಜ್ಯವನ್ನು ಸೂರೆಗೊಂಡಂತೆ ಆನಂದ ಪುಲಕಿತನಾದ ಕಂದರ್ಪಕೇತು ವಾಸವದತ್ತೆಯ ಹಿತೋಕ್ತಿಯಂತೆ ವಾರ್ತಾನ್ವೇಷಣೆಗಾಗಿ ಮಕ ರಂದನನ್ನು ನಗರದಲ್ಲಿರಿಸಿ, ವಾಸವದತ್ತೆಯೊಡನೆ ಮನೋಜವ ಎಂಬ ಕುದುರೆಯನ್ನೇರಿ ಕ್ಷಣಮಾತ್ರದಲ್ಲಿ ಊರ ಹೊರಗಿನ ಸ್ಮಶಾನವನ್ನು ದಾಟಿ, ವಿಂಧ್ಯಾಟವಿಯನ್ನು ಪ್ರವೇಶಿಸಿದನು. ಪ್ರಯಾಣದ ಪ್ರಯಾಸದಿಂದ ಇಬ್ಬರೂ ಸ್ವಲ್ಪ ಹೊತ್ತು ನಿದ್ರಾ ಸಕ್ತರಾಗಿ ನಿಕುಂಜದಲ್ಲಡಗಿದರು. ಆದರೆ ಬೆಳಗಾದಾಗ ವಾಸವದತ್ತೆ ನಿಕುಂಜದಲ್ಲಿ

ಕಾಣಲಿಲ್ಲ. ವಿರಹಾನಲದಗ್ಧಹೃದಯನಾಗಿ ಕಂದರ್ಪಕೇತು ಅರಣ್ಯದಲ್ಲಲೆಯುತ್ತ "ಹಾ, ಪ್ರಿಯೇ ವಾಸವದತ್ತೆ, ನಿನ್ನ ದರ್ಶನವನ್ನು ನೀಡು. ಪರಿಹಾಸ್ಯಕ್ಕಾಗಿ ಅವಿತು ಕೊಂಡಿದ್ದೀಯ ; ನಿನಗಾಗಿ ನಾನೆಷ್ಟು ದುಃಖವನ್ನನುಭವಿಸಿದೆಯೆನ್ನುವುದನ್ನು ನೀನೇ ನೋಡಿದ್ದೀಯೆ ಹಾ ! ಪ್ರಿಯ ಮಕರಂದ, ದೈವದುರ್ವಿಲಸಿತವನ್ನು ನೋಡು. ಅಯ್ಯೋ ದುರ್ವಿಪಾಕವೇ, ನನ್ನನ್ನೇಕೆ ಈ ಗತಿಗೆ ತಂದೆ. ಈ ಕರ್ಮದಿಂದ ನನಗೆ ಪರಿಹಾರವಿಲ್ಲವೆ ?" ಹೀಗೆ ಬಹು ವಿಧವಾಗಿ ಪ್ರಲಾಪಿಸುತ್ತ ದಕ್ಷಿಣ ದಿಕ್ಕಿಗೆ ಹೊರಟನು.

ಬಹುಕಾಲದ ಅಲೆದಾಟದ ನಂತರ ದೈಹಿಕ ಮತ್ತು ಮಾನಸಿಕ ಯಾತನೆಯಿಂದ ಬಳಲಿದ ಆ ಜೀವಕ್ಕೆ ದೂರದಲ್ಲೊಂದು ಸರೋವರ ದೃಷ್ಟಿಗೋಚರವಾಯಿತು. ಆ ಸರೋವರದಲ್ಲಿ ಶರೀರತ್ಯಾಗಮಾಡಿ, ವಿರಹಾಗ್ನಿಯನ್ನು ನಂದಿಸುವುದಾಗಿ ನಿರ್ಧರಿಸಿ, ನೀರಿಗಿಳಿದನು. ಅಷ್ಟರಲ್ಲಿ "ಆರ್ಯ ಕಂದರ್ಪಕೇತುವೆ, ಕೆಲವು ದಿನಗಳಲ್ಲಿಯೇ ನೀನು ನಿನ್ನ ಪ್ರೇಯಸಿಯನ್ನು ಹೊಂದುವೆ. ಈ ಮರಣ ಸಾಹಸಬೇಡ" ಎಂದು ಆಕಾಶ ವಾಣಿ ನುಡಿಯಿತು. ಅದೆ ತಾನೆ ಒದವಿದ ಪ್ರತ್ಯಾಶೆಯಿಂದ ರಾಜಕುಮಾರ ಹಣ್ಣು ಹಂಪಲುಗಳಿಂದ ಹಸಿವನ್ನು ನೀಗುತ್ತ, ಕಾಡಿನಲ್ಲಿ ಅಲೆದಾಡುತ್ತಿದ್ದನು.

ಮಳೆಗಾಲ ಕಳೆದು ಶರತ್ಕಾಲ ಅಡಿಯಿಟ್ಟಿತು. ಕಂದರ್ಪಕೇತು ಅಲೆದಾಡುತ್ತ, ಶಿಲಾಪುತ್ರಿಕೆಯೊಂದನ್ನು ಕಂಡು, ಕುತೂಹಲ ಶೋಕಮೋಹಾವೇಗದಿಂದ ಇವಳು ತನ್ನ ಪ್ರೇಯಸಿಯೆಂದು ಕೂಗುತ್ತ ಹಸ್ತದಿಂದ ಸ್ಪರ್ಶಿಸಿದನು. ಒಡನೆಯೆ ವಾಸವ ದತ್ತೆ ಕಲ್ಲನದಿಂದ ಪಾರಾಗಿ ರತಿಯಾಗಿ ಮೈದೋರಿದಳು. ಅಮೃತೋದಧಿಯಲ್ಲಿ ಮುಳುಗಿದಂತಾಗಿ ಕಂದರ್ಪಕೇತು ಅವಳನ್ನಪ್ಪಿಕೊಂಡು 'ಪ್ರಿಯೆ, ವಾಸವದತ್ತೆ, ಏನಿದು ?' ಎಂದು ಪ್ರಶ್ನಿಸಿದನು. "ನನ್ನ ಆರ್ಯಪುತ್ರನು ರಾಜ್ಯವನ್ನು ತ್ಯಜಿಸಿ, ನನ್ನಂಥ ಅಪುಣ್ಯೆಯ ದೆಸೆಯಿಂದಾಗಿ ಏಕಾಕಿಯಾಗಿ ಅಲೆದಾಡಿ, ಅವಾಙ್ಮನಸಗೋಚರ ವಾದ ದುಃಖವನ್ನನುಭವಿಸಿದರು. ಹಸಿವು ಬಾಯಾರಿಕೆಗಳಿಂದ ಬಳಲಿದರು. ಕಂದಮೂಲ ಫಲಗಳಿಂದ ಜೀವ ಹೊರೆಯುವಂತಾಯಿತು ಎಂದು ಯೋಚಿಸುತ್ತ ನಾನು ಫಲಾನ್ವೇಷಣೆಗಾಗಿ ಅಡ್ಡಾಡುತ್ತ ಉದ್ಯಾನವೊಂದನ್ನು ಪ್ರವೇಶಿಸಿದೆ. ತಕ್ಷಣವೆ ತರುಗುಲ್ಮಾದಿಗಳ ಮರೆಯಲ್ಲಿ ನಿವೇಶಗೊಂಡಿದ್ದ ಸೈನ್ಯವನ್ನು ಕಂಡೆ. ಅದು ನನ್ನ ತಂದೆಯದಿರಬಹುದೆಂದು ಭಾಸವಾಯಿತು. ನಿಮ್ಮನ್ನು ಕೂಗಿಕೊಂಡರೆ ನಿಮ್ಮ ಪ್ರಾಣಕ್ಕೆ ಅಪಾಯ, ಕೂಗದಿದ್ದರೆ ನನಗೆ ಅಪಾಯ ಎಂದು ಚಿಂತಿಸುತ್ತಿರುವಷ್ಟರಲ್ಲಿ ಆ ಸೈನಕ್ಕೂ ಕಿರಾತ ಸೈನ್ಯಕ್ಕೂ ಯುದ್ಧ ಪ್ರಾರಂಭವಾಗಿ, ಎರಡು ಕಡೆಯೂ ಅಪಾರ ನಷ್ಟವಾಯಿತು.

"ಆ ಯುದ್ಧಭೂಮಿಯ ಸಮೀಪದಲ್ಲಿಯೇ ಒರ್ವ ತಪಸ್ವಿಯ ಪರ್ಣಶಾಲೆ ಯಿತ್ತು. ಆ ಅವಾಂತರಕ್ಕೆಲ್ಲ ನಾನೇ ಕಾರಣಳೆಂದು ಭಾವಿಸಿ ಆ ತಪಸ್ವಿ 'ನೀನು ಕಲ್ಲಾಗು' ಎಂದು ನನಗೆ ಶಾಪಕೊಟ್ಟನು. ಕರುಣಾಮಯಿಯಾದ ಆ ತಪಸ್ವಿ ನನ್ನ ಸಂಕಟಕ್ಕೆ ಮರುಗಿ ನಿನ್ನ ಪ್ರಿಯನ ಹಸ್ತಸ್ಪರ್ಶದಿಂದ ಶಾಪ ವಿಮೋಚನೆಯಾಗುತ್ತದೆ' ಎಂದು ಹರಸಿದರು."

ಅಷ್ಟರಲ್ಲಿ ಅಲ್ಲಿಗೆ ಬಂದ ಮಕರಂದ ಮತ್ತು ವಾಸವದತ್ತೆಯರೊಡನೆ ಕಂದರ್ಪ ಕೇತು ಪಾಟಲೀ ಪುತ್ರಕ್ಕೆ ಹೋಗಿ ಅತ್ಯಂತ ಸುಖದಿಂದಿದ್ದನು.

## ೪. ಕುತೂಹಲನ ಲೀಲಾವಯಿ ಕಾವ್ಯದ ಸಾರಸಂಗ್ರಹ

ಶರದೃತುವಿನಲ್ಲೊಂದು ದಿನ ಬೆಳ್ದಿಂಗಳ ಸಂಜೆ ಕವಿಯ ಹೆಂಡತಿ ಸಾವಿತ್ರಿ ಅರಮನೆಯ ಉದ್ಯಾನದಲ್ಲಿ ಕುಳಿತಿರುವಾಗ ತರುಣಿಯರಿಗೆ ಪ್ರಿಯವಾಗುವಂಥ ಕಥೆಯನ್ನು ಪ್ರಾಕೃತದಲ್ಲಿ ಹೇಳುವಂತೆ ಪತಿಯನ್ನು ಕೇಳಿಕೊಳ್ಳುತ್ತಾಳೆ. ಕವಿ ಕಥೆ ಪ್ರಾರಂಭಿಸುತ್ತಾನೆ:

ಚತುಸ್ಸಮುದ್ರ ಮುದ್ರಿತವಾದ ಧರೆಯ ಮೇಲೆ ಧರ್ಮನಿಧಿಯೂ ಸಂಪತ್ಸಮೃದ್ಧವೂ ಆದ ಅಶ್ಮಕವೆಂಬ ನಾಡು ಕಂಗೊಳಿಸುತ್ತಿದೆ. ಆ ನಾಡಿಗೆ ಕಣ್ಣೆಲೆಯೆಂಬಂತೆ ಗೋದಾವರೀ ತೀರದಲ್ಲಿ ಸೌಂದರ್ಯಕ್ಕೆ ತವರಾದ ಪ್ರತಿಷ್ಠಾನ ನಗರವಿದೆ. ಸಾತವಾಹನ ಆ ನಾಡಿನ ರಾಜ. ಅವನು ಶೂರ, ಧೀರ, ಗುಣಸಂಪನ್ನ. ವಸಂತಋತುವಿನಲ್ಲೊಂದು ದಿನ ದೊರೆ ಒಡ್ಡೋಲಗದಲ್ಲಿರುವಾಗ ಚಂದ್ರಲೇಖೆಯೆಂಬ ತರುಣಿಯೊಡನೆ ಸರಸಸಲ್ಲಾಪದಲ್ಲಿ ತೊಡಗಿರುತ್ತ, ಅವಳ ಅಂಗಾಂಗಗಳಲ್ಲಿ ಚಿತ್ರಗಳನ್ನು ರೇಖಿಸಿದವರಾರೆಂದು ಪ್ರಶ್ನಿಸುತ್ತಾನೆ. ಸಿಂಹಳದ್ವೀಪದ ಚಿತ್ರಕಾರನೆಂದು ಹೇಳಿದಾಗ, ಅವನು ಸಿಂಹಳರಾಜನ ಗೂಢಚಾರನಿರಬಹುದೆಂದು ಮಾತ್ರ ಶಂಕಿಸುತ್ತಾನೆ. ಸಿಂಹಳ ರಾಜನ ಮೇಲೆ ವಿಜಯಾನಂದನನ್ನೂ ಪೊಟ್ಟೀಸನನ್ನೂ ಕಳಿಸಿದ್ದುದಾಗಿ ರಾಜ ತಿಳಿಸಿ, ಆಸ್ಥಾನಿಕರಿಗೆ ಉಡುಗೊರೆಯನ್ನು ಹಂಚಿಸುತ್ತಾನೆ. ಒಡ್ಡೋಲಗ ಹರಿಯುತ್ತದೆ.

ಅಷ್ಟರಲ್ಲಿ ಸೇನಾಧಿಪತಿ ವಿಜಯಾನಂದ ಹಿಂದಿರುಗಿದ ಸುದ್ದಿ ಬರುತ್ತದೆ. ಅವನ ಭಗ್ನಾವಸ್ಥೆಯನ್ನು ನೋಡಿ ದೊರೆ ಆಶ್ಚರ್ಯಚಕಿತನಾಗುತ್ತಾನೆ. ದೊರೆ ಕುತೂಹಲದಿಂದ ವಿವರಣೆ ಕೇಳಲು, ಸೇನಾಧಿಪತಿ ಏಕಾಂತವಾಗಿ ಮುಂದಿನ ಕತೆ ಹೇಳುತ್ತಾನೆ; "ಮಹಾಸ್ವಾಮಿ, ಇದೊಂದು ದೀರ್ಘವಾದ ಕಥೆ. ದಾರಿಯ ದೊರೆಗಳನ್ನು ವಶಪಡಿಸಿಕೊಂಡು, ಸಾಗರದ ದಂಡೆ ತಲುಪಿದಾಗ, ಸಿಂಹಳದ ದೊರೆ ಶೀಲಮೇಘ ಶೂರನೆಂದೂ, ಭೇದೋಪಾಯದಿಂದ ಅವನನ್ನು ಗೆಲ್ಲಬೇಕೆಂದೂ, ಅವನ ಮಗಳು ಲೀಲಾವತಿಯನ್ನು ಮದುವೆಯಾಗುವ ವರ ಚಕ್ರವರ್ತಿಯಾಗುವನೆಂದೂ, ತಮ್ಮ ದೊರೆಗೆ ಅವಳನ್ನು ಮದುವೆ ಮಾಡಿಸಬೇಕೆಂದೂ ಪೊಟ್ಟೀಸ ಸೂಚಿಸಿದನು. ನಾನೇ ದೂತಕಾರ್ಯಕ್ಕೆ ಸಿದ್ಧನಾದೆ.

"ಮರುದಿನ ಬೆಳಗ್ಗೆ ಮಿತಪರಿವಾರದೊಡನೆ ಶಿಬಿರಬಿಟ್ಟು ಸಮುದ್ರಾಭಿಮುಖವಾಗಿ ಹೊರಟೆ. ಸಮುದ್ರದಲ್ಲಿ ಪ್ರಯಾಣಮಾಡುತ್ತಿದ್ದಾಗ ಬಿರುಗಾಳಿಯೆದ್ದು ನಮ್ಮ ದೋಣಿ ವಿಪತ್ತಿಗೊಳಗಾಗಿ, ಕೊನೆಗೆ ಸಪ್ತಗೋದಾವರಿ ಭೀಮೆಯನ್ನು ತಲುಪಿತು. ಆದರೆ ನಮ್ಮ ಪರಿವಾರ ಮಾಯವಾಗಿತ್ತು. ನಾನು ಗೋದಾವರಿಯಲ್ಲಿ ಮಿಂದು ಈಶ್ವರನನ್ನು ಪೂಜಿಸಿ, ಬಳಿಯ ಆಶ್ರಮದಲ್ಲಿ ವಿಶ್ರಾಂತಿ ಪಡೆದೆನು. ಅಲ್ಲಿದ್ದ ನಗ್ನಪಾಶುಪತ ಸನ್ಯಾಸಿ ನನ್ನ ಪೂರ್ವೋತ್ತರಗಳನ್ನು ವಿಚಾರಿಸಿಕೊಂಡು, ನನಗಾಗಿ

ಹಣ್ಣು ತರಲು ಹೋದನು. ಅವನ ಮಂತ್ರಶಕ್ತಿಗೆ ಬಾಗಿದ ಮರಗಳಿಂದ ಸಾಕಷ್ಟು ಹಣ್ಣು ಶೇಖರವಾಯಿತು.

"ಸಂಜೆಯಾಗುತ್ತಿದ್ದಂತೆ ತಪಸ್ವಿ ಆ ಕಾಡಿನಲ್ಲಿ ವಾಸಿಸುತ್ತಿದ್ದ ಮಹಾಪರಾಕ್ರಮಿ ಭೀಷಣಾನನನೆಂಬ ರಾಕ್ಷಸನ ಹಾವಳಿಯನ್ನು ತಿಳಿಸಿ, ಕತ್ತಲಾಗುವ ಮುನ್ನ ಪಕ್ಕದ ಆಶ್ರಮಕ್ಕೆ ತೆರಳುವಂತೆ ಸೂಚಿಸಿದನು. ಯಕ್ಷತರುಣಿ ಮಹಾಸುಮತಿಯೂ ತಾಪಸಕನ್ಯೆ ಕುವಲಯಾವಲಿಯೂ ಅಲ್ಲಿದ್ದರು. ಶಿವಪಾರ್ವತಿಯರ ದೇವಾಲಯಕ್ಕೆ ತೆಂಕಲಲ್ಲಿ ಆ ತರುಣಿಯರಿದ್ದ ಮಠಾಯತನವಿತ್ತು. ನನ್ನ ಜೊತೆಯಲ್ಲಿ ಬಂದ ತಪಸ್ವಿ ನನ್ನನ್ನವರಿಗೆ ಪರಿಚಯಮಾಡಿಕೊಟ್ಟು, ಹೊರಟು ಹೋದನು. ಆ ತರುಣಿಯರ ಕಾಷಾಯವೇಷವನ್ನು ನೋಡಿ ನಾನು ಆಶ್ಚರ್ಯಚಕಿತನಾದೆ. ಸಂಧ್ಯಾವಂದನೆಗೆಂದು ಮಹಾಸುಮತಿ ಎದ್ದು ಹೋದಳು. ಆ ವಯಸ್ಸಿನಲ್ಲಿ ಅಷ್ಟೊಂದು ಕಠಿನ ವ್ರತಕ್ಕೆ ಕಾರಣವೇನೆಂದು ನಾನು ಕೇಳಿದೆ. ಅವಳು ಭಾವಾವೇಗದಿಂದ ತಮ್ಮ ವೃತ್ತಾಂತವನ್ನು ಪ್ರಾರಂಭಿಸಿದಳು :

"ಮೇರುಪರ್ವತದ ದಕ್ಷಿಣದಿಗ್ಭಾಗದಲ್ಲಿ ಸುಲಸಾ ಎಂಬ ವಿದ್ಯಾಧರರ ನಗರವಿದೆ. ಅಲ್ಲಿಯ ದೊರೆ ಹಂಸ; ಪದ್ಮಾ ಅವನ ಹೆಂಡತಿ. ವಸಂತಶ್ರೀ ಮತ್ತು ಶಾರದಶ್ರೀ ಅವರ ಹೆಮ್ಮಕ್ಕಳು. ಕೈಲಾಸಪರ್ವತದಲ್ಲಿ ಶಿವಗೌರಿಯರ ಮುಂದೆ ಅವರು ವೀಣೆ ನುಡಿಸುತ್ತಿದ್ದರು. ಒಂದುದಿನ ಬೆಳಗ್ಗೆ ಗಣೇಶ ನರ್ತನಮಾಡುತ್ತಿದ್ದಾಗ ಶಾರದಶ್ರೀ ಅವನ ವಿಕಾರನರ್ತನವನ್ನು ನೋಡಿ ನಕ್ಕಳು. ಅವಮಾನಿತನಾದ ಗಣೇಶ ಅವಳನ್ನು ನೀಚಜಾತಿಯಲ್ಲಿ ಹುಟ್ಟುವಂತೆ ಶಪಿಸಿದನು. ಅಕ್ಕತಂಗಿಯರು ಭಯದಿಂದ ನಡುಗುತ್ತ, ಕ್ಷಮೆ ಯಾಚಿಸಿದರು. ಅವಳು ಮನುಷ್ಯಲೋಕವನ್ನು ಸೇರಿ ಅಲ್ಲಿಯ ಸುಖವನ್ನನುಭವಿಸುತ್ತಿರುವಾಗ ಯಕ್ಷಸಿದ್ಧ ಗಂಧರ್ವ ವಿದ್ಯಾಧರರನ್ನು ನೋಡಿದಕೂಡಲೇ ವಿದ್ಯಾಧರಿಯಾಗುವಳೆಂದು ಗಣೇಶ ಕರುಣಿಸಿದನು. ತಕ್ಷಣ ಅವಳು ಮಾಯವಾದಳು. ದುಃಖತಪ್ತೆಯಾದ ವಸಂತಶ್ರೀ ಮನೆಗೆ ಹಿಂದಿರುಗಿ ತಂಗಿಯ ಸಂಕಟದ ಕತೆಯನ್ನು ತಂದೆತಾಯಿಯರ ಮುಂದೆ ವಿಸ್ತರಿಸಿದಳು. ಮಗಳ ಹಣೆಬರಹಕ್ಕೆ ಅವರು ಮರುಗಿದರು. ತಮ್ಮ ಹಿರಿಯ ಮಗಳಾದರೂ ಸುಖದಿಂದಿರಲೆಂಬ ಆಶೆಯಿಂದ ಅವಳನ್ನು ಕುಬೇರನ ಮಗ ನಳಕೂಬರನಿಗೆ ಕೊಟ್ಟು ಮದುವೆಮಾಡಿದರು. ಅವರ ಮಗಳೇ ಮಹಾಸುಮತಿ.

"ಮಹಾಸುಮತಿಯ ಬಾಲ್ಯಜೀವನ ಸುಖಮಯವಾಗಿ ಸಾಗುತ್ತಿರುವಾಗ, ಮಲಯ ಪರ್ವತಕ್ಕೆ ತೆರಳಿ ಸಿದ್ಧತರುಣಿಯರೊಡನೆ ಕ್ರೀಡಾವಿನೋದಗಳಲ್ಲಿ ಕಾಲ ಕಳೆಯಬೇಕೆಂದು ಅಪೇಕ್ಷಿಸಿ, ನನ್ನನ್ನೂ ಜೊತೆಗೆ ಕರೆದಳು. ಶೀಘ್ರಗಾಮಿಯಾದ ವಿಮಾನದಲ್ಲಿ ಇತರ ಗೆಳತಿಯರೊಡನೆ ತೆಂಕಲಾಗಿ ಹೊರಟು, ಮಲಯಪರ್ವತ ಶ್ರೇಣಿಯನ್ನು ಸೇರಿದೆವು. ಅತ್ಯುತ್ತಮವಾದ ಕಲೆಯಿಂದ ಶೋಭಿಸುತ್ತಿದ್ದ ಉದ್ಯಾನವೊಂದರಲ್ಲಿಳಿದಾಗ, ವೀಣಾಪಾಣಿಯಾದ ತರುಣಿಯೊಬ್ಬಳು ಅವರನ್ನು ಸ್ವಾಗತಿಸಿದಳು. ಮಲಯ ಶಿಖರಸ್ಥವಾದ ಕೇರಳನಗರಿಯ ದೊರೆ ಮಲಯಾನಿಲನೆಂದೂ, ಅವನ ಮೊದಲನೆಯ ಹೆಂಡತಿಯ ಮಗ ಮಾಧವಾನಿಲನೆಂದೂ, ಆ ತೋಟ ಅವನ

ದೆಂದೂ ಸ್ವಾಗತಿಸಿದಾಕೆ ರಾಜಕುಮಾರನ ಬಾಲ್ಯದ ಸಹಪಾಠಿಯಾದ ಮಾಧವಿಲತೆಯೆಂದೂ ತಿಳಿಯಿತು.

"ಸಮ್ಮ ಗುರುತು ಪರಿಚಯಗಳನ್ನವಳಿಗೆ ತಿಳಿಸಿ, ಮನಸಾರೆ ವಿನೋದಕ್ರೀಡೆಗಳಿಂದ ಸಂತೃಪ್ತಿಗೊಂಡು ರತ್ನಖಚಿತವಾದ ಪೀಠದಮೇಲೆ ಕುಳಿತು ವಿಶ್ರಾಂತಿ ಪಡೆಯುತ್ತಿರುವಷ್ಟರಲ್ಲಿ ಮಾಧವಾನಿಲ ಅಲ್ಲಿಗೆ ಬಂದನು. ಮಹಾಸುಮತಿ ಮತ್ತು ಮಾಧವಾನಿಲರ ಕಣ್ಣು ಸಂಧಿಸಿ, ಪ್ರಣಯ ಮೊಳೆತು ಪುಳಕಿತಗಾತ್ರರಾದರು. ನಾನು ಮಹಾಸುಮತಿಯನ್ನೆಚ್ಚರಿಸಿ, ಸಂದರ್ಶನಲಾಭಕ್ಕಾಗಿ ರಾಜಕುಮಾರನನ್ನು ವಂದಿಸಿ, ಆ ಪರಿಚಯ ಸ್ನೇಹಾಭಿವೃದ್ಧಿಗೆ ನಾಂದಿಯಾಗಲೆಂದು ಹಾರೈಸಿ ನನ್ನ ಗೆಳತಿಯೊಂದಿಗೆ ಹೊರಡಲನುವಾದೆನು. ರಾಜಕುಮಾರ ನಾಗರಿಯೆಂಬ ಉಂಗುರವನ್ನು ಮಹಾಸುಮತಿಗೆ ತೊಡಿಸಿದಾಗ ಅವರಿಬ್ಬರೂ ಪುಳಕಗೊಂಡರು. ಮಹಾಸುಮತಿ ಮಾಧವೀಲತೆಯನ್ನಪ್ಪಿಕೊಂಡು, ತನ್ನ ಕೊರಳ ಹಾರವನ್ನವಳಿಗೆ ತೊಡಿಸಿ, ವಿಮಾನ ವೇರಿದಳು. ಸಂಜೆಯ ಹೊತ್ತಿಗೆ ವಿಮಾನ ಅಲಕಾವತಿಯನ್ನು ಸೇರಿತು.

"ವಿರಹತಪ್ತೆಯಾದ ಮಹಾಸುಮತಿಯನ್ನು ನಾನಾ ವಿಧವಾದ ಶಿಶಿರೋಪಚಾರದಿಂದ ಸಂತೈಸಲು ಪ್ರಯತ್ನಿಸಿದೆ. ಚಂದ್ರೋದಯವಾಗುತ್ತಿದ್ದಂತೆ ವಿರಹಾಗ್ನಿ ಅಧಿಕವಾಗತೊಡಗಿತು. ಅಷ್ಟರಲ್ಲಿ ಮಾಧವಾನಿಲ ಮಾಧವೀಲತೆಯ ಮೂಲಕ ಕಳಿಸಿದ ಇತಿಯೋಲೆಯನ್ನು ಎದೆಗದುಮಿಕೊಂಡು ಸಮಾಧಾನದ ಉಸಿರೆಳೆದಳು. ಆ ಕಡೆ ಮಾಧವಾನಿಲನೂ ಮದನಜ್ವರದ ತಾಪದಿಂದ ಬೆಂದು ಬೆಂಡಾಗಿದ್ದನು. ಸಮಾನಕುಲಧರ್ಮಿಗಳಾದ ಈ ಪ್ರಣಯಿಗಳು ಶಾಸ್ತ್ರೋಕ್ತವಾಗಿ ಮದುವೆಯಾಗುವಂತೆ ನೆರವು ನೀಡಬೇಕೆಂದು ನಾನು ಮಾಧವೀಲತೆಗೆ ಸೂಚಿಸಿದೆನು. ತಾನಾಗಿಯೇ ಮಲಯಪರ್ವತಕ್ಕೆ ಹೋಗಿ ಮಾಧವಾನಿಲನನ್ನು ಸಂತೈಸುವುದಾಗಿ ಮಹಾಸುಮತಿ ಸೂಚಿಸಿದಳು. ಅವಳ ಆ ನಡತೆ ತಕ್ಕುದಲ್ಲವೆಂದೂ, ಕಡೆಯಿಂದ ಅವಳು ಪಾತಕಳಿಯಬಹುದೆಂದೂ ತಿಳಿಸಿ, ಆತ್ಮಕಥೆಯನ್ನಾರಂಭಿಸಿದೆನು:

"ವಿಪುಲಾಶಯನೆಂಬ ದೊರೆ ತನ್ನ ವಿಪುಲೈಶ್ವರ್ಯಕ್ಕೆ ಹೇಸಿ ರಾಜ್ಯವನ್ನು ಪುರೋಹಿತರಿಗೆ ಹಂಚಿಕೊಟ್ಟು, ಹಿಮಾಲಯದಲ್ಲಿ ತಪೋನಿರತನಾದನು. ಅವನ ತಪೋವೈಭವಕ್ಕೆ ಮಚ್ಚರಗೊಂಡ ಇಂದ್ರ ತಪೋಭಂಗಕ್ಕಾಗಿ ರಂಭೆಯನ್ನು ಕಳಿಸಿದನು. ರಂಭೆ ಅವನೊಡನೆ ಕೆಲವು ದಿನವಿದ್ದು ಗರ್ಭಿಣಿಯಾಗಿ ನನ್ನನ್ನು ಹೆತ್ತು, ಸ್ವರ್ಗಕ್ಕೆ ಹೊರಟುಹೋದಳು. ನಾನು ಕಾಡಿನಲ್ಲಿ ಪ್ರಾಣಿಗಳ ನಡುವೆ ಬೆಳೆಯುತ್ತ ತಂದೆಯ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದೆ. ಹೀಗಿರುವಾಗ ಒಂದು ದಿನ ಗಾಂಧರ್ವ ವಿಮಾನವೊಂದು ನಮ್ಮ ಆಶ್ರಮದ ಬಳಿ ಇಳಿಯಿತು. ಅದರಲ್ಲಿದ್ದ ಚಿತ್ರಾಂಗದನೆಂಬ ಯುವಕ ನನ್ನನ್ನು ಕಂಡು ಮೋಹಪರವಶನಾಗಿ, ಮದುವೆಯ ಮಾತೆತ್ತಿದನು. ನನ್ನ ಮೈ ಮಾತು ನಡೆಗಳಲ್ಲಿ ಕಾಮ ಸಂಚಾರವಾಯಿತು. ತಂದೆಯೊಡನೆ ಮದುವೆಯ ಮಾತೆತ್ತುವಂತೆ ಹೇಳಿದೆ. ಆದರೆ ಅವನಿಗಷ್ಟು ಸಹನೆಯಿರಲಿಲ್ಲ; ಸಂಯಮ ಜಾರಿತು: ನಾನೂ ಒಪ್ಪಿದೆ. ನಮ್ಮ ಅಸಂಯಮವರ್ತನೆಗೆ ಶಿಕ್ಷೆ ಅನುಭವಿಸಬೇಕಾದೀತೆಂದು ಮಾತಾಡಿಕೊಂಡೆವು.

"ಅಷ್ಟರಲ್ಲಿ ನನ್ನನ್ನು ಹುಡುಕುತ್ತ ಬಂದ ತಂದೆ ನಮ್ಮನ್ನು ನೋಡಿದನು; ರಾಕ್ಷಸವಂಶದಲ್ಲಿ ಹುಟ್ಟೆಂದು ಚಿತ್ರಾಂಗದನನ್ನು ಶಪಿಸಿದನು. ಯುದ್ಧದಲ್ಲಿ ತಲೆಯ ಮೇಲೆ ಹೊಡೆತ ಬಿದ್ದಾಗ ಅವನು ಶಾಪವಿಮುಕ್ತನಾಗುವನೆಂದು ತಂದೆ ನನ್ನ ಮೇಲಣ ಕರುಣದಿಂದ ಹರಸಿದರು. ನಾನು ಪೊದೆಯೊಂದರಲ್ಲಿ ಅಡಗಿಕೊಂಡಿದ್ದು, ತಂದೆಯ ನಿರ್ಗಮನಾನಂತರ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿದೆ. ಅಷ್ಟರಲ್ಲಿ ನನ್ನ ತಾಯಿ ಪ್ರತ್ಯಕ್ಷಳಾಗಿ, ನನ್ನನ್ನು ಸಂತೈಸಿ, ನಳಕೂಬರನ ಮನೆಯಲ್ಲಿರಿಸಿ ಹೊರಟು ಹೋದಳು. ಆದ್ದರಿಂದ ಹಿರಿಯರನ್ನಲಕ್ಷಿಸಿ ಯಾವ ಕಾರ್ಯವನ್ನೂ ಮಾಡಬಾರದು. ಹಿರಿಯರ ಸಮ್ಮತಿಯಿಂದ ಮದುವೆ ನಡೆಯುವಂತೆ ಏರ್ಪಾಡು ಮಾಡುತ್ತೇನೆ" ಎಂದು ಮಾತು ಮುಗಿಸಿದಳು.

ಬೆಳಕು ಹರಿದಕೂಡಲೆ ಮಲಯಪರ್ವತಕ್ಕೆ ಹೋಗಿ ಸಮಯೋಚಿತವಾದ ಕಾರ್ಯವನ್ನೆಸಗುವಂತೆ ಹೇಳಿದಳು. ನಾನು ಹೋಗಿ ನೋಡಿದಾಗ ಮಲಯಾಚಲದ ಅರಮನೆ ನಿರ್ಜನವಾಗಿತ್ತು. ಕೇರಳಾಪುರಿಯಲ್ಲಿ ವಿಚಾರಿಸಲು, ರಾಜಕುಮಾರ ಯಾವುದೋ ವಿದ್ಯೆಯ ಸಾಧನೆಯಲ್ಲಿದ್ದಾಗ ಹಿಂದಿನ ರಾತ್ರಿ ಅಪಹೃತನಾದನೆಂದೂ, ದೊರೆ ಮಲಯಾನಿಲ ಮತ್ತು ರಾಣಿ ಸುತನಿಗೊದಗಿದ ವಿಪತ್ತಿನಿಂದ ದುಃಖಸಂತಪ್ತರಾಗಿ ರಾಜ್ಯತ್ಯಾಗಮಾಡಿ, ಕಾಡಿಗೆ ಹೋಗಲು ನಿಶ್ಚಯಿಸಿದ್ದರೆಂದೂ ತಿಳಿಯಿತು.

ನಾನು ಹಿಂದಿರುಗಿ ಹೋಗಿ ಮಹಾನುಮತಿಗೆ ಕಂಡದ್ದನ್ನೆಲ್ಲಾ ವಿವರಿಸಿದೆ. ಅವಳು ಗರ ಹೊಡೆದಂತೆ ಭೂಮಿಗುರುಳಿದಳು. ರಾಜಕುಮಾರ ಸತ್ತಿರಲಾರನೆಂದು ಸಮಾಧಾನ ಹೇಳಿದೆ. ಹಿಂದಿನ ಕಥೆಯನ್ನು ನೆನೆದುಕೊಂಡು ಅವಳು ಅತ್ತಳು. ಭವಾನಿಯನ್ನಾರಾಧಿಸಿದರೆ ಅವಳ ಮನೋರಥ ಕೈಗೂಡಬಹುದೆಂದು ಸೂಚಿಸಿದೆ. ನನ್ನ ಸೂಚನೆಯನ್ನಂಗೀಕರಿಸಿ, ಹಿರಿಯರ ಸಮ್ಮತಿಯಿಂದ ಅವಳು ತನ್ನ ಗೆಳತಿಯೊಡನೆ ಅರಣ್ಯದಲ್ಲಿದ್ದಾಳೆ.

ಕುವಲಯಾವಲಿಯಿಂದ ಸುದೀರ್ಘವಾದ ಕಥೆಯನ್ನು ಕೇಳಿದನಂತರ ಇನ್ನೂ ಭವಾನಿಯಪೂಜೆ ಫಲಿಸಲಿಲ್ಲವೆ ಎಂದು ನಾನು (ವಿಜಯಾನಂದ) ಪ್ರಶ್ನಿಸಿದೆ. ಅವಳು ನಿರಾಶೆಯ ನಿಟ್ಟುಸಿರೆಳೆದು ತನ್ನ ಕತೆಯನ್ನು ಮುಂದುವರಿಸಿದಳು: ಒಂದು ದಿನ ಗೋದಾವರಿಯ ಆಕಡೆ ದಡದಲ್ಲಿ ಮನುಷ್ಯರ ಗದ್ದಲ ಕೇಳಿಸಿತು. ಇದ್ದಕ್ಕಿದ್ದಂತೆ ಒಂದು ಬಿಡದಿಯೂ ಮೂಡಿತು. ಸ್ವಲ್ಪಹೊತ್ತಿನಲ್ಲಿಯೇ ಸಕಲವೈಭವಗಳಿಂದ ಕೂಡಿದ ರಾಜಕುಮಾರಿಯೊಬ್ಬಳು ನಮ್ಮ ಕಡೆಗೆ ಹೆಜ್ಜೆಯಿಟ್ಟಳು. ಅವಳೂ ಅವಳ ಪರಿವಾರವೂ ಗೋದಾವರಿಯಲ್ಲಿ ನೀರಾಟವಾಡಿದರು. ಅವರು ಯಾರಿರಬಹುದೆಂದು ನಾವು ವಿಸ್ಮಯಾಭೂತರಾಗಿದ್ದಾಗ, ತಾನು ಭವಾನಿಪೂಜೆಮಾಡುವುದಾಗಿ ತಿಳಿಸಿ, ವಿಚಿತ್ರಲೇಖೆಯನ್ನು ನಮ್ಮೆಡೆಗೆ ಕಳುಹಿಸಿಕೊಟ್ಟಳು. ರಾಜಕುಮಾರಿಯ ನೆರಳಿನಂತಿದ್ದ ವಿಚಿತ್ರಲೇಖೆ ನಮ್ಮ ಕುತೂಹಲತೃಪ್ತಿಗಾಗಿ ತಮ್ಮ ವೃತ್ತಾಂತವನ್ನು ತಿಳಿಸಿದಳು:

ಸಿಂಹಳದ ಸುಪ್ರಸಿದ್ಧ ದೊರೆ ಶೀಲಮೇಘ ಬೇಟೆಯಾಡುತ್ತಿದ್ದಾಗ ಭಯಂಕರ ಸೂಕರವೊಂದನ್ನು ಕಂಡನು. ವಾಜಿಯನ್ನೇರಿ ಅದನ್ನಟ್ಟಿಸಿಕೊಂಡು ದಟ್ಟವಾದ ಕಾಡಿನೊಳಗೆ ಪ್ರವೇಶಿಸಿದನು. ಸೂಕರ ತಾವರೆಕೊಳವೊಂದನ್ನು ಸೇರಲು, ದೊರೆ ದಡದ

ಮೇಲೆ ವಿಸ್ಮಯಮೂಕನಾಗಿ ನಿಂತುಬಿಟ್ಟನು. ಒಡನೆಯೆ ಸುರಸುಂದರಿಯಾದ ತರುಣಿಯೊಬ್ಬಳು ಸುಮಹಾರದೊಡನೆ ಪ್ರತ್ಯಕ್ಷಳಾಗಿ ತನ್ನನ್ನು ಮದುವೆಯಾಗುವಂತೆ ಪ್ರಾರ್ಥಿಸಿದಳು. ಅವನ ಸಂಶಯ ನಿವಾರಣೆಗಾಗಿ ತನ್ನ ಕುಟುಂಬದ ಕಥೆಯನ್ನು ವಿವರಿಸಿದಳು :

ಸುಲಸಾ ನಗರದ ವಿದ್ಯಾಧರ ದೊರೆ ಹಂಸನಿಗೆ ವಸಂತಶ್ರೀ ಮತ್ತು ನಾನು (ಶಾರದಶ್ರೀ) ಇಬ್ಬರು ಮಕ್ಕಳು. ಕೈಲಾಸಕ್ಕೆ ಹೋಗಿದ್ದಾಗ ಗಣೇಶ ಕೊಟ್ಟ ಶಾಪದ ಫಲವಾಗಿ ನಾನು ಭೂಮಿಗೆ ಬರಬೇಕಾಯಿತು. ವಿದ್ಯಾಧರರನ್ನು ಕಂಡ ಕೂಡಲೇ ನನಗೆ ಶಾಪ ವಿಮೋಚನೆಯಾಗುತ್ತದೆಂದು ಗಣೇಶನೇ ಅನುಗ್ರಹಿಸಿದನು. ನೀನೀಗ ನನ್ನನ್ನು ಮದುವೆಯಾಗಿ ಕಾಪಾಡಬೇಕೆಂದು ಬೇಡಿದೆನು.

ಈ ಕಥೆಯನ್ನು ಸಾಂಗವಾಗಿ ಕೇಳಿದ ಶೀಲಮೇಘ ಶಾರದಶ್ರೀಯನ್ನು ಮದುವೆಯಾಗಿ ರಾಜಧಾನಿಗೆ ಹಿಂದಿರುಗಿದನು. ಅವರ ಮಗಳೇ ಲೀಲಾವತಿ. ಅವಳ ಕೈಹಿಡಿಯುವ ಗಂಡ ಜಗತ್ಪ್ರಸಿದ್ಧನಾದ ಚಕ್ರವರ್ತಿಯಾಗುತ್ತಾನೆಂದು ಅವಳು ಹುಟ್ಟಿದಾಗ ಭವಿಷ್ಯಜ್ಞರು ನುಡಿದಿದ್ದರು. ಅವಳು ಯೌವನವತಿಯಾದಾಗ, ದೊರೆ ಭೂಮಂಡಲದ ಚಕ್ರವರ್ತಿಗಳ ತಸ್ವೀರು ಬರೆಯಿಸಿ ಅವಳ ಸಜ್ಜೆವನೆಯಲ್ಲಿ ಜೋಡಿಸಿದನು. ಸಾತವಾಹನನ ಚಿತ್ರ ಅವಳ ಮೈಮನದಲ್ಲಿ ತುಂಬಿಕೊಂಡು, ಕನಸಿನಲ್ಲೆಲ್ಲ ಅವಳ ಬಗೆಯನ್ನು ಕಾಡುತ್ತಿತ್ತು. ಕಾಲ ಕಳೆದಂತೆಲ್ಲ ವಿರಹಾಗ್ನಿ ಅವಳನ್ನು ದಹಿಸಿ ಸಣ್ಣಗೆ ಮಾಡುತ್ತಿತ್ತು. ಆ ಸುದ್ದಿ ಸಖಿಯರ ಮೂಲಕ ತಮ್ಮ ಕಿವಿಗೆ ಬಿದ್ದ ಕೂಡಲೇ ತಂದೆತಾಯಿಯರು ಅವರನ್ನು ಹಾಲನ ಬಳಿಗೆ ಕಳುಹಿಸಿಕೊಟ್ಟರು.

ಈ ಕಥೆಯನ್ನು ಕೇಳಿದ ನಂತರ ಮಹಾನುಮತಿ ತಾನು ವಸಂತಶ್ರೀಯ ಮಗಳೆಂಬ ಸಂಗತಿಯನ್ನು ವಿಚಿತ್ರಲೇಖೆಯ ಮೂಲಕ ಲೀಲಾವತಿಗೆ ಮುಟ್ಟಿಸಿದಳು. ತಕ್ಷಣ ಲೀಲಾವತಿ ತನ್ನ ಪರಿವಾರದೊಡನೆ ನಮ್ಮಲ್ಲಿಗೆ ಬಂದು, ನಮ್ಮ ಕತೆ ಪಾಡುಗಳನ್ನು ವಿಚಾರಿಸಿಕೊಂಡಳು. ಎಷ್ಟು ಪ್ರಾರ್ಥಿಸಿಕೊಂಡರೂ ಕೇಳದೆ ಮಹಾನುಮತಿ ತನ್ನ ನಲ್ಲನನ್ನು ಸಂಧಿಸುವತನಕ ನಮ್ಮಲ್ಲಿಯೇ ನಿಲ್ಲುವುದಾಗಿ ಹಠಹಿಡಿದಳು. ಹೀಗಾಗಿ ನಾವು ಕಷ್ಟಪರಂಪರೆಯಲ್ಲಿ ಸಿಲುಕಿಕೊಂಡಿದ್ದೇವೆ.

ಕುವಲಯಾವಳಿಯ ಮುಖದ್ವಾರದಿಂದ ಮೇಲಿನ ಕಥೆಯನ್ನು ಕೇಳಿ ನಾನು ಸಾತವಾಹನ ರಾಜನ ನೆಚ್ಚಿನ ಸೇವಕನೆಂದೂ, ಲೀಲಾವತಿಯನ್ನು ಭೇಟಿಮಾಡಿದ ನಂತರ ಆ ಸಮಾಚಾರವನ್ನೆಲ್ಲ ದೊರೆಗೆ ತಿಳಿಸುವೆನೆಂದೂ ಸಂತೋಷದಿಂದೊಪ್ಪಿಕೊಂಡೆನು. ಅಷ್ಟರಲ್ಲಿ ಅಲ್ಲಿಗೆ ಬಂದ ಮಹಾನುಮತಿ ನನ್ನ ಮಾಹಿತಿಯನ್ನರಿತು ತಮಗೆಲ್ಲ ಮಹಾಸುದಿನ ಸಂದುದೆಂದು ಹರ್ಷಿಸಿದಳು. ಮಾರನೆಯ ಬೆಳಿಗ್ಗೆ ನಾನು ತಾಪಸಕನ್ಯೆಯೊಬ್ಬಳ ಮಾರ್ಗದರ್ಶನದಲ್ಲಿ ಕುವಲಯಾವಳಿಯೊಡನೆ ಲೀಲಾವತಿಯನ್ನು ಸಂದರ್ಶಿಸಿದೆನು. ಅವಳು ನನ್ನನ್ನು ಅತ್ಯಂತ ಗೌರವಪೂರ್ವಕವಾಗಿ ಸತ್ಕರಿಸಿದಳು. ಅಲ್ಲಿ ಒಂದು ದಿನವಿದ್ದು ಸ್ನಾನಪಾನ ಭೋಜನ ಸಂಭಾಷಣಾದಿಗಳಿಂದ ಸತ್ಕೃತನಾಗಿ, ಪ್ರಯಾಣ ಮುಂದುವರಿಸಿ, ನಿಮ್ಮ ಚರಣ ಸನ್ನಿಧಿಗೆ ಬಂದೆನು.

ತಾನು ಕೇಳಿದ್ದೆಲ್ಲ ಕೃಮಾತ್ರಕವಾದ ಕಲ್ಪನೆಯಲ್ಲವೆಂದೂ ಸಂಪೂರ್ಣ ವಾಸ್ತವ

ಸತ್ಯವೆಂದೂ ದೊರೆ ವಿಜಯಾನಂದನಿಂದ ಖಚಿತಪಡಿಸಿಕೊಂಡನು. ಪೊರ್ಟ್ಯೇಸ ಇನ್ನೂ ಅಲ್ಲಿದ್ದುದೇಕೆಂದೂ, ಶೀಲಮೇಘನ ದುರುದ್ದೇಶ ಯಾವ ರೂಪ ತಾಳಿರಬಹುದೆಂದೂ ಅನನು ವಿಚಾರಿಸಿದನು. ಲೀಲಾವತಿಯ ಕನಸು ವಿಧಿಯ ಕೈವಾಡದಿಂದಲೇ ನನಸಾಗಬೇಕಾಗಿದೆಯೆಂದೂ, ಮಾಧವಾನಿಲ ಹಿಂದಿರುಗಿದನಂತರ ತಾನು ಲೀಲಾವತಿಯ ಬಳಿ ಹೋಗಬಹುದೆಂದೂ ಅಥವಾ ಅವಳೇ ತನ್ನಲ್ಲಿಗೆ ಬರಬಹುದೆಂದೂ ಆಲೋಚಿಸಿದನು. ಲೀಲಾವತಿಯ ಜನ್ಮಮುಹೂರ್ತದಲ್ಲಿ ಭವಿಷ್ಯನುಡಿದಿದ್ದ ಜ್ಯೋತಿಷಿಯನ್ನು ಸಂಧಿಸಿ, ಮುಂದಿನ ಘಟನಾವಳಿಗಳ ವಿವರವನ್ನು ತಿಳಿದು ಬರುವಂತೆ ವಿಜಯಾನಂದನಿಗೆ ಆಜ್ಞಾಪಿಸಿದನು. ಅಷ್ಟರಲ್ಲಿ ಮಂತ್ರಿ ಪೊರ್ಟ್ಯೇಸ ಆಗಮಿಸಿ, ಯುದ್ಧದಲ್ಲಿ ಗೆದ್ದು ತಂದ ಉಲುಪೆಯನ್ನು ರಾಜನ ಮುಂದಿರಿಸಿದನು. ಆ ಆಭರಣ ಸಮೂಹದಲ್ಲಿ ಝಗಝಗಿಸುತ್ತಿದ್ದ ಕಂಠಹಾರವನ್ನು ತೆಗೆದಪ್ಪಿಕೊಂಡು, ಅದನ್ನು ಲೀಲಾವತಿಗೊಪ್ಪಿಸಿ ಬರುವಂತೆ ವಿಜಯಾನಂದನ ಕೈಲಿ ಕಳುಹಿಸಿದನು.

ದೊರೆ ಆಹಾರ ವಿಹಾರ ನಿತ್ಯಕರ್ಮಗಳನ್ನು ತೊರೆದು ಲೀಲಾವತಿಯಲ್ಲಿಯೇ ತಲ್ಲೀನನಾಗಿರುವಾಗ ವಿಜಯಾನಂದ ದುಃಖಾರ್ತನಾಗಿ ವಿಷಣ್ಣ ಮುಖಭಾವದಿಂದ ಹಿಂದಿರುಗಿ ಸಂಕಟದ ಕಥೆಯನ್ನು ನಿವೇದಿಸಿದನು. ವಿಧಿ ನಮಗೆ ವಿರೋಧವಾಗಿದೆ. ಘಟನೆಗಳು ನಮ್ಮ ಹತೋಟಿಯಲ್ಲಿಲ್ಲ. ನಾನು ಕೊಟ್ಟ ಕಂಠಹಾರವನ್ನು ಲೀಲಾವತಿ ತನ್ನ ಎದೆಯಲ್ಲಿ ಧರಿಸಿಕೊಂಡಳು. ವಿಚಿತ್ರಲೇಖೆಗೆ ನಿಮ್ಮ ವಂದನೆಗಳನ್ನು ಮುಟ್ಟಿಸಿದೆ. ನಿಮ್ಮ ವಿರಹತಾಪದ ತೀಕ್ಷ್ಣತೆಯನ್ನು ಅವರ ಮನಮುಟ್ಟುವಂತೆ ವಿವರಿಸಿದೆ. ಭೋಜನಾನಂತರ ಲೀಲಾವತಿಯೊಡನೆ ಪರ್ಣಕುಟಿಗೆ ಬಂದಾಗ, ಮಹಾಸುಮತಿ ಕುವಲಯಾವಲಿಯರು ನಿಮ್ಮ ಯೋಗ ಕ್ಷೇಮವನ್ನು ವಿಚಾರಿಸುತ್ತಿದ್ದಂತೆ, ಲೀಲಾವತಿಯ ಕೊರಳಲ್ಲಿದ್ದ ರತ್ನಹಾರವನ್ನು ನೋಡಿ ಬೆರಗಾದರು. ಅವರ ಕುತೂಹಲವನ್ನು ನಿವಾರಿಸುವ ಸಲುವಾಗಿ, ನಮ್ಮ ಸೈನ್ಯ ಮಲಯಾಚಲ ರಾಜ ವೀರವಾಹನನನ್ನು ಸೆರೆಹಿಡಿದು, ಅವನ ಭಂಡಾರವನ್ನು ಸೂರೆಗೊಂಡಿತೆಂದೂ ಆ ಕೊಳ್ಳೆಯಲ್ಲಿದ್ದ ಕಂಠಹಾರವನ್ನು ದೊರೆ ಲೀಲಾವತಿಗೆ ಕಳುಹಿಸಿದನೆಂದೂ ಹೇಳಿದೆನು. ಈ ಸುದ್ದಿಯನ್ನು ಕೇಳಿದುದೆ ತಡ ಅವರು ಗೋಳಾಡಿದರು. ಲೀಲಾವತಿ ಮೈಮರೆತಳು. ಮಾಧವಾನಿಲ ಪ್ರಾಣ ನೀಗಿರಬೇಕೆಂದು ಅವರು ಊಹಿಸಿದರು. ತಾನು ಬದುಕಿ ಫಲವಿಲ್ಲವೆಂದು ಹಲುಬುತ್ತ ಮಹಾಸುಮತಿ ತನ್ನ ಪ್ರಿಯನ ಬಳಿ ಹೋಗುವಂತೆ ಲೀಲಾವತಿಗೆ ಬುದ್ಧಿ ಹೇಳಿದಳು. ಉಂಗುರವನ್ನು ಕಾಣಿಕೆಯಾಗಿ ಕೊಟ್ಟು ನಿಮ್ಮನ್ನಲ್ಲಿಗೆ ಕಳುಹಿಸಿದರೆ ಲೀಲಾವತಿ ತನ್ನ ಮನಸ್ಸು ಬದಲಾಯಿಸಬಹುದೆಂದು ಅವಳು ನನ್ನ ಕಿವಿಯಲ್ಲಿ ಪಿಸುಗುಟ್ಟಿದಳು. ಮುಂದಿನ ಜನ್ಮದಲ್ಲಾದರೂ ನಿಮ್ಮನ್ನು ಕೂಡುವುದಾಗಿ ಲೀಲಾವತಿ ತನ್ನ ಬಯಕೆಯನ್ನು ವ್ಯಕ್ತಪಡಿಸಿದಳು. ಅವರಿಂದ ಬೀಳ್ಕೊಂಡು ಅವಸರವಸರವಾಗಿ ನಾನು ಬಂದೆ. ಮಹಾಸ್ವಾಮಿಯವರು ತ್ವರೆಯಿಂದ ಮುಂದಿನ ಕಾರ್ಯಕ್ರಮ ಕೈಗೊಳ್ಳದಿದ್ದರೆ ಅನಾಹುತವೊದಗಬಹುದು.

ಸ್ಥಿರಮತಿಯಾದ ಲೀಲಾವತಿ ತನ್ನ ನಿರ್ಧಾರವನ್ನು ಬದಲಿಸಲಾರಳೆಂದೂ, ಮಹಾಸುಮತಿಯೊಡನೆ ಅವರೆಲ್ಲರೂ ದೇಹತ್ಯಾಗಮಾಡಲೆಂದೂ, ಭವಿಷ್ಯವಾಣಿ

ಮುಂದಿನ ಜನ್ಮದಲ್ಲಿ ಸಫಲವಾಗಲೆಂದೂ ದೊರೆ ನುಡಿದನು. ದೊರೆಯ ಹತಾಶೆಯಿಂದ ಕಳವಳಗೊಂಡ ಆಚಾರ್ಯನಾಗಾರ್ಜುನ ಮರಣವಸ್ತ್ವಪ್ಪದೆ ಅಜೇಯ ಶಕ್ತಿಯನ್ನು ಗಳಿಸಿ ಮನೋರಥವನ್ನೀಡೇರಿಸಿಕೊಳ್ಳುವಂತೆ ತಿಳಿವಳಿಕೆ ನೀಡಿದನು. ಜರಾರುಜೆಗಳು ಸುಳಿಯದ ಸ್ವರ್ಗಸುಖ ಎಂಟು ಮಡಿಯುಷ್ಟಿರುವ ಪಾತಾಳಕ್ಕೆ ತನ್ನೊಡನೆ ಬರುವುದೆಂದು ದೊರೆಯನ್ನು ಪ್ರೇರಿಸಿದನು. ದೊರೆ ರಾಜ್ಯವನ್ನು ಮಗನಿಗೊಪ್ಪಿಸಿ, ನೆಂಟರಿಷ್ಟರನ್ನು ಸಂತೈಸಿ, ಮಿತಪರಿವಾರದೊಡನೆ ನಾಗಾರ್ಜುನನನ್ನು ಹಿಂಬಾಲಿಸಿದನು. ಆ ಯಾತ್ರಿಕರು ಗೋದಾವರಿಯ ದಡದ ಅರಣ್ಯವನ್ನು ಪ್ರವೇಶಿಸಿ, ಭಯಂಕರ ಸಿಂಹವೊಂದರ ರಕ್ಷಣೆಯಲ್ಲಿದ್ದ ಗುಹಾದ್ವಾರವನ್ನು ಸಮೀಪಿಸಿದರು. ಅಲ್ಲಿಂದ ಮುಂದುವರಿದು ಬೃಹದಾಕಾರದ ಕಲ್ಲು ಚಪ್ಪಡಿಯಿಂದ ಮುಚ್ಚಿದ ದ್ವಿತೀಯ ದ್ವಾರವನ್ನು ಶಾಸ್ತ್ರೋಕ್ತವಾಗಿ ಪ್ರವೇಶಿಸಿ, ಸಂಪದ್ಯುಕ್ತವಾದ ಉದ್ಯಾನದ ಕೇಂದ್ರಸ್ಥಾನದಲ್ಲಿದ್ದ ಈಶ್ವರಾಲಯವನ್ನು ಕಂಡರು. ಈಶ್ವರನನ್ನು ಪೂಜಿಸಿ, ಸ್ವರ್ಣಕವಾಟದಿಂದ ಆಚ್ಛಾದಿತವಾಗಿ, ಭೀಕರಸರ್ಪಗಳಿಂದ ವ್ಯಾವೃತವಾಗಿದ್ದ ತೃತೀಯ ದ್ವಾರ ಪ್ರದೇಶವನ್ನು ತಲುಪಿದರು. ಘೋರಸರ್ಪಗಳಿಂದ ಪಾತಾಳಪ್ರವೇಶ ಸಾಧ್ಯವಾಗದೆ ಅಲ್ಲಿ ನಿಂತಿದ್ದ ಧೀರ ಯುವಕನೊಬ್ಬನನ್ನವರು ಕಂಡರು. ದೊರೆಯನ್ನು ಕಂಡ ಕೂಡಲೆ ಹಾವುಗಳು ದಿಕ್ಕಾಪಾಲಾಗಿ ಚೆದರಿಹೋದುವು. ತಾನು ಸಿದ್ಧರಾಜ ಮಲಯಾನಿಲನ ಮಗ ಮಾಧವಾನಿಲನೆಂದು ತನ್ನ ಪರಿಚಯ ಹೇಳಿ, ವಿಮೋಚನೋಪಕಾರಕ್ಕಾಗಿ ದೊರೆಯನ್ನು ವಂದಿಸಿದನು. ಆ ಯಶಸ್ಸಿಗೆ ತನ್ನ ಬಳಿಯಿದ್ದ ಉಂಗುರ ಕಾರಣವೆಂದೂ, ಮಹಾನುಮತಿಯಿಂದ ಅದು ತನಗೆ ಬಂದದ್ದೆಂದೂ ತನ್ನ ಪೂರ್ವೋತ್ತರಗಳನ್ನು ದೊರೆ ವಿವರಿಸಿದನು. ಮಾಧವಾನಿಲ ತನ್ನದಾದ ಆ ಉಂಗುರವನ್ನು ಗುರುತಿಸಿ, ತನಗೆ ಬಂದೊದಗಿದ ವಿಪತ್ತನ್ನು ವರ್ಣಿಸಿ, ಅವರು ಮಹಾನುಮತಿಯ ಬಳಿಗೆ ಹೋಗುವಂತೆ ವಿಜ್ಞಾಪಿಸಿ, ಅಷ್ಟುಹೊತ್ತಿಗೆ ತನ್ನ ತಂದೆತಾಯಿಯರನ್ನು ಸಂಧಿಸಿ ತಾನು ಮಹಾನುಮತಿಯ ಬಳಿಗೆ ಬರುವುದಾಗಿ ಹೇಳಿ ಮಲಯಾಚಲದ ಕಡೆಗೆ ನಿರ್ಗಮಿಸಿದನು. ಚಿನ್ನದ ಬಾಗಿಲು ತೆರೆದ ಕೂಡಲೆ ಇಬ್ಬರು ತರುಣಿಯರು ದೊರೆಯ ಬಳಿ ಬಂದು, ಅದು ರತ್ನಪ್ರಭೆಯ ಅರಮನೆಯೆಂದೂ, ದೊರೆಯ ಸಂಗವನ್ನು ಬಯಸಿ ಅವಳು ವಿರಹತಪ್ತೆಯಾಗಿ ಸಂಕಟಪಡುತ್ತಿರುವಳೆಂದೂ ತಿಳಿಸಿದರು. ಅನೇಕ ಕ್ಲೇಶ ಸಂಕಟಗಳನ್ನನುಭವಿಸಿ ತಾವಲ್ಲಿಗೆ ಬಂದಿದ್ದುದಾಗಿಯೂ, ಮಾಧವಾನಿಲನ ಕ್ಷೇಮ ಕೈಗೂಡುವತನಕ ತಾವಲ್ಲಿ ನಿಲ್ಲಲಾಗದೆಂದೂ ನಾಗಾರ್ಜುನ ದೊರೆಯ ಪರವಾಗಿ ಖಚಿತಪಡಿಸಿದನು. ಈಶ್ವರನನ್ನು ವಂದಿಸಿ ದೊರೆ ನಾಗಾರ್ಜುನನೊಡನೆ ಹಿಂದಿರುಗಿ, ಗೋದಾವರಿಯಲ್ಲಿ ಮಿಂದು ಅರಮನೆಯನ್ನು ಹೊಕ್ಕನು.

ಮಾರನೆಯ ಬೆಳಗ್ಗೆ ಸೈನ್ಯ ಮುಂದುವರಿಯಬೇಕೆಂದು ದೊರೆ ದಂಡನಾಯಕನಿಗೆ ಆಜ್ಞಾಪಿಸಿದನು. ಅಗ್ರಭಾಗದಲ್ಲಿ ರಾಷ್ಟ್ರಕೂಟ ಸೈನ್ಯ, ಪಶ್ಚಿಮದಲ್ಲಿ ಚಾಲುಕ್ಯ ಸೈನ್ಯ, ನಡುವೆ ದೊರೆ—ಹೀಗೆ ವ್ಯೂಹಗೊಂಡ ಸೈನ್ಯ ಮುಂದುವರಿದು, ಸಂಜೆಯ ವೇಳೆಗೆ ಬೀಡುಬಿಟ್ಟಿತು. ಮಾರನೆಯ ದಿನ ಮಧ್ಯಾಹ್ನದ ವೇಳೆಗೆ ಸೈನ್ಯ ವಿಶ್ರಾಂತಿಗಾಗಿ ಪರ್ವತಪ್ರಾಂತವೊಂದರಲ್ಲಿ ತಂಗಿತು. ದೊರೆ ಸಂಜೆಯವರೆಗೆ ಬೇಟೆಯಾಡಿ

ಬಂದನು. ಅನಂತರ ವಿಜಯಾನಂದನ ಸಲಹೆಯಂತೆ ದೊರೆ ಎಲ್ಲಿಯೂ ನಿಲ್ಲದೆ ಸಪ್ತ ಗೋದಾವರೀಭೀಮೆಯ ಪ್ರದೇಶವನ್ನು ತಲುಪಿ, ಪಾಶುಪತ ಗುರುವನ್ನು ಸಂಧಿಸಿ, ಗೌರವ ಸಲ್ಲಿಸಿದನು. ಗುರು ಅವನನ್ನು ಸಂಪ್ರೀತಿಯಿಂದ ಸ್ವಾಗತಿಸಿ, ಭೀಷಣಾನನ ಪ್ರಮುಖರಾದ ರಾಕ್ಷಸರ ಉಪಟಳವನ್ನು ವಿವರಿಸಿ, ಪ್ರಬಲವಾದ ಮಂತ್ರವನ್ನುಪದೇಶಿಸಿ, ಆ ರಾತ್ರಿಯೇ ರಾಕ್ಷಸನಾಯಕನನ್ನು ಕೊಲ್ಲುವಂತೆ ವಿಜ್ಞಾಪಿಸಿಕೊಂಡನು.

ದೊರೆಯ ಪರಿವಾರ ಅಲ್ಲಿಗೆ ಬಂದದ್ದನ್ನು ಕೇಳಿದ ಭೀಷಣಾನನ ತನ್ನ ಆಹಾರಕ್ಕಾಗಿ ನೂರುಮಂದಿ ರಾಜಕುಮಾರರನ್ನೂ, ನೂರು ಆನೆಗಳನ್ನೂ ಒಂದು ಸಾವಿರ ಮೃಗಗಳನ್ನೂ ಕಳಿಸಬೇಕೆಂದೂ, ಹಾಗೆ ಮಾಡದಿದ್ದರೆ ಅವನ ಕ್ಷೇಮಕ್ಕೆ ಸಂಚಕಾರ ವೊದಗುತ್ತದೆಂದೂ ಹೇಳಿಕಳುಹಿಸಿದನು. ಆ ಸಂದೇಶದಿಂದ ಕೋಪೋದ್ರಿಕ್ತನಾದ ದೊರೆ ಅವನನ್ನು ಕೊಂದು ಹದ್ದುನಾಯಿಗಳಿಗೆ ನೀಡುವುದಾಗಿ ಪ್ರತಿ ಸಂದೇಶ ಮುಟ್ಟಿಸಿದನು. ಇಬ್ಬರಿಗೂ ಭಯಂಕರ ಯುದ್ಧ ಸಂಧಿಸಿತು. ಋಷಿಮಂತ್ರದ ನೆರವಿನಿಂದ ದೊರೆ ಭೀಷಣಾನನ ಶಿರಸ್ಸನ್ನು ಛೇದಿಸಿದನು. ಒಡನೆಯೆ ಸುಂದರಾಕಾರನೂ ಜಾಜ್ವಲ್ಯಯುಕ್ತನೂ ಆದ ಪುರುಷನೊಬ್ಬ ಅವನ ಮುಂದೆ ಕಾಣಿಸಿಕೊಂಡು, ತಾನು ಚಿತ್ರಾಂಗದನೆಂಬ ಗಾಂಧರ್ವ ರಾಜಕುಮಾರನೆಂದೂ, ಒಮ್ಮೆ ಗಂಗೋತ್ರಿಯಲ್ಲಿ ಮಿಂದು ಅಡ್ಡಾಡುತ್ತಿರುವಾಗ ಸುಂದರಿಯಾದ ತಾಪಸಕನ್ಯೆಯೊಬ್ಬಳನ್ನು ಕಂಡು ಮೋಹಗೊಂಡು ಗಾಂಧರ್ವವಿಧಿಯಿಂದ ಮದುವೆಯಾದದ್ದರ ಪರಿಣಾಮವಾಗಿ ಮುನಿಶಾಪಕ್ಕೆ ಗುರಿಯಾಗಿ ರಾಕ್ಷಸನಾಗಿ ಹುಟ್ಟಬೇಕಾಯಿತೆಂದೂ, ಈ ಹನ್ನೆರಡು ವರ್ಷಗಳ ನಂತರ ಆ ಋಷ್ಯಾದೇಶ ನಿಜವಾಗಿ ಶಾಪ ನಿವಾರಣೆಯಾಗಿ ತನಗೆ ಪೂರ್ವಜನ್ಮ ಲಭಿಸಿತೆಂದೂ ತನ್ನ ಪೂರ್ವ ಕಥೆಯನ್ನು ವಿವರಿಸಿದನು. ದೊರೆ ಅದೃಷ್ಟಗತಿಯ ತಿರುವಿನಿಂದ ಹರ್ಷಭರಿತನಾಗಿ, ಕುವಲಯಾವಲಿಯ ವೃತ್ತಾಂತವನ್ನೆಲ್ಲ ಸಾಂಗವಾಗಿ ವಿವರಿಸಿ, ಅವಳ ಬಳಿಗೆ ಹೋಗುವಂತೆ ಚಿತ್ರಾಂಗದನಿಗೆ ತಿಳಿಸಿದನು.

ಸಂತೋಷ ಸಂಭ್ರಮದ ಈ ಸುದ್ದಿ ಲೀಲಾವತಿ ಮಹಾನುಮತಿಯರಿಗೆ ಮುಟ್ಟಿತು. ಅವರು ಆನಂದಸಾಗರದಲ್ಲಿ ತೇಲಾಡಿದರು. ವಿದ್ಯಾಧರರಾಜ ಹಂಸನೂ ಅವನ ಹೆಂಡತಿಯೂ ನಳಕೂಬರನೊಡನೆ ತಾಪಸಾಶ್ರಮಕ್ಕೆ ಬಂದರು. ಹಂಸ ನಳಕೂಬರು ವಿಜಯಾನಂದನ ಮೂಲಕ ಹಾಲನಿಗೆ ಅಕ್ಷಯಸಿಧಿಯನ್ನು ಅನುಗ್ರಹಿಸಿದರು. ಹಾಲ ಮಾಧವಾನಿಲ ಚಿತ್ರಾಂಗದರು ವೈಭವದಿಂದ ಬಿಜಯಮಾಡಿ, ನಲಕೂಬರನಿಗೆ ಅಪಾರ ಗೌರವ ಸಲ್ಲಿಸಿದರು. ಮಾಧವಾನಿಲ ಮಹಾನುಮತಿಯರ ಮದುವೆ ಸಾಂಗವಾಗಿ ನೆರವೇರಿತು. ಚಿತ್ರಾಂಗದ ತನ್ನ ಪ್ರೇಯಸಿಯ ಬಳಿ ಅತ್ಯುತ್ಸಾಹದಿಂದ ಕುಳಿತನು. ಲೀಲಾವತಿ ತನ್ನ ತಂದೆಗೆ ಈ ಸುದ್ದಿಯನ್ನು ಮುಟ್ಟಿಸಿದಳು.

ವಿವಾಹ ಮುಗಿದು, ತದಂಗವಾದ ಪಾನೋತ್ಸವ ಭೋಜನಕೂಟಗಳು ನಡೆಯುತ್ತಿರುವಾಗ ಶೀಲಮೇಘ ಮಡದಿಯೊಡನೆ ಆಗಮಿಸಿದನು. ಗಣೇಶನ ಶಾಪದಿಂದ ವಿಮುಕ್ತಳಾದ ಲೀಲಾವತಿಯನ್ನು ತಾಯಿ ಶರತ್‌ಶ್ರೀ ಹರ್ಷೋದ್ವೇಗದಿಂದ

ಸ್ವೀಕರಿಸಿದಳು. ಹಾಲಲೀಲಾವತಿಯರ ಮದುವೆ ಅತ್ಯಂತ ಸಂಭ್ರಮದಿಂದ ನೆರವೇರಿತು. ಸಿದ್ಧರ ದೊರೆ ಮಲಯಾನಿಲ ಅಂತರ್ಧಾನಶಕ್ತಿಯನ್ನೂ, ಯಕ್ಷರಾಜ ನಳಕೂಬರ ಅಕ್ಷಯಕೋಶವನ್ನೂ, ಚಿತ್ರಾಂಗದ ದಿವಿಗಮನ ಸಾಮರ್ಥ್ಯವನ್ನೂ, ಹಂಸ ವಯಸ್ಸ್ತಂಭರಸಾಯನವನ್ನೂ, ಇತರರು ತಮತಮಗೆ ತೋರಿದ ವರಗಳನ್ನು ಹಾಲನಿಗೆ ನೀಡಿದರು. ಶುಭಾಶೀರ್ವಾದ ವರಗಳಿಗೆ ಪಾತ್ರನಾದ ಸಾತವಾಹನ ತನ್ನ ಮಡದಿ ಲೀಲಾವತಿಯೊಡನೆ ಈಶ್ವರನನ್ನು ಪೂಜಿಸಿ, ನಗ್ನ ಪಾಶುಪತನನ್ನು ವಂದಿಸಿ, ತನ್ನ ನಗರದ ಕಡೆಗೆ ತೆರಳಿದನು. ಶೀಲಮೇಘನೂ ಸಿಂಹಳದ್ವೀಪದ ಕಡೆಗೆ ಹೊರಟನು; ಅತಿಥಿಗಳೆಲ್ಲ ತಮ್ಮ ತಮ್ಮ ಸ್ಥಳಗಳಿಗೆ ನಿರ್ಗಮಿಸಿದರು. ದೊರೆ ಮಡದಿ ಮಂತ್ರಿಯರೊಡನೆ ಪ್ರತಿಷ್ಠಾನ ನಗರಿಯನ್ನೈದಿ, ಪಾರ್ವತಿಯನ್ನು ಬಲವಂದು ಪೂಜಿಸಿ, ಅರಮನೆಗೆ ನಡೆದನು.

## ೫. ಮೂರು ಕಾವ್ಯಗಳಲ್ಲಿ ಕಾಣುವ ವ್ಯತ್ಯಾಸ

ಮೇಲಣ ಮೂರು ಕಾವ್ಯಗಳಲ್ಲಿ ಸುಬಂಧುವಿನ ವಾಸವದತ್ತಾ ಕಥೆಯೇ ಪ್ರಾಚೀನವಾದದ್ದು. ಅದು ಕ್ರಿ.ಶ. 556 ಮತ್ತು 606 ರ ನಡುವಣ ಕಾಲದಲ್ಲಿ ರಚಿತವಾಗಿರಬೇಕು.[1] ಈ ಕಾವ್ಯದ ಹೆಸರೂ, ಕಾವ್ಯದಲ್ಲಿ ಬರುವ ಸ್ವಪ್ನ ಪ್ರಸಂಗವೂ ಭಾಸನ ಸ್ವಪ್ನ ವಾಸವದತ್ತಾ ನಾಟಕವನ್ನು ನೆನಪಿಗೆ ತರುವುದಾದರೂ ಅವೆರಡಕ್ಕೂ ನಿಕಟಸಂಬಂಧವಿಲ್ಲವೆಂದು ಖಚಿತವಾಗಿ ಹೇಳಬಹುದು. ಈ ಕಥೆ ಸಂಪೂರ್ಣವಾಗಿ ಸುಬಂಧುಕಲ್ಪಿತ. ಇದೊಂದು ಪ್ರಣಯ ಕಥೆ. ಪ್ರಣಯ ಸಿದ್ಧಿಗೆ ಮುಂಚೆ ಅನೇಕ ವಿಘ್ನ ಬಾಧಕಗಳೊದಗುತ್ತವೆ. ಅವುಗಳ ಪರಿಹಾರಕ್ಕಾಗಿ ಸಾಹಸಕೃತ್ಯಗಳು ಅನಿವಾರ್ಯ. ಸ್ವಪ್ನ, ಪಕ್ಷಿಸಂವಾದ, ಮಾಯಾಶ್ವ, ಶಾಪ, ರೂಪಾಂತರ ಮೊದಲಾದ ಘಟನೆಗಳ ಮೂಲಕ ಕಥೆ ಮುಂದುವರಿಯುತ್ತದೆ. ಆದರೆ ಆ ಘಟನೆಗಳ ಜೋಡಣೆಯಲ್ಲಿ ಸಹಜ ಚಾತುರ್ಯವಿಲ್ಲ, ಕಣ್ಕಟ್ಟಿನ ಕೈವಾಡವಿದೆ. ಕಥೆ ಸ್ವಲ್ಪ; ಕಥೆಗಿಂತ ವರ್ಣನೆಯ ಕಡೆಗೆ ಕವಿಯ ಲಕ್ಷ್ಯ; ವರ್ಣನೆಯೇ ಅವನ ಮುಖ್ಯೋದ್ದೇಶ. ಅಷ್ಟಾದಶ ವರ್ಣನೆಯ ಗೊಂಡಾರಣ್ಯದಲ್ಲಿ ಕಥೆ ದಾರಿತಪ್ಪಿ, ಮರೆತು ಹೋಗುತ್ತದೆ. ಪದ್ಯಕಾವ್ಯಕ್ಕೆ ಗದ್ಯಕಾವ್ಯ ಯಾವ ಅಂಶದಲ್ಲಿಯೂ ಕಡಮೆಯಲ್ಲವೆಂಬ ಪ್ರಬಲ ಮನೋಭಾವದ ಪರಿಣಾಮವಾಗಿ ಶೈಲಿ ಅಲಂಕಾರಮಯವಾಗಿ ಸಮಾಸಯುಕ್ತವಾಗಿ ಕ್ಲಿಷ್ಟವಾಗಿದೆ. ಅರ್ಥಕ್ಕಿಂತ ನಾದದ ಕಡೆಗೆ ಗಮನ ಸರಿಯುತ್ತದೆ. ಕಲ್ಪನೆ ದಿಕ್ಕಾಪಾಲಾಗಿ ಹರಿಯುತ್ತದೆ; ಅದಕ್ಕೆ ವಾಸ್ತವತೆಯ ನೆಲಗಟ್ಟಿಲ್ಲ, ಸಂಯಮದ ಕಡಿವಾಣವಿಲ್ಲ. ಪರಿಸಂಖ್ಯೆ, ಮಾಲಾದೀಪಕ, ಉತ್ಪ್ರೇಕ್ಷೆ, ಯಮಕ, ಪ್ರೌಢೋಕ್ತಿ, ಕಾವ್ಯಲಿಂಗ, ಸಮ, ವಿಧಿ, ಸಂಭಾವನಾ, ಕಾರಣಮಾಲಾ, ಅಪಹ್ನುತಿ, ಲೋಕೋಕ್ತಿ, ಸ್ವಭಾವೋಕ್ತಿ ಮೊದಲಾದ ಅಲಂಕಾರಗಳು ಹದಮೀರಿ, ಹದ್ದು ಮೀರಿ ಬರುತ್ತವೆ; ಆದರೆ ಶ್ಲೇಷೆ–ವಿರೋಧಾಭಾಸಗಳಿಗೆ ಈ ಕಾವ್ಯ ಮೀಸಲೆಂದು ತೋರುತ್ತದೆ. ಒಟ್ಟಿನಲ್ಲಿ ಈ ಕಾವ್ಯ ಒಂದು ಪಂಥವನ್ನು ಪ್ರತಿನಿಧಿಸುತ್ತದೆ, ಸಮಕಾಲೀನಾಭಿರುಚಿಯನ್ನು ತೃಪ್ತಿಪಡಿಸುತ್ತದೆ.

---

[1] *Vasvadatta of Subandhu Ed.* by Louis H. Gray-P. 12.

ಲೀಲಾವತಿ[1] ಮಹಾರಾಷ್ಟ್ರೀ ಪ್ರಾಕೃತದಲ್ಲಿ ರಚಿತವಾಗಿರುವ ರಮ್ಯಾದ್ಭುತ ಕಥೆ. ಪ್ರತಿಷ್ಠಾನ ಪುರದರಸನೂ ಗುಣಾಢ್ಯನ ಪೋಷಕನೂ ಗಾಥಾಸಪ್ತಶತಿಕರ್ತೃವೂ ಶಕಪುರುಷನೂ ಭಾರತೀಯ ಜನಮನದ ಚಂದ್ರಮನೂ ಆದ ಸಾತವಾಹನಾಭಿಧಾನದ ಹಾಲನ ಸುತ್ತ ಹೆಣಿಗೆಗೊಂಡಿರುವ ರೋಮಾಂಚಕಾರಿ ಕಾವ್ಯವಿದು. ಬೃಹತ್ಕಥೆ, ಶಾಕುಂತಲ, ವಾಸವದತ್ತಾ, ಕಾದಂಬರಿ ರತ್ನಾವಳೀ ಗ್ರಂಥಗಳ ಸ್ಫೂರ್ತಿಯಿಂದ ಅರಳಿದ ಕಾವ್ಯ. ಸುಮಾರು ಕ್ರಿ. ಶ 800 ರಲ್ಲಿದ್ದ ಕುತೂಹಲ ಈ ಕಾವ್ಯದ ಕರ್ತೃ. ಸುಸಂಸ್ಕೃತಳೂ ಸುಜ್ಞಾನಿಯೂ ಆದ ತನ್ನ ಪ್ರೇಯಸಿ ಸಾವಿತ್ರಿಯ ಬಿನ್ನಹವನ್ನು ಮನ್ನಿಸಿ ಈ ಕಥೆಯನ್ನು ಹೇಳಿದಂತೆ ಕವಿಯೇ ಹೇಳಿಕೊಂಡಿದ್ದಾನೆ. ಕಥೆಯ ರಚನೆ ಸಾಕಷ್ಟು ಗೋಜಲಾಗಿದೆ. ಮುಖ್ಯ ಕಥೆ ಬಾಣನ ಕಾದಂಬರಿಯಂತೆ ಅನೇಕ ಒಳಮಡಿಕೆಗಳನ್ನೊಳಗೊಂಡಿದೆ. ಪ್ರಧಾನ ಪಾತ್ರಗಳ ಮುಖಾಂತರ ಹೊಸ ಹೊಸ ಕಥೆ ಹಂತ ಹಂತವಾಗಿ ಸುರುಳಿ ಬಿಚ್ಚುತ್ತದೆ. ಒಂದು ದೃಷ್ಟಿಯಲ್ಲಿ ಅನೇಕ ಜೀವನ ಚರಿತ್ರೆ ಮತ್ತು ಆತ್ಮ ಕಥೆಗಳಿಂದ ಪೋಣಿಕೆಗೊಂಡ ಸುಂದರವಾದ ಪುಷ್ಪಹಾರ. ಎಲ್ಲ ಉಪಕಥೆಗಳನ್ನು ಕೂಡಿಸಿ, ಮೂಲಕಥೆಯ ಓಟವನ್ನು ಒಮ್ಮುಖವಾಗಿಸುವ ಸಲುವಾಗಿ ಕವಿ ಉಂಗುರ ಮತ್ತು ಕೊರಳ ಹಾರಗಳ ಸನ್ನಿವೇಶಗಳನ್ನು ಸೃಷ್ಟಿಸಿದ್ದಾನೆ. ಈ ಸನ್ನಿವೇಶ ಸೃಷ್ಟಿಯಿಂದ ಕಥೆಯ ಕ್ರಿಯೆ ಶೀಘ್ರವಾಗಿ ಶಿಖರ ಮುಟ್ಟುತ್ತದೆ. ಶೃಂಗಾರ ರಸನಿರೂಪಣೆಗಾಗಿ ಕವಿ ಸನ್ನಿವೇಶ ಘಟನೆಗಳನ್ನು ಯಥೇಚ್ಛವಾಗಿ ಕಲ್ಪಿಸಿಕೊಂಡಿದ್ದಾನೆ. ಈ ಕಥೆಯಲ್ಲಿ ನಾವು ದಿವ್ಯ ಮಾನುಷ ಲೋಕದ ವ್ಯಕ್ತಿಗಳನ್ನು ಸಂದರ್ಶಿಸುತ್ತೇವೆ. ಕಥೆಯ ಕ್ರಿಯೆ ಮುಖ್ಯವಾಗಿ ಭೂಲೋಕದಲ್ಲಿ, ಅದರಲ್ಲಿಯೂ ಸಪ್ತಗೋದಾವರಿಯ ದಡದಲ್ಲಿ ನಡೆದರೂ ಸಿದ್ಧ ವಿದ್ಯಾಧರ ಯಕ್ಷ ಗಂಧರ್ವ ರಾಕ್ಷಸರೆಲ್ಲರೂ ಆ ಸ್ಥಳಕ್ಕೆ ಬರುತ್ತಾರೆ. ಆಕಸ್ಮಿಕ ಘಟನೆಗಳು, ಅಮಾನುಷ ಸಂಗತಿಗಳು ಮತ್ತು ವಿಧಿ ಲೀಲೆ ಕಥೆಯ ರಮ್ಯಾದ್ಭುತ ಮಹತ್ವವನ್ನು ಉದ್ದೀಪನಗೊಳಿಸುತ್ತವೆ. ಶಾಪವಿಶಾಪಗಳ ಪೂಜಿತಪಸ್ಸುಗಳ ಸಂಘಾತ ಸಂಪೋಷಣೆಗಳಿಂದ ಮಾತ್ರ ಶಾಂತಿ ಕಲ್ಯಾಣಗಳು ಸಾಧ್ಯವೆಂಬ ತಾತ್ತ್ವಿಕಸಿದ್ಧಾಂತ ಈ ಕಾವ್ಯದಿಂದ ಹೊರ ಹೊಮ್ಮುತ್ತದೆ.

ಈ ಮೂರು ಕೃತಿಗಳನ್ನು ಅಕ್ಕಪಕ್ಕದಲ್ಲಿಟ್ಟು ಹೋಲಿಸಿ ನೋಡಿದಾಗ ಕುತೂಹಲನ ಕೃತಿಯನ್ನು ನೇಮಿಚಂದ್ರ ಗಮನಿಸಿರಬೇಕೆಂದೂ, ಸುಬಂಧುವಿನ ಕೃತಿಯನ್ನು ಬಹುಮಟ್ಟಿಗೆ ಅನುಸರಿಸಿದ್ದಾನೆಂದೂ ವೇದ್ಯವಾಗುತ್ತದೆ. ಪ್ರಾಕೃತಲೀಲಾವತಿಗೂ ಕನ್ನಡ ಲೀಲಾವತಿಗೂ ನಾಮಸಾದೃಶ್ಯವಲ್ಲದೆ ಅನ್ಯಸಾಮ್ಯಗಳು ಅವೆರಡರ ಪ್ರಗಾಢ ಸಂಬಂಧವನ್ನು ಎತ್ತಿತೋರಿಸುವಷ್ಟಿಲ್ಲ. ನೇಮಿಚಂದ್ರ ಚತುರ್ಭಾಷಾ ಪಂಡಿತ. ಪ್ರಾಕೃತದಲ್ಲಿ ಪದ್ಯರಚನೆ ಮಾಡುವಷ್ಟರಮಟ್ಟಿನ ಪರಿಣತಿಯನ್ನು ಪಡೆದಿದ್ದನು. ಆ ಭಾಷೆಯ ಮೇಲಣ ವಾತ್ಸಲ್ಯದಿಂದ ಕೆಲವು ಗಾಥೆ[2]ಗಳನ್ನು ರಚಿಸಿ ತನ್ನ ಕಾವ್ಯದಲ್ಲಿ ಸೇರಿಸಿದ್ದಾನೆ. ತನ್ನ ಕಾವ್ಯವನ್ನು ಲೀಲಾವತಿ ಎಂದು ಕರೆದಿರುವುದರಲ್ಲಿಯೇ ಅವನ ಮನೋಗತ ವ್ಯಕ್ತವಾಗುತ್ತದೆ. ವಸ್ತುಸತ್ವಗಳೆರಡರಲ್ಲಿಯೂ ಸುಬಂಧುವಿನ

[1] *Lilavai of Kouhala Ed.* by Dr A. N. Upadhye-P. 75.

[2] ಲೀಲಾವತಿ 4-91, 9-58.

ಕೃತಿಯನ್ನು ತಕ್ಕಮಟ್ಟಿಗಾದರೂ ಅನುಸರಿಸುವಾಗ, ಲೀಲಾವತಿಯಷ್ಟೇ ವಾಸವದತ್ತೆಯ ಹೆಸರೂ ಮನಮೋಹಕವಾಗಿರುವಾಗ, ಕವಿ ಲೀಲಾವತಿ ಎಂಬ ಹೆಸರನ್ನು ಏಕಿಟ್ಟುಕೊಂಡ? ಕಥೆಯುದ್ದಕ್ಕೂ ವಾಸವದತ್ತೆಯ ಹೆಸರು ಮೇಲಿಂದ ಮೇಲೆ ಬರುತ್ತದೆ. ಪ್ರಾಕೃತ ಲೀಲಾವತಿಯಲ್ಲಿದ್ದ ಕವಿಯ ಗಾಢಾಸಕ್ತಿಯೇ ಕನ್ನಡ ಲೀಲಾವತಿಯ ನಾಮಕರಣಕ್ಕೆ ಕಾರಣವಿರಬಹುದೆಂದು ಊಹಿಸಲವಕಾಶವಿದೆ. ಕನ್ನಡ ಕಾವ್ಯದಲ್ಲಿ ಬರುವ ಗಂಧನದಿ, ಅಂಬಿಕಾಮಂದಿರ, ಆ ನದೀ ತಟದ ಜಿನದೇವಾಲಯ ಮತ್ತು ಅಲ್ಲಿಯ ಜೈನ ಸನ್ಯಾಸಿಗಳು ಪ್ರಾಕೃತ ಕಾವ್ಯದ ಗೋದಾವರೀನದಿ, ಭವಾನೀ ಮಂದಿರ ಮತ್ತು ನಗ್ನ ಪಾಶುಪತರನ್ನು ಪ್ರತಿನಿಧಿಸುತ್ತಾರೆಂದೂ, ಪ್ರಣಯಿಗಳ ಹಾರ ವಿನಿಮಯ ಎರಡು ಕೃತಿಗಳಲ್ಲಿಯೂ ಏಕ ರೀತಿಯಾಗಿ ತೋರುತ್ತದೆಂದೂ, ಈ ಕಾರಣದಿಂದ ನೇಮಿಚಂದ್ರನಿಗೆ ಪ್ರಾಕೃತಕೃತಿಯ ಪರಿಚಯ ಸುಮಾರು ಮಟ್ಟಿಗಾದರೂ ಇದ್ದಿರಬೇಕೆಂದು ಡಾ. ಎ. ಎನ್. ಉಪಾಧ್ಯೆ ಅವರು ಊಹಿಸುತ್ತಾರೆ.[1] ಶೃಂಗಾರ ವರ್ಣನೆಯೇ ಮುಖ್ಯೋದ್ದೇಶವಾಗುಳ್ಳ ಕನ್ನಡಕೃತಿ ಪ್ರಾಕೃತಕಾವ್ಯದ ಶ್ರೇಷ್ಠಾಂಶಗಳನ್ನು ಅಳವಡಿಸಿಕೊಳ್ಳದಿದ್ದುದು ದುರ್ದೈವವೇ ಸರಿ.

ನೇಮಿಚಂದ್ರ ಸಾಕಷ್ಟು ಮಟ್ಟಿಗೆ ಸುಬಂಧುಕೃತಿಯನ್ನನುಸರಿಸಿದ್ದಾನೆನ್ನುವ ವಿಷಯದಲ್ಲಿ ಲವಲೇಶವೂ ಸಂದೇಹವಿಲ್ಲ. ಲೀಲಾವತಿಯ ಪೂರ್ವಾರ್ಧ ಅನೇಕಾಂಶಗಳಲ್ಲಿ ವಾಸವದತ್ತೆಯ ಪೂರ್ವಾರ್ಧವನ್ನು ಹೋಲುತ್ತದೆ. ಅವುಗಳಲ್ಲಿ ಕೆಲವನ್ನಿಲ್ಲಿ ಸೂಚಿಸಬಹುದು:

(1) ಕಾವ್ಯದ ಹೆಸರು ಲೀಲಾವತಿಯಾದರೂ, ವಾಸವದತ್ತೆಯ ಹೆಸರು ಕಾವ್ಯದಲ್ಲೆಲ್ಲ ಎದ್ದು ಕಾಣುತ್ತದೆ.

(2) ಕಾವ್ಯದಲ್ಲಿ ಬರುವ ಹೆಸರುಗಳಲ್ಲಿ ಹಲವು ಹೆಚ್ಚು ಕಡಮೆ ಒಂದೆಯಾಗಿವೆ. ಮಕರಂದ, ಕುಸುಮಪುರ, ಶೃಂಗಾರಶೇಖರ, ಕಳಾವತಿ ಮತ್ತು ತಮಾಲಿಕೆ—ಇವು ಎರಡರಲ್ಲಿಯೂ ಸಮಾನವಾಗಿರುವ ಹೆಸರು. ಈಷತ್ ವ್ಯತ್ಯಾಸದೊಡನೆ ಅಲ್ಲಿಯ ಕೆಲವು ಹೆಸರುಗಳು ಇಲ್ಲಿ ಬರುತ್ತವೆ: ಅಲ್ಲಿಯ ಚಿಂತಾಮಣಿ, ಇಲ್ಲಿಯ ಚೂಡಾಮಣಿ; ಅಲ್ಲಿಯ ಕಂದರ್ಪಕೇತು ಇಲ್ಲಿಯ ಕಂದರ್ಪದೇವ. ಉಳಿದ ಹೆಸರು ಎರಡರಲ್ಲಿಯೂ ಬೇರೆ ಬೇರೆಯಾಗಿವೆ: ಅಲ್ಲಿ ಅನಂಗವತಿಯಾದರೆ ಇಲ್ಲಿ ವಿಭ್ರಮಲೇಖೆ.

(3) ನಾಯಕ ನಾಯಿಕೆಯರ ಪರಸ್ಪರ ಪರಿಚಯ ವಿರಹಗಳು ಸ್ವಪ್ನದಿಂದ ಫಲಿಸುತ್ತವೆ.

(4) ಎರಡರಲ್ಲಿಯೂ ನಾಯಕರು ನಾಯಿಕೆಯರನ್ನು ಹುಡುಕಿಕೊಂಡು ಹೋಗುತ್ತಾರೆ.

(5) ನಾಯಿಕೆಯ ವೃತ್ತಾಂತ ಶುಕಶಾರಿಕೆಯರಿಂದ ತಿಳಿಯುತ್ತದೆ. ಆದರೆ ಗಿಳಿಗಳ ವಾಸದ ಮರ ಅಲ್ಲಿ ಪನ್ನೇರಳೆ, ಇಲ್ಲಿ ಬಾಲಚೂತ. ಲೀಲಾವತಿಯ ಗಿಳಿಗಳ ಹೆಸರು ವಸಂತದೋಹಳಿ ಮತ್ತು ಚೂತಪ್ರಿಯ.

---

[1] *Lilavai of Kouhala Ed.* by Dr A. N. Upadhye-Pp. 38-39.

(6) ಎರಡು ಕಡೆಯೂ ಸ್ವಯಂವರ ಏರ್ಪಾಡಾಗುತ್ತದೆ; ಆದರೆ ನಾಯಿಕೆ
ಗೊಪ್ಪುವ ವರ ಸಿಗುವುದಿಲ್ಲ.

(7) ನಾಯಕರ ವಿರಹಕಾಲದ ವ್ಯಾಪಾರವೆಲ್ಲ ವಿಂಧ್ಯಾಟವಿಯಲ್ಲಿ ನಡೆಯು
ತ್ತದೆ.

ಉಳಿದ ಪ್ರಸಂಗಗಳಲ್ಲಿ ವಾಸವದತ್ತೆಯ ಕಥೆ ತೀರ ಭಿನ್ನವಾಗಿದೆ. ಸ್ವಯಂವರ
ಸಮಯದಲ್ಲಿ ತನಗಿಷ್ಟರಾದ ರಾಜರು ಕಣ್ಣಿಗೆ ಬೀಳದೆ, ನಿರಾಶಳಾಗಿ ಹಿಂದಿರುಗಿ,
ಮಲಗಿಕೊಂಡಿದ್ದಾಗ ಕನಸಿನಲ್ಲಿ ತನಗನುರೂಪನಾದ ವರ ಕಾಣಿಸಿಕೊಳ್ಳುತ್ತಾನೆ.
ರಹವೇದನೆಯಿಂದ ಪರಿತಪಿಸುತ್ತಿದ್ದಾಗ ಸಖಿಯರ ನಿವೇದನೆಯ ಮೇರೆಗೆ ಅವಳು
ತಾನು ಕನಸಿನಲ್ಲಿ ಕಂಡ ಪುರುಷನ ಚಿತ್ರವನ್ನು ರೇಖಿಸಿ, ತಮಾಲಿಕೆಯ ಮೂಲಕ
ಕಂದರ್ಪಕೇತುವಿನ ಬಳಿಗೆ ಕಳಿಸುತ್ತಾಳೆ. ಕಂದರ್ಪಕೇತು ತಮಾಲಿಕೆಯೊಡನೆ
ಕುಸುಮಪುರಕ್ಕೆ ಬರುತ್ತಾನೆ. ಮಾರನೆಯ ದಿನ ಪುಷ್ಪಕೇತುವಿನೊಡನೆ ವಾಸವ
ದತ್ತೆಯ ಲಗ್ನ ಏರ್ಪಾಡಾಗಿದೆಯೆಂದು ತಿಳಿದೊಡನೆಯೆ, ಅವನು ತನ್ನ ಪ್ರೇಯಸಿಯ
ಸಮೇತ ಮನೋಜವ ಎಂಬ ಕುದುರೆಯೇರಿ ವಿಂಧ್ಯಾಟವಿ ಸೇರುತ್ತಾನೆ. ಕಂದಮೂಲ
ಫಲಾನ್ವೇಷಣೆಯಲ್ಲಿದ್ದಾಗ ತನ್ನ ತಂದೆಯ ಸೈನ್ಯ ವಾಸವದತ್ತೆಯ ಕಣ್ಣಿಗೆ ಬೀಳು
ತ್ತದೆ. ಅವಳು ಮುಂದಿನ ಅಪಾಯವನ್ನು ಕುರಿತು ಯೋಚಿಸುತ್ತಿರುವಷ್ಟರಲ್ಲಿ, ಆ
ಸೈನ್ಯಕ್ಕೂ ಕಿರಾತ ಸೈನ್ಯಕ್ಕೂ ಯುದ್ಧ ಸಂಭವಿಸುತ್ತದೆ. ಋಷಿಶಾಪ ತಗುಲಿದ
ವಾಸವದತ್ತೆ ಶಿಲಾಮೂರ್ತಿಯಾಗುತ್ತಾಳೆ. ಸಮಯ ಸನ್ನಿಹಿತವಾಗಿ ಕಂದರ್ಪಕೇತು
ಆ ಮೂರ್ತಿಯನ್ನಪ್ಪಿಕೊಂಡಾಗ ವಾಸವದತ್ತೆ ಜೀವಂತವಾಗುತ್ತಾಳೆ.

ಪ್ರಣಯಿಗಳ ಸಮಾಗಮವಿಧಾನ, ಪ್ರಣಯಮಾರ್ಗದಲ್ಲೊದಗಿದ ವಿಘ್ನಬಾಧೆ
ಗಳು ಮತ್ತು ಅವುಗಳ ಪರಿಹಾರೋಪಾಯಗಳ ವಿವರಗಳಲ್ಲಿ ಹಲವು ವ್ಯತ್ಯಾಸಗಳಿ
ದ್ದರೂ, ಕಾವ್ಯೋದ್ದೇಶ ಮತ್ತು ಕಥೆಯ ವಾಸ್ತುಶಿಲ್ಪದ ಸ್ಥೂಲಚಿತ್ರ ಎರಡರಲ್ಲಿಯೂ
ಹುಮಟ್ಟಿಗೆ ಅಭಿನ್ನ ಎಂದು ಹೇಳಬಹುದು. ಈ ದೃಷ್ಟಿಯಿಂದ ಲೀಲಾವತಿಯು
ಪ್ರತ್ಯೇಕವಾಗಿ ನಿಲ್ಲುತ್ತದೆ. ಅಷ್ಟೇ ಅಲ್ಲ, ಕುತೂಹಲನ ಕೃತಿಗಿಂತ ಸುಬಂಧುವಿನ
ಕೃತಿ ಕರ್ಣಾಟಕದಲ್ಲಿ ತುಂಬ ಪ್ರಸಿದ್ಧಿ ಪಡೆದಿರುವುದರಿಂದ ನೇಮಿಚಂದ್ರ ಅದರಿಂದ
ಸ್ಫೂರ್ತಿ ಪಡೆದಿದ್ದಾನೆನ್ನುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಕನ್ನಡ ನಾಡಿನಲ್ಲಿ ಹುಟ್ಟಿ
ಳೆದ ತ್ರಿವಿಕ್ರಮಭಟ್ಟನ ನಳಚಂಪೂ ಕೃತಿ[1] ವಾಸವದತ್ತೆಗೆ ಅಪಾರ ಋಣಿಯಾಗಿದೆ
ಯೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಕನ್ನಡ ನಾಡಿನಲ್ಲಿ ಅದರ ಜನ
ಪ್ರಿಯತೆಯನ್ನು ಘೋಷಿಸುವ ಮತ್ತೊಂದು ಸಾಕ್ಷಿಯೂ ಉಂಟು. ಇಷ್ಟು ಜನ
ಪ್ರಿಯನಾದ ವ್ಯಕ್ತಿ ಕನ್ನಡ ಭಾಷೆಯ ಶಾಸನದಲ್ಲಿ ಉಲ್ಲೇಖಗೊಂಡಿರುವಂತೆ
ೀರೆಲ್ಲಿಯೂ ಕಾಣುವುದಿಲ್ಲ. ಕ್ರಿ. ಶ. 1168 ರ ಬಲಗಾಮಿ[2] ಶಾಸನದಲ್ಲಿ ವಾಮ
ಕ್ತಿಯತಿಯ ಕೀರ್ತಿಯನ್ನು ಪ್ರಶಂಸಿಸುವಾಗ ಅವನು ಕಾವ್ಯಶಕ್ತಿಯಲ್ಲಿ ಸುಬಂಧುವಿ
ನಂತೆ ಎಂಬ ಹೋಲಿಕೆ ಬರುತ್ತದೆ.

---

[1] *History of Classical Sanskrit literature* by Krishnamachariar-Introd
p. 39-40.

[2] *Mysore Inscriptions-Ed.* by Rice-P. iii.

ಲೀಲಾವತಿ ವಾಸವದತ್ತೆಯನ್ನನುಸರಿಸಿಲ್ಲ. ಇವೆರಡಕ್ಕೂ ಮೂಲವೆನ್ನ ಬಹುದಾದ ಮತ್ತೊಂದು ಪ್ರಾಚೀನ ಕೃತಿ ಇದ್ದಿರಬೇಕೆಂದು ಶ್ರೀಮಾನ್ ಎಂ. ಕೃಷ್ಣಮಾಚಾರಿಯರ್ ಹೇಳುತ್ತಾರೆ. ಪತಂಜಲಿ ವಾಸವದತ್ತ ಎಂಬ ಆಖ್ಯಾಯಿಕೆ ಯನ್ನು ಹೆಸರಿಸುತ್ತಾನೆಂದೂ ಬಾಣ ಮತ್ತೆ ಆ ಕೃತಿಯನ್ನು ಉಲ್ಲೇಖಿಸುತ್ತಾನೆಂದೂ, ಭೋಜ ತನ್ನ ಶೃಂಗಾರಪ್ರಕಾಶದಲ್ಲಿ ಹಳೆಯದಾದ ಲೀಲಾವತೀ ಆಖ್ಯಾಯಿಕೆಯ ಕಡೆಗೆ ಬೆರಳು ತೋರುತ್ತಾನೆಂದೂ, ನೇಮಿಚಂದ್ರ ಕವಿರಾಜಕುಂಜರನ ಕನ್ನಡ ಕಾವ್ಯಕ್ಕೂ ಅದಕ್ಕೂ ಸಂಬಂಧವಿರಬೇಕೆಂದೂ, ಸುಬಂಧುವಿಗೂ ಉಪಯುಕ್ತ ಕೃತಿ ಆಧಾರವಿರಬೇಕೆಂದೂ ಅವರು ಅಭಿಪ್ರಾಯಪಡುತ್ತಾರೆ.[1] ಆದರೆ ಆ ಕೃತಿ ದೊರೆತಿಲ್ಲ ವಾದ್ದರಿಂದ ಇಷ್ಟೇ ಸರಿಯೆಂದು ನಿರ್ಣಯಿಸುವುದು ಕಷ್ಟವಾಗುತ್ತದೆ. ಸದ್ಯಕ್ಕೆ ಬಾಹ್ಯಾಂತರ ಆಧಾರಗಳಿಂದ ಸುಬಂಧುವಿನ ಕೃತಿ ನೇಮಿಚಂದ್ರನ ಕಣ್ಮುಂದಿತ್ತೆಂದು ಧಾರಾಳವಾಗಿ ಒಪ್ಪಿಕೊಳ್ಳಬಹುದು.

ಈ ಎರಡು ಕೃತಿಗಳ ಜೊತೆಗೆ ನೇಮಿಚಂದ್ರ ಇನ್ನೂ ಅನೇಕ ಗ್ರಂಥಗಳನ್ನು ನೋಡಿರಬೇಕು. ಮಾಯಾಭುಜಂಗನ ಪ್ರಕರಣ ರಾಜಶೇಖರ (900)ನ ಕರ್ಪೂರ ಮಂಜರಿಯಲ್ಲಿ ಬರುವ ಭೈರವಾನಂದನನ್ನು ನೆನಪಿಗೆ ತರುತ್ತದೆ. ಕರ್ಪೂರ ಮಂಜರಿ ಪ್ರಾಕೃತದಲ್ಲಿ ರಚಿತವಾದ ನಾಲ್ಕು ಅಂಕಗಳ ಸಟ್ಟಕ. ಚಂಡಪಾಲ ಮತ್ತು ಕುಂತಳ ರಾಜಕುಮಾರಿ ಕರ್ಪೂರ ಮಂಜರಿಯ ಪ್ರಣಯ ಕಥೆ. ಮಹಾರಾಣಿ ವಿಭ್ರಮಲೇಖೆಯ ಮಾತ್ಸರ್ಯದಿಂದಾಗಿ ಪ್ರಣಯಕ್ಕೆ ಅಡಚಣೆಯೊದಗಿ ಕೊನೆಗೆ ನಿವಾರಣೆಯಾಗುತ್ತದೆ. ಒಂದನೆಯ ಅಂಕದಲ್ಲಿಯೇ ಮಹಾಮಂತ್ರವಾದಿ ಭೈರವಾನಂದ ಬಂದು ತನ್ನ ಯೋಗಶಕ್ತಿಯನ್ನು ಪ್ರದರ್ಶಿಸುತ್ತಾನೆ. ಅವನು ಚಂದ್ರನನ್ನು ಭೂಮಿಗೆ ತರಬಲ್ಲ, ಸೂರ್ಯನ ರಥವನ್ನು ನಿಲ್ಲಿಸಬಲ್ಲ, ವಿದ್ಯಾಧರರನ್ನೂ ಶಿವಗಣಗಳನ್ನೂ ತಡೆ ಹಿಡಿಯ ಬಲ್ಲ. ಅವನು ಕರ್ಪೂರ ಮಂಜರಿಯನ್ನು ಕರೆತಂದು ರಾಜರಾಣಿಯರ ಮುಂದೆ ನಿಲ್ಲಿಸುತ್ತಾನೆ. ಕಥೆ ಒಂದು ದೃಷ್ಟಿಯಿಂದ ಭೈರವಾನಂದನಿಂದ ಪ್ರಾರಂಭವಾಗಿ ಅವನಿಂದಲೇ ಮುಕ್ತಾಯದ ಕಡೆಗೆ ಹೊರಳುತ್ತದೆ. ಮಹಾಭುಜಂಗನ ಜೋಗಿನಿ ಸ್ವಪ್ನದಲ್ಲಿ ಕಂಡ ಸುಂದರಿಯನ್ನು ನಭೋವಿತಾನದಲ್ಲಿ ಕಂದರ್ಪದೇವನಿಗೆ ತೋರಿಸಿ ಆ ಕನ್ಯೆ ವಾಸ್ತವವ್ಯಕ್ತಿಯೆಂಬುದನ್ನು ಖಚಿತಪಡಿಸುತ್ತಾಳೆ. ಅನಂತರ ರಾಜಕುಮಾರ ಕನ್ಯಾನ್ವೇಷಣೆಗೆ ಹೊರಡುತ್ತಾನೆ.

ವಿಕ್ರಮೋರ್ವಶೀಯದಂತೆ ಇಲ್ಲಿಯ ಪ್ರಣಯಿಗಳೂ ಮೂರುಸಾರಿ ಅಗಲು ತ್ತಾರೆ; ಅಲ್ಲಿಯಂತೆ ಇಲ್ಲಿಯೂ ರಾಣಿ ಗಂಡ ಪರಾಂಗನಾರತನೆಂಬ ತಪ್ಪಿನಿಂ ಯಿಂದ, ವಿವೇಕಸಹನೆಗಳಿಲ್ಲದೆ, ಕುಪಿತೆಯಾಗಿ ಲತೆಯಾಗುತ್ತಾಳೆ; ಗಂಡ ತಪ್ಪು ಕಂಡಾಗ ಮತ್ತೆ ಮಾನವಿಯಾಗುತ್ತಾಳೆ. ಹೀಗೆಯೇ ರತ್ನಾವಳಿ ನಾಟಕವೂ ಕನ್ನಡ ಕಾವ್ಯದಮೇಲೆ ಪ್ರಭಾವಬೀರದೆ ಹೋಗಿಲ್ಲ.

ಹೀಗೆ ಕಥೆ ಕಲೆಗಳಲ್ಲಿ, ಸತ್ವಸ್ಫೂರ್ತಿಗಳಲ್ಲಿ, ಭಾವಭಾವಗಳಲ್ಲಿ, ಕೊನೆ ಧ್ಯೇಯೋದ್ದೇಶ ಸಾಧನೆಗಳಲ್ಲಿ ನೇಮಿಚಂದ್ರ ಬಹುಮಟ್ಟಿಗೆ ಪೂರ್ವಕವಿಗಳ

[1] *History of Classical Sanskrit literature* by Krishnamachariar-Introd P. 44

ಮೇಲೆ ಬರುವ ಪೂಜೆಪುರಸ್ಕಾರಗಳು ಹುಳಿ ಉಪ್ಪಿಲ್ಲದೆ, ಭಕ್ತಿಯ ಆವೇಶವಿಲ್ಲದೆ, ಜಿನಭಕ್ತರಿಗೂ ಚಿಟ್ಟುಹಿಡಿಸುವಂತಿವೆ. ಶೃಂಗಾರದ ಕೆಸರಿನಲ್ಲಿ ಅವೆಲ್ಲವೂ ಹೂತು ಹೋಗುತ್ತವೆ. ಔಚಿತ್ಯಪ್ರಜ್ಞೆಯಿಲ್ಲದ ವರ್ಣನೆಯ ಕಗ್ಗಾಡಿನಲ್ಲಿ ಕ್ರಿಯೆ ದಾರಿ ತಪ್ಪುತ್ತದೆ, ಪಾತ್ರಗಳು ಕಣ್ಮರೆಯಾಗುತ್ತವೆ. ಓದುಗ ದಿಗ್ಭ್ರಮೆ ಹೊಂದುತ್ತಾನೆ.

## ೬. ನೇಮಿನಾಥಪುರಾಣ

ನೇಮಿಚಂದ್ರನ ಸಮಗ್ರ ವ್ಯಕ್ತಿತ್ವ, ಮತ್ತು ಅವನ ಕಲಾಪ್ರತಿಭೆಯ ಮಹಿಮೆ ಸ್ಪಷ್ಟವಾಗಿ ಕಾಣ್ಬೇಕಾದರೆ ಅವನ ಮತ್ತೊಂದು ಕೃತಿಯ ಕಡೆಗೆ ಗಮನ ಹರಿಸಬೇಕು. ಬಾಣಸುಬಂಧುಗಳನ್ನು ಮಾದರಿಯಾಗಿಟ್ಟುಕೊಂಡು ತರುಣವಯಸ್ಸಿನಲ್ಲಿ ಶೃಂಗಾರಕಾವ್ಯವನ್ನು ರಚಿಸುವಂಥ ಕವಿ ದೈಹಿಕಮೂಲವಾದ ವಿಕಾರಜನ್ಯವಾದ ವ್ಯಾಮೋಹ ಚಾಪಲ್ಯಗಳಿಗೆ ವಶವಾಗುವುದು ಸಹಜ. ಸಂಯಮರಹಿತವಾದ ಶೃಂಗಾರ ಕಾಮದ ಕೆಸರಾಗುತ್ತದೆ. ಶೃಂಗಾರವೇ ಜೀವನದ ಸರ್ವಸ್ವವೆಂದು ಅದರಲ್ಲಿಯೇ ನಿಮಗ್ನನಾಗಿರುವ ಕವಿಯ ಮನಸ್ಸಿನಲ್ಲಿ ಅದೊಂದು ರೋಗವಾಗಿ ಪರಿಣಮಿಸುತ್ತದೆ. ಕಾಮಾಲೆಯ ಕಣ್ಣಿಗೆ ಲೋಕವೆಲ್ಲ ಹಳದಿಯಾಗಿ ಕಾಣುವಂತೆ, ಅವನ ಕಣ್ಣಿಗೆ ಸುತ್ತಮುತ್ತಣ ಜಗತ್ತಿನಲ್ಲೆಲ್ಲ ಕಾಮವಿಕಾರವೇ ಕಾಣುತ್ತದೆ; ಅದೊಂದು ಬಗೆಯ ತೆವಲಾಗಿ ತೋಳಕೆಯಾಗಿ ಚಿತ್ತವಿಕಾರವಾಗಿ ಹುಯಿಲೆಬ್ಬಿಸುತ್ತದೆ. ಉನ್ಮತ್ತ ಕಾಮಿಯ ದೃಷ್ಟಿಯಿಂದ ಮಾನ ಮರ್ಯಾದೆ ನಯ ವಿನಯ ನೀತಿ ಧರ್ಮ ಸಭ್ಯತೆ ಔಚಿತ್ಯಗಳು ಮರೆಯಾಗುತ್ತವೆ; ಘನತೆ ಉದಾತ್ತತೆಗಳು ಮಾಯವಾಗುತ್ತವೆ; ಅಶ್ಲೀಲಗ್ರಾಮ್ಯತೆಗಳು ಅವನ ನಡೆನುಡಿಗಳನ್ನು ರೂಪಿಸುತ್ತವೆ. ಲೀಲಾವತಿಯಲ್ಲಿ ಕವಿಯ ಪೂರ್ವವಯಸ್ಸಿನ ಈ ದೌರ್ಬಲ್ಯಗಳೆಲ್ಲ ಘನೀಭೂತವಾಗಿರುವುದನ್ನು ನೋಡಬಹುದು. ಯೌವನದ ಪೊಗರು ಮುಸುಳಿ, ಕಾಮದ ಕಿಚ್ಚು ಆರಿ, ಮೈಮನಗಳಲ್ಲಿ ಸಂಯಮದ ಗಾಳಿ ತೀಡಿದಾಗ ಕವಿಯ ಧ್ಯೇಯಧೋರಣೆಗಳಲ್ಲಿ ಮಾರ್ಪಾಡು ತಲೆದೋರುತ್ತದೆ; ಈ ಮಾರ್ಪಾಟಿನ ಪರಿಣಾಮ ಅವನ ಕೃತಿಗಳಲ್ಲಿ ಗೋಚರವಾಗುತ್ತದೆ. ನೇಮಿನಾಥಪುರಾಣ ಕವಿಯ ಜಾಗ್ರತಚೇತನವನ್ನೂ ಕಳಿತಮನಸ್ಸನ್ನೂ ಪರಿಶುದ್ಧ ಜೀವನವನ್ನೂ ಪ್ರತಿಬಿಂಬಿಸುತ್ತದೆ. ಇಲ್ಲಿ ಪಾಂಡಿತ್ಯದ ಸೋಗು ಮರೆಯಾಗಿ ಕವಿಚೇತನ ದಳದಳವಾಗಿ ಅರಳುತ್ತದೆ; ಕಲೆಯ ಕಂಪು ಅಲೆಯಲೆಯಾಗಿ ಹರಡುತ್ತದೆ. ಈ ಎರಡು ಕಾವ್ಯಗಳಲ್ಲಿ ಕವಿಯ ಆತ್ಮವಿಕಸನದ ಕ್ರಮಾನುಗುಣವಾದ ಗತಿಯನ್ನು, ಮಾನವೀಯ ಶೀಲದ ಪ್ರಗತಿಯನ್ನು, ಬುದ್ಧಿಪ್ರತಿಭೆಗಳ ಪ್ರವೃದ್ಧಿಯನ್ನು ಸ್ಪಷ್ಟವಾಗಿ ಗುರುತಿಸಬಹುದು.

ನೇಮಿಚಂದ್ರ ಪ್ರಥಮತಃ ಸಂಪ್ರದಾಯಶರಣ. ಪೂರ್ವಕವಿಗಳ ಮಾರ್ಗವನ್ನನುಸರಿಸಿ, ಹಿಂದಿನ ಜೈನಪುರಾಣಗಳ ಮಾದರಿಯಲ್ಲಿ ಇಪ್ಪತ್ತೆರಡನೆಯ ತೀರ್ಥಂಕರನ ಚರಿತ್ರೆಯನ್ನು ರಚಿಸುತ್ತಾನೆ. ಉತ್ತರಪುರಾಣ, ಗುಣವರ್ಮನ ಹರಿವಂಶ, ಚಾವುಂಡರಾಯಪುರಾಣ ಮತ್ತು ಕರ್ಣಪಾರ್ಯನ ನೇಮಿನಾಥ ಪುರಾಣಗಳಲ್ಲಿ ಮೊದಲೇ ಸಿದ್ಧವಾಗಿದ್ದ ವಸ್ತುವನ್ನು ಬಳಸಿಕೊಂಡರೂ ಅದು ಅವನ

ಪ್ರತಿಭೆಯ ರಾಸಾಯನಿಕ ಕೋಶವನ್ನು ಹಾದು ಬರುವಾಗ ನವೀನ ರೂಪಸ್ವರೂಪಗಳನ್ನು ಪಡೆಯುತ್ತದೆ. ಅವನ ಸಂವಿಧಾನ ಕೌಶಲ, ಪಾತ್ರನಿರ್ಮಾಣಸಾಮರ್ಥ್ಯ, ಓಜೋಪ್ರಸಾದ ಸಮ್ಮಿಶ್ರವಾದ ಮಧುರಶೈಲಿ, ಕೃತಕ ಚಮತ್ಕಾರವಿಲ್ಲದ ರಸಾನುಗುಣ್ಯವಾದ ಪದಬಂಧ, ಸಂದರ್ಭೋಚಿತವಾದ ಗಂಭೀರಶಯ್ಯೆ, ಒಟ್ಟಿನಲ್ಲಿ ಅವನ ಕಲೆಗಾರಿಕೆ ಈ ಕಾವ್ಯದಲ್ಲಿ ಅಭಿವ್ಯಕ್ತಗೊಂಡಿವೆ. ಭವಾವಳಿಯ ಚಕ್ರವ್ಯೂಹವನ್ನು ಭೇದಿಸಿದ ನಂತರ ಕವಿಪ್ರತಿಭೆ ಪ್ರಕಾಶಮಾನವಾಗಿ ಬೆಳಗುತ್ತಿದ್ದು, ಇದ್ದಕ್ಕಿದ್ದಂತೆ ನಂದಿಹೋಗುತ್ತದೆ. ಪ್ರಾಯಶಃ ಕವಿ ತೀರಿಕೊಂಡದ್ದರಿಂದಲೋ ಏನೋ ಕಾವ್ಯ ಅರ್ಧದಲ್ಲಿಯೇ ನಿಂತುಹೋಗುತ್ತದೆ. ವ್ಯಾಸಂಗಾನುಕೂಲಕ್ಕಾಗಿ ಆ ಕಾವ್ಯ ಕಥೆಯನ್ನಿಲ್ಲಿ ಸಂಗ್ರಹಿಸಿಕೊಟ್ಟಿದೆ:

ಸುಗಂಧಿಳ ವಿಷಯಕ್ಕೆ ಭೂಷಣವಾಗಿ ಸಿಂಹಪುರವೆಂಬ ನಗರ. ಆ ನಗರದ ದೊರೆ ಅರ್ಹದ್ದಾಸ; ಜಿನದತ್ತೆ ಅವನ ಕುಲವಧು. ಅನೇಕ ವ್ರತಾಚರಣೆ ಋಷ್ಯಾಶೀರ್ವಾದಗಳ ಫಲವಾಗಿ ಅವರಿಗೆ ಅಪರಾಜಿತನೆಂಬ ಮಗ ಹುಟ್ಟಿದನು. ಪ್ರಾಪ್ತವಯಸ್ಕನಾದ ಮಗನಿಗೆ ತಂದೆ ಪ್ರೀತಿಮತಿಯೆಂಬ ಕನ್ಯೆಯನ್ನು ತಂದು ಮದುವೆಮಾಡಿ, ಪಟ್ಟಕಟ್ಟಿದ ಸಮಯದಲ್ಲಿ ವಿಮಲವಾಹನಜಿನನ ಸಮವಸರಣ ಊರಹೊರಗೆ ಗೋಚರಿಸಿತು. ಅರ್ಹದ್ದಾಸ ಜಿನಬೋಧೆಯಿಂದ ದೀಕ್ಷೆ ಪಡೆದು ಮೋಕ್ಷ ಹೊಂದಿದನು. ದುಃಖಸಂತಪ್ತನಾದ ಮಗ ಉಪವಾಸವ್ರತಧಾರಿಯಾಗಿ ದೇಹಾವಸಾನಕ್ಕೆ ಹೆದರದಿದ್ದಾಗ ಕುಬೇರ ಇಂದ್ರಾಜ್ಞೆಯ ಮೇರೆಗೆ ಅರ್ಹದ್ದಾಸನನ್ನು ತೋರಿಸಿ ಸಮಾಧಾನ ಪಡಿಸಿದನು.

ಒಂದು ದಿನ ಅಪರಾಜಿತ ಜಿನಾರಾಧನೆಯಲ್ಲಿ ತೊಡಗಿದ್ದಾಗ ಚಾರಣಋಷಿಗಳು ಕಾಣಿಸಿಕೊಂಡರು. ಆ ಕೂಡಲೇ ಮೊಳೆತ ಅನಿಮಿತ್ತ ಸ್ನೇಹಕ್ಕೆ ಕಾರಣವೇನಿರಬಹುದೆಂದು ಅವರನ್ನವನು ಪ್ರಶ್ನಿಸಿದನು. ಅವರಲ್ಲಿ ಹಿರಿಯರಾದವರು ಪೂರ್ವ ಭವದ ಕಥೆ ಹೇಳಿದರು: ಗಂಧಿಲದೇಶದಲ್ಲಿ ಸೂರ್ಯಪ್ರಭಪುರ. ಅಲ್ಲಿಯ ದೊರೆ ಸೂರ್ಯಪ್ರಭ; ಅವನ ಹೆಂಡತಿ ಧಾರಿಣಿ. ಚಿಂತಾಗತಿ, ಮನೋಗತಿ ಮತ್ತು ಚಪಲಗತಿಯರು ಅವಳ ಮಕ್ಕಳು. ಅರಿಂದಮಪುರದ ರಾಜ ಅರಿಂಜಯ ಗತಿ ಯುದ್ಧ ಏರ್ಪಡಿಸಿ, ಆ ಯುದ್ಧದಲ್ಲಿ ಗೆದ್ದವನಿಗೆ ತನ್ನ ಮಗಳು ವಿಳಾಸವತಿಯನ್ನು ಮದುವೆಮಾಡಿಕೊಡುವುದಾಗಿ ಘೋಷಿಸಿದನು. ಚಿಂತಾಗತಿ ಆ ಸ್ಪರ್ಧೆಯಲ್ಲಿ ಗೆದ್ದು, ಸೋತ ತಮ್ಮಂದಿರಲ್ಲೊಬ್ಬನಿಗೆ ಅವಳನ್ನು ಮದುವೆಮಾಡಲು ಪ್ರಯತ್ನಿಸಿದನು. ಗೆದ್ದವನನ್ನಲ್ಲದೆ ಬೇರೆಯವರನ್ನು ಮದುವೆಯಾಗುವುದಿಲ್ಲವೆಂದು ಹೇಳಿ, ಅವಳು ದೀಕ್ಷೆ ಪಡೆದಳು. ಚಿಂತಾಗತಿಯೂ ಜಿನದೀಕ್ಷೆಗೊಂಡು, ಮಹೇಂದ್ರ ಕಲ್ಪದಲ್ಲಿ ಸಾಮಾನಿಕ ನಿಳಿಂಪನಾಗಿ ಹುಟ್ಟಿ, ಕೆಲವು ದಿನವಿದ್ದು ಅಪರಾಜಿತನಾಗಿ ಹುಟ್ಟಿದನು. ತಾವು ಚಿಂತಾಗತಿಯ ತಮ್ಮಂದಿರೆಂದು ತಿಳಿಸಿ, ತಮ್ಮ ಹಿಂದಿನ ಜನ್ಮಗಳನ್ನು (ವಿಂಧ್ಯಕ—ವಾಗುರೆ, ಇಭಕೇತು—ಕಮಳಪ್ರಭೆ, ಧೀವರ—ಶ್ರೀದೇವ—ವಿಮಲಪ್ರಭದೇವ—ಬ್ರತಪ್ರಭಾಂಕದೇವ) ವಿವರಿಸಿದರು.

ತನ್ನ ಆಯುಸ್ಸಿನ ಅವಧಿ ಒಂದೇ ಒಂದು ತಿಂಗಳೆಂದು ಮುನಿಮುಖದಿಂದರಿತ ಅಪರಾಜಿತ ಮಗನಿಗೆ ಪಟ್ಟಕಟ್ಟಿ, ದೀಕ್ಷೆ ಪಡೆದು, ದೇಹತ್ಯಾಗಮಾಡಿದನಂತರ ಅಚ್ಯುತೇಂದ್ರನಾಗಿ ಹುಟ್ಟಿದನು. ಆಮೇಲೆ ಸುಪ್ರತಿಷ್ಠನಾಗಿ ಜನ್ಮಧಾರಣೆ ಮಾಡಿ, ಕಾಲಾ

ನಂತರದಲ್ಲಿ ಅಹಮಿಂದ್ರನಾಗಿ, ಕೊನೆಗೆ ಹರಿವಂಶದ ಸಮುದ್ರವಿಜಯನಿಗೆ ನೇಮಿನಾಥನಾಗಿ ಜನಿಸಿದನು.

ಭರತಕ್ಷೇತ್ರದ ಕೃತಾರ್ಥ ವಿಷಯದಲ್ಲಿ ಶೌರ್ಯಪುರವೆಂಬ ನಗರ. ಅಲ್ಲಿಯ ದೊರೆ ಶೂರವೀರ; ಅವನ ಪತ್ನಿ ಧಾರಿಣಿ. ಅಂಧಕವೃಷ್ಣಿ ಮತ್ತು ನರಪತಿವೃಷ್ಣಿ ಅವರ ಮಕ್ಕಳು; ಸುಭದ್ರೆ ಮತ್ತು ಪದ್ಮಾವತಿಯರು ಕ್ರಮವಾಗಿ ಅವರ ಪತ್ನಿಯರು. ಅಂಧಕವೃಷ್ಣಿಗೆ ಸಮುದ್ರವಿಜಯ ಜ್ಯೇಷ್ಠನಾಗಿ ವಸುದೇವ ಕಿರಿಯವನಾಗಿ ಕೊಂತಿ ಮಾದ್ರಿಯರೂ ಸೇರಿ ಹನ್ನೆರಡು ಮಂದಿ ಮಕ್ಕಳು. ಉಗ್ರಸೇನ ಮಹಾಸೇನ ದೇವಸೇನ ಗಾಂಧಾರಿಯರು ನರಪತಿವೃಷ್ಣಿಯ ಮಕ್ಕಳು.

ಹಸ್ತಿನಾವತಿಯ ಪ್ರಸಿದ್ಧವಾದ ಕುರುವಂಶದಲ್ಲಿ ಪರಾಶರಸತ್ಯವತಿಯರಿಗೆ ಯಶೋವಲ್ಲಭನಾದ ವ್ಯಾಸ ಮಗ. ವ್ಯಾಸ ಸುಭದ್ರೆಯನ್ನು ಮದುವೆಯಾಗಿ ಧೃತರಾಷ್ಟ್ರ ಪಾಂಡು ವಿದುರರೆಂಬ ಮಕ್ಕಳನ್ನು ಪಡೆದನು. ಜಗದ್ಗದಿತವಾದ ಕೊಂತಿಯ ರೂಪಲಾವಣ್ಯಗಳಿಗೆ ಮಾರುಹೋದ ಪಾಂಡು ವಿರಹವೇದನೆಯಿಂದ ವಸಂತ ವಾಸಭವನದ ಉದ್ಯಾನದಲ್ಲಿ ಸುತ್ತಾಡುತ್ತಿದ್ದನು. ಅಲ್ಲಿ ವಜ್ರಮಾಳಿ ಮನೋಹರಿಯರೆಂಬ ವಿದ್ಯಾಧರ ದಂಪತಿಗಳು ಬಿಟ್ಟುಹೋಗಿದ್ದ ಕಾಮಮುದ್ರಿಕೆ ಸಿಕ್ಕಿತು. ಅದರ ಸಹಾಯದಿಂದ ಕೊಂತಿಯ ಅಂತಃಪುರವನ್ನು ಪ್ರವೇಶಿಸಿ ಅವಳೊಡನೆ ಕೂಡಿದನು. ಅವಳಿಗೆ ಗರ್ಭೋದಯವಾಯಿತು. ಜನಾಪವಾದ ಭೀತಿಯಿಂದ ಆ ಮಗುವನ್ನು ಹೊನ್ನ ಮಂದಸಿನಲ್ಲಿಟ್ಟು ಯಮುನೆಯ ಮಡುವಿನಲ್ಲಿ ಬಿಟ್ಟಳು. ಆ ಪೆಟ್ಟಿಗೆ ಆದಿತ್ಯನೆಂಬ ದೊರೆಗೆ ಸಿಕ್ಕಲು, ಅವನು ಮಗುವನ್ನು ತನ್ನ ಹೆಂಡತಿ ರಾಧೆಗೊಪ್ಪಿಸಿದನು. ಆ ಮಗು ಕರ್ಣ—ರಾಧೇಯನಾಗಿ ಪ್ರಸಿದ್ಧಿ ಪಡೆದನು.

ತನ್ನ ಮಗಳ ವಿರಹವೇದನೆಯ ಗುಟ್ಟನ್ನರಿತ ಅಂಧಕವೃಷ್ಣಿ ಪಾಂಡುವಿಗೆ ತನ್ನಿಬ್ಬರು ಮಕ್ಕಳನ್ನು ಮದುವೆಮಾಡಿಕೊಟ್ಟನು. ಕುಂತಿ ಮಾದ್ರಿಯರಲ್ಲಿ ಧರ್ಮರಾಜ ಭೀಮಾರ್ಜುನ ನಕುಲಸಹದೇವರು ಜನಿಸಿದರು. ಧೃತರಾಷ್ಟ್ರ ನರಪತಿವೃಷ್ಣಿಯ ಮಗಳು ಗಾಂಧಾರಿಯನ್ನು ಮದುವೆಯಾಗಿ ದುರ್ಯೋಧನ ದುಶ್ಶಾಸನಾದಿ ನೂರ್ವರು ಮಕ್ಕಳನ್ನು ಪಡೆದನು. ಈ ವೈವಾಹಿಕ ಸಂಬಂಧದಿಂದ ಎರಡು ಪ್ರಸಿದ್ಧ ವಂಶಗಳು ಒಂದುಗೂಡಿದುವು.

ಒಮ್ಮೆ ಗಂಧಮಾದನ ಗಿರಿಯಲ್ಲಿದ್ದ ಸುಪ್ರತಿಷ್ಠರೆಂಬ ಸೂರಿಸುಧಾಕರರ ಮುಖದಿಂದ ಧರ್ಮಾಮೃತವನ್ನೀಂಟಿದ ಶೂರವೀರ ರಾಜ್ಯಭಾರವನ್ನು ಅಂಧಕವೃಷ್ಣಿಯ ಹೆಗಲಿಗೆ ಸರಿಸಿ, ತಾನು ದೀಕ್ಷಾಬದ್ಧನಾಗಿ ತಪೋನಿರತನಾದನು. ಹನ್ನೆರಡು ವರ್ಷಗಳನಂತರ ಸುಪ್ರತಿಷ್ಠರೊಮ್ಮೆ ಪ್ರತಿಮಾಯೋಗೈಕನಿಷ್ಠರಾಗಿದ್ದಾಗ ಸುದರ್ಶನನೆಂಬ ದೇವನು ಅವರಿಗೆ ಭೀಮೋಪಸರ್ಗವನ್ನುಂಟುಮಾಡಿದನು. ಪೂಜಾಭಿಲಾಷೆಯಿಂದ ಅಲ್ಲಿಗೆ ಬಂದಿದ್ದ ಅಂಧಕವೃಷ್ಣಿ ಆ ಉಪದ್ರವಕಾರಣವನ್ನು ತಿಳಿಯಲಪೇಕ್ಷಿಸಿದಾಗ, ಸುಪ್ರತಿಷ್ಠರು ಪೂರ್ವಭವಾವಳಿಯನ್ನು ವಿವರಿಸಿದರು:

ಚಂಪಾಪುರದ ಸೂರದತ್ತ ಸುದತ್ತರೆಂಬ ಹರದರು ವ್ಯಾಪಾರದಿಂದ ಅಪಾರ ಹಣ ಸಂಪಾದಿಸಿಕೊಂಡು ಹಿಂದಿರುಗಿದಾಗ, ಸುಂಕ ತೆರಬೇಕಾದೀತೆಂಬ ಭಯದಿಂದ

ದ್ರವ್ಯವನ್ನು ಪೊದರ ಬುಡದಲ್ಲಿ ಬಚ್ಚಿಟ್ಟು ಹೋದರು. ಶೌಂಡಿಕನೆಂಬ ಕಳ್ಳಸಿಗ ಬೇರುಬಿಕ್ಕೆಗಳನ್ನು ಬೆರಟುತ್ತಿದ್ದಾಗ ಪೊದೆಯಡಿಯ ನಿಧಿಯನ್ನು ಕಂಡು ಕೊಂಡು ಹೋದನು. ಆಮೇಲೆ ಬಂದು ಮಡಗಿದೊಡವೆಯನ್ನು ಕಾಣದೆ ಹುಚ್ಚಾದ ಹರದರು ಪರಸ್ಪರವಾಗಿ ಸಂದೇಹಿಸಿ, ಹಸಿಯ ಬಡಿಗೆ ಹಿಡಿದು ಹೊಡೆದಾಡಿ ಸತ್ತರು. ಅನಂತ ಅವರು ಟಗರುಗಳಾಗಿ ಗೂಳಿಗಳಾಗಿ ಹುಟ್ಟಿ ಜನ್ಮಾಂತರ ವೈರದಿಂದ ಹೋರಾಡಿ ಸತ್ತು ಸಮ್ಮೇದಗಿರಿಯ ಕಾಡಿನಲ್ಲಿ ಕೋಡಗಗಳಾಗಿ ಹುಟ್ಟಿದುವು. ಅವೂ ಹೋರಾಡಿ, ಒಂದು ಸತ್ತು, ಮತ್ತೊಂದು ಸಾಯುವ ಸ್ಥಿತಿಯಲ್ಲಿದ್ದಾಗ ಚಾರಣರ ಉಪದೇಶ ಲಭಿಸಿತು. ಆ ಶುಭಸಂಸ್ಕಾರದಿಂದ ಸತ್ತ ಕಪಿ ಸೌಧರ್ಮಕಲ್ಪತರು ಶಿಖರದಲ್ಲಿ ಚಿತ್ರಾಂಗದನಾಗಿಯೂ, ಮರುಜನ್ಮದಲ್ಲಿ ಪೌದನಪುರದ ರಾಜದಂಪತಿಗಳಾದ ಸುಸ್ಥಿತಿ ಸುಲಕ್ಷಣಾದೇವಿಯರಿಗೆ ಸುಪ್ರತಿಷ್ಠನೆಂಬ ಮಗನಾಗಿ ಹುಟ್ಟಿದನು. ಸುದತ್ತ ಕಪಿ ಸಿಂಧೂತೀರದ ರುಸಿವಳ್ಳಿಯಲ್ಲಿ ಮೃಗಾಯಣನೆಂಬ ಮುನಿಗೂ ವಿಶಾಲೆಯೆಂಬ ಗೊರತಿಗೂ ಗೌತಮನೆಂಬ ಮಗನಾಗಿ ಹುಟ್ಟಿ, ತಪಸ್ಸುಮಾಡಿ ಜ್ಯೋತಿರ್ಗಣದಲ್ಲಿ ಸುದರ್ಶನನೆಂಬ ದೇವನಾಗಿ ಜನಿಸಿದನು. ಈ ಕಥೆಯನ್ನು ಕೇಳಿದ ಸುದರ್ಶನ ಸದ್ದರ್ಶನವನ್ನು ಕೈಕೊಂಡನು; ಅಂಧಕವೃಷ್ಣಿ ವಿರಕ್ತನಾಗಿ ಸಮುದ್ರವಿಜಯನಿಗೆ ಪಟ್ಟಕಟ್ಟಿ, ತಪಸ್ಸುಮಾಡಿ, ಮೋಕ್ಷಪಡೆದನು.

ಸಮುದ್ರವಿಜಯ ತನ್ನ ಎಂಟುಮಂದಿ ತಮ್ಮಂದಿರೊಡನೆ ರಾಜ್ಯವಾಳುತ್ತಿರುವಲ್ಲಿ ಅವನ ಕೊನೆಯ ತಮ್ಮ ವಸುದೇವ ತನ್ನ ರೂಪಲಾವಣ್ಯಗಳಿಂದ ಭೂಲೋಕಕ್ಕೆ ಕಣ್ಣುಮುಳ್ಳಾಗಿದ್ದನು. ಅವನು ಮನೆಬಿಟ್ಟು ಬೀದಿಗೆ ಬಂದರೆ ಗಂಡರ ಬಳಿಯಿದ್ದ ಹೆಂಗಸರು ಮರ್ಯಾದೆಮೀರಿ ಬಾಗಿಲಲ್ಲಿ ಕಾದು ಮೋಹಪರವಶರಾಗಿ ಅವನನ್ನು ನೋಡುತ್ತಿದ್ದರು; ಅವನ ವೀಣಾವಾದನಕ್ಕೆ ಮಾರುಹೋದ ಹೆಂಗಳೆಯರು ಅವನನ್ನು ಹಿಂಬಾಲಿಸುತ್ತಿದ್ದರು. ಪುರಜನರ ಹುಯ್ಯಲನ್ನು ಕೇಳಿದ ಸಮುದ್ರವಿಜಯನ ಉಪಾಯದಿಂದ ವಸುದೇವ ಗೃಹಬಂದಿಯಾದನು. ಆದರೆ ಅಣ್ಣನ ಕುಟಿಲೋಪಾಯ ಚೇಟಿಯಿಂದ ತಿಳಿದಾಗ ಅವನು ರಾತ್ರಿಯ ವೇಳೆ ವಿದ್ಯಾಧರ ಕರಣದಿಂದ ಅರಮನೆಯ ಮದಿಲನ್ನು ದಾಟಿ, ಶ್ಮಶಾನವನ್ನು ಸೇರಿ, ವಸ್ತ್ರಾಭರಣಗಳನ್ನು ಕಳಚಿಟ್ಟು, ತಾನು ಚಿತಾರೋಹಣಮಾಡಿದಂತೆ ಪತ್ರ ಬರೆದಿಟ್ಟು, ತನ್ನ ಹೆಜ್ಜೆಯ ಜಾಡು ಯಾರಿಗೂ ತಿಳಿಯದಂತೆ ಹೊರಟುಹೋದನು. ತಮ್ಮನ ಅಗಲಿಕೆಯಿಂದ ಬೆಂದು ಬೆಂಡಾಗಿದ್ದ ಸಮುದ್ರವಿಜಯನನ್ನು ಎಂದಾದರೊಂದುದಿನ ವಸುದೇವ ಹಿಂದಿರುಗುತ್ತಾನೆಂದು ಹೇಳಿ ತಿಳಿದವರು ಸಮಾಧಾನಪಡಿಸಿದರು.

ವಸುದೇವನ ಮುಂದಿನ ಜೀವನ ಪ್ರಣಯಸಾಹಸದಲ್ಲಿ ಮನ್ಮಥವಿಜಯಯಾತ್ರೆಯಲ್ಲಿ ಮುಗಿಲು ಮುಟ್ಟುತ್ತದೆ. ಶ್ಮಶಾನದಿಂದ ಹೊರಟ ವಸುದೇವ ವಿಜಯಖೇಟ ನಗರದ ಉದ್ಯಾನದ ಮಾವಿನಮರದಡಿ ಮಲಗಿದ್ದಾಗ ಮಗಧಾಧಿಪತಿಯ ಮಗಳು ಶ್ಯಾಮಲೆ ಅವನ ಕಾಲೊತ್ತುತ್ತಿದ್ದಳು. ಅವಳನ್ನಲ್ಲಿ ಮದುವೆಯಾದನು. ಕೆಲವು ದಿನಗಳನಂತರ ಅಲ್ಲಿಂದ ಹೊರಟು, ಭೀಕರವನ್ಯದ್ವಿಪವನ್ನೇರಿ ಕಿನ್ನರಗೀತಪುರದ ಅಶನಿವೇಗ ರಾಜನ ಮಗಳು ಶಾಲ್ಮಲಿದತ್ತೆಯನ್ನು ವರಿಸಿದನು. ಸತಿಪತಿಯರು

ಮಲಗಿದ್ದಾಗ ಖಚರನೊಬ್ಬ ಪೂರ್ವಭವವೈರದಿಂದ ವಸುದೇವನನ್ನು ಸೆಳೆದೊಯ್ಯುತ್ತಿದ್ದಾಗ ಶಾಲ್ಮಲಿ ಅವನನ್ನಟ್ಟಿಸಿಕೊಂಡುಹೋಗಿ ಬಿಡಿಸಿಕೊಂಡಳು. ಆದರೆ ದಾರಿಯಲ್ಲಿ ಕೇಳಿಸಿದ ದಿವ್ಯಾದೇಶದಂತೆ ಪತಿಯನ್ನು ಚಂಪಾಪುರದ ಹೊರವಳಯದಲ್ಲಿರಿಸಿ ಹೊರಟು ಹೋದಳು.

ಅಲ್ಲಿ ಬೋಧಸಿಂಧುಭಟ್ಟಾರಕರ ಧರ್ಮಶ್ರವಣದಿಂದ ಪುನೀತನಾಗಿ, ಆ ನಗರದ ದೊರೆ ಚಾರುದತ್ತನ ಮಗಳಾದ ಗಂಧರ್ವದತ್ತೆಯನ್ನು ವೀಣಾವಾದನದಿಂದ ಗೆಲ್ಲುವ ತವಕದಿಂದ ಸ್ವಯಂವರಮಂಟಪವನ್ನು ಸೇರಿದನು. ಬಲಿವಾಮನರ ಕಥೆ ಹೇಳಿ, ವಿಷ್ಣುಕುಮಾರನ ವೈಕುರ್ವಣ ಶಕ್ತಿಯನ್ನು ಕುಗ್ಗಿಸುವ ಸಲುವಾಗಿ ಗಂಧರ್ವದೇವರು ಘಾರಾಪಿಸಾರಿರಿಯೆಂಬೆರಡು ವೀಣೆಗಳನ್ನು ನುಡಿಸಿದ ಪ್ರಸಂಗವನ್ನು ವಿವರಿಸಿ, ಆ ವಂಶದ ವೀಣೆಗಳನ್ನು ತರಿಸಿ, ವೀಣಾವಾದನದಲ್ಲಿ ಜಯಶೀಲನಾಗಿ ಗಂಧರ್ವದತ್ತೆಯನ್ನು ಮದುವೆಯಾದನು. ಅಷ್ಟರಲ್ಲಿ ಆ ನಗರಕ್ಕೆ ಬಂದ ಇಬ್ಬರು ಭಟ್ಟರ ಮುಖಾಂತರ ರೋಹಿಣಿಯ ಸ್ವಯಂವರ ವಾರ್ತೆಯನ್ನು ಕೇಳಿ ಮಾಗಧಿಗೆ ಹೋಗಿ ಪ್ರಾಣಪಿಕ ವಿದ್ಯೆಯಿಂದ ಕನ್ಯೆಯನ್ನು ವಶಪಡಿಸಿ ಕೊಂಡನು. ಮಾತ್ಸರ್ಯಪ್ರೇರಿತರಾಗಿ ಮೇಲೆಬಿದ್ದ ದೊರೆಗಳನ್ನು ಕ್ಷಣಾರ್ಧದಲ್ಲಿ ನಿವಾರಿಸಿದನು. ಆ ರಾಜಸಮೂಹದಲ್ಲಿದ್ದ ಸಮುದ್ರವಿಜಯ ತಮ್ಮನನ್ನು ಗುರುತಿಸಿ ಹರ್ಷಿಸಿದನು. ವಸುದೇವ ರೋಹಿಣಿಯ ಜೊತೆಗೆ ಹದಿನಾರು ಸಹಸ್ರ ಕನ್ಯಾರತ್ನಗಳನ್ನು ವಿವಾಹವಾಗಿ ಕಾಮದುರ್ಲಭವಾದ ಸುಖದಲ್ಲಿ ತಲ್ಲೀನನಾದನು. ವಸುದೇವ ರೋಹಿಣಿಯರ ಮಗನೇ ಬಲರಾಮ. ವಸುದೇವನ ಬಿಲ್ಜಾಣ್ಮೆಯನ್ನು ಮೆಚ್ಚಿದ ಕಂಸನೇ ಮೊದಲಾದ ರಾಜಕುಮಾರರು ತಂಡೋಪತಂಡವಾಗಿ ಬಂದು ಶಿಷ್ಯತ್ವವನ್ನು ಸ್ವೀಕರಿಸಿದರು.

ಪೌದನಪುರದ ದೊರೆ ತಾಳಹಸ್ತ ; ಅವನ ಮತ್ತೊಂದು ಹೆಸರು ಸಿಂಹರಥ. ಜರಾಸಂಧ ಅವನನ್ನು ಗೆಲ್ಲಲಾರದೆ, ಸಿಂಹರಥನನ್ನು ಹಿಡಿತಂದು ಕೊಟ್ಟವರಿಗೆ ಕುಮಾರಿ ಜೀವಂಜಸೆಯನ್ನೂ ಸಾಕಷ್ಟು ನಾಡನ್ನೂ ಬಳುವಳಿಕೊಡುವುದಾಗಿ ಘೋಷಣೆ ಹೊರಡಿಸಿದನು. ಸಿಂಹರಥನಮೇಲೆ ಯುದ್ಧೋತ್ಸುಕನಾಗಿ ಹೊರಟ ವಸುದೇವನನ್ನು ತಡೆದು ಕಂಸ ತಾನೇ ಹೋಗಿ ಸಿಂಹರಥನನ್ನು ಗೆದ್ದು ತಂದು ಜರಾಸಂಧನಿಗೊಪ್ಪಿಸಿದನು. ಅವನನ್ನು ಸಾಕಿ ಸಲಹಿದ ಕೌಶಾಂಬಿಯ ಕಳ್ಳವತಿ ಮಂಡೋದರಿಯನ್ನು ಕರೆಸಿ, ಅವಳು ಮುಂದಿರಿಸಿದ ಕನಕಪತ್ರದಿಂದ ಅವನು ಉಗ್ರಸೇನನ ಮಗನೆಂದೂ ತನ್ನ ಭಾಗಿನೇಯನೆಂದೂ ತಿಳಿದು, ಸಂತೋಷದಿಂದ ತನ್ನ ಪುತ್ರಿಯನ್ನು ಧಾರೆಯೆರೆದನು. ಕಂಸ ಕೂಡಲೆ ಮಧುರಾಪುರಕ್ಕೆ ಧಾಳಿಯಿಟ್ಟು, ತಂದೆ ಉಗ್ರಸೇನನನ್ನು ಸೆರೆಯಲ್ಲಿಟ್ಟು, ವಸುದೇವನಿಗೆ ದೇವಕಿಯನ್ನೂ ರಾಜ್ಯವನ್ನೂ ಸಮರ್ಪಿಸಿದನು.

ಉಗ್ರಸೇನನ ಅಣ್ಣನ ಮಗ ಚಿಕ್ಕಪ್ಪನಿಗೊದಗಿದ ವಿಪತ್ತಿನಿಂದ ನಿರ್ವೇಗಪರನಾಗಿ ತಪಸ್ಸುಮಾಡಿ ಅತಿಮುಕ್ತಕಮುನಿಯಾದನು. ಅವನೊಂದು ದಿನ ಕಂಸನ ಮನೆಯ ಮುಂದೆ ಚರಿಗೆಗಾಗಿ ಹೋಗಲು, ಜೀವಂಜಸೆ ದುರ್ಬುದ್ಧಿಯಿಂದ ದೇವಕಿಯ ಮುಟ್ಟಿನಿಂದಾದ ಆನಂದವಸ್ತ್ರವನ್ನು ಅವನ ಮುಂದೆ ಹಿಡಿದು, ಬತ್ತಲೆಯನ್ನು ಮುಚ್ಚಿಕೊಳ್ಳುವಂತೆ ಕಟಕಿನುಡಿದಳು. ಎಂದೂ ಮುನಿಯದ ಮುನಿ ಮುನಿಸಿನಿಂದ

ದೇವಕಿಯು ಗರ್ಭವೇ ಅವಳ ತಂದೆ ಗಂಡರಿಗೆ ಮೃತ್ಯುವಾಗಲೆಂದು ಶಪಿಸಿದನು. ಮಹಾದುಃಖಿತೆಯಾದ ಪತ್ನಿಗೆ ಕಂಸ ಅಭಯ ಪ್ರದಾನಮಾಡಿ, ಉಪಚಾರದ ನೆವದಿಂದ ವಸುದೇವ ದೇವಕಿಯರನ್ನು ಮನೆಗೆ ಕರೆಸಿ ಸೆರೆಯಲ್ಲಿರಿಸಿ, ಅವರ ಮಕ್ಕಳನ್ನು ಹುಟ್ಟಿದಾಗಲೆ ಕೊಲ್ಲಿಸುವ ಏರ್ಪಾಡು ಮಾಡಿದನು. ನೈಗಮದೇವ ದೇವಕಿ ಹೆತ್ತ ಮಕ್ಕಳನ್ನು ಮಲಯಾಚಳಕ್ಕೆ ಕೊಂಡೊಯ್ದು ಅವುಗಳ ಜಾಗದಲ್ಲಿ ಮಾಯಾ ಶಿಶುಗಳನ್ನಿರಿಸುತ್ತಿದ್ದನು. ಕಂಸ ಆ ಮಾಯಾಶಿಶುಗಳನ್ನು ಕೊಲ್ಲುತ್ತಿದ್ದನು.

ಪುತ್ರಶೋಕದಿಂದ ಬಸವಳಿದಿದ್ದ ದೇವಕಿಯನ್ನೊಮ್ಮೆ ಅತಿಮುಕ್ತಕ ಮುನಿಗಳು ಸಮಾಧಾನಪಡಿಸಿ, ಮುಂದೆ ಹುಟ್ಟುವ ಮಗ ತ್ರಿಖಂಡಮಂಡಳಾಧಿಪತಿಯಾಗುತ್ತಾನೆಂದು ಹರಸಿದರು. ಕೊನೆಗವಳು ಗರ್ಭತಳೆದು, ಭಾದ್ರಪದಾಷ್ಟಮಿಯ ನಟ್ಟಿರುಳಿನಲ್ಲಿ ಕೃಷ್ಣನನ್ನು ಪಡೆದಳು. ಕೂಡಲೆ ವಸುದೇವ ಆ ಶಿಶುವನ್ನು ನಗರದ ಹೊರಗೆ ಕೊಂಡೊಯ್ದು, ಗೊಲ್ಲರಹಳ್ಳಿಯ ನಂದನಿಗೆ ಕೊಟ್ಟು, ಅವನಿಗೆ ಬೇಡವಾದ ಹೆಂಗೂಸೊಂದನ್ನು ತಂದು ದೇವಕಿಯ ಬಳಿ ಮಲಗಿಸಿದನು. ಕಂಸ ಹೆಂಗೂಸೆಂದು ಆ ಶಿಶುವನ್ನು ಕೊಲ್ಲಲಿಲ್ಲ. ಅವಳು ಬೆಳೆಯುತ್ತಿದ್ದಂತೆ ನಿರ್ವೇಗಹೊಂದಿ ವಿಂಧ್ಯಮಾನಸೆಯೆಂಬ ದೇವತೆಯಾದಳು.

ಅತ್ತ ನಂದಗೋಕುಲದಲ್ಲಿ ಕೃಷ್ಣನ ಬಾಲಲೀಲೆಯೆ ಸಕಲಲೀಲೆಯಾಗಿ ನಂದಗೋಕುಲ ಆನಂದಕುಲವಾಗಿದ್ದಾಗ, ಇತ್ತ ಮಧುರೆಯಲ್ಲಿ ಅನೇಕ ಉತ್ಪಾತಗಳು ತಲೆದೋರಿದುವು. ನೈಮಿತ್ತಿಕರಿಂದ ಅವುಗಳ ಫಲಗಳನ್ನು ತಿಳಿದು, ಕೃಷ್ಣಸಂಹಾರಕ್ಕಾಗಿ ಪೂರ್ವಭವದೆಣ್ಬರ್ ದೇವತೆಯರನ್ನು ನೇಮಿಸಿದನು. ಅವರು ಪೂತನಿಯಾಗಿ, ಕಾಗೆಯಾಗಿ, ಬಂಡಿಯಾಗಿ, ಕುದುರೆಯಾಗಿ, ಮತ್ತಿಯ ಮರವಾಗಿ, ತಾಳೆಯ ಗಿಡವಾಗಿ, ಕತ್ತೆಯಾಗಿ ಕೃಷ್ಣನನ್ನು ಕೊಲ್ಲಲೆಳಸಿ, ತಾವೇ ಅಪಮೃತ್ಯುವಿಗೀಡಾದರು. ಅತಿವೃಷ್ಟಿಯಾದಾಗ ಕೃಷ್ಣ ಗೋವರ್ಧನಗಿರಿಯನ್ನೆತ್ತಿ ಹಿಡಿದುದೂ, ವೃಷಭಾಕಾರದಲ್ಲಿ ಬಂದ ಅರಿಷ್ಟನನ್ನು ಸೋಲಿಸಿದುದೂ ಅವನ ಮಹಿಮೆಗೆ ದ್ಯೋತಕವಾದುವು.

ಹೀಗಿರುವಾಗ ಚೈತ್ಯಾಲಯದ ಮುಂದಣ ದೇವಾಯತನದ ಬಿಲದ್ವಾರದಲ್ಲಿ ನಾಗಶಯ್ಯೆ ಶಾರ್ಙ್ಗ ಚಾಪ ಮತ್ತು ಪಾಂಚಜನ್ಯಗಳು ಮೂಡಿದುವು. ಶಯ್ಯೆಯನ್ನೇರಿ ಚಾಪವನ್ನು ಹೂಡಿ ಶಂಖವನ್ನು ಪೂರೈಸುವಂಥ ಮಹಾಭಾಗ ಚಕ್ರಿಯಾಗುತ್ತಾನೆಂದು ನೈಮಿತ್ತಿಕರು ಕಂಸನಿಗೆ ತಿಳಿಸಿದರು. ಈ ಮಹಾಕಾರ್ಯವನ್ನು ಸಾಧಿಸಿದವರಿಗೆ ತನ್ನ ಮಗಳನ್ನು ಕೊಡುವುದಾಗಿ ಸಾರಿಸಿದನು. ಕೃಷ್ಣ ಎಲ್ಲವನ್ನು ಸಲೀಲವಾಗಿ ಸಾಧಿಸಿದನು./ ಬೆಳಕು ಹರಿಯುವುದಕ್ಕೆ ಮುಂಚೆ ನಾಗಹ್ರದದೊಳಗಣ ಸಾವಿರೆಸಳಿನ ಕಮಲವನ್ನು ತರುವಂತೆ ಕಂಸ ಅವನಿಗೆ ಆಜ್ಞಾಪಿಸಿದನು. ಅವನು ಕಾಳಿಂದಿಮಡುವನ್ನು ಹೊಕ್ಕು, ಅಲ್ಲಿದ್ದ ಕಾಲಸರ್ಪವನ್ನು ಹಿಡಿದು, ಅದರೊಡನೆ ಸಹಸ್ರದಳ ಕಮಲವನ್ನು ಕಂಸನ ಬಳಿಗೆ ಕಳುಹಿಸಿದನು.

ಯಾವ ಕುಟಿಲೋಪಾಯದಿಂದಲೂ ಕೃಷ್ಣಹನನ ಸಾಧ್ಯವಾಗದಿರಲು ಕಂಸ ಮಂತ್ರಿಗಳ ಸಲಹೆಯಂತೆ ಕುವಳಯಾಪೀಡನೆಂಬ ಮದಗಜವನ್ನು ಹರಿಸಿದನು. ಅದು ಕ್ಷಣಾರ್ಧದಲ್ಲಿ ನಿರ್ನಾಮವಾಯಿತು. ಅನಂತರ ಚಾಣೂರ ಮುಷ್ಟಿಕರೊಡನೆ

ಮಲ್ಲಯುದ್ಧ ಮಾಡುವಂತೆ ಕೃಷ್ಣನಿಗೆ ಆಹ್ವಾನ ನೀಡಿದನು. ಕೃಷ್ಣ ದಾರಿಯಲ್ಲಿ ಸಿಕ್ಕಿದ ರಜಕನನ್ನು ಮರ್ದಿಸಿ, ಅವನ ರಾಜವಸ್ತ್ರಗಳನ್ನು ಧರಿಸಿಕೊಂಡು ಅರಮನೆಯನ್ನು ಪ್ರವೇಶಿಸುತ್ತಿರುವಾಗಲೇ ಚಾಣೂರ ಮೇಲೆ ಸುಗ್ಗಿದನು. ಅವನೂ, ಅವನ ನಂತರ ಬಂದ ಜಟ್ಟಿಗಳೆಲ್ಲರೂ ಯಮಸದನ ಸೇರಿದರು. ಕೂಡಲೇ ಕಂಸನ ಚತುರ್ರಂಗ ಸೈನ್ಯ ಕೃಷ್ಣ ವಸುದೇವ ಬಲದೇವರನ್ನು ಮುತ್ತಿತು. ದೀರ್ಘಕಾಲದ ಹೋರಾಟದಲ್ಲಿ ಸೈನ್ಯ ನುಚ್ಚು ನೂರಾಯಿತು, ಕಂಸ ಅಸುವನ್ನು ತ್ಯಾರಿದನು.

ಈ ಕೃತಿ ಮುಖ್ಯವಾಗಿ ಪುರಾಣ. ಲೋಕ, ದೇಶ, ಪುರ, ರಾಜ್ಯ, ತೀರ್ಥ, ದಾನ ತಪಸ್ಸುಗಳ ಸ್ವರೂಪ, ದೇವಾದಿಗತಿಗಳು ಮತ್ತು ತಪೋದಾನಗಳ ಫಲ[1]— ಈ ಎಂಟು ವಿಷಯಗಳು ಜೈನಪುರಾಣಗಳಲ್ಲಿ ಅಡಕವಾಗಿರಬೇಕೆಂದು ಮಹಾಪುರಾಣದಲ್ಲಿ ಹೇಳಿದೆ. ಲೋಕಾಕಾರ ಕಥನ, ತೀರ್ಥವರ್ತನ, ವ್ಯಾಪ್ತ ಚತುರ್ಗತಿ ಸ್ಥಿತಿ, ತಪೋದಾನ ಕೀರ್ತನ, ತತ್ಫಲಸಿದ್ಧಿ, ದೇಶ ನಗರೀ ರಾಜ್ಯೋತ್ಸವಾಖ್ಯಾನ— ಇವು ಪುರಾಣ ಲಕ್ಷಣಗಳೆಂದು ಜನ್ನ ನಿರೂಪಿಸುತ್ತಾನೆ. ಪಂಚಪರಮೇಷ್ಠಿಗಳಾದ ಅರ್ಹಂತ, ಸಿದ್ಧ, ಉಪಾಧ್ಯಾಯ, ಆಚಾರ್ಯ ಮತ್ತು ಸಾಧುಗಳ ಸ್ತುತಿ ಪುರಾಣದ ಪ್ರಾರಂಭದಲ್ಲಿ ಅತ್ಯವಶ್ಯವಾಗಿ ಬರಬೇಕು. ಈ ಪುರಾಣಗಳಲ್ಲಿ ಮುಕ್ತ ಜೀವಿಗಳ ಸಾಧನೆಯ ನಿರೂಪಣೆಯೇ ಪ್ರಧಾನವಾದುದರಿಂದ ಇಂದ್ರ ನೆರವೇರಿಸುವಂಥ ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ, ಕೇವಲ ಜ್ಞಾನೋತ್ಪತ್ತಿ, ಸಮವಸರಣ ಮತ್ತು ನಿರ್ವಾಣ ಕಲ್ಯಾಣಗಳ ವರ್ಣನೆ ಅನಿವಾರ್ಯ. ಜೈನಪುರಾಣಗಳೆಂದರೆ ಇಷ್ಟೂ ಇದ್ದೇ ತೀರಬೇಕು. ನೇಮಿನಾಥ ಪುರಾಣ ಇವನ್ನೆಲ್ಲ ಒಳಗೊಂಡಿದೆ.

ಒಂದು ಮಾತಿನಲ್ಲಿ ಹೇಳಬಹುದಾದರೆ ಜೈನಪುರಾಣ ಭವಾವಳಿ ಕಥೆಗಳ ಕಟ್ಟು; ಮಾನವ ಅರ್ಹತ್ಪದವಿಸಾಧನೆಗಾಗಿ ಕೈಕೊಳ್ಳುವ ಮಹಾಸಾಧನೆಯ ಯಾತ್ರೆ. ಎಂಥವರಿಗೂ ಈ ಸಾಧನೆ ತಪ್ಪಿದ್ದಲ್ಲ. ಸಾಧನೆಯಿಲ್ಲದೆ ಅರ್ಹತ್ಪದವಿ ಲಭಿಸುವಂತಿಲ್ಲ. ಸಾಧನೆ ಸಿದ್ಧಿಯಾಗಲು ಒಂದಲ್ಲ, ಹಲವಾರು ಜನ್ಮಗಳು ಬೇಕಾಗುತ್ತವೆ. ಅಜಿತನಾಥ ಎರಡು ಭವಗಳಲ್ಲಿ ಜಿನಪದವಿ ಪಡೆದರೆ, ವೃಷಭ ಹತ್ತು ಜನ್ಮಗಳನ್ನೆತ್ತಬೇಕಾಗುತ್ತದೆ, ನೇಮಿನಾಥ ಒಂಬತ್ತು ಸಾರಿ ಹುಟ್ಟಬೇಕಾಗುತ್ತದೆ. ವಿಂಧ್ಯಶಬರ, ಇಭ್ಯಕೇತು, ಸೌಧರ್ಮಕಲ್ಪಜ, ಚಿಂತಾಗತಿಖಚರ, ಮಹೇಂದ್ರಕಲ್ಪಜ, ಅಪರಾಜಿತ ನರಪತಿ, ಅಚ್ಯುತೇಂದ್ರ, ಸುಪ್ರತಿಷ್ಠ, ಪಂಚಾಣೂತ್ತರಾಹಮಿಂದ್ರ-ಇದು ನೇಮಿನಾಥನ ಪೂರ್ವಭವಾವಳಿ, ಹೆಸರುಗಳಲ್ಲಿ ವ್ಯತ್ಯಾಸವಿರಬಹುದು, ಸನ್ನಿವೇಶ ಘಟನೆಗಳ ಜೋಡಣೆ ಪಲ್ಲಟಗೊಂಡಿರಬಹುದು, ವರ್ಣನೆಗಳಲ್ಲಿ ಬದಲಾವಣೆಯಿರಬಹುದು, ಆದರೆ ಈ ಭವಾವಳಿಯ ಪೂರ್ಣ ವಿವರಣೆಯಿಲ್ಲದೆ ನೇಮಿನಾಥಪುರಾಣ ಸಮರ್ಪಕವಾಗುವುದಿಲ್ಲ.

ನೇಮಿಚಂದ್ರ ಬಹುಮಟ್ಟಿಗೆ ಮಹಾಪುರಾಣವನ್ನನುಸರಿಸಿದ್ದರೂ ಅಲ್ಲಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿದ್ದಾನೆ. ಮೂಲದಲ್ಲಿದ್ದು ನೇಮಿಚಂದ್ರ ಬಿಟ್ಟಿರುವ ಕೆಲವು ಸಂಗತಿಗಳನ್ನಿಲ್ಲಿ ಕೇವಲ ದಿಗ್ದರ್ಶನಾರ್ಥವಾಗಿ ಕೊಟ್ಟಿದೆ:

[1] ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತ—ಇವು ವೈದಿಕಪುರಾಣಗಳ ಲಕ್ಷಣ.

(1) ಅರಿಂದಮಪುರದ ರಾಜದಂಪತಿಗಳಾದ ಅರಿಂಜಯ ಅಜಿತಸೇನೆಯರ ಪುತ್ರಿ ಪ್ರೀತಿಮತಿ. ನೇಮಿಚಂದ್ರನ ಪ್ರಕಾರ ಅವಳು ವಿಳಾಸವತಿ. ಅಪರಾಜಿತನ ಹೆಂಡತಿಯ ಹೆಸರೂ ಪ್ರೀತಿಮತಿಯಾದ್ದರಿಂದ, ಗೊಂದಲ ತಪ್ಪಿಸುವುದಕ್ಕಾಗಿ ಬದಲಾಯಿಸಿಕೊಂಡಿರಬಹುದು. ಚಾವುಂಡರಾಯ ಕರ್ಣಪಾರ್ಯರು ಮೂಲವನ್ನನುಸರಿಸುತ್ತಾರೆ.

(2) ಅರಿಂಜಯ ಪುತ್ರಿ ಪ್ರಣಯವಿಫಲೆಯಾಗಿ ನಿವೃತ್ತೆಯೆಂಬ ಆರ್ಯಿಕೆಯ ಬಳಿ ತಪೋಗ್ರಹಣಗೊಳ್ಳುತ್ತಾಳೆ. ಚಾವುಂಡರಾಯ ಮತ್ತು ಕರ್ಣ ಪಾರ್ಯರ ಪ್ರಕಾರ ಆರ್ಯಿಕೆಯ ಹೆಸರು ರಾಮಾ. ನೇಮಿಚಂದ್ರನಲ್ಲಿ ಆರ್ಯಿಕೆಯ ಪ್ರಸ್ತಾಪವಿಲ್ಲ.

(3) ಮೂಲದಲ್ಲಿ ಬರುವ ಚಿತ್ರಾಂಗದನ ಪೂರ್ವಭವಾವಳಿಗೆ ಸಂಬಂಧಿಸಿದ ಕಥೆಯ ಒಂದುಶಾಖೆ ನೇಮಿಚಂದ್ರನಲ್ಲಿಲ್ಲ. ರಘುಮಹಾರಾಜನ ನಗರವಾದ ಕೌಶಾಂಬಿಯಲ್ಲಿ ಸುಮುಖನೆಂಬ ಶ್ರೇಷ್ಠಿ. ಕಳಿಂಗದೇಶದ ದಂತಪುರದ ವರ್ತಕ ವೀರದತ್ತ ಬೇಡರ ಭಯದಿಂದ ವನಮಾಲೆಯೆಂಬ ಪತ್ನಿಯೊಡನೆ ಸುಮುಖನನ್ನಾಶ್ರಯಿಸುತ್ತಾನೆ. ಸುಮುಖ ವ್ಯಾಪಾರನಿಮಿತ್ತದಿಂದ ವೀರದತ್ತನನ್ನು ಹನ್ನೆರಡು ವರ್ಷ ದೂರದೇಶಕ್ಕೆ ಕಳಿಸಿ, ಅವನ ಹೆಂಡತಿ ವನಮಾಲೆಯನ್ನು ಅಪಹರಿಸುತ್ತಾನೆ. ಊರಿಗೆ ಹಿಂತಿರುಗಿದ ವೀರದತ್ತ ಸುಮುಖ ವನಮಾಲೆಯರ ಕಾಮವಿಕಾರದ ಕತೆಕೇಳಿ, ಪ್ರೋಷ್ಠಿಲನೆಂಬ ಮುನಿಯನ್ನಾಶ್ರಯಿಸಿ ದೀಕ್ಷೆಪಡೆದು, ತಪೋಮಹಿಮೆಯಿಂದ ಚಿತ್ರಾಂಗದ ದೇವನಾಗಿ ಜನ್ಮಧಾರಣೆ ಮಾಡುತ್ತಾನೆ. ಮರಣಾನಂತರ ಸುಮುಖ ಹರಿವರ್ಷದೇಶದ ಭೋಗಪುರಾಧಿಪತಿ ಪ್ರಭಂಜನನಿಗೂ ರಾಣಿ ಮೃಕಂಡುವಿಗೂ ಸಿಂಹಕೇತುವೆಂಬ ಮಗನಾಗಿ ಹುಟ್ಟುತ್ತಾನೆ. ಆ ದೇಶದ ವಸ್ತ್ವಾಲಯ ಪುರಾಧಿಪತಿ ವಜ್ರಚಾಪುವಿಗೂ ಆತನ ಪತ್ನಿ ಶುಭಾದೇವಿಗೂ ವನಮಾಲೆ ವಿದ್ಯುನ್ಮಾಲೆಯೆಂಬ ಪುತ್ರಿಯಾಗಿ ಜನಿಸಿ, ಸಿಂಹಕೇತುವನ್ನು ಮದುವೆಯಾಗುತ್ತಾಳೆ. ವನವಿಹಾರದಲ್ಲಿದ್ದ ಆ ದಂಪತಿಗಳನ್ನು ಚಿತ್ರಾಂಗದ ಕೊಲ್ಲುವ ಸಲುವಾಗಿ ಎತ್ತಿಕೊಂಡು ಹೋಗುತ್ತಿದ್ದಾಗ ಸೂರ್ಯಪ್ರಭದೇವನಾಗಿದ್ದ ಪೂರ್ವಭವದ ರಘುರಾಜ ಅವನನ್ನು ತಡೆದು ವಿವೇಕ ಹೇಳುತ್ತಾನೆ. ಚಿತ್ರಾಂಗದನಿಂದ ಮುಕ್ತರಾದ ದಂಪತಿಗಳು ಸೂರ್ಯಪ್ರಭನ ಮಾರ್ಗದರ್ಶನದಂತೆ ಚಂಪಾಪುರದ ವನದಲ್ಲಿ ಬಂದು ತಂಗುತ್ತಾರೆ. ಆ ನಗರದ ರಾಜ ಚಂದ್ರಕೀರ್ತಿಯ ದಿವ್ಯಗಜ ಆ ದಂಪತಿಗಳನ್ನೆತ್ತಿಕೊಂಡು ಬರಲು, ಅಪುತ್ರನಾಗಿದ್ದ ದೊರೆ ಅವರಿಗೆ ಪಟ್ಟ ಕಟ್ಟುತ್ತಾನೆ. ಅವನ ಸಂತಾನ ಪರಂಪರೆಯಲ್ಲಿ ಕ್ರಮವಾಗಿ ಹರಿಗಿರಿ, ಹಿಮಗಿರಿ, ವಸುಗಿರಿಯರು ಆಗಿ ಹೋಗುತ್ತಾರೆ. ಶೂರಸೇನ ಮತ್ತು ಶೂರವೀರರು ಆ ಪೀಳಿಗೆಗೆ ಸೇರಿದವರು.

ಚಿತ್ರಾಂಗದ ಪ್ರಕರಣಕ್ಕೆ ಸಂಬಂಧಿಸಿದಂತೆ ಮಹಾಪುರಾಣದಲ್ಲಿ ಎರಡು ಕತೆಗಳಿವೆ. ಇದು ಶೂರವೀರನ ವಂಶಾನುವರ್ಣನೆಯ ಸಂದರ್ಭದಲ್ಲಿ ಬರುತ್ತದೆ. ಚಾವುಂಡರಾಯ ಕರ್ಣಪಾರ್ಯರು ಈ ಭಾಗದಲ್ಲಿ ಮಹಾಪುರಾಣವನ್ನು ಕಟ್ಟುನಿಟ್ಟಾಗಿ ಅನುಸರಿಸುತ್ತಾರೆ; ಕ್ವಚಿತ್ತಾಗಿ ಮಾತ್ರ ಕೆಲವು ವ್ಯತ್ಯಾಸಗಳನ್ನು ಮಾಡಿಕೊಳ್ಳುತ್ತಾರೆ. ಅರ್ಧನೇಮಿನಾಥ ಪುರಾಣದಲ್ಲಿ ಈ ಭಾಗದ ಕಥೆ ಲುಪ್ತವಾಗಿದೆ; ಬಹುಶಃ ಅನವಶ್ಯವೆಂದು ಬಿಟ್ಟಿರಬಹುದು.

(4) ಮೂಲದಲ್ಲಿರುವ ಅಂಧಕವೃಷ್ಣಿಯ ಪೂರ್ವಭವಾವಳಿಯ ವಿವರಣೆ ಅರ್ಧನೇಮಿಪುರಾಣದಲ್ಲಿಲ್ಲ. ಅಯೋಧ್ಯಾನಗರದಲ್ಲಿ ಅನಂತವೀರ್ಯನೆಂಬ ರಾಜನಿದ್ದಾನೆ. ಆ ನಗರದ ರಾಜಶ್ರೇಷ್ಠಿ ಸುರೇಂದ್ರದತ್ತ. ವ್ರತನಿಯಮ ದಾನ ಧರ್ಮಗಳಲ್ಲಿ ಅವನು ಎತ್ತಿದ ಕೈ. ಹನ್ನೆರಡು ವರ್ಷ ಸಮುದ್ರಯಾನ ಕೈಕೊಂಡು ವ್ಯಾಪಾರದಿಂದ ಧನ ಸಂಪಾದಿಸಬೇಕೆಂದು ನಿರ್ಣಯಿಸಿ, ಜಿನಪೂಜಾದಿ ಕಾರ್ಯಗಳಿಗೆಂದು ರುದ್ರದತ್ತನೆಂಬ ಬ್ರಾಹ್ಮಣನ ಬಳಿ ಸಾಕಷ್ಟು ದ್ರವ್ಯವನ್ನಿಟ್ಟು ಅವನು ಪ್ರಯಾಣ ಹೊರಡುತ್ತಾನೆ. ಸ್ತ್ರೀದ್ಯೂತ ವ್ಯಸನ ಪೀಡಿತನಾದ ಬ್ರಾಹ್ಮಣ ದ್ರವ್ಯವನ್ನು ಪೋಲುಮಾಡಿ, ಚೋರವೃತ್ತಿಗಿಳಿದು ತಳವಾರನ ಕೈಗೆ ಸಿಕ್ಕಿಕೊಳ್ಳುತ್ತಾನೆ. ಬ್ರಾಹ್ಮಣನಾದ್ದರಿಂದ ಬಿಡುಗಡೆಹೊಂದಿ ಬೇಡರಗುಂಪು ಸೇರುತ್ತಾನೆ. ಕೊನೆಗೆ ಗೋಹರಣಕಾರ್ಯದಲ್ಲಿ ಸಿಕ್ಕಿ ಬಿದ್ದು, ಸತ್ತು ಅಧೋಗತಿ ಹೊಂದುತ್ತಾನೆ. ಅಲ್ಲಿಂದ ಯಥಾಕ್ರಮವಾಗಿ ಮರ್ತ್ಯಸಿಂಹಸರ್ಪ ವ್ಯಾಘ್ರಗರುಡ ವ್ಯಾಧ ಮೊದಲಾದ ನೀಚಗತಿಗಳನ್ನು ಪ್ರವೇಶಿಸಿ, ಬಳಿಕ ಹಸ್ತಿನಾಪುರದಲ್ಲಿ ಧನಂಜಯನೆಂಬ ದೊರೆ ರಾಜ್ಯವಾಳುತ್ತಿದ್ದಾಗ ಕಪಿಷ್ಠಿಲ ಅನುಂದರೆಂಬ ಬ್ರಾಹ್ಮಣ ದಂಪತಿಗಳಿಗೆ ಗೌತಮನಾಗಿ ಹುಟ್ಟುತ್ತಾನೆ. ಅನೇಕ ಕ್ಲೇಶ ಸಂಕಟಗಳನ್ನು ಅನುಭವಿಸುತ್ತಿದ್ದಾಗ ಸಮುದ್ರಸೇನನೆಂಬ ಮುನಿಯನ್ನು ಕಂಡು ಹಿಂಬಾಲಿಸುತ್ತಾನೆ. ವೈಶ್ಯನಾದ ವೈಶ್ರವಣನ ಮನೆಯಲ್ಲಿ ಆ ಮುನಿ ಅವನಿಗೆ ಊಟ ಮಾಡಿಸುತ್ತಾನೆ. 'ನನ್ನನ್ನು ನಿನ್ನಂತೆ ಮಾಡು' ಎಂದು ಗೌತಮ ಬೇಡಿಕೊಂಡಾಗ ಮುನಿ 'ಅಸ್ತು' ಎನ್ನುತ್ತಾನೆ. ಗೌತಮ ತಪಸ್ಸುಮಾಡಿ ಅಹಮಿಂದ್ರತ್ವ ಪಡೆಯುತ್ತಾನೆ; ಮುನಿ ಅಂಧಕವೃಷ್ಣಿಯಾಗಿ ಜನಿಸುತ್ತಾನೆ.

ಮುಂದೆ ಸಮುದ್ರವಿಜಯಾದಿಗಳ ಹಿಂದಿನ ಜನ್ಮಗಳ ವಿವರಣೆಯಿದೆ. ಇದನ್ನೂ ನೇಮಿಚಂದ್ರ ಕೈಬಿಟ್ಟಿದ್ದಾನೆ. ಚಾವುಂಡರಾಯ ಕರ್ಣಪಾರ್ಯರು ಮೂಲವನ್ನು ಬಹುಮಟ್ಟಿಗೆ ಅನುಸರಿಸುತ್ತಾರೆ.

(5) ವಸುದೇವನ ಬಂಧನವೃತ್ತಾಂತವನ್ನು ತಿಳಿಸಿದ ವ್ಯಕ್ತಿ ನಿಪುಣಮತಿಯೆಂಬ ಭೃತ್ಯ; ಆದರೆ ನೇಮಿಚಂದ್ರನ ನೇಮಿನಾಥ ಪುರಾಣದ ಪ್ರಕಾರ ಚೇಟಿ. ಬಹುಶಃ ನೇಮಿಚಂದ್ರ ಕರ್ಣಪಾರ್ಯನನ್ನನುಸರಿಸಿರುವ ಹಾಗೆ ತೋರುತ್ತದೆ.

(6) ಬಂಧನದ ಸುದ್ದಿ ತಿಳಿದಕೂಡಲೆ ವಸುದೇವ ತಾಯಿಗೆ ಪತ್ರಬರೆದು, ಅದನ್ನು ಕುದುರೆಯ ಕೊರಳಿಗೆ ಕಟ್ಟಿ, ಸುಡುಹೆಣದ ಬೆಂಕಿಯನ್ನು ಪ್ರದಕ್ಷಿಣೆ ಮಾಡಿ, ಯಾರಿಗೂ ತನ್ನ ಹೆಜ್ಜೆಯ ಗುರುತು ಸಿಗದಂತೆ ಹೊರಟುಹೋಗುತ್ತಾನೆ. ನೇಮಿಚಂದ್ರನ ಪ್ರಕಾರ ವಸುದೇವ ಹೆಣದಬಳಿ ವಸ್ತ್ರಾಭರಣಗಳನ್ನು ಕಳಚಿಟ್ಟು, ತಾನು ಚಿತಾರೋಹಣಮಾಡಿದಂತೆ ಪತ್ರ ಬರೆದಿಟ್ಟು, ಹೊರಟುಹೋಗುತ್ತಾನೆ. ಭೂಷಣಾದಿಗಳನ್ನು ಕಳೆದಿಟ್ಟು, ಬಂಧನದಿಂದೊದಗಿದ ಮಾನಭಂಗದಿಂದ ಚಿತಾರೋಹಣಮಾಡುವುದಾಗಿ ಪಕ್ಕದವರಿಗೆ ಕೇಳಿಸುವಂತೆ ಉದ್ಘೋಷಿಸಿ, ಭೀಮ ಧೂಮಧ್ವಜದಲ್ಲಿ ಹಾದಂತೆ ಮಾಡಿ, ನೆರೆಯ ಭೂರುಹವನ್ನೇರಿದಂತೆ ಕರ್ಣಪಾರ್ಯ ಈ ಪ್ರಸಂಗವನ್ನು ವಿವರಿಸುತ್ತಾನೆ.

(7) ವಿಜಯಖೇಟ ನಗರದಲ್ಲಿ ವಸುದೇವ ಮಲಗಿದ್ದುದು ಅಶೋಕವೃಕ್ಷದಡಿಯಲ್ಲಿ; ನೇಮಿಚಂದ್ರನ ಪ್ರಕಾರ ಮಾವಿನಮರದಡಿಯಲ್ಲಿ.

(8) ಶಾಲ್ಮಲಿದತ್ತೆಯೊಡನಿದ್ದಾಗ ವಸುದೇವನನ್ನು ಎಳೆದೊಯ್ದುವನು ಅಶನಿವೇಗನ ದಾಯಾದನಾದ ಅಂಗಾರವೇಗ; ಯಾರೊ ಖಚರ ಅವನನ್ನು ಕೊಂಡೊಯ್ದಂತೆ ನೇಮಿಚಂದ್ರನ ಕೃತಿಯಲ್ಲಿ ಹೇಳಿದೆ.

(9) ಮಹಾಪುರಾಣ ಚಾವುಂಡರಾಯ ಪುರಾಣ ಮತ್ತು ನೇಮಿಚಂದ್ರನ ಕೃತಿಗಳಲ್ಲಿ ಸೂಕ್ಷ್ಮವಾಗಿರುವ ಚಾರುದತ್ತನ ಕಥೆ ಕರ್ಣಪಾರ್ಯನ ಕೃತಿಯಲ್ಲಿ ಅತ್ಯಂತ ವಿಸ್ತಾರವಾಗಿ ಬಂದಿದೆ.

(10) ಅರಿಷ್ಟನಗರಾಧಿಪತಿಯಾದ ಹಿರಣ್ಯವರ್ಮರಾಜನಿಗೂ ಅವನ ಪತ್ನಿ ಪದ್ಮಾವತಿಗೂ ರೋಹಿಣಿ ಮಗಳು; ಅರ್ಧ ನೇಮಿಪುರಾಣದ ಪ್ರಕಾರ ಮಾಗಧಿಯ ರಾಜದಂಪತಿಗಳಾದ ರಕ್ತಾಕ್ಷಿ ಸುಮಿತ್ರೆಯರ ಮಗಳು ರೋಹಿಣಿ.

(11) ಮೂಲದಲ್ಲಿರುವ ಕಂಸವೃತ್ತಾಂತದ ದೀರ್ಘ ವಿವರ ನೇಮಿಚಂದ್ರನ ಕೃತಿಯಲ್ಲಿಲ್ಲ.

(12) ಅತಿಮುಕ್ತಕಋಷಿಗಳು ಕಂಸನನ್ನು ಶಪಿಸಿ ಹೋಗುವಾಗಲೆ ದೇವಕಿಯನ್ನು ಕಂಡು ಅವಳಿಗೆ ಏಳು ಮಕ್ಕಳಾಗುತ್ತವೆಂದೂ ಏಳನೆಯವನು ತ್ರಿಖಂಡ ಮಂಡಳಾಧಿಪನಾಗುತ್ತಾನೆಂದೂ ಹರಸುತ್ತಾರೆ. ಅರ್ಧನೇಮಿಪುರಾಣದ ಪ್ರಕಾರ, ಮೂರು ಅವಳಿಮಕ್ಕಳು ಕೊಲ್ಲಲ್ಪಟ್ಟನಂತರ ಋಷಿಗಳು ದೇವಕಿಯಲ್ಲಿಗೆ ಬಂದು ಹರಸುತ್ತಾರೆ. ಕರ್ಣಪಾರ್ಯನ ಕೃತಿಯಲ್ಲಿ ದೇವಕೀಸುತರ ಪೂರ್ವಭವಾವಳಿ ಈ ಸಂದರ್ಭದಲ್ಲಿಯೇ ವರ್ಣಿತವಾಗಿದೆ. ಮೂಲದಲ್ಲಿ ಮುಂದೆ ಬರುತ್ತದೆ. ನೇಮಿಚಂದ್ರ ಕೈಬಿಡುತ್ತಾನೆ.

(13) ಮಧುರಾನಗರದ ಸ್ಥಾಪನೆಗೆ ಕಾರಣಭೂತವಾದ ಜೈನಮಂದಿರದ ಸಮೀಪದಲ್ಲಿ ಪೂರ್ವದಿಕ್ಕಿನ ದೇವತಾನಿಲಯದಲ್ಲಿ ಸರ್ಪಶಯ್ಯೆ ಧನುಸ್ಸು ಶಂಖಗಳೆಂಬ ರತ್ನತ್ರಯಗಳು ಹುಟ್ಟಿದುವಷ್ಟೆ. ಅವುಗಳನ್ನು ತಾನೇ ಸಾಧಿಸುವುದಾಗಿ ಕಂಸ ನಿಶ್ಚಯಿಸಿ, ಪ್ರಯತ್ನಿಸಿ, ನಿಷ್ಫಲನಾಗಿ, ಸಾಧನ ಪ್ರಯತ್ನದಿಂದ ವಿರಾಮ ಹೊಂದುತ್ತಾನೆ. ಅರ್ಧನೇಮಿಯಲ್ಲಿ ಈ ಪ್ರಸಂಗವಿಲ್ಲ.

ಮಹಾಪುರಾಣಾಂತರ್ಗತವಾದ ನೇಮಿನಾಥನ ಕಥೆ, ಹರಿವಂಶದ ಕಥೆಯೂ ಸೇರಿ, 1247 ಶ್ಲೋಕಗಳಷ್ಟೊಳಗೊಂಡಿದೆ. 497 ಶ್ಲೋಕಗಳಲ್ಲಿ ಕಂಸವಧೆಯ ಪ್ರಸಂಗ ಮುಗಿಯುತ್ತದೆ. ಈ ಪೂರ್ವಾರ್ಧಭಾಗ ಕರ್ಣಪಾರ್ಯ (846 ಪದ್ಯ) ಮತ್ತು ನೇಮಿಚಂದ್ರ (900 ಪದ್ಯ)ರಲ್ಲಿ ಸುಮಾರು ಎರಡರಷ್ಟು ವಿಸ್ತೃತವಾಗಿದೆ. ಇಷ್ಟು ವಿಸ್ತಾರವಾಗಿ ಬೆಳೆದಿರುವ ಕಾವ್ಯದ ಕಥಾಸಂವಿಧಾನದಲ್ಲಿ ಪ್ರೌಢೋಜ್ವಲ ಪ್ರತಿಭೆಗೆ ಸಾಕ್ಷಿಯಾಗಿ ಸರ್ವಾಕರ್ಷಣೀಯವಾದ ವೈಶಿಷ್ಟ್ಯ ಕಾಣುವುದಿಲ್ಲ. ಆದರೆ ಮೂಲದ ಕೆಲವು ಸನ್ನಿವೇಶ ಘಟನೆಗಳನ್ನು ಘೋಟಕಿಸಿಯೋ ಸಿಂಗುರಿಸಿಯೊ ತಿರುವುಗೊಳಿಸಿಯೊ ಅಥವಾ ಕಸಿಗೊಳಿಸಿಯೊ ಸ್ವಾರಸ್ಯ ಹೆಚ್ಚಿಸುವಾಗ ಅವನ ಔಚಿತ್ಯ ಪ್ರಜ್ಞೆಯೂ ರಸಗ್ರಹಣ ಸಾಮರ್ಥ್ಯವೂ ಅನುಭವ ಸಂಪತ್ತೂ ವ್ಯಕ್ತವಾಗುತ್ತವೆ. ಭವಾವಳಿಯು ಗೊಂಡಾರಣ್ಯ

ವನ್ನು ಅಂಚುಮೂಲೆಗಳಲ್ಲಿ ತುಸು ಸಮರಿ ಪ್ರವೇಶಯೋಗ್ಯವಾಗುವಂತೆ ಮಾಡಿದ್ದಾನೆ. ದೌರ್ಬಲ್ಯಾರೋಪಣೆಗೆ ಗುರಿಯಾಗುವಷ್ಟರ ಮಟ್ಟಿಗೆ ಕವಿ ಲೀಲಾವತಿಯಲ್ಲಿ ವರ್ಣನೆಗಳನ್ನು ತುರುಕಿದ್ದಾನೆ. ವರ್ಣನೆಯ ಪ್ರಸಂಗ ತಲೆದೋರಿತೆಂದರೆ ಕವಿಯ ಮತಿ ಜಾರುತ್ತದೆ, ಲೇಖನಿ ಲಂಗುಲಗಾಮಿಲ್ಲದೆ ಸುಟ್ಟುರಿಯಂತೆ ಹರಿದಾಡುತ್ತದೆ, ಮಸಿ ಅಕ್ಷಯವಾಗುತ್ತದೆ. ನೇಮಿನಾಥ ಪುರಾಣ ಲೌಕಿಕ ಕಾವ್ಯವಲ್ಲದಿದ್ದರೂ ಶೃಂಗಾರ ವರ್ಣನೆ ಬರದಿದ್ದರೆ ಅವನಿಗೆ ನಿದ್ದೆ ಹತ್ತುವುದಿಲ್ಲ, ತಿಂದನ್ನ ಅರಗುವುದಿಲ್ಲ. ಅಲ್ಲಿ ಬಿಟ್ಟು ಹೋದ ಕೆಲವು ವರ್ಣನೆಗಳು ಇಲ್ಲಿ ಕಾಣಿಸಿಕೊಳ್ಳುತ್ತವೆ. ಆದರೆ ತೀರ್ಥಂಕರನ ಪುಣ್ಯಸ್ಮರಣೆಯೊ ಅಥವಾ ಕಾಲಲಬ್ಧಿರೂಪದ ಪಕ್ವಾನುಭವವೊ ಕಾರಣವಾಗಿ ವರ್ಣನೆಗಳಲ್ಲಿ ಹದವಾಗಿ ಬೊಬ್ಬೆಯಿಲ್ಲದೆ ಚಿತ್ರವಿಕಾರದ ಕೊಳಕನ್ನು ಳಿದು ಬರುತ್ತವೆ.

ಮೂಲದಲ್ಲಿ ಅರ್ಹದ್ದಾಸ ಜಿನದತ್ತೆಯರ ಸಂಸಾರ ಜೀವನ ಮತ್ತು ಅಪರಾಜಿತನ ಜನ್ಮ ಸಂಗತಿ ಅವರು ಕೇವಲ ಸಾಮಾನ್ಯರೆನ್ನುವ ರೀತಿಯಲ್ಲಿ ವೈಭವ ವಿಜೃಂಭಣೆಗಳಿಲ್ಲದೆ ಆರೇಳು ಶ್ಲೋಕಗಳಲ್ಲಿ ಮುಗಿದುಹೋಗುತ್ತದೆ. ಅರ್ಧನೇಮಿ ಪುರಾಣದಲ್ಲಿ ಈ ಭಾಗ 108 ಪದ್ಯಗಳಷ್ಟು ವಿಸ್ತಾರವಾಗಿ ಹಬ್ಬಿದೆ. ನಗರ ಉದ್ಯಾನ ಪುತ್ರದೋಹದ ವ್ರತನಿಯಮ ಪುತ್ರಜನನ ಶಿಶುಲೀಲೆ ಮೊದಲಾದ ವರ್ಣನೆಗಳಿಂದ ಈ ಭಾಗ ಮೈ ತುಂಬಿಕೊಂಡು ಸೊಗಸಾಗಿದೆ. ವಸುದೇವ ಊರು ಬಿಟ್ಟ ಸಂದರ್ಭವೂ ಅವನು ಶ್ಮಶಾನವನ್ನು ಪ್ರವೇಶಿಸಿದ ಸನ್ನಿವೇಶವೂ ಮೂಲದಲ್ಲಿರುವುದಕ್ಕಿಂತ ಲಂಬವಾಗಿದ್ದು ಕವಿಯ ಕಲ್ಪನಾ ಸಾಮರ್ಥ್ಯಕ್ಕೆ ದ್ಯೋತಕವಾಗಿವೆ. ಬಲಿಪ್ರಕರಣ ಮೂಲದಲ್ಲಿ ಮತ್ತು ಕರ್ಣಪಾರ್ಯನ ಕೃತಿಯಲ್ಲಿ ಸಾಕಷ್ಟು ವಿಸ್ತಾರವಾಗಿದ್ದರೂ ಚೇತೋಹಾರಿಯಾಗಿಲ್ಲ; ಆದರೆ ಇದು ನೇಮಿಚಂದ್ರನಿಗಿಟ್ಟ ಹೆಮ್ಮೆಯ ಕಿರೀಟದಂತಿದೆ. ಜೀವಂಜಸೆ—ಅತಿ ಮುಕ್ತಕ ಮುನಿಯರ ಪ್ರಸಂಗ ಮತ್ತು ಕೃಷ್ಣ—ಚಾಣೂರ ಯುದ್ಧ ಪ್ರಕರಣಗಳಂತು ನೇಮಿಚಂದ್ರನ ಪ್ರತಿಭೆಗೆ ಸಾಕ್ಷಿಯಾಗಿವೆ.

ನೇಮಿಚಂದ್ರ ಮೂಲದ ಭಾವಾರ್ಥಗಳನ್ನು ಅನುಕರಿಸುವುದಿರಲಿ, ನಡುನಡುವೆ ಮೂಲದ ವಾಕ್ಯಗಳನ್ನು ಇಡಿಯಿಡಿಯಾಗಿ ಭಾಷಾಂತರಿಸುತ್ತಾನೆ. ಮೂಲದ

ತೇಪಿ ತಿಸ್ರಶ್ಚತಸ್ರಶ್ಚ ಹಸ್ತೇ ವೀಣಾಃ ಸಮಾರ್ಪಯನ್
ತಾಸಾಂ ತಂತ್ರೀಷು ಲೋಮಾಂಶಂ ಶಲ್ಯಂ ಚಾಲೋಕ್ಯ ಸಸ್ಮಿತಂ 271
ತುಂಬೀಫಲೇಷು ದಂಡೇಷು ಶಲ್ಕ ಪಾಷಾಣಮಪ್ಯಸೌ
ಸ್ಫುಟೀಚಕಾರ ತದ್ದೃಷ್ಟ್ವಾ ತ್ವದಿಷ್ಟಾ ಕೀದೃಶೀ ಭವೇತ್. 272

ಈ ಶ್ಲೋಕಗಳನ್ನು ಕೆಳಗಣ ವಾಕ್ಯಗಳೊಡನೆ ಹೋಲಿಸಿ ನೋಡಬಹುದು. ಇಲ್ಲಿ ಮೂಲದ ಶ್ಲೋಕಗಳು ಅತ್ಯುತ್ತಮ ಗದ್ಯವಾಗಿ ರೂಪಾಂತರ ಹೊಂದಿದೆ:

'ಉಪಾಧ್ಯಾಯನೊಳ್ಳಿದುವೆಂದಾಯ್ದು ತಂದಿತ್ತ ಬೀಣೆಯಂ ಮಿಡಿದು ನೋಡಿ ತಂತಿಯೊಳ್ ತನುರೋಮಮಂ ಸೊರೆಯೊಳ್ ಶಲ್ಯಮಂ ಪ್ರವಾಳದೊಳ್ ಪಾಷಾಣಮಂ ತೋಱಿ ಕುಡುವೊಡೆ ನಿರ್ದೋಷಮಪ್ಪ ವೀಣೆಯಂ ಕುಡಿಮೆನೆ (6-18 ಗದ್ಯ)

ಕೆಲವು ಕಡೆ ಮೂಲವನ್ನು ಮುಸುಕಿಸುವಷ್ಟರಮಟ್ಟಿಗೆ, ಅವನ ಪ್ರತಿಭೆಗೆ ಕೋಡು ಮೂಡಿತೋ ಎನ್ನುವಂತೆ, ಸನ್ನಿವೇಶಗಳನ್ನು ಉದಾತ್ತಗೊಳಿಸುತ್ತಾನೆ. ಕೇವಲ ನಿದರ್ಶನಾರ್ಥವಾಗಿ ಜೇವಂಜಸೆ ಹೇಳುವ ಕೆಳಗಣ ಶ್ಲೋಕ-ಪದ್ಯಗಳನ್ನು ಪರಸ್ಪರ ತೂಗಿ ನೋಡಬಹುದು :

ರಾಜಗೇಹಂ ಸಮಿಾಕ್ಷ್ಯೈನಂ ಹಾಸಾಜ್ಜೀವದ್ಯಶಾ ಮುದಾ
ದೇವಕೀ ಪುಷ್ಪಜಾನಂದ ವಸ್ತ್ರಮೇತತ್ತ್ವಾಣು ಜಾ 371
ಸ್ವಸ್ಯಾಶ್ಚೇಷ್ಟಿತಮೇತೇನ ಪ್ರಕಾಶಯತಿ ತೇ ಮುನೇ
ಇತ್ಯವೋಚತ್ತ್ರದಾಕರ್ಣ್ಯ ಸಕೋಪಃ ಸೋಪಿ ಗುಪ್ತಿಭಿತ್ 372

ಭಾವಾ ನಮೋಸ್ತು ನಿಮ್ಮಡಿ | ದೇವಕಿ ಮೆಯ್ನೆರೆದಳೆಂದು ಬಂದಿರೆ ಲೇಸಾ
ಯ್ತಾವುದಸುಡ ತಂದಿರೆನು | ತ್ತಾ ವಧು ಮೆಯ್ದುನಿಸಿ ನಗುತುಮಡ್ಡಂ
ಬಂದಳ್ 7-6
ಬತ್ತಲೆ ಬಂದಿರ್ ಪಿಡಿಯಿಂ | ಸುತ್ತಿಮಿದಂ ನಿಮ್ಮ ತಂಗಿಯುಡಲಟ್ಟಿದಳೆಂ
ದೆತ್ತಿದಳವಂಗೆ ಮೊಗಮುರಿ | ದತ್ತಾತ್ತಾನಂದವಸ್ತ್ರಮಂ ದೇವಕಿಯಾ 7-7

ಕನ್ನಡದ ಮುಂದೆ ಸಂಸ್ಕೃತ ಪೇಲವವಾಗುತ್ತದೆ !

ಗುಣವರ್ಮನ ಹರಿವಂಶ ದೊರೆತಿಲ್ಲವಾದ್ದರಿಂದ ಎಷ್ಟರ ಮಟ್ಟಿಗೆ ಅರ್ಧನೇಮಿ ಪುರಾಣದ ಮೇಲೆ ಅದು ಪ್ರಭಾವ ಬೀರಿದೆಯೆಂಬುದನ್ನು ನಿರ್ಧರಿಸಲಾಗುವುದಿಲ್ಲ. ಕರ್ಣಪಾರ್ಯ ಅವನ ಹಿರಿಯ ಸಮಕಾಲೀನನಾಗಿದ್ದಿರಬಹುದಾದ್ದರಿಂದ ನೇಮಿಚಂದ್ರ ಅವನ ಕೃತಿಯನ್ನು ನೋಡಿರಬಹುದು. ಇಬ್ಬರ ಕೃತಿಗಳನ್ನೂ ಅಕ್ಕಪಕ್ಕದಲ್ಲಿಟ್ಟು ತೂಗಿ ನೋಡಿದಾಗ ಕರ್ಣಪಾರ್ಯ ನೇಮಿಚಂದ್ರನಿಗೆ ಹೆಗಲೆಣೆಯಾಗಿ ನಿಲ್ಲಲಾರ ನೆಂಬುದು ಸುಸ್ಪಷ್ಟವಾಗುತ್ತದೆ. ಭಾಷಾಪ್ರಭುತ್ವ ಪಾಂಡಿತ್ಯಗಳಲ್ಲಿ ಕರ್ಣಪಾರ್ಯನ ಹೆಗ್ಗಳಿಕೆ ಸರ್ವವಿದಿತವಾಗಿದ್ದರೂ, ಪ್ರತಿಭಾಕಲ್ಪನೆಗಳಲ್ಲಿ ಅವನು ನೇಮಿಚಂದ್ರ ನೊಡನೆ ಸ್ಪರ್ಧೆಗೆ ನಿಲ್ಲಲಾರನೆಂಬುದಕ್ಕೆ ನಿದರ್ಶನ ನೀಡಬಹುದು.

ಪ್ರಾಮಾಣಿಕವಾಗಿ ಮೂಲವನ್ನನುಸರಿಸಿದ್ದರೆ ಕೇವಲ ಅಸ್ಥಿಪಂಜರವಾಗಿ, ಬರಲಾಗಿ ನಿಸ್ಸಾರವಾಗಿ, ಶುಷ್ಕ ವರದಿಯಾಗಿ ಪರಿಣಮಿಸುತ್ತಿದ್ದ ಸಂಗತಿಗಳು ನೇಮಿಚಂದ್ರನ ಪ್ರತಿಭಾಸಂಸ್ಪರ್ಶದಿಂದ ಸಜೀವವಾಗಿ ರಸಭರಿತವಾಗಿ ಸಂಪುಷ್ಟ ವಾಗಿ ಮಿಣುಗುತ್ತವೆ. ನೇಮಿನಾಥನ ಭವಾವಳಿಯಲ್ಲಿ ಅಪರಾಜಿತನ ಅವತಾರಕ್ಕೆ ನೇಮಿಚಂದ್ರ ವಿಶೇಷ ಪ್ರಾಮುಖ್ಯತೆಯನ್ನು ನೀಡಿದ್ದಾನೆ. ಹಾಗೆಯೇ ವಿಧ್ಯುಕ ವಾಗುರೆ, ಬಲಿ-ವಾಮನ, ಕೃಷ್ಣ-ಚಾಣೂರರ ಪ್ರಸಂಗಗಳು ಅರ್ಧನೇಮಿಪುರಾಣ ದಲ್ಲಿ ಅತ್ಯುಜ್ವಲಕಾಂತಿಯಿಂದ ಕವಿಯ ಕವಿತಾವಿಲಾಸಕ್ಕೆ ಸಾಕ್ಷಿಯಾಗಿ ಮಿರುಗು ತ್ತವೆ. ಕರ್ಣಪಾರ್ಯನ ಕೃತಿಯ ಬಹುಭಾಗ ಮೂಲದ ನೆರಳಾದ್ದರಿಂದ ಇವು ಶುಷ್ಕ ವಾಗಿ ಕಾಣುತ್ತವೆ. ನೇಮಿಚಂದ್ರ ಕರ್ಣಪಾರ್ಯನ ಕೃತಿಯನ್ನು ನೋಡಿರಬಹುದೆಂಬ ಊಹೆಗೆ ಸಾಕ್ಷಿಯಾಗಿ ಅಲ್ಲೊಂದು ಇಲ್ಲೊಂದು ವಾಕ್ಯವೊ ವಾಕ್ಯಖಂಡವೊ

ನಿಶಿತದೃಷ್ಟಿಗೆ ಬೀಳದಿರಲಾರವು. ಕೆಳಗಿನ ಎರಡು ಕಂದಪದ್ಯಗಳನ್ನು ಹೋಲಿಸಿ ನೋಡಿದಾಗ ಈ ಮಾತಿನ ಯಥಾರ್ಥತೆ ಅಭಿವ್ಯಕ್ತವಾಗುತ್ತದೆ:

ಕೊಲಲಾಗದು ಕಳಲಾಗದು
ಕುಲಟೆಯರೊಳ್ ನೆರೆಯಲಾಗದಾರ್ತದಿನರ್ಥ
ಕ್ಕಲವರಲಣಮಾಗದು ಪುಸಿ
ಯಲಾಗದೀ ಬ್ರತಮನೈದುಮಮಂ ಪಿಡಿ ಮಗನೇ (ಅರ್ಧನೇಮಿ 3-72)

ಕೊಲೆಯುಂ ಪುಸಿಯುಂ ಕಳವುಂ
ಕುಲಟಾಸಂಗಮಮುಮಧಿಕ ಕಾಂಕ್ಷೆಯುಮೆಂಬೀ
ಖಿಲಕರ್ಮ ಹೇತುಗಳನವಿ
ಚಲಮತಿಯಿಂ ಬಿಸುಟು ನೆಗಳ್ವುದಿದು ತಾಂ ಧರ್ಮಂ
(ನೇಮಿನಾಥ ಪುರಾಣಂ 1-81)

ನೇಮಿಚಂದ್ರ ಬಹುಶ್ರುತನಾದ ಪ್ರಕಾಂಡ ಪಂಡಿತ. ತನ್ನ ಕಾಲದಲ್ಲಿ ಪ್ರಸಿದ್ಧವಾಗಿದ್ದ ಕಾವ್ಯ ಪುರಾಣಗಳನ್ನೆಲ್ಲ ಓದಿ ಜೀರ್ಣಿಸಿಕೊಂಡಿದ್ದಂತೆ ಕಾಣುತ್ತದೆ. ಆದ್ದರಿಂದ ಯಾವ ಗ್ರಂಥ ಎಷ್ಟು ಪ್ರಮಾಣದಲ್ಲಿ ಅವನಮೇಲೆ ಪ್ರಭಾವಬೀರಿತ್ತೆಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಮಹಾಪುರಾಣದ ಜೊತೆಗೆ ಬೃಹತ್ಕಥಾಕೋಶ, ಯಶಸ್ತಿಲಕ ಚಂಪೂ ಮತ್ತು ಇತರ ಕನ್ನಡ ಪ್ರಾಕೃತ ಗ್ರಂಥಗಳು ಅವನ ಜ್ಞಾನ ದಾಹಕ್ಕೆ ಅಮೃತವೆರೆದು, ಬೌದ್ಧಿಕ ಸಾಮರ್ಥ್ಯ ಪಾಂಡಿತ್ಯಗಳಿಗೆ ಸಾಣೆಹಿಡಿದಿರಬೇಕು. ಜೈನಮತ ಪ್ರಚಾರಕ್ಕೆಂದೇ ಸೃಷ್ಟಿಯಾಗಿ ಜನಸಾಮಾನ್ಯದಲ್ಲಿ ರೂಢಿಯಲ್ಲಿದ್ದ ಅನೇಕ ಕಥೆಗಳು ಕವಿಯ ಕಿವಿಗೆ ಬಿದ್ದಿರಬೇಕು. ಇವೆಲ್ಲ ಅವನ ಕಲ್ಪನಾವಿಲಾಸವನ್ನು ಕೆರಳಿಸಿರಬೇಕು. ಬಲಿವಾಮನರ ಕಥೆ ಭಾರತೀಯರಿಗೆ ಹೊಸದಲ್ಲ. ಆದರೆ ಅದನ್ನು ಹೇಳಿರುವ ಭಂಗಿಯಲ್ಲಿ, ಅದಕ್ಕೊದಗಿಸಿರುವ ಸಂಮೋಹಕವಾದ ಚಿತ್ರಣಶೈಲಿಯಲ್ಲಿ ನೇಮಿಚಂದ್ರನ ಕಾವ್ಯಕೌಶಲ ಉಕ್ತಿಚಮತ್ಕಾರ ಮತ್ತು ಅಪೂರ್ವ ವಿಶಿಷ್ಟತೆಗಳು ನವೋನವವಾಗಿ ಪ್ರಕಾಶಿಸುತ್ತವೆ. ವಸ್ತುನಿರ್ಮಾಣ ಮತ್ತು ಕಥಾಸಂವಿಧಾನಗಳಲ್ಲಿ ಅವನು ತನ್ನತನವನ್ನು ತೋರಿಸಿಲ್ಲ ನಿಜ; ಆದರೆ ಸಾರಹೀನವಾಗಿ ನಿರ್ವಿಶಿಷ್ಟವಾಗಿದ್ದ ಸನ್ನಿವೇಶ ಘಟನೆಗಳಿಗೆ ಜೀವದಾನಮಾಡಿ ಚೆಲುವುತುಂಬಿ ಸರ್ವಾಕರ್ಷಣೀಯವಾಗುವಂತೆ ಪೋಷಿಸಿದ್ದಾನೆ.

ಆಗಮಿಕ ಕಾವ್ಯವಾದ ಅರ್ಧನೇಮಿ ಪುರಾಣರಚನೆಯಲ್ಲಿ ಅವನಿಗೆ ಸ್ವಾತಂತ್ರ್ಯವಿಲ್ಲ; ಸಂಪ್ರದಾಯದ ಜಾಡನ್ನು ಬಿಡುವಂತಿಲ್ಲ. ಪೂರ್ವದ ಪಂಪ ರನ್ನರಂತೆ ಇವನೂ ಮಹಾಪುರಾಣದ ಹಾದಿ ಹಿಡಿಯಬೇಕಾಯಿತು. ಆದರೆ ಲೀಲಾವತಿ ಪ್ರಬಂಧ ರಚನೆಯಲ್ಲಿ ಈ ನಿರ್ಬಂಧವಿರಲಿಲ್ಲ. ಪ್ರತಿಭೆಯಿದ್ದು ಕಲ್ಪನೆ ನೆರವಾಗಿದ್ದರೆ ಅವನ ಆ ಕಾವ್ಯ ನೆಲದಿಂದ ಮುಗಿಲಿಗೇರಬಹುದಿತ್ತು. ಅವನ ಕಾವ್ಯಕಲಾಭಿತ್ತಿಯಂತು ಪರಿಮಿತ ಸೀಮಾರೇಖೆಯುಳ್ಳದ್ದು; ಅವನ ಕಾವ್ಯೋದ್ದೇಶ ಜೀವನದೃಷ್ಟಿಗಳು

ಲಾಘವವಾದುವು. ಆದ್ದರಿಂದ ಅವನು ಪ್ರಾರಂಭದಶೆಯಲ್ಲಿಯೇ ಮುಗ್ಗರಿಸಿದ. ಸ್ವಾತಂತ್ರ್ಯವಿದ್ದಾಗ ಸಂಯಮವಿಲ್ಲದೆ ಅವನ ಕಾವ್ಯಕಲಾಪ್ರೌಢಿಮೆ ವ್ಯರ್ಥವಾಯಿತು; ಸಂಯಮ ಪ್ರಾಪ್ತವಾದಾಗ ಸ್ವಾತಂತ್ರ್ಯವಿಲ್ಲದೆ ಆ ಪ್ರೌಢಿಮೆಯ ಸಂಪೂರ್ಣಾಭಿವ್ಯಕ್ತಿಗೆ ಅವಕಾಶವಿಲ್ಲವಾಯಿತು. ಇದರಿಂದ ಅಗ್ರಗಣ್ಯರ ಶ್ರೇಣಿಯಲ್ಲಿ ನೇಮಿಚಂದ್ರನಿಗೆ ಸ್ಥಾನ ದೊರಕದಂತಾಯಿತು.

## ೭. ಪಾತ್ರರಚನೆ

ಕವಿಯ ಕಥಾಸಂವಿಧಾನ ಕೌಶಲಕ್ಕೆ ಗ್ರಹಣ ಹಿಡಿದಂತೆಯೇ ಅವನ ಪಾತ್ರರಚನಾಸಾಮರ್ಥ್ಯಕ್ಕೂ ಕುಟ್ಟೆ ಹಿಡಿದಿದೆ. ಅವನ ಪಾತ್ರಗಳೆಲ್ಲ ಒಂದೇ ಅಚ್ಚಿನಲ್ಲಿ ಎರಕ ಹೊಯ್ದಂತಿವೆ, ಲೆಪ್ಪದ ಬೊಂಬೆಗಳಂತಿವೆ; ರಕ್ತಚಲನೆಯುಡುಗಿ ಮರಗಟ್ಟಿಕೊಂಡಂತೆ ಕಾಣುತ್ತವೆ. ಅವುಗಳಲ್ಲಿ ತ್ರಾಣವಿಲ್ಲ, ವ್ಯಕ್ತಿವೈಶಿಷ್ಟ್ಯವಿಲ್ಲ, ಉಪ್ಪು ಹುಳಿ ಕಾರಗಳಿಲ್ಲ. ನೇಮಿನಾಥ ಪುರಾಣದ ಕೆಲವು ಪಾತ್ರಗಳಲ್ಲಿಯಾದರೂ ಜೈವಿಕಶಕ್ತಿ ಪುಟಿಯುತ್ತಿರುವಂತೆ ಕಾಣುವುದಾದರೂ, ಲೀಲಾವತಿಯ ಪಾತ್ರಗಳು ಪಾಶವಿಕ ಸ್ವಭಾವದ ಯಂತ್ರಗಳಂತೆ, ಒಮ್ಮೊಮ್ಮೆ ಕಾಡುಮೇಡುಗಳಲ್ಲಿ ಗೊತ್ತುಗುರಿಯಿಲ್ಲದೆ ತೊಳಲಾಡುವ ಮಾನಸಿಕ ರೋಗಿಗಳಂತೆ ತೋರ್ಪಡಿಸಿಕೊಳ್ಳುತ್ತಾರೆ. ಸನ್ನಿವೇಶ ಘಟನೆಗಳಿಂದ ಕಥಾಕ್ರಿಯೆಯಿಂದ ಕಥೆಯ ತಿರುವಿನಿಂದ ಗುಣಶೀಲ ದೌರ್ಬಲ್ಯಗಳು ಹೊರಹೊಮ್ಮುವಂತಾದರೆ ಪಾತ್ರಗಳು ಕಳೆಗೂಡಿ ಜೀವಂತವಾಗಿ ರಂಜಿಸುತ್ತವೆ. ನ್ಯಾಯಾಧೀಶನ ಮುಂದೆ ನಿಂತು ತನ್ನ ಕಕ್ಷಿಗಾರನ ಗುಣಗಾನಮಾಡಿ ಅವನ ನಡೆನುಡಿಗಳನ್ನು ಸಮರ್ಥಿಸುವ ವಕೀಲನಂತೆ ಕವಿ ತನ್ನ ನಾಯಕನಾಯಿಕೆಯರನ್ನು ವರ್ಣಿಸಿದರೆ ಅವು ತಮ್ಮ ಮರತನದಿಂದ ಪಾರಾಗುವುದಿಲ್ಲ; ಅವುಗಳ ಬೊಂಬೆತನಕ್ಕೆ ಚೈತನ್ಯವೊದಗುವುದಿಲ್ಲ. ನೇಮಿಚಂದ್ರ ವಕೀಲನಂತೆ ತನ್ನ ಪಾತ್ರಗಳನ್ನಾಡಿಸುತ್ತಾನೆಯೇ ಹೊರತು, ಕವಿಯಂತೆ ಅವುಗಳನ್ನು ಸೃಷ್ಟಿಸಿಲ್ಲ. ಲೀಲಾವತಿ ಎರಡೇ ಎರಡು ಪಾತ್ರಗಳುಳ್ಳ ಡೊಳ್ಳುಕಾವ್ಯ; ಅವರಿಬ್ಬರಿಂದಲೇ, ಅವರಿಬ್ಬರಿಗಾಗಿಯೇ ಕಥೆ ಮಿತಿಯಿಲ್ಲದೆ ಬೆಳೆದಿದೆ. ಮಕರಂದ ಕಳಾವತಿಯರು ನಾಯಕನಾಯಿಕೆಯರ ನೆರಳಾಗಿದ್ದುಕೊಂಡು, ಕ್ರಿಯೆಯ ಬೆಳೆವಣಿಗೆಗೆ ಸಹಾಯವಾಗುತ್ತಾರೆ. ಮದನಜ್ವರತಪ್ತನಾದ ರಾಜಕುಮಾರನನ್ನು ಸಂತೈಸುವಲ್ಲಿ, ಸಮಯೋಚಿತವಾದ ಸಲಹೆ ನೀಡುವಲ್ಲಿ, ಶುಕದಂಪತಿಗಳ ಸಂಭಾಷಣೆಯನ್ನು ಗ್ರಹಿಸಿ ಅದರ ಸ್ವಾರಸ್ಯವನ್ನು ವಿವರಿಸುವಲ್ಲಿ, ಜಿನಾರಾಧನೆಯ ಸಮಯವನ್ನು ನೆನಪುಮಾಡಿಕೊಡುವಲ್ಲಿ, ಕಾಳಾವಲೋಕಿನೀ ಫಲಕದ ಘಟನೆಗೆ ಹೊಣೆಗಾರನಾಗುವಲ್ಲಿ, ಲೀಲಾವತೀ ವಿಯೋಗತಪ್ತನಾದ ದೊರೆಯನ್ನು ಸಮಾಧಾನಪಡಿಸುವಲ್ಲಿ, ಒಟ್ಟಿನಲ್ಲಿ ಅವನು ಗೆಳೆಯನಂತೆ, ಮಂತ್ರಿಯಂತೆ, ಶಿಷ್ಯನಂತೆ, ಒಡಹುಟ್ಟಿದವನಂತೆ ರಾಜಕುಮಾರನ ಸುಖದುಃಖಗಳಲ್ಲಿ ಸಮಭಾಗಿಯಾಗುತ್ತಾನೆ; ಒಡೆಯನ ಕಲ್ಯಾಣಸಾಧನೆಗಾಗಿ ತನ್ನ ಸುಖವನ್ನೊತ್ತೆಯಿಟ್ಟಿದ್ದಾನೆ. ಕವಿಯ ಮಾತಿನಲ್ಲಿ ಹೇಳುವುದಾದರೆ ಅವನು ನೀತಿನಿಪುಣ, ಕಾಲಕ್ರಿಯಾಲೋಕಲೌಕಿಕ ವಿಜ್ಞಾನ ವಿಚಕ್ಷಣ, ಸಕಲ ಶಾಸ್ತ್ರಾರ್ಥಪ್ರವೀಣ ಮತ್ತು

ಗುಣಾಗ್ರಣಿ; ಶಿವನಿಗೆ ಕುಬೇರನಂತಿದ್ದನು. ಮಕರಂದನಂತೆಯೇ ಕಳಾವತಿ ಸಕಲ ಕಲಾಪ್ರವೀಣೆ, ಲೀಲಾವತಿಗೆ ತಕ್ಕ ಕೆಳದಿ. ಸ್ವಪ್ನದಲ್ಲಿ ಕಂಡ ರಮಣನ ಚಿತ್ರವನ್ನು ಬರೆಯುವಂತೆ ಪ್ರೇರಿಸುವಲ್ಲಿ, ಮನೋರಥ ಸಿದ್ಧಿಗಾಗಿ ಪದ್ಮಾವತಿಯನ್ನು ಪೂಜಿಸುವಂತೆ ಬುದ್ಧಿವಾದ ನೀಡುವಲ್ಲಿ, ನಲ್ಲನಲ್ಲೆಯರನ್ನು ಒಟ್ಟುಗೂಡಿಸುವಲ್ಲಿ, ಒಡತಿಗೆ ಶಿಶಿರಕ್ರಿಯೆ ನಡಸುವಲ್ಲಿ ಅವಳು ರಾಜಕುಮಾರಿಗೆ ತಕ್ಕ ಕೆಳದಿಯಾಗಿದ್ದಾಳೆ. ಗಂಡನ ಬರವಿಗಾಗಿ ಹಾತೊರೆಯುತ್ತಿದ್ದ ಗಿಳಿಯ ಕಾತರತೆಯನ್ನು ಕವಿ ಮನೋಜ್ಞವಾಗಿ ಚಿತ್ರಿಸಿದ್ದಾನೆ (6-93, 94). ಚೂಡಾಮಣಿ, ಪದ್ಮಾವತಿ, ಗುಣಗಂಧ, ಶೃಂಗಾರಶೇಖರ, ವಿಭ್ರಮಲೇಖೆ, ತಮಾಳಿಕೆ, ಬೋಧಸಿಂಧುಭಟಾರರು, ವಿದ್ಯುಲ್ಲೇಖೆ ಚಂದ್ರಲೇಖೆಯರು, ಗಜಭಟ್ಟ, ವಸಂತಶೇಖರ, ಮದನಮಂಜರಿ—ಈ ಪಾತ್ರಗಳು ಬರಿಯ ಹುಸಿಹೆಸರುಗಳೇ ಹೊರತು, ಅವುಗಳಲ್ಲಿ ಲವಲೇಶವಾದರೂ ತಿರುಳಿಲ್ಲ. ಕಂದರ್ಪದೇವ ಕುರವಕವಾಗಬೇಕಾದರೆ ಒಂದು ನೆಪ ಅತ್ಯವಶ್ಯವಾಗಿತ್ತು. ಅದಕ್ಕಾಗಿ ಮದನಮಂಜರಿಯ ಪ್ರಸಂಗದ ಬಂದಿಳಿಕೆಯನ್ನು ಬೆಳೆಸಿದಂತೆ ಕಾಣುತ್ತದೆ. ಅವಳಾದರೊ ಅಸಹ್ಯವಾದ ಕಾಮವಿಕಾರಕ್ಕೆ ಹೆಸರಾಗಿದ್ದಾಳೆ. ವಿಧಿಸ್ವರೂಪರಾದ ಪದ್ಮಾವತಿ ಅಂಬಿಕೆ ಚಕ್ರೇಶ್ವರಿಯರು ಕಂದರ್ಪ ಲೀಲಾವತಿಯರ ಪ್ರಣಯ ವಿಜಯಯಾತ್ರೆಗೆ ಸಾರಥಿಗಳಾಗಿದ್ದಾರೆ. ಸ್ವಪ್ನವಂತು ಈ ಕಥೆಯ ಚಾಲಕಶಕ್ತಿಯಾಗಿದೆ.

ಮಾರ್ಗಾಯಾಸದಿಂದ ಏದುತ್ತ ನೀರಡಿಕೆಯಿಂದ ಕಣ್ಣು ತೇಲಿಸುತ್ತ ಬಂದ ಮುಪ್ಪಿನ ಪಾರ್ವನ ಶಬ್ದನಿರ್ಮಿತ ವಿಗ್ರಹ ಎಂದೆಂದೂ ಮರೆಯಲಾಗದುದು. ಆ ಪಾತ್ರಸೃಷ್ಟಿಯು ಬೇಕುಬೇಡಗಳನ್ನು ನಿರ್ಲಕ್ಷಿಸಿ ಅರೆಕ್ಷಣ ಆ ವ್ಯಕ್ತಿಯ ಚಿತ್ರವನ್ನು ಮನೋಭಿತ್ತಿಯಲ್ಲಿ ಕುಂಚಿಸಿಕೊಂಡು ಸಂತೋಷಪಡಬಹುದು :

ನೆಕ್ಕಕದಂಪು ಪತ್ತಿ ಪಡೆಗೊಂಡ ಕೊರಲ್ಪುಣಿಚೆರ್ದ ಕೀನಿವಲ್
ಪೊಕ್ಕಡಗಿರ್ದ ಕಣ್ಕುರುಳಿಗೊಂಡರೆ ಒತ್ತಿದ ಬಾಯ್ ಬಬಲ್ದ ಮೆ
ಯ್ಯುಕ್ಕುಟಿಸಿರ್ದ ಪೆರ್ಬಸಿಱಗುರ್ವಿಸೆ ಬಂದನದೊರ್ವ ಪಾರ್ವನ
ಲ್ಲೊಕ್ಕಿಟಿತರ್ಪ ಕೈಪೆವೆಮರಂ ತುದಿನಾಲಗೆಯಿಂದೆ ನಕ್ಕುತುಂ 6-56

ಇಂಥಕಡೆ ಭೀಭತ್ಸವೂ ಆಸ್ವಾದನೀಯವಾಗುತ್ತದೆ. ಆ ಮುದುಕ ನೀರು ಹೀರುವ ದೃಶ್ಯವೂ ಕಮನೀಯವಾಗಿದೆ (6-57).

ಕವಿ ಕಾವ್ಯಾರಂಭದಲ್ಲಿಯೇ ಚೂಡಾಮಣಿ ಪದ್ಮಾವತಿಯರ ವಿಷಯ ಪ್ರಸ್ತಾಪಿಸಿ, ಹದಿನಾಲ್ಕು ಪದ್ಯಗಳಲ್ಲಿಯೂ ಸುದೀರ್ಘವಾದೊಂದು ಗದ್ಯಭಾಗದಲ್ಲಿಯೂ ಕಂದರ್ಪದೇವನ ಮಹಿಮಾ ಪ್ರಶಸ್ತಿಯನ್ನು ವಿರಚಿಸಿದ್ದಾನೆ. ಅವನ ಅಂಗಾಂಗಗಳನ್ನು ಪ್ರಕೃತಿಯ ಸೌಂದರ್ಯವಸ್ತುಗಳಿಗೆ ಹೋಲಿಸಿದ್ದಾನೆ. ಅವನನ್ನು ಕಂಡ ಮಾತ್ರದಿಂದ ವನಿತೆಯರೂ ವೈರಿವೀರರೂ ಸೋತುಹೋಗುತ್ತಾರೆ. "ಆ ಕುಮಾರಂ ವ್ಯಾಕರಣ ಕುಶಲನುಂ, ನಯಚಿತ್ತಾವಯನುಂ, ಕವಿತಾಕೋವಿದನುಂ, ವಾತ್ಸ್ಯಾಯನಧವಳನುಂ . . . ಕಾಮಿನೀಕುಚಕಪೋಲ ಪತ್ರಭಂಗ ವಿಚಿತ್ರಚಿತ್ರಕರ್ಮವಿಚಿತ್ರಕನುಂ . . ."—ಹೀಗೆಯೇ ಈ ಪ್ರಶಸ್ತಿರೂಪದ ಗೀರ್ವಾಣವಾಣಿ

ಅವಿಚ್ಛಿನ್ನವಾಗಿ ಹರಿದಿದೆ. ಕಷ್ಟಶೀಲರೂ ಹತವೀರ್ಯರೂ ಗತಪುಣ್ಯರೂ ಆದ ಈಗಿನ ಕಾಲದ ರಾಜ ಮಹಾರಾಜರನ್ನು ಕಾಂಚನ ಪ್ರಲೋಭನದಿಂದ ವಿಷ್ಣು ಶಿವರಿಗೆ ಹೋಲಿಸಿ, ಚತುರ್ಯುಗಗಳೂ ಚತುರ್ದಶಭುವನಗಳೂ ಕಾಣದ ಸರ್ವಗುಣಗಳನ್ನಾರೋಪಿಸಿ ಸ್ತುತಿಗೆಯ್ಯುವ ಆಧುನಿಕ ಪಂಡಿತರನ್ನೂ ಈ ಪ್ರಶಸ್ತಿ ಮೂದಲಿಸುವಂತಿದೆ. ಅವನು ಸೂಕರಬೇಟೆಯಿಂದ ಮಹಾವೀರನಾಗಿ, ಬ್ರಾಹ್ಮಣನೊಬ್ಬನಿಗೆ ನೀರು ನೀಡಿದ್ದರಿಂದ ಮಹಾತ್ಯಾಗಿಯಾಗಿ, ರಾಜನಿಗೆ ಮಗನಾಗಿ ಹುಟ್ಟಿದ್ದರಿಂದ ರಾಜ್ಯಭಾರ ಹೊರದೆಯೆ ಮಹಾಮಹಿಮನಾಗಿ ವಿಜೃಂಭಿಸುತ್ತಾನೆ. ಕಾಮವಿಕಾರದಿಂದ ಮತಿಗೆಟ್ಟು ಧೃತಿಯಳಿದು ಹುಚ್ಚನಂತೆ ಅಲೆಯುವವನಿಗೆ ರಾಜ್ಯಭಾರದ ಹೊಣೆ ಸಲ್ಲದು! ಅವನ ವಿಕಾರಾವಸ್ಥೆಯನ್ನು ಕವಿ ಮಾರ್ಮಿಕವಾಗಿ ವರ್ಣಿಸಿದ್ದಾನೆ:

ಪೆಱತುನುಡಿ ಪೆಱತುಭಾವನೆ
ಪೆಱತೆಸಕಂ ಪುಗದು ತರುಣಿತೀವಿದ ಮನದೊಳ್
ಪೆಱತೇಂ ತನ್ನುಮನಂದೇಂ
ಮಱೆದನೊ ಪರವಶತೆಯಿಂದ ವಿತರಣ ಮುಗ್ಧಂ 4-2

ಅವನಿಗೆ ಕಾಮವೆ ಗುರು, ಕರಣಸಮುದಯವೇ ಮಂತ್ರಿವರ್ಗ, ಚಿಂತೆಯೇ ಪರಿಚಾರ—ಇದು ಅವನ ರಾಗ ಸಾಮ್ರಾಜ್ಯದ ವೈಭವ. ರಾಜಕುಮಾರನಾಗಿಯೂ ಸಕಲ ವೈಭವೋಪೇತನಾಗಿಯೂ ಅವನಿಗೆ ಸುಖವಿಲ್ಲ. ಸಂಗೀತವಾದ್ಯವಾದನ ನೃತ್ಯ ಕಾವ್ಯಬಂಧನ ನಾಟಕ ಪುರಾಣಶ್ರವಣ ದ್ಯೂತ ಕುಬ್ಜಖಗಯುದ್ಧ—ಯಾವುವೂ ಅವನ ಮನೋರೋಗಕ್ಕೆ ಔಷಧವಾಗಲಾರವು. ಅವನ ಜಿನಾರಾಧನೆ ಪದ್ಮಾವತೀ ಪೂಜೆ ಭಟ್ಟಾರಕಶುಶ್ರೂಷೆ ಮೊದಲಾದ ಸಾತ್ವಿಕಕಾರ್ಯಗಳೂ ಅವನ ಕಾಮದ ಕಾಳಿಕೆಯನ್ನು ನೀಗಲಾರವು. ಮನ್ಮಥಸಿದ್ಧಿಯೇ ಆ ಪೂಜಾರಾಧನೆಗಳ ಮುಖ್ಯೋದ್ದೇಶವೆಂಬುದನ್ನೂ ಮರೆಯಬಾರದು. ಕಥಾನಾಯಕ ಒಮ್ಮೊಮ್ಮೆ ಸ್ತ್ರೈಣನಂತೆ ಕಾಣುವಂತಿದ್ದರೂ, ಅವನು ಸ್ನೇಹಶೀಲ, ಧ್ಯೇಯನಿಷ್ಠ, ಶೃಂಗಾರಪ್ರಿಯ, ದೃಢಹಠವಾದಿ ಎಂಬ ವಿಷಯ ಅವನ ವರ್ತನೆಯಿಂದ ವ್ಯಕ್ತವಾಗುತ್ತದೆ. ಅವನ ಕಾಮಚೇಷ್ಟೆ ಪರಸ್ತ್ರೀವ್ಯಸನದಲ್ಲಿ ಪರ್ಯವಸಾನವಾಗಿಲ್ಲವೆಂಬುದು ಸಮಾಧಾನದ ಸಂಗತಿ. ಶಾಪಗ್ರಸ್ತನಾಗಿ ವೃಕ್ಷರೂಪವನ್ನು ತಾಳಿದರೂ ಸರಿಯೆ ಖೇಚರಸುಂದರಿಯ ಕಡೆಗೆ ಕಣ್ಣೆತ್ತಿ ನೋಡುವುದಿಲ್ಲ. ಏಕಪತ್ನೀನಿಷ್ಠೆಯ ಶೌಚಗುಣ ಅವನಿಗೆ ರಕ್ತಗತವಾಗಿ ಬಂದಿರುವ ವಿಶೇಷ ಪ್ರವೃತ್ತಿ.

ಕಥಾನಾಯಕನಂತೆ ನಾಯಿಕೆಯಾದ ಲೀಲಾವತಿಯೂ ಪ್ರಾಪ್ತವಯಸ್ಕಳಾದ ವಿರಹಿಣಿ. ಕಂದರ್ಪದೇವನ ಸ್ವಪ್ನದ ಮೂಲಕ ಅವಳ ಪರಿಚಯ ಮೊದಲಾಗುತ್ತದೆ. ಆ ಲಲನಾಮಣಿಯ ಲಾವಣ್ಯವರ್ಣನೆ ಕೇವಲ ದೈಹಿಕಭಾಗಕ್ಕೆ ಸೀಮಿತವಾಗಿದೆ. ಅನಂತರ ಜೋಗಿಣಿಯ ಇಂದ್ರಜಾಲವಿದ್ಯಾಮಹಿಮೆಯಿಂದ ವಿರಹಸಂತಪ್ತೆಯಾದ ಲೀಲಾವತಿ ಕಾಣಿಸಿಕೊಳ್ಳುತ್ತಾಳೆ. ಕೊನೆಗೆ ಚೂತಪ್ರಿಯಶುಕನ ಬಾಯಿಂದ ಅವಳ

ವಿವರ ತಿಳಿಯುತ್ತದೆ. ನಾಲ್ಕಾರು ಪದ್ಯಗಳಲ್ಲಿ ಅವಳ ರೂಪವರ್ಣನೆ ಸಾಗುತ್ತದೆ. ಆ ವರ್ಣನೆಯೂ ಸಾಂಪ್ರದಾಯಿಕವಾಗಿ ಕವಿಸಮಯಾನುಸಾರಿಯಾಗಿ ಬರುತ್ತದೆ. ಕನಸಿನಲ್ಲಿ ಕಂಡ ರಮಣನನ್ನೆ ಮದುವೆಯಾಗಬೇಕೆನ್ನುವ ಅವಳ ನಿಶ್ಚಯ ಮೆಚ್ಚ ತಕ್ಕದ್ದೆ. ಆದರೆ ಅವಳು ಲೋಕಾನುಭವ ಸಾಲದ ಮುಗ್ಧೆ. ಗಂಡನ ಗುಣಗಾನವನ್ನು ಕೇಳಿಕಂಡ ಬಳಿಕವೂ ಅವನ ಬಗ್ಗೆ ತಾಳುವ ಸಂಶಯ ಅಕ್ಷಮ್ಯವಾದದ್ದು. ಅವನಿಗಾಗಿ ಕಾದು ಕಾದು ಬಳಲಿ ಬೆಂದು ಸುಣ್ಣವಾದನಂತರವೂ ಕಾಳಾವಲೋಕಿನೀ ಫಲಕವನ್ನು ಕಂಡಕೂಡಲೆ ಕೆರಳಿದ ಸರ್ಪಿಣಿಯಂತಾಗಿ, ವಿವೇಕಕಳೆದುಕೊಂಡು, ಪತಿ ಸಖಿಯರ ಪ್ರಾರ್ಥನೆಯನ್ನು ಲೆಕ್ಕಿಸದೆ ಲತೆಯಾಗಿದ್ದದ್ದು ಅವಳ ದುರ್ವಿಪಾಕದ ಫಲವೆಂದೇ ಹೇಳಬಹುದು. ಪತಿಯೆಷ್ಟು ಸಹನಶೀಲನೊ ಸತಿಯಷ್ಟು ಶೀಘ್ರ ಕೋಪಿಯೆಂದು ತೋರುತ್ತದೆ. ಒಟ್ಟಿನಲ್ಲಿ ವಾತ್ಸ್ಯಾಯನನ ಕಾಮ ಶಾಸ್ತ್ರಕ್ಕೆ ಈ ಪಾತ್ರಗಳಲ್ಲಿ ಕವಿ ಲಕ್ಷ್ಯವನ್ನೊದಗಿಸಿರುವಂತೆ ತೋರದಿರಲಾರದು.

ಅದ್ಭುತರಸದ ಕಾರಂಜಿಯಂತಿರುವ ಮಾಯಾಭುಜಂಗ ಜೋಗಿಣಿಯರ ಪಾತ್ರ ರಚನೆಯಲ್ಲಿ ಕವಿ ಕಲ್ಪನಾ ಕೌಶಲವನ್ನೂ ಅಪಾರ ಜಾಣ್ಮೆಯನ್ನೂ ಮೆರೆದಿದ್ದಾನೆ. ಆಸ್ಥಾನ ಪ್ರವೇಶಸಮಯದ ಮಾಯಾಭುಜಂಗನ ಚಿತ್ರ ಅತ್ಯಂತ ರಮ್ಯವಾಗಿದ್ದು ಕಣ್ಣಿಗೆ ಕಟ್ಟಿದಂತಿದೆ. ಚತುರ್ದಶಭುವನಗಳನ್ನು ಅಂಗೈಯಲ್ಲಿ ಕುಣಿಸುವ ಅಟ್ಟಹಾಸವೇ ಮೂರ್ತಿವೆತ್ತಂತೆ, ಕೌತುಕದ ಜನನಗೃಹವೆಂಬಂತೆ, ಚಮತ್ಕೃತಿಗೆ ಕಣಿಯೆಂಬಂತೆ, ಮಂತ್ರಸಿದ್ಧಿಯ ಪರಾಕಾಷ್ಠೆಯೆಂಬಂತೆ ಅವನ ನಿಲವು ನೋಟಕರ ಕಣ್ಣು ಕುಕ್ಕುತ್ತದೆ.

ತಿರಿಪುತ್ತುಂ ಕುಂಚಮಂ ಸೆಳ್ಳುಗುರೆಳವೆಳಗಂ ಸೂಸುತುಂ ಪಲ್ಲ ಮಿಂಚಂ
ಪರಪುತ್ತುಂ ಭಾಳಬದ್ಧಾಕ್ಷತಮನಮರೆ ಪತ್ರೊತ್ತುತಂ ಯೋಗಪಟ್ಟೋ
ದರಮಂ ಸೈತಿಕ್ಕುತುಂ ಕುಂಕುಮರಜನಿರಜೋ ರಂಜಿತಾಂಗಂ ಮದಪ್ರ
ಸ್ಫುರಿತಾಕ್ಷಂ ಬಂದು ಪೊಕ್ಕಂ ನೃಪಸಭೆಯನಹಂಕಾರಿ ಮಾಯಾಭುಜಂಗಂ 4-69

ಹರಸುಡುಗೆಯನ್ನು ಸುಲಿದುಟ್ಟ ಅಭಿಮಾನ ಅವನ ಹುಲಿದೊಗಲಿನಲ್ಲಿ ಕಂಗೊಳಿಸುತ್ತಿದೆ; ಎಳಮಿಂಚನಸೆದು ಬಳಿದಂತೆ ಅವನ ಮೈ ತೊಳಗುತ್ತಿದೆ; ವಿದ್ಯಾಗರ್ವವನ್ನು ಮೆರೆಯುವ ಹೊನ್ನಪಟ್ಟಿಗೆ ಅವನ ಕೊರಳಲ್ಲಿ ರಂಜಿಸುತ್ತಿದೆ; ಅರುಣ ಮಂಡಲವನ್ನು ತೇದು ಬೊಟ್ಟನಿಟ್ಟಂತೆ ಅವನ ನೊಸಲಲ್ಲಿ ಮೂದೆರೆಯ ಚಂದನಗಂಧ ಉಜ್ವಲವಾಗಿದೆ. ಸಿಡಿಲ ಕಡಿಗಳ ಮಾಲೆಯಂತೆ ಅವನ ಎಡಗಾಲಿನಲ್ಲಿ ಹೊಂದೊಡರು ಇನಿದನಿ ಬೀರುತ್ತಿದೆ. ಮಹೇಂದ್ರನನ್ನು ಸ್ತುತಿಸಿ, ರಾಜಕುಮಾರನ ಸರ್ವಜ್ಞತ್ವವನ್ನೊಪ್ಪಿಕೊಂಡು, 'ಮಂತ್ರದೊಳಾಜ್ಞಾಸಿದ್ಧನೆಂ ತಂತ್ರದೊಳ್ ಪ್ರಯೋಗಸಿದ್ಧನೆಂ' ಎಂದು ಆತ್ಮಶಕ್ತಿಯನ್ನು ಪ್ರಕಟಪಡಿಸಿ, ಗಗನದ ಚಂದ್ರತಾರೆಗಳನ್ನು ಗುಡಿಸಿ ಕುಪ್ಪೆಮಾಡಿ ತರುವುದಾಗಿಯೂ, ಸಪ್ತಸಾಗರಗಳನ್ನೂ ಕಲಕಿ ಕುಲಗಿರಿಗಳನ್ನು ರುಳಿಸಿ ನಭಕ್ಕೆ ಭೂಮಿಯನ್ನು ನೆಗಪಿ ದೇವೇಂದ್ರ ಸಭೆಯನ್ನು ನೆಲಕ್ಕೆಳೆದು ತಂದು ತೋರಿಸುವುದಾಗಿಯೂ ತನ್ನ ಆತ್ಮಪ್ರತ್ಯಯವನ್ನು ಪ್ರಕಾಶಪಡಿಸಿದಾಗ ಓದುಗರ ರಕ್ತ ಹೆಪ್ಪುಗಟ್ಟುತ್ತದೆ, ಉಸಿರು ಏದುತ್ತದೆ. ಅಷ್ಟದಿಕ್ಪಾಲಕ ಸಮೂಹದಿಂದೊಡಗೂಡಿದ ದೇವೇಂದ್ರಸಭೆ

ಯನ್ನೂ, ರಂಭೆಯ ಮಹಾದ್ಭುತ ನೃತ್ಯವನ್ನೂ ಪ್ರದರ್ಶಿಸಿ ನೃಪಸಭೆಯನ್ನವನು ಬೆರಗುಗೊಳಿಸುತ್ತಾನೆ. ಸರ್ವವಿಧದಿಂದಲೂ ಅವನಿಗೆ ಸರಿಗಟ್ಟುವಂತಿದ್ದ ಜೋಗಿಣಿಯ ಮೆಯ್ಮೆತನವೂ, ಅವಳ ವರ್ಚಸ್ಸೂ ಚಿತ್ತಾಕರ್ಷಕ ರೀತಿಯಲ್ಲಿ ವ್ಯಾವರ್ಣಿತವಾಗಿವೆ.

ಲೀಲಾವತಿ ಹರೆಯದ ಉಕ್ಕಿನಲ್ಲಿ ರಚಿತವಾದ ಕಾವ್ಯವಾದ್ದರಿಂದ ಯೌವನ ಸಹಜವಾದ ದುರ್ದಮ್ಯ ಭಾವಾವೇಶವೂ ವಶವರ್ತಿಯಾಗದ ಚಿತ್ತಚಾಂಚಲ್ಯವೂ ಕವಿಯ ಕೃತಿಯಲ್ಲಿ ಪಡಿಮೂಡಿವೆ. ಲೀಲಾವತಿಗೂ ನೇಮಿನಾಥ ಪುರಾಣಕ್ಕೂ ಕಾಲದ ಅಂತರವಿದೆ, ಪರಿಸ್ಥಿತಿಯ ಅಂತರವಿದೆ, ಕವಿ ವ್ಯಕ್ತಿತ್ವದ ಅಂತರವಿದೆ, ಮೇಲಾಗಿ ವಸ್ತುವಿನ ಅಂತರವಿದೆ. ಪುರಾಣರಚನೆಯ ಕಾಲಕ್ಕೆ ಕವಿಚೇತನ ತಕ್ಕಮಟ್ಟಿಗೆ ಮಾಗಿದೆ, ದೈವಪರವಾದ ಸಾಧನೆ ಚಿಂತನೆಗಳ ಫಲವಾಗಿ ಅವನ ಸ್ವಭಾವ ಸಾತ್ವಿಕತೆಯ ಕಡೆಗೆ ವಾಲಿದೆ; ಚಂಚಲವಾದ ಕ್ಷುದ್ರ ಭಾವಗಳೆಲ್ಲ ಗಸಿಯಾಗಿ ತಳಕ್ಕಿಳಿದು ಸಾತ್ವಿಕಭಾವಗಳ ತಿಳಿ ಮೇಲೆ ಮಡುಗೊಂಡಿದೆ. ಒಮ್ಮೊಮ್ಮೆ ಮಡುವಿನ ತಳದಲ್ಲಿ ಕಂಪನವುಂಟಾದಾಗ ಗಸಿ ಮೇಲೇಳುವಂತೆ ಸ್ತ್ರೀ ನಾಮಸ್ಮರಣೆಯೆ ಅವನ ಚಿತ್ತ ಕ್ಷೋಭೆಗೂ ಭಾವವಿಕಾರಕ್ಕೂ ಕಾರಣವಾಗುತ್ತದೆ. ಆದರೂ ನೇಮಿನಾಥ ತೀರ್ಥಂಕರನ ನೆನಪು ಅವನ ಚಿತ್ತಸ್ವಾಸ್ಥ್ಯವನ್ನು ರಕ್ಷಿಸುತ್ತದೆ.

ಜೈನಪುರಾಣಗಳೆಂದರೆ ಮುಖ್ಯವಾಗಿ ಭವಾವಳಿಗಳ ಕಥಾ ಗುಚ್ಛ. ಹೊರನೋಟಕ್ಕೆ ಅವು ಬೇರೆ ಬೇರೆ ಕಥೆಯಂತೆ ಕಂಡರೂ ಒಂದೇ ಜೀವವಾಹಿನಿ ಕೊನೆಯ ತನಕ ಏಕಾಖಂಡವಾಗಿ ಹರಿದು, ಸರ್ವಭವಗಳ ಏಕ ವ್ಯಕ್ತಿತ್ವವನ್ನು ಸಂಸ್ಥಾಪಿಸುತ್ತದೆ. ಏಕೆಂದರೆ ಒಂದೊಂದು ಜನ್ಮವೂ ಸ್ವಯಂಸಂಪೂರ್ಣವಲ್ಲ, ಅಂತಿಮವಾದುದಲ್ಲ. ಸಾಧನಾಪರವಾದ ಒಂದೊಂದು ಜೀವಿಯೂ ಒಂದೊಂದು ಜನ್ಮದಲ್ಲಿ ಅಷ್ಟಷ್ಟು ದೂರ ಊರ್ಧ್ವಮುಖವಾಗಿ ಚರಿಸುತ್ತ, ಕೊನೆಗೆ ಕೈವಲ್ಯ ಪದವಿಯನ್ನು ಪಡೆಯುತ್ತದೆ. ಈ ದೃಷ್ಟಿಯಿಂದ ವಿಂಧ್ಯಶಬರ, ಇಭ್ಯಕೇತು, ಸೌಧರ್ಮಕಲ್ಪಜ, ಚಿಂತಾಗತಿ, ಮಹೇಂದ್ರ ಕಲ್ಪಜ, ಅಪರಾಜಿತ, ಅಚ್ಯುತೇಂದ್ರ, ಸುಪ್ರತಿಷ್ಠ ಪಂಚಾಣೂತ್ತರಾಹಮಿಂದ್ರ—ನೇಮಿನಾಥನ ಈ ಪೂರ್ವಭವಗಳಲ್ಲಿ ಒಂದೇ ವ್ಯಕ್ತಿತ್ವದ ಹಲವು ಮುಖಗಳನ್ನು ಗುರುತಿಸಬಹುದು. ಆದರೆ ಅನೇಕ ವೇಳೆ ಈ ಮುಖಗಳ ಸಂಪೂರ್ಣ ಚಿತ್ರ ದೊರಕುವುದಿಲ್ಲ. ಅಪರಾಜಿತನ ಜನ್ಮಕಥನ ಗುಣ ವಿವರಣೆಗಳಲ್ಲಿ ಚರ್ವಿತ ಚರ್ವಣವೆ ಹೊರತು ಅವನ ವ್ಯಕ್ತಿತ್ವದ ವೈಶಿಷ್ಟ್ಯ ಸ್ಪಷ್ಟವಾಗಿ ಗೋಚರವಾಗುವುದಿಲ್ಲ. ಕೆಲವಂಶಗಳಲ್ಲಿ ಮಹಾಭಾರತದ ಭೀಷ್ಮನನ್ನು ಹೋಲುವ ಚಿಂತಾಗತಿಯ ಪಾತ್ರವನ್ನು ತಕ್ಕಮಟ್ಟಿನ ಸಾಮರ್ಥ್ಯದಿಂದ ಕವಿ ಬಿಡಿಸಿದ್ದಾನೆ. ಸುಮಾರು ಹತ್ತು ಪದ್ಯಗಳಲ್ಲಿ (೨ : 88-97) ಆ ಪಾತ್ರದ ವರ್ಣನೆ ಸಾಗುತ್ತದೆ. ಆ ಪಾತ್ರದಲ್ಲಿ ಚೈತನ್ಯವಿದೆ, ನಾವೀನ್ಯವಿದೆ. ಅಂಚೆಯಂತಿದ್ದ ವಿಳಾಸವತಿಯನ್ನು ಗತಿಯುದ್ಧದಲ್ಲಿ ಸೋಲಿಸಿ, ಅವಳಿಗೆ ವಶನಾಗದೆ, ದೀಕ್ಷೆಯನ್ನು ಕೈಕೊಂಡದ್ದರಲ್ಲಿ ಅವನ ಶೌರ್ಯ ಶೌಚಗುಣಗಳು ಪ್ರಕಟವಾಗುತ್ತವೆ.

ಬೇಡರ ವರ್ಣನೆಯಲ್ಲಿ ನೇಮಿಚಂದ್ರ ಸ್ವಾನುಭವಪೂರ್ಣವಾದ ಅಪೂರ್ವ ಕೌಶಲವನ್ನು ತೋರಿಸುತ್ತಾನೆ. ವಾಚಕರ ಮನಸ್ಸಿನ ಮೇಲೆ ಅಚ್ಚೊತ್ತುವಂತೆ

ವಿಂಧ್ಯಕ-ವಾಗುರೆಯರನ್ನು ಚಿತ್ರಿಸುತ್ತಾನೆ. ವಿಂಧ್ಯಕ ಚಾಪವಿದ್ಯೆಯಲ್ಲಿ ಅರ್ಜುನ, ರೂಪದಲ್ಲಿ ಕೃಷ್ಣ. ವಾಗುರಿಕೆಯ ಮೊಲೆವೆಟ್ಟದನೋಲಗಾ ಬಿಂಬಫಲದ ರಸವನ್ನು ಹೀರಿದ ಅವನಿಗೆ ಅಡವಿಯ ಹಣ್ಣುಗಳು ರುಚಿಸಲೊಲ್ಲವು. ಕಾಡು ಕಗ್ಗತ್ತಲೆಯಿಂದ ಕೂಡಿದ್ದರೂ ಮಿಂಚಿನ ಗೊಂಚಲಂತೆ ಮಿಂಚುವ ತನ್ನ ಶಬರಿಯ ಕಣ್ಣ ಬೆಳಕಿನಲ್ಲಿ ಶಬರರಾಜ ಸುತ್ತಾಡುತ್ತಾನೆ. ಕಿರಾತ ವೇಷದ ಶಿವಭವಾನಿಯರಂತಿದ್ದ ಆ ವ್ಯಾಧ ದಂಪತಿಗಳು ಒಮ್ಮೆ ವಸಂತೋದಯ ಸಮಯದಲ್ಲಿ ಮೃಗಯಾಸಕ್ತರಾಗಿ ನಟ್ಟಡವಿಗೆ ಹೋಗುತ್ತಾರೆ. ಬೆಚ್ಚಿನೋಡುತ್ತಿದ್ದ ಹುಲ್ಲೆಗಳಲ್ಲಿ ನಲ್ಲಳ ಕೊಲ್ಲಿನೋಟವನ್ನು ಕಂಡು, ಕಾಡಾನೆಯ ಕುಂಭಸ್ಥಳಗಳಲ್ಲಿ ಕಾಮಿನಿಯ ಮೊಲೆವೆಳಗನ್ನು ಗುರುತಿಸಿ, ನವಿಲುಗಳಲ್ಲಿ ವಾಗುರೆಯ ನೋರ್ಮುಡಿಯ ಸಿರಿಯ ಸೊಬಗನ್ನು ಗಮನಿಸಿ ಬೇಡ ಯಾವ ಪ್ರಾಣಿಯನ್ನೂ ಕೊಲ್ಲುವುದಿಲ್ಲ. ಅವನ ಶೃಂಗಾರ ಪ್ರಿಯತೆಯಲ್ಲಿ ಸಾತ್ವಿಕಭಾವ ಹುದುಗಿದೆ; ಮುನಿಗಳ ಉಪದೇಶದಿಂದ ಆ ಸಾತ್ವಿಕಭಾವ ಕೊನರಿಸಿ, ದೀಕ್ಷಾಗ್ರಹಣದಲ್ಲಿ ಪರ್ಯವಸಾನವಾಗುತ್ತದೆ. ವಾಗುರೆಯೂ ಗಂಡನ ದಾರಿ ಹಿಡಿಯುತ್ತಾಳೆ. ದೀಕ್ಷಾಗ್ರಹಣ ನಂತರ ಕಂದಮೂಲಾದಿಗಳ ಭುಂಜನದಿಂದ ತೃಪ್ತಿಗೊಳ್ಳಬೇಕಾದ ಸಂದರ್ಭವೊದಗಿದಾಗ ಮಾಂಸಾಹಾರ ಸಂಸ್ಕಾರದ ರುಚಿಚಾಪಲ್ಯ ಆಗಾಗ್ಗೆ ಅವಳ ನೆನಪಿನಲ್ಲಿ ಮರುಕೊಳಿಸುತ್ತದೆ. ಹಳ್ಳಿಯ ಬೇಡಿತಿಯರು 'ನೀನುಂ ನಿನ್ನ ಗಂಡನುಂ ಪುಲಿಯಂತಿರ್ದು ನರಿಯಂತಿರೇಕಿರ್ದಪಿರ್' ಎಂದು ವಾಗುರೆಯನ್ನು ಕೆಣಕಿದಾಗ ಅವಳು ಕಂಬನಿದುಂಬಿಕೊಂಡು ಮೆಲ್ಲನೆ ಕೆಳಗೆ ಕಂಡಂತೆ ನುಡಿಯುತ್ತಾಳೆ:

ತುಡೆ ಕೋಲಂ ಮುನಿಗಳ್ಗೆ ಕಾದ ಫಲಮಂ ಕೈ ಕೆಯ್ಯೊಳುಂಡಪ್ಪೆನಾ
ದಡಿಗರ್ ಮಂತ್ರಿಸಿ ಕಟ್ಟಿದರ್ ಕಲಿಯ ಕಯ್ಯುಂ ಬಾಯುಮಂ ಕಟ್ಟಿನಾಂ
ಪಿಡಿಯಂ ಪಕ್ಕಿಗಳಂ ಮೃಗಕ್ಕೆ ಬಿಡಲೊಲ್ಲಂ ನಾಯ್ಗಳಂ ಜೇನುಮಂ
ಬಡಿಯಂ ಗಾಣಮನಿಕ್ಕನೊಕ್ಕನಿನಿಯಂ ತನ್ನಿಕ್ಕೆಯುಂ ಬಾಡ್ಕೆಯುಂ

ಅವಳ ಮನಸ್ಸು ಒಂದು ನಿಲುಗಡೆಗೆ ಬಂದಿಲ್ಲವೆಂಬುದನ್ನೂ ಅದು ಹದಗೊಂಡಿಲ್ಲವೆಂಬುದನ್ನೂ ಕವಿ ಮಾರ್ಮಿಕವಾಗಿ ನಿರೂಪಿಸಿದ್ದಾನೆ. 'ನೀನೆಮ್ಮ ಮನೆಯೊಳ್ ಬಾಯೆ ಬಯಸಿದುದನುಂಡು ಮೆಯ್ಯೆ ಮೆಚ್ಚಿದಂತಿರು' ಎಂದು ನೆರೆಹೊರೆಯವರು ಅಕ್ಕರೆಯಿಂದ ಕರೆದಾಗ ಅವಳು 'ತಲೆಯನಲುಗಿ ಬೆರಲಂ ಮಿಡಿದು ಮನದೊಳಿರ್ದುದಂ ಮಾತಿನೊಳ್ ಬಚ್ಚುಕೆಯ್ವನಲ್ಲದೆ ಬೇಡಿಯೊಂದರ್ಕೆ ಬಗೆದವಳನಲ್ಲೆ ನಿನ್ನ ನಲ್ಲನಪ್ಪುದನಪ್ಪೆನದು ಲೇಸಾದೊಡಂ ಪೊಲ್ಲಾದೊಡಮೆನ್ನ ಪುಣ್ಯಂ' ಎಂದು ಹೇಳುವಾಗ ಅವಳ ಮನದ ಹೊಳಹು ಸ್ಪಷ್ಟವಾಗಿ ತಿಳಿಯುತ್ತದೆ. ಆ ಅನುರೂಪದಂಪತಿಗಳ ಧರ್ಮಶ್ರದ್ಧೆಯನ್ನು ಕವಿ ಸ್ಪಷ್ಟವಾಗಿ ನಿರಾಡಂಬರವಾಗಿ ನಿರೂಪಿಸಿದ್ದಾನೆ.

ಕೆಲವು ಕಥೆಗಳಂತು ಶಾಲ್ಮಾವರವಿಗಳಂತೆ ನಿಸ್ಸಾರವಾಗಿದ್ದು, ಅಲ್ಲಿಯ ಪಾತ್ರಗಳು ವಿವಿಧವೇಷ ಸ್ಪರ್ಧೆಗಾಗಿ ಒಂದೆರಡು ಕ್ಷಣ ರಂಗಮಂಟಪದ ಮೇಲೆ ಬಂದು ಹೋಗುವ ವ್ಯಕ್ತಿಗಳಂತೆ ಕಾಣುತ್ತಾರೆ. ಇಷ್ಟಕೇತು, ದೀಪಕ, ಜಿತಶತ್ರು, ಸುಪ್ರಭೆ, ಕಮಳಪ್ರಭೆ ಮದನಸೌಂದರಿ, ಶ್ರೀಚಂದ್ರ, ಶ್ರೀಮತಿ, ಸುಪ್ರತಿಷ್ಠ, ಸುನಂದಾದೇವಿ,

...ರಸೇನ, ಅಂಧಕವೃಷ್ಣಿ ಮತ್ತು ನರಪತಿವೃಷ್ಣಿ—ಮುಖತೋರಿ ಮರೆಯಾಗುತ್ತಾರೆ.
...ದುಗರ ಮನಸ್ಸಿನಲ್ಲಿ ಅವರ ರೂಪು ಕೂಡ ಬೇರೂರುವುದಿಲ್ಲ. ಒಂದೇ ಮಾತಿನಲ್ಲಿ
...ಳಬಹುದಾದರೆ ಅವರೆಲ್ಲ ಒಂದೇ ಎರಕದಲ್ಲಿ ಅಚ್ಚುಗೊಂಡ ಬೊಂಬೆಗಳು.
...ಂಗಾರವರ್ಣನೆಗೆ ತುಸು ಹಕ್ಕು ದೊರೆತರೂ ಕವಿಯ ದೌರ್ಬಲ್ಯ ಅದಕ್ಕೆ ಶರಣು
...ಗುತ್ತದೆ. ಪಾಂಡು-ಕುಂತಿಯರ ಸಮಾಗಮವನ್ನು ತೀವ್ರಾಸಕ್ತಿಯಿಂದ
...ನಾವಶ್ಯಕವಾದ ಔದಾರ್ಯದಿಂದ ಚಿತ್ರಿಸುವ ಲೇಖನಿ ಧೃತರಾಷ್ಟ್ರ-ಗಾಂಧಾರಿಯರ
...ಮಾಗಮಸಂದರ್ಭದಲ್ಲಿ ಅತ್ಯಂತ ಕೃಪಣವಾಗುತ್ತದೆ.

ಹರಿವಂಶದ ಪೂರ್ವಭಾಗದಲ್ಲಿ ವಸುದೇವ ಪ್ರಕರಣವೇ ಪ್ರಧಾನವೆಂಬಂತೆ,
...ವನೇ ಕೇಂದ್ರ ವ್ಯಕ್ತಿಯೆಂಬಂತೆ ಕವಿ ಆ ಪಾತ್ರರಚನೆಗಾಗಿ ತನ್ನ ಕಲಾಕೌಶಲ
...ಲ್ಲಿ ಬಹ್ವಂಶವನ್ನು ವಿನಿಯೋಗಿಸಿದ್ದಾನೆ. ಜೈನಮತದಲ್ಲಿ ಅರ್ಹಂತನಂತರ ಮನ್ಮಥ
...ಗೆ ದ್ವಿತೀಯಸ್ಥಾನ. ಜಿನ ಮನ್ಮಥನನ್ನು ಗೆದ್ದವನಾದರೆ, ಮನ್ಮಥ ಶಿವನನ್ನು ಗೆದ್ದ
...ನು.* ಅಂಥ ಮನ್ಮಥ ಸಮಾನರಾದವರಲ್ಲಿ ವಸುದೇವನೊಬ್ಬ. ಈ ಮನ್ಮಥನ ದಿಗ್ವಿ
...ಯವನ್ನು ಶೃಂಗಾರ ಪ್ರಿಯನಾದ ಕವಿ ವಿಸ್ತಾರವಾಗಿ, ಕಟುರೆಯಾಗುವಂತೆ
...ರ್ಣಿಸಿದ್ದಾನೆ. ಅವನು ಅಂಧಕವೃಷ್ಣಿಯ ಕಿರಿಯಮಗ, ನೇಮಿನಾಥನ ತಂದೆ
...ಮುದ್ರವಿಜಯನ ತಮ್ಮ. 'ಪೊಸದೇಸಿ ಕಡುಗಾಡಿ'ಗಳಿಂದ ಅವನು 'ಧರೆಗೆ ಕಣ್ಬ
...ಳ್ಳಾಗಿರ್ದಂ.' ಮನ್ಮಥನನ್ನು ಋತುತತಿಗಳು ಬಳಸಿದಂತೆ ಅವನನ್ನು ರಾಜ
...ಮಾರರು ಸದಾ ಸುತ್ತಿರುತ್ತಾರೆ. ಆ ಪುಷ್ಪಬಾಣ ಅರಮನೆಯಿಂದ ಹೊರಗೆ ಹೊರಟ
...ದರೆ ನಭವೆಲ್ಲ ಹೂವಿನ ಹಂದರಾಗಿ ಭೂಮಿಯೆಲ್ಲ ಹೂವಿನ ಹಸೆಯಾಗಿ, ರಮಣಿ
...ರ ಚಿತ್ತ ಪಲ್ಲಟವಾಗುತ್ತದೆ. ಆತನ ರೂಪೇ ಮನಸ್ಸಿನಲ್ಲಿ ಅಚ್ಚೊತ್ತಿದಂತಾಗಿ,
...ರ್ಪದಲ್ಲಿ ಬಿಂಬಿಸಿದಂತಾಗಿ, ಸ್ತ್ರೀಯರು ಅವನ ಹೋಲಿಕೆಯ ಮಕ್ಕಳನ್ನು ಪಡೆಯು
...ತ್ತಾರೆ. ನಾಡಿನ ಜನ ಸಮುದ್ರವಿಜಯನಿಗೆ ದೂರು ಹೊರುತ್ತಾರೆ. ದೊರೆ ತಮ್ಮ
...ನ್ನು ಕರೆಸಿಕೊಂಡು, ಅವನ ಮನಸ್ಸಿಗೆ ನೋವಾಗದಂತೆ "ಎನಪ್ಪ, ನಿನ್ನ ತುಟಿ
...ಣಗಿದ ಚಿಗುರಾಗಿದೆ, ನಿನ್ನ ಮೆಯ್ ಹೊಸೆದ ಹೂವಾಗಿದೆ. ಬಿಸಿಲಲ್ಲಿ ಅಲೆದಾಡು
...ದ್ದರೆ ಲೋಕದ ಕಿಸುರಿಗೂ ಕಣ್ಣೆಂಜಲಿಗೂ ನಿನ್ನ ಮೆಯ್ ಪಕ್ಕಾಗಿ ಬಾಡಿಹೋಗು
...ದೆ. ಸುಖವಾಗಿ ಮನೆಯಲ್ಲಿರು" ಎಂದು ಹೇಳಿ ಗೃಹಬಂಧನದಲ್ಲಿಡುತ್ತಾನೆ.

ಕೆಲವು ದಿನಗಳ ನಂತರ ತನ್ನ ಬಂಧನ ಸಂಗತಿಯನ್ನು ಜೋಟಿಕೆಯ ಮೂಲಕ
...ಳಿದ ವಸುದೇವ ಸಿಗ್ಗಾಗಿ 'ಶರ್ಕರೆ ನಾಲಿಗೆ ನೃಪರೆರ್ದೆ ಕರ್ತರಿ'ಯೆಂಬುದನ್ನರಿತು,
...ಲ್ಲನೆ ಅರಮನೆಯಿಂದ ನುಸುಳಿ, ಸ್ಮಶಾನವನ್ನು ಪ್ರವೇಶಿಸಿ, ಪರಸ್ತ್ರೀಗೆರಗಿದ
...ಾಪಕ್ಕಾಗಿ ಮಸಣದುರಿಯನ್ನು ಹೊಕ್ಕುದಾಗಿ ಪತ್ರ ಬರೆದಿಟ್ಟು ಮುಂದೆ ಹೊರಡು

* ಈ ಸಂಗತಿ ಲೀಲಾವತಿಯ ಕೆಳಗಿನ ಪದ್ಯದಲ್ಲಿ ಸ್ಪಷ್ಟವಾಗಿ ನಿರೂಪಿತಗೊಂಡಿದೆ:—

ಪೊಸವ ಬಿಡಿಗಂಗಧವನಂ ಭವನಾಶನನಾರ್ದು ಸುಟ್ಟ ಭೂ
ತೇಶನ ಬುದ್ಧಿಗುದ್ದವಟಿದಾಂ ಪೊಗಡಂ ಪೊಗಡ್ತಂ ಮನೋಜನಂ
ಕೇಸುರಿಯುಂತೆ ಪರ್ವಿ ಪಟುವಾಗಿ ಪೊದಬ್ದು ಶಿರ್ದಂತರಂಗಮಂ
ಕಾಸಿ ಕಪಾಲಿಯ ಹಿಡಿದೊಜಿಲ್ದರಿವೆಣ್ಣನೆ ಮಾಡಿ ಬಿಟ್ಟನಂ ೧೮೫



ತ್ತಾನೆ. ಇಲ್ಲಿಂದ ಅವನ ಪ್ರಣಯ ವಿಜಯದ ಕಥೆ ಪ್ರಾರಂಭವಾಗುತ್ತದೆ. ಪರ್ಯಟನಾವಧಿಯಲ್ಲಿ ಮಗಧಾಧಿಪತಿಯ ತನುಜೆ ಶ್ಯಾಮಳೆ, ಅಶನಿವೇಗನ ಪುತ್ರಿ ಶಾಲ್ಮಲಿ, ಅಮಿತಗತಿಯ ಮಗಳು ಗಂಧರ್ವದತ್ತೆ, ರಕ್ತಾಕ್ಷನ ಮಗಳು ರೋಹಿಣಿ—ಮೊದಲಾದವರನ್ನು ಮದುವೆಯಾಗುತ್ತಾನೆ. ಅವನು ವೀಣಾವಾದನ ಕೌಶಲವನ್ನು ಮೆರೆದು ಗಂಧರ್ವದತ್ತೆಯನ್ನು ಮದುವೆಯಾಗುವಲ್ಲಿ ಉದಯನನ ನೆನಪಾಗುತ್ತದೆ.

ಧನುರ್ವಿದ್ಯೆಯಲ್ಲಿ ದ್ರೋಣನಂತಿದ್ದ ವಸುದೇವನ ಬಳಿಗೆ ವಿದ್ಯಾರ್ಜನೆಗಾಗಿ ಕಂಸನೇ ಮೊದಲಾದ ಹಲವಾರು ರಾಜಕುಮಾರರು ಬರುತ್ತಾರೆ. ಚಾಪವಿದ್ಯೆಯಲ್ಲಿ ಪಾರಂಗತನಾದ ಕಂಸ ಜರಾಸಂಧನ ಸಾಮರ್ಥ್ಯಕ್ಕೆ ಮಣಿಯದ ಸಿಂಹರಥನನ್ನು ಸೋಲಿಸಿ, ಜರಾಸಂಧನ ಮಗಳು ಜೀವಂಜಸೆಯನ್ನು ಮದುವೆಯಾಗುತ್ತಾನೆ. ಕಂಸ ಮಧುರಾಪುರಿಗೆ ದಂಡೆತ್ತಿಹೋಗಿ ತನ್ನ ತಂದೆಗೆ ಸಂಕಲೆ ತೊಡಿಸಿ, ರಾಜ್ಯಧುರಂಧರನಾಗಿ,ತಂಗಿ ದೇವಕಿಯನ್ನು ವಸುದೇವನಿಗೆ ಮದುವೆಮಾಡಿಕೊಡುತ್ತಾನೆ. ಕಂಸನ ಸಮಸ್ತಾಭಿವೃದ್ಧಿಗೆ ಕಾರಣನಾದ ವಸುದೇವ ಕಂಸನಿಂದಲೇ ಸೆರೆಮನೆಯ ಕಷ್ಟಕ್ಲೇಶಗಳನ್ನನುಭವಿಸುವ ದುರಂತ ಪರಿಸ್ಥಿತಿಗೊಳಗಾಗುತ್ತಾನೆ. ಕಂದರ್ಪಸೌಂದರ್ಯನಿಮಿತ್ತವಾಗಿ ರಾಜ್ಯಚ್ಯುತನಾದ ವಸುದೇವ ಪ್ರಣಯದಿಗ್ವಿಜಯದಲ್ಲಿ ಅಪಾರ ಯಶಸ್ಸು ಸಾಧಿಸಿ, ಕೊನೆಗೆ ಅವನ ವೀರವಿಕ್ರಮವೆ ದೂರದ ಕಾರಣವಾಗಿ ದುರಂತಕ್ಕೀಡಾಗುತ್ತಾನೆ. ಆದರೆ ದುಃಖಮೂಲವಾದ ದುರಂತದಿಂದ ಕೃಷ್ಣ ಜನನವಾಗುತ್ತದೆನ್ನುವುದನ್ನು ನಿರ್ಲಕ್ಷಿಸಲಾಗದು.

ಕಂಸನ ಪಾತ್ರ ನಿರ್ವಹಣೆಯಲ್ಲಿ ಕವಿಯ ಕಲಾಕೌಶಲ್ಯ ಕೃತಕೃತ್ಯತೆ ಪಡೆದಿದೆ. ಅವನು ಉನ್ಮತ್ತ ವಿಧಿಯ ವಜ್ರಹಸ್ತದ ಕ್ರೂರಾಯುಧ. ಅವನ ಜನನದಲ್ಲಿಯೇ ಘೋರ ಭವಿಷ್ಯದ ಸೂಚನೆ ಹುದುಗಿದೆ. ಈಶ್ವರೇಚ್ಛೆಯ ಮುಂದೆ ಮಾನವಪ್ರಯತ್ನ ನಿಷ್ಪ್ರಯೋಜಕವೆಂಬ ತತ್ವಕ್ಕೆ ಈ ಪ್ರಕರಣ ನಿದರ್ಶನವಾಗಿದೆ. ಜನನಸಮಯದ ದುರ್ನಿಮಿತ್ತ ಭೀತಿಯಿಂದ ಉಗ್ರಸೇನ ತನ್ನ ಹೂಗೂಸನ್ನು ಯಮುನೆಯಲ್ಲಿ ವಿಸರ್ಜಿಸಿದರೆ ಹೇಗೋ ಅದು ಬದುಕಿಕೊಂಡು ಬೆಳೆದು ಅವನ ಬಾಳಿಗೆ ಮುಳ್ಳಾಗುತ್ತದೆ. ಕಾಳಿಂದಿಯಲ್ಲಿ ಕಂಚಿನ ಮಂದಸಿನಲ್ಲಿ ಸಿಕ್ಕಿದ ಆ ಮಗುವನ್ನು ಮಂಡೋದರಿಯೆಂಬ ಕಳ್ಳವತಿ ಸಾಕುತ್ತಾಳೆ. ಅವಹೇಳನಾಸ್ಪದವಾದ ಪರಿಸರಣದಲ್ಲಿ ಬೆಳೆದರೂ ವಿಧಿ ಅವನ ಕ್ಷಾತ್ರಪ್ರಜ್ಞೆಯನ್ನು ಮೆಲ್ಲಮೆಲ್ಲಗೆ ಕೆರಳಿಸುತ್ತದೆ. ಮಂಡೋದರಿಯ ಮಗನಿಗೆ ತಕ್ಕ ವೇಷದಲ್ಲಿಯೇ ಅವನು ವಸುದೇವನಲ್ಲಿಗೆ ಶರಾಸನ ವಿದ್ಯೆ ಕಲಿಯುವ ಸಲುವಾಗಿ ಬರುತ್ತಾನೆ.

> ಸುಡುದಲೆ ಬಿಟ್ಟಕಣ್ ಕಲಿಮೊಗಂ ಕಡಿಗೊಂಡುಡೆ ಬಿಟ್ಟತಪ್ಪ ಕೈ
> ಯಿಡಿದು ಪೊರಳ್ಚಿ ಮಾಡಿದವೊಲಿಪ್ಪೊಡಲೊಪ್ಪುವ ರೂಪುತುಪ್ಪಮಂ
> ತೊಡೆದವೊಲಪ್ಪ ಮಿಾಸೆ ಮಿಸುಗುತ್ತಿರೆ . . . . .

ಬಂದ ರೂಕ್ಷವೇಷದ ಕಂಸನನ್ನು ದ್ರೋಣಾಚಾರ್ಯನಂತೆ ವಿಸರ್ಜಿಸದೆ ವಸುದೇವ ಚಾಪವಿದ್ಯಾಪಾರಂಗತನನ್ನಾಗಿ ಮಾಡುತ್ತಾನೆ. ಜರಾಸಂಧನಿಗೂ ಸೋಲದ

ಸಿಂಹರಥನಿಗೆ ಮಣ್ಣುತಿನ್ನಿಸಿ ಕಂಸ ತನ್ನ ಅಪ್ರತಿಮ ಶೌರ್ಯವನ್ನು ಮೆರೆದು ಜರಾಸಂಧನ ಅಳಿಯನಾಗುತ್ತಾನೆ.

ಅನ್ಯಕೃತಾಪರಾಧ ಕಾರಣವಾಗಿ ಕರ್ಣ ಪಾಡುಪಟ್ಟರೆ, ಕಂಸ ವಿಧಿವಿಲಸನದ ಕ್ರೌರ್ಯಕ್ಕೆ ಬಲಿಯಾಗುತ್ತಾನೆ. ಗುಣಾತಿಶಯತೆ ಕರ್ಣನ ದೌರ್ಬಲ್ಯವಾದರೆ, ಗುಣಹೀನತೆ ಕಂಸನ ಸ್ವಭಾವವಾಗಿ ಪರಿಣಮಿಸುತ್ತದೆ. ದುರ್ನಿಮಿತ್ತ ರೂಪದ ವಿಧಿಯ ಪ್ರಭಾವದಿಂದ ಉಗ್ರಸೇನ ತಪ್ಪುಮಾಡಿದ, ನಿಜ. ಆ ತಪ್ಪನ್ನು ಮತ್ತೊಂದು ತಪ್ಪಿನಿಂದ ಪರಿಹರಿಸಲು ಪ್ರಯತ್ನಿಸಿ, ತಂದೆಯನ್ನು ಸೆರೆಮನೆಗೆ ನೂಕುತ್ತಾನೆ. ಒಮ್ಮೆ ಸಂಯಮ ಸಡಿಲಿ ಮನುಷ್ಯ ಪತನಾಭಿಮುಖಿಯಾದರೆ ಪ್ರಪಾತ ಮುಟ್ಟುವತನಕ ಜಾರುತ್ತಾನೆ. ಸತಿಯ ಅಹಂಕಾರ ಚೇಷ್ಟೆಯಿಂದ ಋಷಿಶಾಪ ಸಮನಿಸಿ ವಿವೇಕ ಮಸುಳಿದಾಗ ಕಂಸ ವಿದ್ಯಾದಾನದ ಮೂಲಕ ಆತ್ಮಶಕ್ತಿಯನ್ನೆರೆದ ವಸುದೇವನನ್ನೂ, ತಂಗಿ ದೇವಕಿಯನ್ನೂ ಸೆರೆಗೆ ನೂಕಿ ಪಾಪಭಾಜನಾಗುತ್ತಾನೆ. ಉಗ್ರಸೇನನನ್ನೊಡಂಬಡಿಸಿ ದೇವಕಿಯನ್ನು ಕರೆಸಿಕೊಂಡಾಗ ಕಾಪಟ್ಯ ಕೃತಘ್ನತೆಗಳೂ, ತಂಗಿಯ ಮಕ್ಕಳನ್ನು ಕೊಲ್ಲುವಲ್ಲಿ ವಂಚನೆ ನೃಶಂತತ್ವಗಳೂ ಪ್ರಕಟವಾಗುತ್ತವೆ. ಇವನು ದುಷ್ಟಬುದ್ಧಿಗಿಂತಲೂ ನೀಚ. ದುಷ್ಟಬುದ್ಧಿ ತಾನೇ ಚಂದ್ರಹಾಸನನ್ನು ಕೊಲ್ಲುವ ಹೇಯ ಸಾಹಸಕ್ಕೆಳಸಲಿಲ್ಲ; ಆದರೆ ಕಂಸ ಕಟುಕನಿಗಿಂತಲೂ ಕಠಿನನಾಗಿ ಹೂಗೂಸುಗಳನ್ನು ಅಗಸನಂತೆ ಬಂಡೆಯಮೇಲೆ ಬಡಿಯುತ್ತಾನೆ. ತಂಗಿಯ ಮಗ ನಂದಗೋಕುಲದಲ್ಲಿ ಬೆಳೆಯುತ್ತಿದ್ದ ಸಂಗತಿಯನ್ನು ಕೇಳಿ ಉನ್ಮತ್ತನಾಗುತ್ತಾನೆ. ಕೃಷ್ಣಹನನವೊಂದೇ ಅವನ ಸರ್ವಾಪೇಕ್ಷೆಯಾಗಿ, ಅವನ ಸಾವು ಬದುಕಿನ ಪ್ರಶ್ನೆಯಾಗಿ, ನಾನಾ ಸನ್ನಾಹಗಳನ್ನು ಹೂಡಿ ವಿಫಲನಾಗಿ, ಕೊನೆಗೆ ಕೃಷ್ಣನಿಂದಲೇ ಸಾವನ್ನಪ್ಪುತ್ತಾನೆ. ಹೆಜ್ಜೆಹೆಜ್ಜೆಗೂ ಖಳತನವನ್ನು ಪ್ರಕಟಿಸುತ್ತ, ಕ್ರಮಶಃ ಅದನ್ನು ಪರಿಣಾಮಕಾರಿಯಾಗಿ ಶಿಖರಕ್ಕೊಯ್ಯುವ ಜಾಣ್ಮೆಯನ್ನು ಕವಿ ಪ್ರದರ್ಶಿಸಿದ್ದಾನೆ.

ನೇಮಿನಾಥಪುರಾಣವು ಮಹಾಭಾರತದಂತೆ ದಾಯಾದಿಗಳ ಕಥೆ. ಅದರ ಉತ್ತರಭಾಗ ನೇಮಿತೀರ್ಥಂಕರನ ಕಾರ್ಯಕ್ಷೇತ್ರಕ್ಕೆ ಸಂಬಂಧಿಸಿದ್ದಾದರೆ ಪೂರ್ವಭಾಗ ವಸುದೇವ–ಕೃಷ್ಣರ ತಂದೆಮಕ್ಕಳಿಬ್ಬರ ಹೆಗ್ಗಳಿಕೆಗೆ ಮೀಸಲಾಗಿದೆ. ಜೈನಪರಂಪರೆಯಲ್ಲಿ ಕೃಷ್ಣನಿಗೆ ಪ್ರಧಾನಸ್ಥಾನವಿಲ್ಲದಿದ್ದರೂ ವಿಶೇಷಸ್ಥಾನವಿದೆ; ಅವನು ಅವತಾರಪುರುಷನಲ್ಲದಿದ್ದರೂ ಕಾರಣಪುರುಷನಾದ ವಾಸುದೇವ. ನೇಮಿತೀರ್ಥಂಕರನ ದಾಯಾದಿಯಾದ್ದರಿಂದ ಅವನ ಹೆಗ್ಗಳಿಕೆಗೆ ಕೋಡು ಮೂಡಿದೆ. ಮೇಲಾಗಿ ಅವನು ಮನ್ಮಥರೂಪದ ವಸುದೇವನ ಮಗ. ನೇಮಿಚಂದ್ರನಿಗೆ ಸರಿಸಮಾನನಲ್ಲದಿದ್ದರೂ ಕವಿಗೆ ಕೃಷ್ಣಪಾತ್ರದಲ್ಲಿ ಅಪಾರ ಗೌರವವಿದೆ. ಜನನಕಾಲದಲ್ಲಿ ಸಂಭವಿಸಿದ ನಿಮಿತ್ತಗಳಿಂದ, ವಸುದೇವ ಶಿಶುವನ್ನು ನಂದಗೋಕುಲಕ್ಕೊಯ್ಯುವಾಗ ನಡೆದ ಅದ್ಭುತ ಘಟನೆಗಳಿಂದ ಮತ್ತು ಅಮಾನುಷರೀತಿಯ ಬಾಲಲೀಲೆಗಳಿಂದ ಕೃಷ್ಣ ಕಾರಣಪುರುಷನೆನ್ನುವುದನ್ನು ಕವಿ ಸ್ಪಷ್ಟಪಡಿಸಿದ್ದಾನೆ. ಒಟ್ಟಿನಲ್ಲಿ ಇಲ್ಲಿಯ ಕೃಷ್ಣಕಥೆ ಭಾಗವತಕ್ಕೆ ವಿರೋಧವಾಗಿಲ್ಲವಾದರೂ ವರ್ಣನೆಯ ಸೂಕ್ಷ್ಮಾಂಶಗಳಲ್ಲಿ ಕವಿ ಸ್ವಂತಿಕೆಯನ್ನು ತೋರಿದ್ದಾನೆ.

ಪ್ರಸ್ತುತ ವಿಭಾಗದಲ್ಲಿ ಪ್ರತಿವಾಸುದೇವನಾದ ಜರಾಸಂಧನ ಪಾತ್ರ ಪೋಷ

ಣಗೆ ಸಾಕಷ್ಟು ಬಿಡುವಿಲ್ಲ: ಆದರೆ ಸಂಗರಧನನಿಗೆ ಸೋತು ವಸುದೇವ ಕಂಸಾದಿಗ ನಿರವನ್ನಪೇಕ್ಷಿಸಿದನೆಂದರೆ ಅವನ ಕೀರ್ತಿಗೆ ಕಿರೀಟವಿಟ್ಟಂತಾಗುವುದಿಲ್ಲ. ಅವ ಮಗಳು ಜೀವಂಜಸೆ ಕೃಚಿತ್ತಾಗಿ ಕಾಣಿಸಿಕೊಂಡರೂ ಗರ್ವೋನ್ಮತ್ತೆಯಾಗಿ, ಸ ಮಾರಿಯಾಗಿ, ಲಜ್ಜಾ ಸಂಸ್ಕಾರವಿಲ್ಲದ ಗಂಡುಬೀರಿಯಾಗಿ, ನಯವಿನಯ ಸಭ್ಯತೆಗಳಿಲ್ಲ ಗ್ರಾಮೀಣೆಯಾಗಿ ಅಚ್ಚಳಿಯದ ವ್ಯಕ್ತಿಯಾಗಿ ಉಳಿಯುತ್ತಾಳೆ. ಚಿಕ್ಕದಾದರ ಚೊಕ್ಕವಾಗಿರುವ ವಾಮನಾವತಾರದ ಪ್ರಾಸಂಗಿಕ ಕಥೆಯಲ್ಲಿ ಬರುವ ಪದ್ಮರಥ ಕೃತಜ್ಞತಾಶೀಲವೂ, ಬಲಿಯ ಕ್ರೌರ್ಯ ಕಾಪಟ್ಯಗಳೂ, ವಿಷ್ಣುಕುಮಾರನ ಸಾ ಸೋನ್ನತಿಯೂ ಮನೋಜ್ಞವಾಗಿ ನಿರೂಪಣೆಗೊಂಡಿವೆ. ಧೀನ್ಯನನ್ನು ನೆನಪಿ ತರುವ ಚಿಂತಾಗತಿಯ ಪಾತ್ರ ಜೀವಂತವಾಗಿದ್ದು ಕವಿಯ ಪಾತ್ರ ಸೃಜ ನಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ. ಮಹಾಪುರಾಣದಲ್ಲಿ ನಾಮಮಾತ್ರವಾಗಿದ್ದ ಕೆಲ ಪಾತ್ರಗಳನ್ನು ಕವಿ ಸ್ಪಷ್ಟವಾಗಿ ಕಂಡರಿಸಿದ್ದಾನೆ; ಬೊಂಬೆಗಳಂತಿದ್ದ ಕೆಲವು ಪಾತ್ರ ಗಳಿಗೆ ಜೀವದಾನಮಾಡಿದ್ದಾನೆ; ಲೀಲಾವತಿಯಲ್ಲಿ ಮನೋಜಾಡ್ಯದಿಂದ ನರಳು ಪಾತ್ರಗಳನ್ನು ಸೃಷ್ಟಿಸಿದ್ದರೆ ನೇಮಿನಾಥ ಪುರಾಣದಲ್ಲಿ ಆರೋಗ ದೃಢಕಾಯವಾ ಪಾತ್ರಗಳನ್ನು ಸೃಷ್ಟಿಸಿದ್ದಾನೆ. ಆದರೂ ವಿವಿಧಕೋನಗಳಿಂದ ಮಾನವ ಸ್ವಭಾವವನ ಸೂಕ್ಷ್ಮವಾಗಿ ಗ್ರಹಿಸಿ ಜೀವಂತವೂ ಜ್ವಲಂತವೂ ಸ್ವತಂತ್ರವೂ ಚಿರಕಾಲಿಕವೂ ಆ ಪಾತ್ರಗಳನ್ನು ಸೃಷ್ಟಿಸಿದ್ದಾನೆಂದು ಕವಿಯ ಪರವಾಗಿ ಮುಕ್ತಕಂಠದಿಂದ ಘೋಷಿಸ ವಂಥ ಸಾಕ್ಷ್ಯಾಧಾರ ಸಾಕಷ್ಟಿಲ್ಲ.

## ೮. ವರ್ಣನೆಗಳು

ಸುಬಂಧು ಬಾಣದಂಡಿಯರನ್ನು ಆದರ್ಶವಾಗಿಟ್ಟುಕೊಂಡ ನೇಮಿಚಂದ್ರ ಕವಿತಾಶಕ್ತಿ ವಿಪುಲವಾಗಿ ವರ್ಣನೆಗಳ ಕಡೆಗೆ ಹರಿದಿರುವುದು ಸಹಜವೇ ಸರಿ. ಜೊತೆ ಯುಗಧರ್ಮ ಮತ್ತು ಜನಾಭಿರುಚಿಗಳೂ ಅವನ ಕಾವ್ಯ ದೃಷ್ಟಿಯನ್ನು ರೂಪಿಸಿ ಬೇಕು. ಕಾವ್ಯ ಸೌಂದರ್ಯದ ಉತ್ಕರ್ಷಕ್ಕೆ ವರ್ಣನೆಯ ಲಾವಣ್ಯಾಂಶ ಅತ್ಯಾ ವಶ್ಯಕ. ಆದರೆ ರುಚಿ ಕಾರಣವಾದ ಲವಣ ಅತಿಯಾದಾಗ ಓಕರಿಕೆಯಾಗುತ್ತ ಕತೆಯ ಓಟಕ್ಕೆ ತೊಡರುಗಾಲಾಗದೆ, ವಸ್ತು ಸ್ವರೂಪ ಸೌಂದರ್ಯಾಭಿವ್ಯಕ್ತಿಯ ಸಾಧನವಾಗಿ, ಭ್ರಮಾತ್ಮಕವಲ್ಲದ ಕಲ್ಪನೆಯಿಂದ ಪರಿಪುಷ್ಟಿ ಪಡೆದ, ಕೃತಕ ಭಾ ಉಕ್ತಿ ಚಮತ್ಕಾರ ನಿರಸನವಾದ ವರ್ಣನೆ ಸದಾ ಸ್ವಾದುವಾಗುತ್ತದೆ. ಸಂಪ್ರದಾಯ ಶರಣನಾಗಿ ಅಪ್ರಾದರ ವರ್ಣನೆಯ ಪ್ರಲೋಭನೆಗೆ ಕವಿ ದಾಸನಾಗಿದ್ದಾನೆ; ಕ ಸಮಯದ ಗತವೈಭವಕ್ಕೆ ಮರುಳಾಗಿದ್ದಾನೆ. ಮಹಾಕವಿಯ ಪಟ್ಟ ಪಡೆಯಬೇಕೆಂ ತವಕದಲ್ಲಿ ಅವನ ಔಚಿತ್ಯಾನೌಚಿತ್ಯ ವಿವೇಕಕ್ಕೆ ಮೋಡ ಮುಸುಕಿದೆ. ವರ್ಣನೆ ಬಾ ತೇಕವಾಗಿ ಕೋಲೆ ಬಸವನಿಗೆ ಮಾಡಿದ ಶೃಂಗಾರದಂತಿದೆ. ಅನುವಂಶೀಯವಾ ವರ್ಣನೆಯ ಕಾಯಿಲೆಗೆ ಬಲಿಯಾಗಿರುವ ಕವಿಗಳಲ್ಲಿ ಇವನೊಬ್ಬ.

ಶೃಂಗಾರ ಕಾರಾಗೃಹನೆಂಬ ಬಿರುದಿಗೆ ಪಾತ್ರನಾದ ಕವಿಯ ದೃಷ್ಟಿಯ ಹೆಂಗಸಿನ ರೂಪವೇ ರೂಪ, ಶೃಂಗಾರವೇ ರಸರಾಜ; ಆದ್ದರಿಂದ ಅವುಗಳ ವರ್ಣ

...ಸೇ ವರ್ಣನೆ, ಉಳಿದುದ್ದೆಲ್ಲ ಕ್ಷುಲ್ಲವೆಂಬ ಎಣಿಕೆ ಅವನ ಮನಸ್ಸಿನಲ್ಲಿ ಮನೆಮಾಡಿ ...ಕೊಂಡಿರುವಂತೆ ಕಾಣುತ್ತದೆ. 'ಮನೆಯೊಳ್ ಮಡದಿಯ ರನ್ನಾಯುಮಂ ಬೆಡಂಗೋ' ...-103) ಎಂಬ ದೃಢನಿಶ್ಚಯು ಅವನದು. ಅವನ ಕಲ್ಪನೆಯು ವಿಷಯಿತೃ (!) ಅವನ ...ೀವನ ಸ್ವರೂಪವನ್ನು ಬಯಲುಮಾಡುವಂತಿದೆ.

ಸ್ತ್ರೀರೂಪಮೆ ರೂಪಂ ಶೃಂ
ಗಾರಮೆ ರಸಮುತ್ಪಳ ಸುರತಗಂಧಮೆ ಗಂಧಂ
ಸಾರಸ್ಪರ್ಶಂ ಗುರುಕುಚ
ಭಾರಸ್ಪರ್ಶಂ ಗಳಪ್ರಶಬ್ದಮೆ ಶಬ್ದಂ (ಲೀಲಾ : 12-8)

...ಸ್ತ್ರೀಯು ಚರಾಚರ ವಸ್ತುಗಳಲ್ಲಿ, ಪ್ರಕೃತಿ ವ್ಯಾಪಾರಗಳಲ್ಲಿ ಮತ್ತು ಮಾನವರ ಸಕಲ ...ವ್ಯವಹಾರಗಳಲ್ಲಿ ಅವನು ಶೃಂಗಾರ ಚೇಷ್ಟೆಯನ್ನು ಕಾಣಲು ಪ್ರಯತ್ನಿಸುತ್ತಾನೆ. ...ಮತ್ತು ಮುಳುಗಿ ತಿಂಗಳು ಮೂಡಿದರೆ ಸಾಕು, ಪ್ರಣಯಿಗಳ ಚೆಲ್ಲಾಟ ಸೂಳೆಯರ ...ಲಾಟಗಳು ಇತರ ಲೌಕಿಕ ವ್ಯವಹಾರಗಳನ್ನೆಲ್ಲ ಇಲ್ಲಗೈಯುತ್ತವೆ; ಅದಾದ ...ತುಮಾನಕ್ಕನುಗುಣವಾಗಿ ಪ್ರಣಯಲೀಲೆ ಸದಾ ಸಾಗುತ್ತದೆ; ಹೂವು ಅರಳಿದರೆ, ...ಳ್ಳಿ ಹೂತರೆ, ಹಕ್ಕಿ ಕೂಡಿದರೆ, ಗಿಡ ಚಿಗುರಿದರೆ, ಹೊಳೆ ಬಂದರೆ, ವಿರಹ ಚುಮ್ಮ ...ರೆ, ನೆಲ ಹಸುರಾದರೆ—ರತಿಮನ್ಮಥರ ದಾಳಿ ಸೆರೆ ಬಂದಂತೆ ದುರ್ದಮ್ಯವಾಗುತ್ತದೆ. ...ವಿಧ ಶೃಂಗಾರವನ್ನು ಮುಕ್ತಕಂಠದಿಂದ ಕವಿ ವರ್ಣಿಸುತ್ತಾನೆ. ಮರ್ಯಾದೆ ವಿಚಾರಿದ, ...ಜ್ಜೆ ನೋಡಿದ, ಅಸಭ್ಯರೀತಿಯ, ಗ್ರಾಮೀಣ ಸಹಜವಾದ ವರ್ಣನೆ ಶಿಷ್ಟರಿಗೆ ನಮನ ...ರಿಯವಾಗಿ ತೋರಿದರೂ ಕೆಲಸವಿಲ್ಲದ ತಿಂಡಿಪೋತರಾದ ಅರಸುಮಕ್ಕಳಿಗೂ ಅವರ ...ಭಾಸದವರಿಗೂ ಉಲ್ಲಾಸಕರವಾಗಿ ತೋರಿರಬೇಕು. ಕವಿ ಮಕರಂದ ಕಂದರ್ಪದೇವರ ...ಜತೆಗೆ ಬರುಗರನ್ನು ಸೂಳೆಗೇರಿಗೆ ಕರೆದೊಯ್ದು ಸೂಳೆ ಸಿದ್ಧಾಂತವನ್ನು ಬೋಧಿಸುವ ...ಲ್ಲದೆ, ಅಲ್ಲಿ ನಡೆಯುವ ಸಕಲ ವ್ಯವಹಾರಗಳನ್ನು ಸವಿವರವಾಗಿ ತೋರಿಸುತ್ತಾನೆ. ...ಂಸುಮಾರಾಗಿ ಲೀಲಾವತಿಯ ಎರಡನೆಯ ಪ್ರಕರಣ ಸೂಳೆಯರಿಗೆ ಮೀಸಲು. ಸ್ಮರ ...ಶಾಸ್ತ್ರಕ್ಕೆ ಇದು ವ್ಯಾಖ್ಯಾನದಂತಿದೆ. ಸುಮಾರು ನೂರ ಮೂವತ್ತು (2 ನೆಯ ಸಂಧಿ : ...-137 ; 3 ನೆಯ ಸಂಧಿ : 10-19 ; 7 ನೆಯ ಸಂಧಿ : 7-11) ಪದ್ಯಗಳಲ್ಲಿ ಸೂಳೆಗೇರಿಯ ...ರ್ಣನೆ ನಿರರ್ಗಳವಾಗಿ ಸಾಗಿದೆ. ರಾಜಮಂತ್ರಿಯರು ನೋಡಿ ನೋಡಿ ತಣಿದು ದಣಿ ...ರೂ ಕವಿಲೇಖನಿಯು ಮುಸಿ ಬತ್ತುವುದಿಲ್ಲ. ಅಷ್ಟೇಕೆ ಕವಿಯು ಕಣ್ಣಿಗೆ ನದಿಯೂ ಸೂಳೆ ...ಯಂತೆ ಕಾಣುತ್ತಾಳೆ (5-77). ರಾಮಾಯುಧಕ್ಕೆ ಬಲಿಯಾದ ಕಬಂಧಾಸುರನ ...ದ್ದಿಯಿಂದ ಗಂಧರ್ವೋದಯವಾಗುವಂತೆ ಬನಿಸ್ಮಿಷ್ಟಿ ಕವಿಪ್ರತಿಭೆ ಕೆರಳಿದಾಗ ...ಮುದ ಕೆಸರಿನಲ್ಲಿಯೂ ಸೌಂದರ್ಯ ಧ್ವನಿತವಾಗುತ್ತದೆ. ಶೃಂಗಾರ ಧ್ವನಿತವಾದಾಗ ...ಕಲುಷಿತವಾದ ಸೌಂದರ್ಯ ಅಭಿವ್ಯಕ್ತವಾಗುತ್ತದೆ. ಬಳೆತೊಡಿಸಲು ಬಂದ ಬಳೆ ...ಗಾರನನ್ನು ಕುರಿತು ಸೂಳೆಯೊಬ್ಬಳು ಆಡುವ ಮಾತುಗಳಲ್ಲಿ ಅಡಕವಾಗಿರುವ ಚೆಲು ...ವನ್ನು ಗಮನಿಸಬಹುದು. 'ನಿನ್ನ ಬಳೆಯುಂ ಬಳೆದೊಟ್ಟರನ್ನ ಕಾಣೆನೋ' ಎನ್ನುವಲ್ಲಿ ...ರೆಯ ಅನೇಕ ಧ್ವನಿ ಪೂರ್ಣವಾಗಿದೆ:

ತುಡಿಸುವುದೇಕೆ ನಿಲ್ಲ ಪಲವುಂ ಬಳೆಯುಂ ಬಳೆಗಾಱ ನಿನ್ನ ಕಾ
ಲ್ವಿಡಿದಪೆನಿತ್ತಪೆಂ ನಿನಗೆ ಬೇಡಿತನನ್ನಿನಿಯಂ ಕನಲ್ದು ಪೋ
ದೊಡೆ ಬಳೆ ಕೈಗಳಿಂದಿಟಿದು ಜೀಱ್ವುವು ಬರ್ಪುದುಮಾಗಳಂತೆ ಕೇ
ಳೊಡೆವುವು ನನ್ನಿ ನಿನ್ನ ಬಳೆಯುಂ ಬಳೆದೊಟ್ಟರಸಣ್ಣ ಕಾಣಿರೇ ಲೀಲಾ 2-60

ಹೀಗೆಯೆ ಸೂಳೆಗೇರಿಯಿಂದ ಕೇಳಿಬರುವ ಒಸಕೆವಾಡಂತು ಕವಿ ಇಷ್ಟಪಟ್ಟರೆ ಶೃಂಗಾರ ವರ್ಣನೆಯಲ್ಲಿಯೂ ಬಹು ಎತ್ತರಕ್ಕೆ ಏರಬಲ್ಲನೆಂಬುದಕ್ಕೆ ಸಾಕ್ಷಿಯಾಗಿದೆ.

ಶೃಂಗಾರಶೇಖರ ವಿಭ್ರಮಲೇಖೆಯರ ಸಮಾಗಮದಲ್ಲಿ (ಲೀಲಾ 7-55, 56) ದೇವಗಿರಿಯ ಖಚರದಂಪತಿಗಳ ಕೂಟದಲ್ಲಿ (ಲೀಲಾ 9 ನೆಯ ಸಂಧಿ 43-52), ಲೀಲಾವತಿ ಕಂದರ್ಪದೇವರ ಪ್ರಥಮ ಸಮಾಗಮ (10 ನೆಯ ಸಂಧಿ : 43-66) ಹಾಗೂ ದ್ವಿತೀಯ ಸಮಾಗಮ (13 ನೆಯ ಸಂಧಿ : 10-36) ದಲ್ಲಿ, ವಸುದೇವ ಶ್ಯಾಮಳೆಯರ ಸೇರುವಿಕೆ (ನೇಮಿ: 5 ನೆಯ ಸಂಧಿ 70-72) ಯಲ್ಲಿ ಸಂಭೋಗ ಶೃಂಗಾರ ಕೋಡಿಯಾಗಿ ಹರಿದಿದೆ. ಲೀಲಾವತಿಯ ವಿರಹವೇದನೆ (ಸಂಧಿ 7 : 83-96; ಸಂಧಿ 9 : 119-138; ಸಂಧಿ 10 : 67-97; ಸಂಧಿ 12 : 2-48) ಯಲ್ಲಿ ವಿಪ್ರಲಂಭ ಶೃಂಗಾರದ ಕಾವನ್ನು ಮನಗಾಣಬಹುದು. ನೇಮಿನಾಥ ಪುರಾಣ ದಲ್ಲಿಯೂ ನಡ-ನಡುವೆ ಶೃಂಗಾರದ ಬರಹಗಳು ಕಾಣಿಸಿಕೊಳ್ಳುತ್ತವೆ (ಸಂಧಿ 4 : 80-81).

ಶೃಂಗಾರಕಾವ್ಯದಲ್ಲಿ ಹೆಣ್ಣಿನ ವರ್ಣನೆ ಅನಿವಾರ್ಯವಾಗಿ ಬರುತ್ತದೆ. ಆದರೆ ಕವಿಯ ಸಾಮರ್ಥ್ಯವೆಲ್ಲ ಬಾಹ್ಯ ವರ್ಣನೆಯಲ್ಲಿ ಪರ್ಯವಸಾನವಾಗುತ್ತದೆ. ಹೆಣ್ಣಿನ ಬಾಹ್ಯಸೌಂದರ್ಯ ಅವನನ್ನು ಸೆರೆಗೈದಿದೆ; ಆದರೆ ಅವಳ ಹೃದಯ ಸೌಂದರ್ಯ ವನ್ನು ಗ್ರಹಿಸಿ, ನಿರೂಪಿಸುವ ಸಾಮರ್ಥ್ಯ ಅವನಿಗಿನ್ನೂ ವಶವಾಗಿಲ್ಲ. ಅವನ ಭಾವಗಳು ಪಕ್ವವಾಗಿಲ್ಲ, ರಸ ಸಿದ್ಧಿಗೇರುವುದಿಲ್ಲ. ನಗ್ನ ಸೌಂದರ್ಯದ ಚಪ್ಪರಣೆಯ ಚಟ ಅವನಲ್ಲಿ ರಕ್ತಗತವಾಗಿದೆ. ಒಂದು ಸಂಧಿಯಷ್ಟು (12 ನೆಯ ಸಂಧಿ) ವಿಸ್ತಾರ ವಾಗಿ ಹರಡಿರುವ ಸ್ತ್ರೀ ಪ್ರಸಾಧನ ವರ್ಣನೆಯಲ್ಲಾಗಲೀ ಕುಸುಮಾಪಚಯ ವಿವರಣೆ ಯಲ್ಲಾಗಲೀ (ಸಂಧಿ 13 : 63-112) ವೈವಿಧ್ಯವಿಲ್ಲ, ವೈಶಿಷ್ಟ್ಯವಿಲ್ಲ. ಪ್ರತಿಭೆ ಅನಿರೀಕ್ಷಿತ ವಾಗಿ ಸೆಲೆಯೊಡೆದಾಗಲಂತು ಅವನ ಕಲ್ಪನೆ ಮುಗಿಲು ಮುಟ್ಟುತ್ತದೆ; ಬಾಹ್ಯ ಸೌಂದರ್ಯ ವರ್ಣನೆಯೂ ಆಸ್ವಾದನೀಯವಾಗುತ್ತದೆ:

ಸ್ತನದ ನಿತಂಬದ ಬಿಣ್ಪಂ
ವನಜಭವಂ ತೂಗಿನೋಡೆ ನಡುವಂ ಪಿಡಿದಾ
ತನ ಬೆರಲ ಪಜ್ಜೆಪತ್ತಿದು
ವೆನೆ ವಳಿಗಳ್ ಕಣ್ಗೆವಂದುವಾ ಕೋಮಳೆಯಾ ಲೀಲಾ 3-33

ಒಂದು ರೀತಿಯಲ್ಲಿ ವಳಿಯ ಸಾರ್ಥಕ್ಯ ಸ್ಪಷ್ಟೀಕರಣಗೊಂಡಿದ್ದರೆ, ಕಣ್ಣಿನ ನಿಡಿಯತನಕ್ಕೆ ಸೂಚಿಸುವ ಕಾರಣವೂ ಸೊಗಸಾಗಿದೆ:

ಒಂದೊಂದಱ ಸೌಂದರ್ಯಮ
ನೊಂದೊಂದೀಕ್ಷಿಸಲೆ ಬಯಸಿ ನಾಸಿಕೆಯಡ್ಡಂ
ಬಂದಿರೆ ಪೊಱವಳಸಿಂದಂ
ಬಂದವುವೆನೆ ನಿಮಿರ್ದುವವಳ ನಿಡಿಯಲರ್ಗಣ್ಗಳ್ ಲೀಲಾ 3-41

ಕಂದರ್ಪದೇವನು ಸ್ವಪ್ನದಲ್ಲಿ (ಸಂಧಿ 3 : 21-54) ಕಂಡ ತರುಣಿಯ ಚಿತ್ರವಿದು. ಕಾಮದೇವನೇ ಆ ತರುಣಿಯನ್ನು ಎರಕಹೊಯ್ದನಂತೆ; ರತಿ ಬಣ್ಣವಿಟ್ಟಳಂತೆ; ಅಂಗಾಂಗಗಳನ್ನು ವಸಂತ ತಿದ್ದಿದನಂತೆ; ಚಂದ್ರ ಕಣ್ಣಿಗೆ ಕಾಂತಿ ನೀಡಿದನಂತೆ; ಚೈತ್ರಾನಿಳ ಜೀವತುಂಬಿದನಂತೆ.

ಕಂದರ್ಪದೇವ ಕನಸಿನಿಂದೆಚ್ಚತ್ತಾಗ ಕಣ್ಣೊರಸಿಕೊಂಡು ಸ್ವಪ್ನತರುಣಿಯನ್ನು ಹುಡುಕುತ್ತಾನೆ. ತಾನು ಕಂಡದ್ದು ಕನಸೋ ನನಸೋ ಅವನಿಗರಿವಾಗಿಲ್ಲ. ಅವನು ಸ್ವಪ್ನಲೋಕದಿಂದ ಜಾಗ್ರತ್‌ಜಗತ್ತಿಗಿಳಿದ ರೀತಿಯನ್ನು ಕವಿ ಧ್ವನಿಪೂರ್ಣವಾಗಿ ಪರಿಣಾಮಕಾರಿಯಾಗಿ ವಿವರಿಸಿದ್ದಾನೆ. ಮತ್ತೆ ಅವನ ಕಲ್ಪನಾಪ್ರತಿಭೆಗಿಲ್ಲಿ ಗರಿ ಮೂಡಿದೆ.

ಅಂಗಂಗಳೊಳುಟಿದಳೊ ಕರ
ಣಂಗಳ್ ತಮ್ಮೊಳಗೆ ಪಚ್ಚುಗೊಂಡುವೊ ಚಿತ್ತಂ
ನುಂಗಿದುದೊ ಪೇಟನಲ್ಕಾ
ಗಂಗನೆಯಂ ಕಾಣದರಸನಿದು ಕನಸೆಂದಂ ಲೀಲಾ 3-63

ಶೃಂಗಾರರಸನಿರೂಪಣೆಯಲ್ಲಿ ಕವಿ ಅಶಿಕ್ಷಿತ ಅಸಭ್ಯ ಗ್ರಾಮ್ಯಸಮಾಜದ ಪ್ರಣಯಜೀವನವನ್ನು ಗಮನಲ್ಲಿಟ್ಟುಕೊಂಡಿರಬೇಕೆಂಬ ಭಾವನೆ ಎಂಥ ಮಂದಮತಿ ಗಾದರೂ ಹೊಳೆಯದಿರಲಾರದು. ಲೀಲಾವತಿಯನ್ನು ಕೈಗೆ ತೆಗೆದುಕೊಂಡಾಗ ಕೃತಿರಚನೆಯ ಹಿನ್ನೆಲೆಯಲ್ಲಿ ಮನೋರೋಗದ ಬೀಜಾಣುಗಳು ಹರಡಿಕೊಂಡಿರುವಂತೆ ಎಂಥ ಚಪಲಮತಿಗಾದರೂ ಭಾಸವಾಗದಿರಲಾರದು. 161 ಪದ್ಯಗಳಿರುವ 28 ಪುಟ ವಿಸ್ತಾರದ 13 ನೆಯ ಪ್ರಕರಣದಲ್ಲಿ 58 ಸಾರಿ ಮೊಲೆಯ ಸಮಾನಾರ್ಥಕ ಪದಗಳು ಬಳಕೆಯಾಗಿವೆಯೆಂದರೆ ಮೇಲಿನ ಮಾತಿನ ಯಥಾರ್ಥತೆ ವ್ಯಕ್ತವಾಗುತ್ತದೆ. ಕಾಮ ವಿಕಾರದ ಹುಚ್ಚುತಳದಲ್ಲಿ ತಂಗಿ, ಮನಸ್ಸು ಪ್ರಸನ್ನವಾದಾಗ ಮನೋಜ್ಞವಾದ ಶೃಂಗಾರ ಚಿತ್ರಗಳು ಅವನ ಲೇಖನಿಯಿಂದ ಹೊರಹೊಮ್ಮುತ್ತವೆ. ಪಶು ಪಕ್ಷಿಗಳ ಪ್ರಣಯಸಂಬಂಧವಾದ ವರ್ಣನೆಗಳೂ ಆಸ್ವಾದ್ಯವಾಗುತ್ತವೆ. ಪಕ್ಷಿಗಳ ವಿರಹ ಯಾತನೆಯನ್ನು ಸೂಕ್ಷ್ಮವಾಗಿ ಗ್ರಹಿಸಿ, ಹೃದ್ಯವಾಗುವಂತೆ ಸಮರ್ಥವಾಗಿ ನಿರೂಪಿಸ ಬಲ್ಲನೆಂಬುದಕ್ಕೆ ನಿದರ್ಶನ ಪದ್ಯವೊಂದನ್ನು ಉದಾಹರಿಸಬಹುದು :

ಗೂಡಿನ ಸುತ್ತಲುಂ ಸುಟಿಗುಮಾಲಿಸುಗುಂ ನಲೆ ಬರ್ಪ ಬಟ್ಟೆಯಂ
ನೋಡುಗುಮುಬ್ಬುಗೇಟ್ಟುಮೊಳಗಂ ಪುಗುಗುಂ ತಳಿರೊಳ್ ಪೊರಳ್ಗುಮಿ

ಪೊರ್ೀಡಿರೆ ಬಿಟ್ಟ ಚಂಚು ಬಿಸುಸುಯ್ದೆಳ ಮಾವಿನ ಪಲ್ಲವಂಗಳಂ
ಬಾಡಿಸುಗುಂ ಮನಂ ಮಱುಗಿ ಶಾರಿಕೆ ಬಾರದೊಡಾತ್ಮವಲ್ಲಭಂ

ಶೃಂಗಾರಕಾವ್ಯಗಳಲ್ಲಿ ವಸಂತಕ್ಕೆಷ್ಟು ಪ್ರಾಶಸ್ತ್ಯವೋ ಚಂದ್ರನಿಗೂ ಅಷ್ಟೇ ಪ್ರಾಶಸ್ತ್ಯ ; ಮನ್ಮಥನ ಪರಿವಾರದಲ್ಲಿ ಚಂದ್ರನಿಗೆ ಪ್ರಧಾನಸ್ಥಾನ. ಸೌಂದರ್ಯೋಪಾಸನಾದೃಷ್ಟಿ ಮಾತ್ರದಿಂದಲ್ಲದೆ, ಕಥಾಕ್ರಿಯೆಯ ಮತ್ತು ಪಾತ್ರ ಮನೋಭಾವದ ಹಿನ್ನೆಲೆಗಾಗಿ ಅಥವಾ ಪೋಷಣೆಗಾಗಿ ಕಾವ್ಯದಲ್ಲಿ ಚಂದ್ರವರ್ಣನೆ ಉಚಿತವಾಗಿ ಬರಬಹುದು. ಸುಮಾರು 46 ಪದ್ಯ (ಲೀಲಾ : 2 ನೆಯ ಸಂಧಿ 2-26 ; 3 ನೆಯ ಸಂಧಿ 2-9 ; 7 ನೆಯ ಸಂಧಿ 99-100 ; 10 ನೆಯ ಸಂಧಿ 30-35 ; 14 ನೆಯ ಸಂಧಿ 133-134) ಗಳಲ್ಲಿ ಹರಹುದೋರಿರುವ ಚಂದ್ರನ ವರ್ಣನೆಯಲ್ಲಿಯೂ ಕೃತಕ ಚಮತ್ಕಾರ ಕವಿ ಸಮಯಗಳು ಪ್ರಬಲವಾಗಿ ವಿಜೃಂಭಿಸುತ್ತವೆಯೇ ಹೊರತು ಚಿತ್ತಾಕರ್ಷಕವೂ ಸೌಂದರ್ಯಪೋಷಕವೂ ಆದ ಚಿತ್ರಗಳು ಕಡಮೆ. ಗೌರಿಯ ಮುಖಪದ್ಮದ ಮೊಡವಿಯಂತೆ ತಾರೆಗಳೂ, ಅವಳ ವೋಲೆಯಂತೆ ಚಂದ್ರಮಂಡಲವೂ ಮೂಡಿದುವಂತೆ (2-2) ನಿಶಾತರುಣಿಯ ಬೆವರ ಹನಿಗಳಂತೆ ತಾರಕಾ ಸಂಕುಳ ಪ್ರಕಾಶಿಸುತ್ತಿತ್ತಂತೆ (2-3) ವಿಯೋಗಿ ಜಾಲದೆದೆಯ ರಕ್ತದಲ್ಲಿ ತೊಯ್ದ ಮನ್ಮಥನ ಚಕ್ರದಂತೆ ಚಂದ್ರಬಿಂಬ ಪ್ರಜ್ವಲಿಸುತ್ತಿತ್ತಂತೆ (2-4) ಇಂದು ಬಿಂಬ 'ಬಾಂದೊಱೆಯ ಪರತಟದೊಳಿಟಮಿಾಂಗುಱುಕುವ ಬಕ'ದಂತಿತ್ತಂತೆ (7-99). 'ಎಲೆ ಶೃಂಗಾರಾರ್ಣವಂ ಸಗ್ಗದಿನಿೞಿದುದತಿ ಶ್ವೇತಮೆಂಬನ್ನೆಗಂ ಕಟ್ಟಲೆಯಂ ಬೆಂಕೊಳ್ವವೋಲ್ ಎತ್ತೆಸೆಯನನಿತುಮಂ . . . ಪರ್ವಿದತ್ತು' (2-13) ಚಂದ್ರ ಪ್ರವಾಹಂ ಎಂದು ವರ್ಣಿಸುವಲ್ಲಿ, 'ದಾಂಗುಡಿಯಿಟ್ಟುದೀಂಗಡಲ ಬೆಳ್ಪು ಕರಂ ಮೊಳೆವೋದುದಿಂದು ಕಾಂತಂಗಳ ಬೆಳ್ಪು . . . ಪರ್ಬಿದುವು ಬೆಳ್ಪಿನ ಬೆಳ್ಳರಿಯಿಂ ಸುಧಾಂಶುವಾ' (2-20) ಎಂದು ವಿವರಿಸುವಲ್ಲಿ ಕವಿಯ ಸೌಂದರ್ಯ ಪ್ರಜ್ಞೆ ಅಭಿವ್ಯಕ್ತವಾಗುತ್ತದೆ. ಚಂದ್ರಾಸ್ತದನಂತರವೂ ಚಂದ್ರನ ಚಂದ್ರಿಕೆ ಮಾಯವಾಗಿಲ್ಲ, ಪ್ರಾಕೃತಿಕವಸ್ತುಗಳಲ್ಲಿ ಮೈಗರೆದುಕೊಂಡಿದ್ದಾನೆಂದು ಹೇಳುವ ಚಮತ್ಕಾರದಲ್ಲಿ ಸಹಜಸೌಂದರ್ಯವಿದೆ :

ಭುವನಮನಾವಗಂ ಪುದಿದು ತೀವಿದ ತಣ್ಣದಿರ್ಗಳ್ ಪೊದಱ್ದು ಕೈ
ರವವನಮಾದುವೆಯ್ದೆ ಪೊಸಮಲ್ಲಿಗೆಯಾದುವು ಮೌಕ್ತಿಕಂಗಳಾ
ದುವು ಸುರಸಿಂಧುವಾದುವು ಸುಧಾರ್ಣವವಾದುವು ಚಂದ್ರಕಾಂತಮಾ
ದುವು ಹಿಮಮಾದುವಲ್ಲದೊಡೆ ಚಂದ್ರನ ಚಂದ್ರಿಕೆ ಮಾಯವಾದುವೇ 3-7

ಹೀಗೆಯೇ ಸೂರ್ಯಾಸ್ತದನಂತರ ನಡೆಯುವ ಪ್ರಕೃತಿ ವ್ಯಾಪಾರಗಳನ್ನೂ, ಹಂತಹಂತವಾಗಿ ಮುಸುರುವ ಕತ್ತಲ ಸ್ವರೂಪವನ್ನೂ ಕವಿ ಹೃದಯಂಗಮವಾಗಿ ವರ್ಣಿಸಿದ್ದಾನೆ (10 ನೆಯ ಸಂಧಿ : ಪದ್ಯ 6-29). ಖರಕಿರಣ ಕಾಲಚಕ್ರ ಹತಿಯಿಂದ ಕೆಡೆದಾಗ ಅರುಣಜಲ ಹರಿದಂತೆ ಅಪರ ಸಂಧ್ಯಾರಾಗ ಆಕಾಶವನ್ನೆಲ್ಲ ವ್ಯಾಪಿಸುತ್ತದೆ ; ಅಂಬರಹರಿ ಪೀತಾಂಬರವನ್ನು ಹೊದೆದಂತೆ ಸಂಧ್ಯಾರಾಗ ರಂಜಿಸುತ್ತಿತ್ತು; ಸುರನಿಕೇತ

ನಕ್ಕೆ ತಗುಲಿದ ಕಿಸುಸಂಜೆಯ ಕಿಚ್ಚನ್ನು ನಂದಿಸುವ ಸಲುವಾಗಿ ಇಂದ್ರಾಜ್ಞೆಯಿಂದ ಹರಡಿದ ಮೋಡದಂತೆ ತಿಮಿರ ದಿಗ್ದಿಗಂತಗಳಲ್ಲಿ ಹಬ್ಬುತ್ತಿತ್ತು; ಬಯಲಕೂಟ ಕುಲೀನರ ಪದ್ಧತಿಯಲ್ಲವೆಂದು ಸಂಧ್ಯಾದೇವಿ ಪತಿ ರವಿರಾಯನನ್ನು ಹಿಂಬಾಲಿಸಿದಳು; ನೆತ್ತರಂತಿದ್ದ ಸಂಧ್ಯಾರಾಗವನ್ನು ರಾತ್ರಿ ರಾಕ್ಷಸಿ ನೆಕ್ಕಲು ಅಂಧಕಾರ ಮುತ್ತಿತ್ತು; ರಾತ್ರಿ ನರ್ತಕಿ ಚೆಲ್ಲಿದ ಪುಷ್ಪಾಂಜಲಿಯಂತೆ ಗಗನರಂಗದಲ್ಲಿ ತಾರೆಗಳು ಭಾಸಿಸಿದುವು. ಪ್ರದೋಷ ಕಾಲದ ಕತ್ತಲೆ ಕತ್ತಲೆಯಲ್ಲ, ಬೆಳಕು ಬೆಳಕಲ್ಲ ಎನ್ನುವುದನ್ನು ಕವಿ ಕಲ್ಪನೆ ಸೊಗಸಾಗಿ ಘನೀಭೂತಗೊಳಿಸಿದೆ:

ಇನಿಸಿನಿಸೆಳಗತ್ತಲೆಯುಮ<br>
ದಿನಿಸಿನಿಸುಟಿವೆಳಗುಮೊಡನೆ ಕಲಸಿರೆ ಕದಡಿ<br>
ತ್ತೆನಸುಂ ಪ್ರದೋಷಮಹಿಷನಿ<br>
ನೆನಿಸಿದುದು ದಿಗಂತಸೇತುಭುವನ ತಟಾಕಂ 10-25<br>
ಅಂಗಂಗಳ್ ನಸುದೆಱೆಯೆ ದಿ<br>
ಗಂಗನೆಯರ ಮೇಲೆ ಕವಿದ ತೆಳ್ಗತ್ತಲೆ ಚೆ<br>
ಲ್ವಿಂಗುಟ್ಟ ಕರಿಯ ಕಾಗಿನ<br>
ಭಂಗಿಯನನುಕರಿಸುತ್ತಿರ್ದುದಂತಾಕ್ಷಣದೊಳ್ 10-26

ಕಗ್ಗತ್ತಲೆಯ ವಿಗುರ್ವಣೆಯನ್ನು ಸಂಸ್ಕೃತ ಸಮಾಸಾಕೀರ್ಣವಾದ ಮಾರ್ಗಶೈಲಿಯಲ್ಲಿ (10-27) ವರ್ಣಿಸದ ಹೊರತು ಕವಿಯ ಮನಸ್ಸಿಗೆ ನೆಮ್ಮದಿಯಿಲ್ಲ. ದಿವಿಜೇಂದ್ರೇಭ, ದಹನ ಬಹಳಧೂಮ, ಯಮೋಚ್ಚೈರ್ಲುಲಾಯ, ಕ್ರವ್ಯಾದಕಾಯ ಮೊದಲಾದ ಕವಿಸಮಯಗತವಾದ ಉಪಮೆಗಳಿಂದ ಕತ್ತಲೆಯ ಚಿತ್ರವನ್ನು ಕವಿ ಸ್ಪಷ್ಟಗೊಳಿಸುತ್ತಾನೆ. ಪ್ರಕೃತಿಯ ಸ್ಥೂಲ ಸೂಕ್ಷ್ಮ ವಸ್ತುಗಳ ಭೇದವನ್ನು ತೊಡೆದು, ತನ್ನ ಗರ್ಭದಲ್ಲಿ ಜಗತ್ತನ್ನೆಲ್ಲ ಸೆರೆಗೊಂಡಾಗ ಕತ್ತಲೆಯ ಕಥೆ ಪರಿಸಮಾಪ್ತವಾಗುತ್ತದೆ:

ದೆಸೆಯಿದು ಭೂವಲಯಮಿದಾ<br>
ಗಸಮಿದು ತಾನೆಂಬ ಭೇದಮಿಲ್ಲೆನೆ ತಮಮು<br>
ಬ್ಬಿಸಿದುದು ಜಗಮಂ ಕೃಷ್ಣಂ<br>
ಬಸಿಱೊಳಗಿಟ್ಟಂತೆ ರಜನಿಚರ ಭಯದಿಂದಂ 10-29

ಕತ್ತಲೆಯ ಈ ಕವಿ ಕಲ್ಪನೆಯಲ್ಲಿ ಉಜ್ವಲ ಚಮತ್ಕಾರ ಪ್ರಕೃತಿವ್ಯಾಪಾರ ಸಂಬಂಧವಾದ ಸೂಕ್ಷ್ಮಪ್ರಜ್ಞೆ, ಪ್ರತಿಭಾಸಂಪನ್ನತೆ ಮತ್ತು ವಾಗ್ವಿಲಾಸಗಳು ಪ್ರಖರವಾಗಿ ಕಾಣುತ್ತವೆ.

ಋತುವರ್ಣನೆಯಲ್ಲಿಯೂ ಕವಿ ಪ್ರಮುಖತಃ ಸಂಪ್ರದಾಯ ಶರಣನಾಗಿ ಕಂಡರೂ, ಅವನ ಸ್ವಾತಂತ್ರ್ಯಾಭಿಮಾನ ನಡುನಡುವೆ ಮಿನುಗುತ್ತದೆ, ಅವನ

ಸ್ಪಂತಿಕೆ ಮಾರುಮಾರಿಗೆ ತಲೆಯೆತ್ತುತ್ತದೆ. ದಕ್ಷಿಣಾನಿಲ ಹರಿಕಾರನಾಗಿ ವಸಂತಾಗಮನ ವಾರ್ತೆಯನ್ನು ತರುತ್ತಾನೆ; ಕೂಡಲೆ ಜಗತ್ತಿನ ಚರಾಚರವಸ್ತುಗಳಲ್ಲಿ ಜೀವನ ಸಂಚಾರವಾಗುತ್ತದೆ, ಕಾಮೋದ್ದೀಪನವಾಗುತ್ತದೆ. ಆಗ ಕವಿ ಲೇಖನಿಯು ಮಸಿ ಅಕ್ಷಯವಾಗಿ ವಿಪ್ರಲಂಭಶೃಂಗಾರವರ್ಣನೆ ಔಚಿತ್ಯಾನೌಚಿತ್ಯಗಳನ್ನು ಲಕ್ಷಿಸದೆ ಅವಿರತವಾಗಿ ಸಾಗುತ್ತದೆ; ವಿರಹಾನಲದಗ್ಧರಾದ ನಲ್ಲನಲ್ಲೆಯರ ಸಮಾಗಮ ಸಾಧನೆಗಾಗಿ ಕವಿಯೂ ವಸಂತಾಗಮನ ನಿರೀಕ್ಷೆಯಲ್ಲಿ ಕಾದುಕಾದು ಚಡಪಡಿಸುತ್ತಿರುತ್ತಾನೆ. ವಸಂತಋತು ಕಾಲಿಡುವುದೇ ತಡ ಕವಿಯೂ ಶುಕಪಿಕ ಭ್ರಮರಾದಿಗಳಂತೆ ಉನ್ಮತ್ತನಾಗಿ ಭಾವನಾದಿ ವಿಕಾರಗಳಿಗೆ ವಶನಾಗುತ್ತಾನೆ; ಅವನ ಕಲ್ಪನಾಚಾತುರ್ಯದ ಜೊತೆಗೆ ಭಾವವಿಕಾರವೂ ವರ್ಣನೆಗಳಲ್ಲಿ ಮಾರ್ದನಿಗೊಡುತ್ತದೆ. ಪ್ರಕೃತಿ ವ್ಯಾಪಾರಗಳ ನಿರೂಪಣೆ ಸಾಧಾರಣವಾಗಿ ಚರ್ವಿತಚರ್ವಣ. ಶಿಶಿರಮಂ ಬಿಸಿಲಾಯ್ತು ಕುಱುಂಕೆ (9-61) ಎನ್ನುವಲ್ಲಿ ಕವಿಯ ಕಲ್ಪನಾಚಾತುರ್ಯ ಮೆಚ್ಚುವಂತಿದೆ. ನಾಯಿಕಾ ವಿರಹಯಾತನೆಯ ಸಂದರ್ಭಕ್ಕೆ (9 ನೆಯ ಸಂಧಿ 61-119) ಮತ್ತು ನಾಯಕ ನಾಯಿಕೆಯರ ಸಮಾಗಮಕ್ಕೆ (13ನೆಯ ಸಂಧಿ: 37-161 ; 14 ನೆಯ ಸಂಧಿ: 1-22) ಹಿನ್ನೆಲೆಯಾಗಿ ವಸಂತವರ್ಣನೆ ಲೀಲಾವತೀ ಕಾವ್ಯದಲ್ಲಿ ಎರಡು ಬಾರಿ ಬರುತ್ತದೆ. ನೇಮಿನಾಥಪುರಾಣದಲ್ಲಂತು ಈ ವರ್ಣನೆ ವೈಶಿಷ್ಟ್ಯರಹಿತವಾಗಿ ಎರಡು ಪದ್ಯಗಳಲ್ಲಿ ಮುಗಿಯುತ್ತದೆ (3 ನೆಯ ಸಂಧಿ: 59-60). ಶೃಂಗಾರರಸ ನಿರೂಪಣೆಗೆ ಗ್ರೀಷ್ಮ ವರ್ಷರ್ತುಗಳ ವರ್ಣನೆ ಸಹಾಯಕವಲ್ಲವೆಂದೊ ಏನೊ, ಅನ್ಯಋತುವರ್ಣನೆಯಲ್ಲಿ ದುಂದುಮೆರೆದ ಕವಿ ಲೇಖನಿ ಈ ಸಂದರ್ಭದಲ್ಲಿ ಅತಿ ಕೃಪಣವಾಗಿದೆ. ಅಹಮಿಂದ್ರನ ತಪೋಸಮಯದಲ್ಲಿ ಪ್ರಾದುರ್ಭವಿಸಿದ ಗ್ರೀಷ್ಮ ಋತು (ನೇಮಿ. 4-64) ನೆಲವನ್ನು ಹುರಿಹಂಚುಮಾಡಿ, ಯಮನ ಉರಿಗಣ್ಣೆಯಂತೆ ಲೋಕವನ್ನು ನಡುಗಿಸಿ, ಚರಾಚರಗಳನ್ನು ಕರಿಮುರಿಗೊಳಿಸಿ ಕ್ಷಣಾರ್ಧದಲ್ಲಿ ತಿರೋಹಿತವಾಗುತ್ತದೆ. ಸುಪ್ರತಿಷ್ಠನ ಜನನ ಸಂದರ್ಭದಲ್ಲಿ ಪೋಟಿಹಾಕಿರುವ ವರ್ಷಾಕಾಲದ ವರದಿಯನ್ನುಳ್ಳ ಪದ್ಯ (ನೇಮಿ. 4-127) ಯಾವಾಗಲೋ ರಚನೆಗೊಂಡಿದ್ದು, ಪೂರ್ವಾಪರ ಸಂಬಂಧವಿಲ್ಲದಿದ್ದರೂ ತಂದು ತುರುಕಿದಂತಿದೆ. ಮುಂದೆ ಗೋವರ್ಧನೋದ್ಧರಣ ಪ್ರಸಂಗಕ್ಕೆ ನಾಂದಿಯಾಗಿ ಶ್ಲೇಷಾಲಂಕಾರ ಸಂಯುಕ್ತವಾಗಿ ಮಳೆಗಾಲದ ವರ್ಣನೆ ಬಂದು ಕ್ಷಿಪ್ರದಲ್ಲಿ ಮುಕ್ತಾಯವಾಗುತ್ತದೆ. (ನೇಮಿ: 4 ನೆಯ ಸಂಧಿ: 2-4).

ಕಂದರ್ಪದೇವನ ಮದನದಿಗ್ವಿಜಯ ಯಾತ್ರೆಯನ್ನು ಸುಖಪ್ರದಗೊಳಿಸುವ ಸಲುವಾಗಿ ಪ್ರಕೃತಿಯೇ ಶರದಾಗಮನವನ್ನು ಸ್ವಾಗತಿಸಿದಂತಿದೆ. ನೀರದ ವಿಟನಿಗೆ ವಿದ್ಯುನ್ನಾರಿಯ ವಿರಹ ಪ್ರಾಪ್ತವಾಗಲು ಗಗನತಲದ ಮೋಡ ಬಿಳಿಚಿಕೊಂಡುವಂತೆ; ಸೂರೆ ಬಾಂಜಗುನೆಗೆ ನೆಗೆದಂತೆ ಬೆಳ್ದಿಂಗಿಲು ಗಗನತಲವನ್ನು ವ್ಯಾಪಿಸಿದುವಂತೆ. ಶರದಾಗಮನದಿಂದ ನೀರು ತಿಳಿಯಿತು, ತೊಳೆದಂತೆ ತಿಂಗಳು ಹೊಳೆಯಿತು, ಮುಸುಕನ್ನು ಕಳೆದಂತೆ ಗಗನ ಶುಭ್ರವಾಗಿ ತೋರಿತು; ಸೋಟ ಹರಿದತ್ತ ಗಂಧಶಾಲಿವನಗಳ ಹರಹು ಹೃದಯಾನಂದಕರವಾಗಿ ಶೋಭಿಸುತ್ತಿತ್ತು. ಗಿಳಿಗಳ ಕಡಿತದಿಂದ ಸೋರಿದ ನೆಲ್ದನೆಯ ಹಾಲು ಮಡಿಯ ನೀರನ್ನು ಬಿಳಿದು ಮಾಡಿತು. ಸುಮಾರು 40 ಪದ್ಯ (ಲೀಲಾ: 5 ನೆಯ

ಸಂಧಿ : 20-59) ಗಳಲ್ಲಿ ಶರತ್ಕಾಲದ ಪ್ರಕೃತಿ ವ್ಯಾಪಾರವನ್ನು ಹೊರಕೆ ಹೊರಕೆಯಾಗಿ ವಿವರಿಸಿದ ಕವಿ ಶೃಂಗಾರರಸ ನಿರೂಪಣೆಗೆ ಉಪಷ್ಟಂಭಕವಾಗಲೆಂಬಂತೆ 36 ಪದ್ಯ (ಲೀಲಾ : 9 ನೆಯ ಸಂಧಿ : 2-37) ಗಳಲ್ಲಿ ಹೇಮಂತ ಶಿಶಿರ ಋತುಗಳನ್ನು ವರ್ಣಿಸುತ್ತಾನೆ. ವಸಂತಋತುವಿನಂತೆಯೆ ಕೊನೆಯ ಋತುಗಳೂ ಕಾಮ ಕೇಳಿಗೆ ಪ್ರಚೋದನೆ ನೀಡುವಂಥವೆಂದು ಕವಿಯ ನಂಬಿಕೆ. ಹಿಮಪ್ರವೇಶಸಮಯದ ಹರಿಕಾರನಾಗಿ ಮೂಡಣಗಾಳಿ ಸುಳಿಯುವಾಗ ನಡೆಯುವ ಸೃಷ್ಟಿವ್ಯಾಪಾರ ಸ್ವಭಾವೋಕ್ತಿಯಲ್ಲಿ ನಿರೂಪಣೆಗೊಂಡಿದೆ. ಈ ನಿರಾಡಂಬರತೆಯಲ್ಲಿ ಸೊಗಸಿದೆ, ಸ್ಪಷ್ಟತೆಯಿದೆ:

ಶಾಳಿಯ ಕಂಪನೊಟ್ಟೆ ನಳಿನಂಗಳನಳ್ಳಿಸಿ ಬೆಳ್ಮುಗಿಲ್ಗಳಂ
ತೂಳಮನೆತ್ತುವಂತಳೆದು ಸೋಗೆಯ ಹೀಲಿಯ ಬೇರನೆತ್ತಿ ಹಂ
ಸಾಳಿಯ ತುಪ್ಪುಲಂ ತುಟಿದು ಪಶ್ಚಿಮದಿಂ ಬಡವಾಗಿ ಬರ್ಪ ಮೇ
ಘಾಳಿಯನೊತ್ತಿ ತೀಡಿದುದು ಮೂಡಣ ಗಾಳಿ ಹಿಮಪ್ರದೇಶದೊಳ್

ಲೀಲಾ. 9-2 ; ನೇಮಿ. 4-62

ಕವಿ ಹೇಮಂತಋತುವಿನ ಈ ಚಿತ್ರವನ್ನು ಮತ್ತೆ ಮತ್ತೆ ಮೆಲುಕು ಹಾಕಿ ಅದರ ಸೊಗಸಿಗೆ ಮನಸೋತು, ನೇಮಿನಾಥ ಪುರಾಣದಲ್ಲಿ ಆ ಪದ್ಯವನ್ನು ನಡುವೆ ಸೇರಿಸಿಕೊಂಡಿದ್ದಾನೆ. ಚಳಿಗಾಲ ತಿಪ್ಪತಿಪ್ಪ ಹೆಜ್ಜೆಯಿಡುತ್ತಿದ್ದಾಗಲೆ ಆನೆ ಹುಲ್ಲೆ ನಲ್ಲೆಯರು ಪರಿರಂಭಾತುರರಾಗಿ ಕಳವಳಕ್ಕೀಡಾಗುತ್ತಾರೆ; ನೇಸರ ಬಿಂಬ ತಿಂಗಳ ಕೂಸಿನಂತೆ ಕೋಡುತ್ತದೆ. ದಾರಿ ಹೋಕರ ಉಬ್ಬಸ ಹೇಳತೀರದು. ಸ್ವಾನುಭವ ಪರಾನುಭವದ ಕಲಸುಮೇಲೋಗರದಂತಿರುವ ಈ ವರ್ಣನೆಯಲ್ಲಿ ಸಾಧಾರಣಮಟ್ಟದ ನಿರ್ವಿಶಿಷ್ಟವಾದ ಸೌಂದರ್ಯ ಸೂಸೆಗರೆಯುತ್ತಿದ್ದರೂ, ಅದರ ಔಚಿತ್ಯ ಕೆಲವೆಡೆ ಸಂದೇಹಾಸ್ಪದವಾಗಿ ತೋರುತ್ತದೆ.

ನೇಮಿಚಂದ್ರ ಅರಣ್ಯವನ್ನು ನೋಡಿದ್ದಾನೆ; ಅದರ ಬಾಹ್ಯಸೌಂದರ್ಯವನ್ನು ನೋಡಿ ಆನಂದಿಸಿದ್ದಾನೆ; ಆ ಆನಂದ ವಿಂಧ್ಯಾಟವಿಯ ವರ್ಣನೆಯಲ್ಲಿ (ಲೀಲಾ 7 ನೆಯ ಸಂಧಿ : 103-117 ; 8 ನೆಯ ಸಂಧಿ : 2-81) ಅಭಿವ್ಯಕ್ತಗೊಂಡಿದೆ. ವಿರಹಾನಲದಗ್ಧನೂ ಪ್ರಿಯದಾರಾನ್ವೇಷಣಾಸಕ್ತನೂ ಆದ ರಾಜಕುಮಾರನನ್ನು ಕವಿ ವಿಂಧ್ಯಾಟವಿಗೊಯ್ಯುದರಲ್ಲಿ ಅನೌಚಿತ್ಯವೇನಿಲ್ಲ. ಕವಿ ರಾಜಕುಮಾರನಾಗಿ ಅರಣ್ಯದ ಸೊಬಗನ್ನು ಸವಿಯುತ್ತ, ಕಾಡಾನೆ ಹರಿಣ ಕೋಡಗಗಳ ಚೆಲ್ಲಾಟವನ್ನು ನೋಡಿ ಹರ್ಷಿಸುತ್ತ, ತರುಗುಲ್ಮಲತಾದಿಗಳ ಸೌಂದರ್ಯವನ್ನು ಕಂಡು ಆನಂದಿಸುತ್ತ, ಬೇಡಬೇಡಿತಿಯರ ದೈನಂದಿನ ವ್ಯವಹಾರಗಳನ್ನು ಮೆಚ್ಚುತ್ತ, ಕೆರೆ ಕೊಳ ಹೊಳೆಗಳಲ್ಲಿ ಮೀಯುತ್ತ, ಯಕ್ಷಯಕ್ಷಿಯರನ್ನು ಪೂಜಿಸುತ್ತ, ಮುಂದೆ ಮುಂದೆ ಸಾಗುತ್ತಾನೆ. ನೇಮಿನಾಥಪುರಾಣದ ವಿಂಧ್ಯಕ ಪ್ರಕರಣದಲ್ಲಿ ಅರಣ್ಯ ಇಲಾಖೆಯ ವರದಿಯಂತಿರುವ ವರ್ಣನೆ (3 ನೆಯ ಸಂಧಿ : 35-51) ಬರುತ್ತದೆ. ವಸುದೇವನ ಪ್ರಣಯಯಾತ್ರಾವಸರದಲ್ಲಿ ಅರಣ್ಯಯಾತ್ರೆಯೂ ಅನಿವಾರ್ಯವಾಗಿ ಸಂಘಟಿಸುತ್ತದೆ. ಮಗಧಾಧಿಪತಿಯ ಪುತ್ರಿ ಶಾಮಳೆಯನ್ನು ತೊರೆದು ಮುಂದಿನ ದಿಗ್ವಿಜಯಕ್ಕೆ ಹೊರಟಾಗ ವಿಜಯಾರ್ಧ

ಪರ್ವತಶ್ರೇಣಿ ಎದುರಾಗುತ್ತದೆ. ಅಲ್ಲಿ ಮತ್ತೆ ವಿಂಧ್ಯಾಟವಿಯ ಮೃಗಪಕ್ಷಿಗಳನ್ನೂ ಆನೆಗಳ ಕ್ರೀಡೆಯನ್ನೂ ನೋಡಬಹುದಾಗಿದೆ (5 ನೆಯ ಸಂಧಿ 74-113). ಅಲ್ಲಿಯ ಮಂದಾನಿಲ ನೀರಜಾಕರಗಳ ವರ್ಣನೆ ಕಾದಂಬರಿಯ ಅಚ್ಛೋದ ಸರೋವರದ ಪರಿಸರಣವನ್ನು ನೆನಪಿಗೆ ತಂದುಕೊಡುತ್ತದೆ. ನೀರಜಾಕರದ ನಿರ್ಮಲತೆಯನ್ನು ಕವಿ ಹೃದಯಂಗಮವಾಗಿ ವರ್ಣಿಸಿದ್ದಾನೆ; ಆ ಸರೋವರದ ನೀರಿನ ಬಿಳುಪು ಬರಿಯ ಬಿಳುಪಲ್ಲ, ಅದು ಸೌಂದರ್ಯವೈವಿಧ್ಯದ ನಿಧಿ ಎಂಬ ಕಲ್ಪನೆ ಸೊಗಸಾಗಿದೆ:

> ಗಂಗೆಯ ಗೋತ್ರಮೋ ನೊರೆಯ ಸಾರಮೊ ಬೆಳ್ನಗೆಯೊಂದು ಬಿತ್ತೊ ಮ
> ತ್ತಿಂಗಡಲಿರ್ದ ಬೇರೊ ಪೊಸಮುತ್ತಿನ ಪುಟ್ಟುವ ನೀರೊ ತೋರ್ಪ ಬೆ
> ಳ್ದಿಂಗಳ ಬೈಕೆಯೋ ಜನದ ದೀವರೆಯರ್ಕಳ ಕಣ್ಣ ಬೆಳ್ಪು ಬೆ
> ಳ್ಪಂಗೆಡೆದತ್ತೊ ಪೇಟಿಮೆನೆ ನಿರ್ಮಲಮಾದುದು ನೀರಜಾಕರಂ 5-100

ಹಾಗೆಯೇ ಆ ಸರೋವರ ಬರಿಯ ಜಡವಸ್ತುವಲ್ಲ, ಕ್ರಿಯಾತ್ಮಕವೂ ಸಂಗ್ರಾಮ ರಂಗವೂ ಆದ ಜೀವವಾಹಿನಿಯೆಂಬುದನ್ನು ಕವಿ ಮನೋಜ್ಞವಾಗಿ ವಿವರಿಸಿದ್ದಾನೆ:

> ತೆರೆಯಿಂ ಕಯ್ನೆಱಿದಾಡುವಂತಿರೆ ಜಳನ್ಮೀನಂಗಳಿಂ ನೋಡುವಂ
> ತಿರೆ ನಾನಾ ಮಧುಪಾನ ಮತ್ತಮಧುಲಿಟ್ ಝೇಂಕಾರದಿಂ ಪಾಱುವಂ
> ತಿರೆ ಮೇಲ್ವಾಱುವ ಕುಂಕುಮಾರುಣ ರಥಾಂಗದ್ವಂದ್ವದಿಂ ತತ್ಪಯೋ
> ಧರೆ ನೆಂಡಂ ಪೊಡೆದಾಡುವಂತಿರೆ ಸರಶ್ರೀಕಾಂತೆ ಕಣ್ಗೊಪ್ಪಿದಳ್ 5-101

ಪ್ರಕೃತಿಯಲ್ಲಿ ಕಾಣುವ ಸೌಂದರ್ಯವಸ್ತುಗಳೊಡನೆ ಸ್ತ್ರೀಶರೀರದ ಅಂಗಾಂಗಗಳನ್ನು ಹೋಲಿಸುವುದು ಪ್ರಾಚೀನ ಪದ್ಧತಿಯಾಗಿದೆ: ಅಷ್ಟೇ ಅಲ್ಲ, ಉಪಮಾನ ಉಪ ಮೇಯ ವಸ್ತುಗಳಿಗೆ ಅಭೇದವನ್ನು ಕಲ್ಪಿಸಿ, ಅವುಗಳ ಸೌಂದರ್ಯ ಧರ್ಮದ ಸಾಧಾರಣತೆಯನ್ನು ಎತ್ತಿ ತೋರಿಸುವುದುಂಟು. ಆಗ ದಾರ್ಶನಿಕ ಕವಿಯ ಕಣ್ಣಿಗೆ ಸ್ತ್ರೀ-ಲತೆಗಳೆರಡರಲ್ಲಿ ಸಮಾನ ಸೌಂದರ್ಯ ಭಾಸವಾಗುತ್ತದೆ. ಕಂದರ್ಪದೇವ ಲತಾರೂಪಿ ಲೀಲಾವತಿಯನ್ನಪ್ಪಿಕೊಂಡ ಸಂದರ್ಭದ ಕವಿ ಕಲ್ಪನೆ ಮನೋಹರ ವಾಗಿದೆ, ದರ್ಶನಾತ್ಮಕವಾಗಿದೆ:

> ಸಿತಪುಷ್ಪಂ ಸ್ಮಿತನೇತ್ರಮಾಯ್ತೆಳದಳಿರ್ ಬಾಯಾಯ್ತು ಬಿಣ್ಗೊಂಚಲು
> ನ್ನತವಕ್ಷೋರುಹಮಾಯ್ತು ತುಂಬಿ ಕುರುಳಾಯ್ತೊಳ್ಗೊಂಬು ತೋಳಾಯ್ತು ತ
> ಲ್ಲತೆ ಲೀಲಾವತಿಯಾಯ್ತಿದೇನಮೃತಮೋ ಘರ್ಮಾಂಬುವಾಲಿಂಗನಂ
> ಮೃತಸಂಜೀವನಮೋ ರಸಂ ಹರಣಮೋ ಶ್ರೀರೂಪಕಂದರ್ಪನಾ 14-95

ಗೊಲ್ಲರ ದೊಡ್ಡಿಯ ಪ್ರಕರಣ ಮತ್ತು ವಾಮನಾವತಾರದ ಸಂದರ್ಭ ನೇಮಿ ಚಂದ್ರನ ಸುದೀರ್ಘ ಕಾವ್ಯಗಳಲ್ಲಿ ಎಂದೆಂದಿಗೂ ಮರೆಯಲಾಗದ ಸಂಗತಿಗಳು. ಸಾಧಾರಣ ಸಂಗತಿಗಳನ್ನು ನಿರ್ವರ್ಣವಾಗಿ ಅತ್ಯಂತ ವಾಸ್ತವವಾಗಿ ಸಹಜ ಸುಂದರ ವಾಗಿ ಕಣ್ಣಿಗೆ ಕಟ್ಟುವಂತೆ ನಿರೂಪಿಸುವಲ್ಲಿ ಅವನ ವಸ್ತುಸ್ವರೂಪ ಗ್ರಹಣ ಸಾಮ

ಧೈರ್ಯವೂ, ಅದ್ಭುತ ಸಂಗತಿಗಳನ್ನು ಇಂದ್ರಿಯ ಗ್ರಾಹ್ಯವಾಗುವಂತೆ ಚಿತ್ರಿಸುವಲ್ಲಿ ಅವನ ಕಲ್ಪನಾ ಪ್ರತಿಭೆಯೂ ಪ್ರಸ್ಫುಟವಾಗುತ್ತವೆ. ಕಾವ್ಯಗಂಗೆಗೆ ಸ್ವಾನುಭವವೇ ಗಂಗೋತ್ರಿ ಎಂಬ ಲಕ್ಷಣಕ್ಕೆ ಗೊಲ್ಲರ ದೊಡ್ಡಿಯ ಪ್ರಕರಣ (ಲೀಲಾ. 5 ನೆಯ ಸಂಧಿ: 81-113). ಲಕ್ಷ್ಯದಂತಿದೆ. ಕಾಡಿನಿಂದ ಮೇದು ಬರುತ್ತಿರುವ ತಾಯಿ ಹಸುಗಳ ಮತ್ತು ಗೂಳಿಗಳ ವರ್ಣನೆ (5-86-87*) ಜೀವಂತವಾಗಿದೆ. ಗೋವುಗಳನ್ನು ವಿವಿಧಾವಸ್ಥೆಗಳಲ್ಲಿ ಮತ್ತು ವಿವಿಧ ಭಂಗಿಗಳಲ್ಲಿ ನೋಡಿ ಸಂತೃಪ್ತಗೊಂಡ ಕವಿಚೇತನವೇ ಇಲ್ಲಿ ಕಾವ್ಯವಾಗಿ ಹರಿದಿದೆ. ಈದ ಹಸುವಿನ ಮತ್ತು ಹೊಸನಸೆಯ ವೃಷಭನ ಸ್ವರೂಪ ಸ್ವಭಾವಗಳ ಸಹಜ ವಿವರಣೆಯನ್ನು ಕೆಳಗಿನ ಪದ್ಯಗಳಲ್ಲಿ ಗಮನಿಸಬಹುದು ;

ಕಱುಸಱಗುಟಿದಿರೆ ಹೂಂಗುಡು
ತಱು ಜುತ್ತುಂ ಮಗುಳ್ದು ಮೂಸುತುಂ ಪೊಲಸಂ ಮಾ
ಸೋಱೆಯುತಿರೆ ಪಿಂತೆ ಕೆಚ್ಚಲ
ನಿಱುಂಕಿ ನಡೆತಂದುವಿಂದ ಪಯಗಳ್ ಪಲವುಂ 5-90
ಪೊಸನಸೆಯ ಸೊವಡನಾಘ್ರಾ
ಣಿಸಿ ಮಣಿಕದ ಮಿಡುಕುಗಚ್ಚೆಯೊಳ್ ಮೊಗವೆತ್ತು
ತ್ತೆಸೆದುದು ವೃಷಮಮರರನೇ
ಡಿಸುವವೊಲೇನುಂಟೆ ನಿಮಗಮೀಸುಖಮೆನುತುಂ 5-93

ಕವಿ ದೊಡ್ಡಿಯ ಪ್ರಾಕೃತಿಕ ಪರಿಸರಣವನ್ನು ಮರೆತಿಲ್ಲ. ತುಪ್ಪವನ್ನು ಮಾರಿ ಪಡೆದ ಹೊನ್ನುಗಳನ್ನು ಗೋಪಿಯರು ಕೆದರಿದಂತೆ ತುರುವೆಯು ಮತ್ತು ನೆಗ್ಗಿಲ ಹೂವು ಹಟ್ಟಿಯ ಹೊರಗೆ ತುರುಗಿದ್ದುವು. ಮೊಸರು ಮಾರಿ ಮನೆಗೆ ಮರಳುತ್ತಿದ್ದ ಗೋಪಿಯರ ಚಿತ್ರ (5-100) ಕಣ್ಣಿಗೆ ಕಟ್ಟಿದಂತಿದೆ. ಆ ತುರುಹಟ್ಟಿಯ ಸದ್ದು ಗದ್ದಲಗಳ ವರ್ಣನೆಯನ್ನೋದಿದಾಗ ಕವಿಯೊಡನೆ ವಾಚಕರೂ ತುರುಹಟ್ಟಿಗೆ ಪ್ರವೇಶಿಸಿದ ಅನುಭವವಾಗುತ್ತದೆ:

ಕಱುವಂ ಬಿಡು ಕಱೆ ತೊಳೆ ನೀ
ರೆಱೆ ಕಂದಲನೊಱಸಿ ತೊಳೆ ತಗುಳ್ದೊದೆವಾವಂ
ತುಱುಸು ತಳೆಯಿಕ್ಕು ಪಡೆಯದೆ
ಮುಱುವಂ ಸುರಿಯೆಂಬ ಸರಮೆ ತುಱುಗಾರ್ತಿಯರೊಳ್ 5-104

ಹೀಗೆಯೇ ಹಾಲು ಕರೆಯುವ ಮತ್ತು ಮೊಸರು ಕಡೆಯುವ ಹೆಂಗಸರ ಚಿತ್ರ ಚಿತ್ತಾಕರ್ಷಕವಾಗಿದೆ "ಅಂತು ಶೋಭೆಗೆಱೆತಿವಟ್ಟಾದ ತುಱುವಟ್ಟಿಯಂ ವಿಸ್ಮಯಂಬಟ್ಟು" ನೋಡುವ (5 ನೆಯ ಸಂಧಿ : 105-108 ; 110-112) ಕಂದರ್ಪದೇವ ಪುಕರಂಡರೊಡನೆ ವಾಚಕರೂ ಈ ಶಬ್ದಚಿತ್ರಕ್ಕೆ ಮಾರುಹೋಗುತ್ತಾರೆ.

---

* ಈ ಪದ್ಯ ನೇಮಿನಾಥ ಪುರಾಣದಲ್ಲಿ ಪುನರಾವೃತ್ತಿಯಾಗಿದೆ (8-18)

ನೃತ್ಯ ವರ್ಣನೆಯಂತು ಅತ್ಯಂತ ಶ್ರೇಷ್ಠವಾಗಿದ್ದು, ನೇಮಿಚಂದ್ರನ ವೀಕ್ಷಣಾ ಸಾಮರ್ಥ್ಯಕ್ಕೂ, ಕಲಾಭಿಜ್ಞತೆಗೂ ಸಾಕ್ಷಿಯಾಗಿದೆ; ಆ ಕಲೆಯ ವಿವಿಧ ಮುಖ ಗಳನ್ನೂ ಸೂಕ್ಷ್ಮಸ್ವರೂಪವನ್ನೂ ಸಮಗ್ರವಾಗಿ ಗ್ರಹಿಸಿ, ತಾದಾತ್ಮ್ಯವನ್ನು ಪಡೆದ ಸ್ವಾನುಭವದ ಸಾರ ಇಲ್ಲಿ ಭಟ್ಟಿಯಿಳಿದಂತಿದೆ. ನೀಳಾಂಜನೆಯ ನೃತ್ಯವರ್ಣನೆಯನ್ನು ಇವನು ಗಮನಿಸಿರಬೇಕೆಂಬ ಭಾವನೆ ಅಲ್ಲಲ್ಲಿ ಸುಳುಹುದೋರಿದರೂ ಕವಿಯ ಸ್ವಾನು ಭವ ವೈಭವದ ನಿರೂಪಣೆಯೇ ಉದ್ದಕ್ಕೂ ಪ್ರಜ್ವಲಿಸುತ್ತದೆ. ನೇತ್ರೇಂದಿಯಾನುಭವ ವನ್ನು ಶಬ್ದಶಿಲ್ಪದ ಮೂಲಕ ಸುಸ್ಪಷ್ಟವಾಗಿ ಬಹು ರಮಣೀಯವಾಗಿ ಕಡೆದಿದ್ದಾನೆ. ಸರ್ವೇಂದ್ರಿಯಗಳ ಮೂಲಕ ಅಭಿವ್ಯಕ್ತವಾಗುವ ರಂಭೆಯ ಹಾವಭಾವ ವಿಲಾಸ ವಿಭ್ರಮಗಳನ್ನು ಶಬ್ದ ಮಾಧ್ಯಮದಲ್ಲಿ ಹಿಡಿದಿಟ್ಟಿದ್ದಾನೆ. ರಂಭೆಯ ರಂಗಪ್ರವೇಶ ದೃಶ್ಯ ಕಣ್ಣಿಗೆ ಕಟ್ಟಿದಂತೆ ರೋಮಾಂಚಕರವಾಗಿದೆ.

ಕೆದಱಿ ಕರರುಹದ ರುಚಿಯಂ
ಕೆದಱಿದಳೆನೆ ಬಿಳಿಯ ಕಣ್ಣ ಬಂಬಲ್ವೆಳಗಂ
ಕೆದಱಿ ನವಭಾವ ರಸಮಂ
ಕೆದಱಿದಳೆನೆ ಕುಣಿದು ರಂಭೆ ರಂಗಂ ಬೊಕ್ಕಳ್ 4-120

ಕರರುಹದ ರುಚಿ, ಕಣ್ಣಬೆಳಗು, ನವಭಾವರಸ—ಈ ಮೂರು ವ್ಯಾಪಾರಗಳನ್ನು ಕವಿ 'ಕೆದಱಿ' ಎಂಬ ಕ್ರಿಯಾಪದದ ಮೂಲಕ ಅತ್ಯಂತ ಸಮರ್ಪಕವಾಗಿ ಸೂಚಿಸಿ ದ್ದಾನೆ. ಕಣ್ಣಲ್ಲಿ ಕಂಡ ದೃಶ್ಯವನ್ನು ಆಮೂಲಾಗ್ರವಾಗಿ ಮನಸ್ಸಿನಲ್ಲಿ ಗ್ರಹಿಸಿ, ಮನಸ್ಸಿನಲ್ಲಿ ಮೂಡಿದ ಚಿತ್ರವನ್ನು ಓದುಗರ ಮನಸ್ಸಿನಲ್ಲಿ ಮತ್ತೆ ಮೂಡುವಂತೆ, ಅಂದರೆ ಕವಿ ಕಲ್ಪನೆ ಓದುಗರ ಮನೋಗರ್ಭದಲ್ಲಿ ಪುನರ್ಜನ್ಮ ಧಾರಣೆಮಾಡುವಂತೆ ಶಬ್ದದ್ರವ್ಯದ ಮೂಲಕ ಕುಂಚಿಸುವ ಸಾಮರ್ಥ್ಯ ನೇಮಿಚಂದ್ರನಿಗೆ ವಶವಾಗಿದೆ.

ನಸು ಮುಚ್ಚುವ ಬಿಚ್ಚುವ ಪೊಳೆ
ವ ಸುಟಿವ ಬಳಸುವ ಒಬಲ್ವ ತೆರೆಮಸಗಿ ಮರ
ಲ್ದೆಸೆವ ರಸಭಾವ ದೃಷ್ಟಿಗ
ಳಸದಳಮೆಸಿಸಿದುವು ನೃತ್ಯದೊಳ್ ನರ್ತಕಿಯಾ 4-126

ದೃಗಿಂದ್ರಿಯ ಸಂಬಂಧವಾದ ಏಳು ಕ್ರಿಯೆಗಳ ಮೂಲಕ ರಸಭಾವಗಳ ಪ್ರಕರ್ಷ ವನ್ನು ಕವಿ ಪರಿಣಾಮಕಾರಿಯಾಗಿ ಸೂಚಿಸುತ್ತಾನೆ. ಚ ಮತ್ತು ಳ ವರ್ಣಗಳ ಪುನರಾ ವರ್ತನೆ ಉದ್ದಿಷ್ಟ ಗುರಿ ಸಾಧನೆಗೆ ಸಹಾಯವಾಗಿದೆ. 'ಚತುರೋತ್ಕ್ಷಿಪ್ತ ನಿಕುಂಚಿತ ಪತಿತ ಸಮಭ್ರು ಕುಟಿರೇಚಿತ ಭ್ರೂಲತೆಗಳ್' ಶೃಂಗಾರರಸಪೂರ್ಣವಾದ ಶೈವಾಳ ಲತೆಗಳಂತೆ ಕಾಣಿಸುತ್ತಿದ್ದುವಂತೆ. ಕಿವಿ ಮೂಗು ತುಟಿ ತೋಳು ಮೊಗ ಮೊಲೆ ಜಘನ ನಿತಂಬ ಪಾದ ಬಣ್ಣದ ಉಗುರು ಈ ಒಂದೊಂದರ ಅಭಿನಯವೂ ಭಾವ ತರಂಗಗಳ ನ್ನೆಬ್ಬಿಸುವಂತಿತ್ತು. ರಂಭೆಯ ಕೊನೆಯ ನಾಟ್ಯಭಂಗಿಯಂತು ಓದುಗರಲ್ಲಿ ಚಿತ್ತೋ ದ್ಗಮನವುಂಟುಮಾಡಿ ಅಚ್ಚಳಿಯದ ಮುದ್ರೆಯನ್ನೊತ್ತುತ್ತದೆ:

ಬಲಗಾಲ್ ಸೈಕ್ತೊಪ್ಪೆ ವಾಮಂ ಕೆಲಕೆ ತೊಲಗೆ ವಕ್ಷಸ್ಥಿತಂ ಮುಟ್ಟಿ ಚೆಲ್ವಾ
ಗೆ ಲತಾಖ್ಯಂ ಕೈ ಕರಂ ಕಣ್ಗೊಗ್ಗಿಳೆ ಸೆಗೆಯೆ ಕುಚಂ ಕೊಂಕೆ ಮಧ್ಯಂ ದಳತ್ಕು
ಟ್ಮಲನೇತ್ರಂ ಬೀಱೆ ಬೆಳ್ಪಂ ಪ್ರಹಸಿತ ವದನಂ ಶೋಭೆಯಂ ಸೂಸೆ ಲೀಲಾ
ಲಲಿತಾಸ್ಯಕ್ರಾಂತದಿಂ ನಿಂದಮರನರ ಸಭಾ ಚಿತ್ರದೊಳ್ ಕಾಂತೆ ನಿಂದಳ್ 4-146

ನರ್ತಕಿ ಭಾವಪರವಶಳಾದಾಗ ಅವಳ ಇಡೀ ದೇಹದ ಕಣ ಕಣದಲ್ಲಿ ಭಾವ ಸಂಚಾರವಾಗಿ, ಅಂಗಾಂಗಗಳೆಲ್ಲ ಪುಲಕಿತವಾಗಿ, ಒಂದರೊಡನೊಂದು ಹೊಂದಿಕೊಂಡು ತಾಳ ಲಯಬದ್ಧವಾಗಿ ಕುಣಿಯುತ್ತವೆ. ಆ ಕುಣಿತ ಆ ಭಂಗಿ ಆ ಭಾವೋನ್ಮಾದ ಸಹೃದಯ ಕವಿಯ ಮನವನ್ನು ಹೊಗುತ್ತಿದ್ದಂತೆಯೇ, ಶಬ್ದಶಕ್ತಿಯಾಗಿ ರೂಪಾಂತರ ಹೊಂದಿ ಹೊರ ಬರುತ್ತದೆ; ಅಂದರೆ ನರ್ತನವೇ ಶಬ್ದಶಕ್ತಿಯಾಗಿ ಹೊರಹೊಮ್ಮುತ್ತದೆ.

ವಾಮನಾವತಾರದ ಪ್ರಕರಣವಂತು ಕವಿಪ್ರತಿಭೆಗೆ ಜೀವಂತ ಸಾಕ್ಷಿಯಾದ ಶ್ರೇಷ್ಠ ಭಾವಗೀತೆಯಾಗಿದೆ. ವಾಮನ ಕ್ರಮಕ್ರಮವಾಗಿ ತ್ರಿವಿಕ್ರಮನಾದ ಬಗೆ ಮನವುಗುವಂತೆ, ಕಲ್ಪನೆ ಮೂರ್ತಸ್ವರೂಪ ಪಡೆವಂತೆ ವರ್ಣಿತವಾಗಿದೆ. ಕವಿ ಕಲ್ಪನೆಯೇ ವರ್ಣನೆಯಾಗಿ, ಸುಸ್ಪಷ್ಟವೂ ಬಂಧುರವೂ ಆದ ಶಬ್ದಚಿತ್ರ ಓದುಗರ ಮನಸ್ಸಿನಲ್ಲಿ ಸಾಕಾರಗೊಂಡಂತಿದೆ. ನೋಡುನೋಡುತ್ತಿದ್ದಂತೆ ಕ್ಷಣಾರ್ಧದಲ್ಲಿ ವಟು ಮರದುದ್ದವಾಗುತ್ತಾನೆ, ಮದಿಲುದ್ದವಾಗುತ್ತಾನೆ, ಪೆರ್ಮರದುದ್ದವಾಗುತ್ತಾನೆ, ಗಿರಿಯುದ್ದವಾಗುತ್ತಾನೆ, ಮುಗಿಲುದ್ದವಾಗುತ್ತಾನೆ; ಅವನು ಮೇಲೇರುತ್ತಿದ್ದಂತೆ ಓದುಗರ ಕಲ್ಪನೆಗೂ ವೈಕುರ್ವಣ ಶಕ್ತಿ ಸಂಘಟಿಸುತ್ತದೆ. ಮುಂದಿನ ಪದ್ಯದಲ್ಲಿ ವಟುವಿನ ಪಾದ ವಿಗುರ್ವಿಸಿದ ಬೆಡಗು ನಿರೂಪಣೆಗೊಂಡಿದೆ. ಹಿಂದಿನ ವಸ್ತುಗಳು ಪುನರಾವೃತ್ತಿಯಾದರೂ, 'ಇಲ್ಲ' ಎಂಬ ಅವ್ಯಯದ ಆವೃತ್ತಿಯಿಂದ ಭಾವ ಪರಿಪುಷ್ಟಿಗೊಂಡು, ಕಲ್ಪನೆ ಮುಗಿಲುಮುಟ್ಟುತ್ತದೆ. ಆ ವರ್ಣನೆಯನ್ನು ಮೆಲುಕುಹಾಕಿದಂತೆಲ್ಲ ಕವಿಯ ಪ್ರತಿಭಾಸಾಮರ್ಥ್ಯ ಮತ್ತು ವಾಗ್ವೈಭವಗಳು ಮನಸ್ಸನ್ನು ತಟ್ಟುತ್ತವೆ:

ವಟು ಮರದುದ್ದವಾದನನಿತಲ್ಲದೊಡಿತ್ತಲೆಯುದ್ದವಾದನ
ಕ್ಕಟ ಮದಿಲುದ್ದವಾದನಿವನಾವನೊ ಪೆರ್ಮರದುದ್ದವಾದನಿಂ
ತುಟು ಗಿರಿಯುದ್ದವಾದನಿದು ವಿಸ್ಮಯಮಾ ಮುಗಿಲುದ್ದವಾದನೋ
ವಟಮಟಿಗಂ ದಿಟಕ್ಕನೆ ಕರಂ ಬಳೆದಂ ಮನದಂತೆ ವಾಮನಂ 5-24

ಮರನಂ ಮುಟ್ಟಿದನಿಲ್ಲ ಮೇಘ ಘಟೆಯೊಳ್ ಕಾಲ್ಗೋದನಿಲ್ಲಿಲ್ಲ ಭೂ
ಧರಮಂ ದಾಂಟಿದನಿಲ್ಲ ಬಾಂದೆಱೆಯೊಳಿಟ್ಟಂ ಕಾಲನಿಲ್ಲಿಲ್ಲ ಭಾ
ಸ್ಕರನಂ ಮಾಯದ ಮಾಣಿ ಸಂಡೊದೆದನಾ ಇಲ್ಲೆಂಬಿನಂ ನೀಡಿದಂ
ತರದಿಂ ಪಾದಮನುರ್ವಿ ಕೊರ್ವಿ ಬಲಿಯುಂ ಗೆಲ್ವಾ ಮನಂ ವಾಮನಂ 5-25

ಹೀಗೆ ಅಂಬರತಳಕ್ಕೆ ಬಳೆದು ಹೊಳೆಯುತ್ತಿದ್ದ ಅಚ್ಯುತನ ಚರಣದಂಡ ನಕ್ಷತ್ರ ಬಳಸಿದ್ದುದರಿಂದ ದೀಪಮಾಲೆಯ ಕಂಬದಂತೆ ತೊಳಗುತ್ತಿತ್ತಂತೆ! (5-33). ಕವಿ ಕಲ್ಪನೆಯ

ಸ್ಫಟಿಕ ಯಾನದಲ್ಲಿ ಗಗನಯಾತ್ರಿಯಾಗುವ ಕೆಚ್ಚೆದೆಯ ವೀರನಿಗೆ ಮಾತ್ರ ಈ ಅದ್ಭುತರಸ ದರ್ಶನವಾಗುತ್ತದೆ. ಹೆಜ್ಜೆ ಹೆಜ್ಜೆಗೂ ಕುತೂಹಲವನ್ನು ಕೆರಳಿಸಬಲ್ಲ ಭಾವಾಸ್ಫೋಟನೆ, ಆ ಆಸ್ಫೋಟನೆಯನ್ನು ಪ್ರಚೋದಿಸುವ ಕ್ಲಿಷ್ಟ ಸಮಾಸರಹಿತವಾದ, ಅರ್ಥವ್ಯಕ್ತಿಯೇ ಪ್ರಧಾನಗುಣವಾಗುಳ್ಳ ಬಿಡಿನುಡಿಗಳ ವೈದರ್ಭೀರೀತಿ, ಅದರಿಂದ ಚಿಮ್ಮುವ ರಸದ ಚಿಲುಮೆ—ಇವುಗಳಿಂದ ಈ ಪ್ರಕರಣ ಅತ್ಯಂತ ಮನೋಜ್ಞವಾಗಿದೆ. ಅಸಂಭಾವ್ಯ ಘಟನೆಗಳಲ್ಲಿಯೂ ಸಂಭವತೆಯ ಸಂಚಿಕೆಯನ್ನು ಮೂಡಿಸಿ, ರಸೋದ್ಬೋಧವಾಗುವಂತೆ ವರ್ಣಿಸುವ ಕಲ್ಪನಾಚಮತ್ಕಾರ ಅಲ್ಲಲ್ಲಿ ಪ್ರಕಟವಾಗುತ್ತದೆ.

ಕೃಷ್ಣನ ಸಾಹಸ ಮಹಿಮೆಯನ್ನೂ, ಕಂಸ ತಂದೊಡ್ಡಿದ ಪೀಡೆಗಳನ್ನವನು ಯಶಸ್ವಿಯಾಗಿ ಎದುರಿಸಿದ ದಿಟ್ಟತನವನ್ನೂ ಕವಿ ತೀವ್ರೋತ್ಸಾಹದಿಂದ ಬಣ್ಣಿಸಿದ್ದಾನೆ. ಕೃಷ್ಣನ ಕೂಸಾಟದ ವರ್ಣನೆಯಲ್ಲಂತು (7 ನೆಯ ಸಂಧಿ: 84-85) ನಾವೀನ್ಯವಿದೆ, ಯಥಾರ್ಥತೆಯಿದೆ, ಮೋಹಕತೆಯಿದೆ. ಈ ಸಂದರ್ಭದಲ್ಲೆಲ್ಲ ಕವಿಗೆ ಔಚಿತ್ಯ ಪ್ರಜ್ಞೆಯಿದೆ, ಪೌರ್ವಾಪರ್ಯ ವಿವೇಕವಿದೆ, ಮಾತಿನ ಬಳಕೆಯಲ್ಲಿ ಹಿಡಿತವಿದೆ, ನಿರ್ದಿಷ್ಟ ಗುರಿಯ ಅರಿವಿದೆ; ಮುಂದಿನ ಗುರಿ ಬಹುದೂರವಿದೆಯೆಂಬ ಅಂಜಿಕೆಯಿಂದ ಸರಸರನೆ ಕತೆಯನ್ನು ಮುಂದುವರಿಸುತ್ತಾನೆ. ಇಲ್ಲಿ ವಿರಾಮಕ್ಕೆ ಅವಕಾಶವಿಲ್ಲ, ಹರಟೆಗೆ ಸಮಯವಿಲ್ಲ, ಅಲಸಿಕೆ ಆಕಳಿಕೆಗಳಿಗೆ ಬಿಡುವಿಲ್ಲ. ಹತ್ತಾರು ವಿಷಯಗಳನ್ನು ಒಂದೆರಡು ಸಂಗತಿಗಳಲ್ಲಿ ಅಡಕಮಾಡಿ, ಹತ್ತು ನುಡಿ ಬೇಕಾದ ಕಡೆ ಒಂದೆ ನುಡಿಯಲ್ಲಿ ಹಾರಿಸಿ, ಅಂಗೈಯಲ್ಲಿ ಬ್ರಹ್ಮಾಂಡವನ್ನು ತೋರಿಸಿ ಕವಿ ಕೃತಕೃತ್ಯನಾಗಿದ್ದಾನೆ. ಇಡೀ ವೃತ್ತವನ್ನು ವ್ಯಾಪಿಸುವ ಸಂಸ್ಕೃತ ಸಮಾಸದ ಗೊಂದಲವಿಲ್ಲದೆ ಸಂಸ್ಕೃತ ಕನ್ನಡ ಪದಗಳ ಮಧುರಮಿಶ್ರಣದಿಂದ ಕಟ್ಟಾನೆಯ ಮಹೋಗ್ರ ಭೀಕರತೆಯನ್ನು ಮನದಟ್ಟುಮಾಡಿ ಕೊಡುವ ಕವಿಯ ವಾಗ್ವಿಲಾಸ ಅತ್ಯಪೂರ್ವವಾದುದು:

ಮುಗಿಲಂ ಮುಟ್ಟಿದ ಕಾಳಕಾಯ ಬಲದಿಂದರ್ಕಂಗೆ ಕೋಡಿಟ್ಟ ಕೋ
ಡುಗಳಿಂ ಬೆಟ್ಟದ ಬೀಟಲಂತಲೆವ ಕಯ್ಯಿಂ ಪೃಥ್ವಿ ಪಾತಾಳಮಂ
ಪುಗೆ ಗಾತ್ರಾಪರಮಿಟ್ಟು ಮೆಟ್ಟುವಳವಿಂ ಸಪ್ತಾರ್ಚಿಯಂ ಸೂಸುವ
ರ್ಚಿಗಳಿಂದೇಂ ಕೆದಱುತ್ತೆ ಬಂದುದೊ ಮದಸ್ತಂಬೇರಮಂ ಬೀರಮಂ 8-81

ನೇಮಿನಾಥಪುರಾಣದಲ್ಲಿ ಬರುವ ಶ್ಮಶಾನವರ್ಣನೆಯಲ್ಲಿ (5 ನೆಯ ಸಂಧಿ: 19-41) ಕವಿಯ ಕಲ್ಪನಾಚಮತ್ಕಾರ ಮಿಗಿಲಾಗಿ ಕಾಣುತ್ತದೆ; ಭೀಭತ್ಸ ಭಯಾನಕರಸಗಳಿಗೆ ಆಕರಗಳಾದ ಸನ್ನಿವೇಶ ಪರಿಸರಣಗಳನ್ನು ಸೃಷ್ಟಿಸುವುದರಲ್ಲಿ ಕಲಾಕೌಶಲ ಅಭಿವ್ಯಕ್ತವಾಗುತ್ತದೆ. ನಗರ ಮೃಗಯಾ ವರ್ಣನೆಗಳು (6 ನೆಯ ಸಂಧಿ 130-159; 2-21) ಪುತ್ರ ದೋಹದ (ನೇಮಿ: 1 ನೆಯ ಸಂಧಿ: 92 ಗದ್ಯ–105) ಮತ್ತು ಬಾಲಲೀಲಾ ಸಂಬಂಧವಾದ (2 ನೆಯ ಸಂಧಿ: 27-34) ವಿವರಣೆಗಳು ಸಂಪ್ರದಾಯಬದ್ಧವಾಗಿ ನಿರ್ವಿಶಿಷ್ಟವಾಗಿವೆ. ಒಟ್ಟಿನಲ್ಲಿ ನೇಮಿನಾಥ ಪುರಾಣದ ವರ್ಣನೆಗಳು ಹಿತಮಿತ

* ಈ ಪದ್ಯ ನೇಮಿನಾಥ ಪುರಾಣದಲ್ಲಿ ಪುನರಾವೃತ್ತಿಯಾಗಿದೆ (8-18).

ವಾಗಿದ್ದು, ಔಚಿತ್ಯದ ಮೇರೆಯನ್ನು ಮೀರದೆ, ಕಥೆಯ ವಸ್ತು ಪಾತ್ರಕ್ರಿಯೆಯ ಬೆಳವಣಿಗೆಗೆ ತೊಡರಾಗದೆ ಎರೆಯೆಣ್ಣೆಯಾಗಿದ್ದು ಕಾವ್ಯ ಶೋಭೆಯನ್ನು ಪರಿಪೋಷಿಸಿದರೆ, ಲೀಲಾವತಿಯ ವರ್ಣನೆಗಳು ಪಾಚಿ ಜೊಂಡುವಡಕೆಗಳಂತೆ ಬೆಳೆದು ಕಾವ್ಯ ಸರೋವರದ ಅಂದವನ್ನು ಹದಗೆಡಿಸಿವೆ. ನೂರರಲ್ಲಿ ತೊಂಭತ್ತು ಭಾಗ ಕೃತಕ ವರ್ಣನೆಗಳಿಂದ ತುಂಬಿರುವ ಈ ಕಾವ್ಯ ಶೀತರೋಗದಿಂದ ಬಾತುಕ್ಕೊಂಡಿರುವ ಮೆಯ್ಯಂತಿದೆ. ಸಂಕ್ಷೇಪವಾಗಿ ಹೇಳಬಹುದಾದರೆ ವರ್ಣನೆಗಳ ಕಳೆಯಲ್ಲಿ ಕಾವ್ಯ ಸೌಂದರ್ಯದ ಬೆಳೆ ನರುಚಲಾಗಿದೆ.

## ೯. ಶೈಲಿ

ದೂರದಿಂದ ಬರುತ್ತಿರುವ ವ್ಯಕ್ತಿಯನ್ನು ನೋಡಿ ಇಂಥವರೇ ಬರುತ್ತಿರಬೇಕೆಂದು ಅವರ ನಡಿಗೆಯಿಂದ ಗುರುತಿಸುತ್ತೇವೆ. ಅವರವರ ಅಂಗವಿನ್ಯಾಸ ಗಾತ್ರ ಸಂಸ್ಕಾರಗಳಿಗನುಗುಣವಾಗಿ ಅವರವರ 'ನಡೆ'ಯ ವಿಶಿಷ್ಟತೆ ನಿರ್ಧರಿತವಾಗುತ್ತದೆ. ಹಾಗೆಯೇ ಭಾವಾಲೋಚನೆ ವಿಚಾರ ಸಂಸ್ಕಾರಾನುಗುಣವಾಗಿ ಪ್ರತಿಯೊಬ್ಬ ವ್ಯಕ್ತಿಯ ಮಾತಿನ ಮೋಡಿ ಸಿದ್ಧವಾಗುತ್ತದೆ. ಈ ಮೋಡಿಯೇ ಶೈಲಿ. ಕವಿಯ ವ್ಯಕ್ತಿತ್ವ ಪ್ರಕಾಶನ ವಿಧಾನವೇ ಶೈಲಿ. "ಇಷ್ಟಾರ್ಥವ್ಯವಚ್ಛಿನ್ನಾ ಪದಾವಲೀ" ಎಂದರೆ ಉದ್ದಿಷ್ಟವಾದ ಅರ್ಥವನ್ನು ನಿರ್ದಿಷ್ಟವಾಗಿ ತಿಳಿಸುವ ನಿರ್ದುಷ್ಟ ಪದಸರಣಿಯೇ ರೀತಿ ಅಥವಾ ಶೈಲಿಯೆಂಬುದು ದಂಡಿಯ ಮತ. ಈ ಸೂತ್ರವನ್ನು ತುಸು ಪರಿಷ್ಕರಿಸಿ "ವಿಶಿಷ್ಟಾ ಪದರಚನಾ ರೀತಿಃ ವಿಶೇಷೋ ಗುಣಾತ್ಮಾ" ಎಂದು ವಾಮನ ಶೈಲಿಯ ಸ್ವರೂಪವನ್ನು ಸ್ಪಷ್ಟೀಕರಿಸಿದ್ದಾನೆ. ಕವಿರಾಜಮಾರ್ಗವಂತು ಶೈಲಿಯ ಸ್ವರೂಪಲಕ್ಷಣಗಳನ್ನು ಸಾಕಷ್ಟು ವಿವರವಾಗಿ ಹೇಳಿದೆ. "ಶ್ರೀ ವಿಶದವರ್ಣೆ ಮಧುರಾರಾವೋಚಿತೆ ಚತುರರುಚಿರ ಪದರಚನೆ" ಎಂದು ಮುಂತಾಗಿ ಸರಸ್ವತಿಯನ್ನು ವರ್ಣಿಸುವುದರಲ್ಲಿ ಶೈಲಿಯ ಸ್ವರೂಪ ಮಹತ್ವಗಳು ವ್ಯಕ್ತವಾಗುತ್ತವೆ. ಸತ್ಕೃತಿಯಲ್ಲಿ ಜಾಣ್ಣು ಬೆಡಗುಗಳುಳ್ಳ ಪದರಚನೆ (1-9) ಯಿರಬೇಕೆಂಬುದು ಆ ಕೃತಿಕಾರನ ಅಭಿಮತ. "ಕುಱಿತಂತು ಪೆಱರ ಬಗೆಯಂ ತೆಱದಿರೆ ನೆಱೆಗಱಪಲಾರ್ಪವಂ" ಮತ್ತು "ಕಿಱಿದಱೊಳೆ ಪಿರಿದುಮರ್ಥಮನಱಪಲ್ ನೆಱೆವಾತಂ" ನಿಪುಣನೆನ್ನುವಲ್ಲಿ, "ಪದನಱಿದು ನುಡಿ"ಯುವವನೇ ಜಾಣನೆಂದು ಕರೆಯುವಲ್ಲಿ ಶೈಲಿಯ ವಿಶೇಷಾಂಶಗಳ ನಿರೂಪಣೆಯಿದೆ. "ರೀತಿ ವಿನೂತನಮಪ್ಪ ಕೃತಿಗೊಪ್ಪುವ ನೆಯ್" ಮತ್ತು "ಪದರಚನಾತಿಶಯಂ ರೀತಿ" ಎನ್ನುವ ನಾಗವರ್ಮನೂ ಮೇಲಣ ಅಭಿಪ್ರಾಯವನ್ನೇ ಎತ್ತಿಹಿಡಿದಿದ್ದಾನೆ. ಸಾರ್ಥಕವಾದ ಪದ ಸಂಘಟನಾ ವಿಧಾನವೇ ಶೈಲಿಯೆಂದೂ, ಪಾಕಶಯ್ಯೆಗಳೇ ಅದರ ಜೀವಾಳವೆಂದೂ ಭಾವಾರ್ಥರಸಾಭಿವ್ಯಕ್ತಿಗೆ ನೆರವಾಗದ ಪದ ಸಮೂಹ ಅಭಾವಾತ್ಮಕವಾದ ಪ್ರತಿಧ್ವನಿಯೆಂದೂ ಖಚಿತವಾಗಿ ಹೇಳಬಹುದು.

ಉತ್ತಮಶೈಲಿ ಪ್ರತಿಭಾವಿದ್ವತ್ತುಗಳ ರಾಸಾಯನಿಕ ಸಂಮಿಶ್ರಣದಿಂದ ಸಿದ್ಧವಾಗುವ ಅಪೂರ್ವ ಸಂಸ್ಕಾರ. ಖಡ್ಗ ಸಹಜತೀಕ್ಷ್ಣವಾಗಿದ್ದರೂ ಆಗಾಗ್ಗೆ ಸಾಣೆಯ ಸಂಪರ್ಕ ಲಭಿಸದಿದ್ದರೆ ಮೊಂಡಾಗುವುದುಂಟು. ಹಾಗೆಯೇ ಕಾವ್ಯ ವಿದ್ಯಾ

ಪ್ರಚಯಪರಿಚಯದಿಂದ ಮತ್ತು ಸತತಾಭ್ಯಾಸ ಪ್ರಯತ್ನದಿಂದ, ತೇದಪ್ಪೊ ಚಂದನದ ಪರಿಮಳ ಅಗ್ಗಳಿಸುವಂತೆ, ಶೈಲಿ ಪ್ರಖರವಾಗುತ್ತದೆ, ಸತ್ವಯುತವಾಗುತ್ತದೆ, ನಿಷ್ಕೃಷ್ಟವಾಗುತ್ತದೆ, ಕಾಯಕಲ್ಪವನ್ನು ಪಡೆಯುತ್ತದೆ. ಹೀಗೆ ಸಂಸ್ಕಾರಲಬ್ಧವಾದ ಶೈಲಿಗೆ ಕೃತಕತೆಯ ಆರೋಪ ಸಲ್ಲದು. ಹೊಸ ಹೊಸ ತಳಿಗಳ ಅಭಿವೃದ್ಧಿಯಿಲ್ಲದೆ ಜೀವ ಸಂತಾನ ಹೇಗೆ ನಿರ್ವೀರ್ಯವಾಗುತ್ತದೆಯೋ ಹಾಗೆಯೇ ಹೊಸ ಹೊಸ ಸಂಸ್ಕಾರಗಳ ಗಾಢ ಸಂಪರ್ಕವಿಲ್ಲದಿದ್ದರೆ ಭಾಷೆ ನಿರ್ಜೀವವಾಗುತ್ತದೆ, ಶೈಲಿ ತೇಜೋಹೀನವಾಗುತ್ತದೆ. ಅದರಿಂದಲೇ "ಪೂರ್ವ ಕಾವ್ಯರಚನೆಗಳಂ ತಾಂ ಮೊದಲೊಳ್ ಕಲ್ತಂಗಲ್ಲದೆ ಪದದೊಳ್ ಜಾಣಂ ಬೆಡಂಗುಮಕ್ಕುಮೆ ಕೃತಿಯೊಳ್" ಎಂದು ಕವಿರಾಜಮಾರ್ಗಕಾರ ಹೇಳಿದ್ದು.

ಪೂರ್ವಕವಿಕೃತಿಗಳನ್ನೋದದೆ (ನೇಮಿ. 1-34), ಕಾವ್ಯಜ್ಞರಿಂದ ಕಲಿಯದೆ (1-35) ಕಲ್ಪಾಂತಸ್ಥಾಯಿಯಾದ ಕೃತಿನಿರ್ಮಾಣ ಸಾಧ್ಯವಾಗದೆಂದು ನೇಮಿಚಂದ್ರ ಸ್ಪಷ್ಟವಾಗಿ ಹೇಳಿದ್ದಾನೆ. ಉತ್ತಮ ಶೈಲಿಯ ಬಗೆಗೆ ಸ್ವಾಭಿಪ್ರಾಯವನ್ನು ಮಂಡಿಸಿದ್ದಾನೆ. "ಅಸ್ತವ್ಯಸ್ತಂ ಪದಮಪ್ರಸ್ತುತಮತಿವಿಹಿತಮರ್ಥಂ., ಸುಜನಶಿರಸ್ಸೋದ"ನ (ಲೀಲಾ 1-22) ವಾಗುತ್ತದೆಂದೂ," ಪದಮಿಡಲಱಿಯದ ನಾಲಗೆವೆಜಿವರ್, ಸಲೆ ನದರ್ಥಮಂ ಕಾಣದ ಪೋಬಗೆಗುರುಡರ್, ಓದುಗೇಳದಕ್ಕರಗಿವುಡರ್ (ಅದೇ 1-23) ಕಬ್ಬಿಗರಾಗಲಾರರೆಂದೂ, ಪುರುಳಿಲ್ಲದ ಮಾತು ನೀರೊಳಗಣ ಹೆಣನಂತಿರುತ್ತದೆಂದೂ ಹೇಳಿ ಶೈಲಿಯ ವಿಶಿಷ್ಟ ಗುಣಗಳನ್ನು ಹೊರಗೆಡವಿದ್ದಾನೆ. ಕೋಮಳಗುಣ, ಬೆಡಂಗು ಮತ್ತು ನುಣ್ಪುಗಳನ್ನು (ಲೀಲಾ 1-62) ಉಲ್ಲೇಖಿಸುವಾಗ ಅವನು ವೈದರ್ಭೀ ರೀತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡಿರುವಂತಿದೆ. ಅಕ್ಷರದರಿದ್ರರಿಂದ ಕೃತಿ ಪರೀಕ್ಷೆ (ಲೀಲಾ 1-67) ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಕೃತಿರಚನೆಯೂ ಸಾಧ್ಯವಿಲ್ಲವೆಂದು ಸಾರಿದ್ದಾನೆ. ಸಂಸ್ಕೃತ ಕನ್ನಡ ಪದಗಳ ಮಿಶ್ರಣದ ಬಗ್ಗೆಯೂ ಕವಿ ಒಳ್ಳೆಯ ಮಾತಾಡಿದ್ದಾನೆ. "ಅಕ್ಕರಿಗರ ಬಗೆಗಂ ಬೆಳ್ಳಕ್ಕರಿಗರ ಬುದ್ಧಿಗಂ ಪ್ರಭಾವಾರ್ಥತೆಯಿಂ" "ಸಕ್ಕಸಮುಂ ಕೇಳ್ವೊಡೆನಿಸಿ" (ಲೀಲಾ 1-63) ಕೃತಿ ಹೇಳಬೇಕೆನ್ನುವಲ್ಲಿ ಸಂಸ್ಕೃತ ಪದ ಪ್ರಯೋಗದ ಹದ ಹವಣುಗಳನ್ನು ಸೂಚಿಸಿದ್ದಾನೆ. ಬೆಳ್ಳಕ್ಕರಿಗರ ಕಿವಿಗೂ ಸಂಸ್ಕೃತ ಪದ ಕನ್ನಡದಂತೆ ಕೇಳಿಸಬೇಕೆಂಬುದೇ ಅವನ ಅಭಿಪ್ರಾಯ. ಈ ಎರಡು ಭಾಷೆಯ ಸಾವಿರಾರು ವರ್ಷದ ಸಾಹಚರ್ಯದಿಂದ ಸಂಸ್ಕೃತಕೋಶದ ಬಹುಭಾಗ ಕನ್ನಡದ ಧಾಟಿಯೊಡನೆ ಹೊಂದಿಕೊಳ್ಳುತ್ತದೆಂಬ ವಿಶ್ವಾಸ ಅವನಲ್ಲಿ ಪ್ರಬಲವಾಗಿದೆ. ಹದಹವಣರಿತು ಕನ್ನಡ ಪದಗಳ ನಡುವೆ ಸಂಸ್ಕೃತ ಪದಗಳನ್ನು ಸಮತೂಕವಾಗಿ ಬೆರಸಿದಾಗ ಸಿದ್ಧವಾಗುವ ಶೈಲಿ ದೇಸಿ ಶೈಲಿಯೆಂದು ಅವನ ಸೂತ್ರಕ್ಕೆ ವ್ಯಾಖ್ಯಾನಮಾಡಿದರೆ ತಪ್ಪಾಗಲಾರದು.

ನೇಮಿಚಂದ್ರನ ಕೃತಿಗಳಲ್ಲಿ ಕಾಣುವ ಶೈಲಿಯನ್ನು ಅವನ ಸೂತ್ರಗಳಿಗೆ ಒರೆಹಚ್ಚಿ ನೋಡಿದಾಗ ಅವನ ಮತಿಕೃತಿಗಳ ನಡುವೆ ಅಪಾರ ಕಂದಕ ಬಾಯ್ದೆರೆದುಕೊಂಡಿರುವಂತೆ ಕಾಣುತ್ತದೆ. ಅದರಲ್ಲಿಯೂ ಸಂಯಮರಹಿತವಾದ ಯೌವನಭರದ ಪೂರ್ವವಯಸ್ಸಿನಲ್ಲಿ ಪಾಂಡಿತ್ಯ ಪ್ರದರ್ಶನ ಬುದ್ಧಿಯಿಂದ ರಚನೆಗೊಂಡ ಲೀಲಾವತಿ

ಈ ಸೂತ್ರಗಳಿಗೆ ಅಪವಾದದಂತಿದೆ. ಇದು ಚತುರ್ಭಾಷಾ ಚಕ್ರವರ್ತಿಯಾಗುವುದಕ್ಕೆ ಮುಂಚೆ ರಚಿಸಿದ ಕಾವ್ಯವಿದ್ದಿರಬೇಕು. ಏಕೆಂದರೆ ಲೀಲಾವತಿಯಲ್ಲಿ ಆ ಬಿರುದಿನ ಉಲ್ಲೇಖವಿಲ್ಲ. ಅಸಂಯಮದ ದುಂದುಗಾರಿಕೆ, ಅಪ್ರಬುದ್ಧ ವಯಸ್ಸಿನ ಅಪರಿಪಕ್ವತೆ, ವಿವೇಕಶೂನ್ಯವಾದ ಪಾಂಡಿತ್ಯಾತಿರೇಕ, ಶೀಘ್ರಗಮನ ನಿರೋಧಕವಾದ ಏರುತಗ್ಗುಗಳು. ನಿರರ್ಥಕ ಗ್ರಾಮ್ಯ ಕ್ಲಿಷ್ಟ ಪ್ರತಿಕೂಲವರ್ಣ ಅಧಿಕಪದ ಅಸ್ಥಾನಪದ ಅಪುಷ್ಟಿ ಪುನರುಕ್ತಿ ಅನಪೇಕ್ಷಿತತ್ವಾದಿ ದೋಷಗಳು, ಗುಹಾಧ್ವನಿಮೂಲವಾದ ಕೃತಕತೆ—ಇವೇ ಮೊದಲಾದುವು ಕವಿಯ ಪ್ರಾರಂಭ ಶೈಲಿಯ ನ್ಯೂನತೆಗಳು. ಸಂಸ್ಕೃತ ಪದ ಪ್ರಯೋಗದ ವಿಚಾರವಾಗಿ ಸ್ವಯಂ ತತ್ವೋಪದೇಶಮಾಡಿಯೂ ಮುಗ್ಗರಿಸಿದ್ದಾನೆ; ನೀರಿಳಿಯದ ಗಂಟಲಲ್ಲಿ ಒಣಗಡುಬು ತುರುಕಿ ಉಸಿರು ಕಟ್ಟಿಸಿದ್ದಾನೆ. ಈ ನ್ಯೂನತೆಗಳಿಂದ ಪಾರಾಗಿ, ಬನಿಪಾಕಗಳಿಂದ ನಡೆಬೆಡಗುಗಳಿಂದ, ಗುಣ್ಪುನುಣ್ಪುಗಳಿಂದ ಶೋಭಾಯಮಾನವಾಗಿರುವ ನೇಮಿನಾಥಪುರಾಣದ ಶೈಲಿ ಅವನ ಹೆಸರಿಗೆ ಕಳಶವಿಟ್ಟಂತಿದೆ; ಕನ್ನಡದ ತಾಳಕ್ಕೆ ಸಂಸ್ಕೃತ ಹೆಜ್ಜೆಯಿಟ್ಟಿದೆ.

ಲೀಲಾವತಿಯನ್ನು ಕೈಗೆತ್ತಿಕೊಂಡ ಕೂಡಲೆ ಸಂಸ್ಕೃತ ಭೂಯಿಷ್ಠವಾದ ಶೈಲಿ ಪಾತಾಳಭಯಂಕರವಾಗಿ ಕಣೆಗೆದರಿನಿಂತಂತೆ ಭಾಸವಾಗುತ್ತದೆ; ಸುಂಡಿಲಿ ಹಿಡಿಯಲು ಬೆಟ್ಟವನ್ನೆಗೆಯುವ ಸ್ಪರ್ಧ ಸಾಹಸಕ್ಕೆ ಮನಸ್ಸು ವಿಮುಖವಾಗುತ್ತದೆ, ವಿದ್ವತ್ಸಮೃದ್ಧವಾದ ವಾಗ್ಜಾಲದಲ್ಲಿ ಭಾವಾರ್ಥರಸಗಳು ಮರೆಯಾಗುತ್ತವೆ. ಸುಬಂಧುಬಾಣರ ಮಾರ್ಗದರ್ಶನದಲ್ಲಿ ಆಸ್ಥಾನಪಂಡಿತರಿಗೆ ಸವಾಲೊಡ್ಡುವ ಯೌವನೋತ್ಸಾಹದಿಂದ ಕಾವ್ಯರಚನೆಗೆ ತೊಡಗಿದ್ದರಿಂದ ಭಾಷೆ ಕ್ಲಿಷ್ಟವಾಗುತ್ತದೆ. ಅಲಸ ಜೀವಿಗಳಾದ ನೃಪರಿಗೆ ಶೃಂಗಾರ ಕಥೆ ಉಲ್ಲಾಸಕಾರಿಯಾದರೆ, ಪಂಡಿತರಿಗೆ ವಾಗ್ವೈಭವ ಸಂಜೀವನ ಶಕ್ತಿಯಾಗುತ್ತದೆ. ಶ್ಲೇಷೆ ವಿರೋಧಾಭಾಸ ಪರಿಸಂಖ್ಯೆ ಉತ್ಪ್ರೇಕ್ಷೆ ಪ್ರತೀಪ ಸಂದೇಹ ಅತಿಶಯೋಕ್ತಿ ಯಥಾಸಂಖ್ಯೆ ಮೊದಲಾದ ಅಲಂಕಾರಗಳ ಹೆಬ್ಬೊರೆಯ ಕೆಳಗೆ ಬುದ್ಧಿಭಾವಗಳು ಅಪ್ಪಚ್ಚಿಯಾಗುತ್ತವೆ. ಅರಣ್ಯವರ್ಣನೆಯಲ್ಲಿ ಕವಿಯ ಶೈಲಿ ಅನಿವಾರ್ಯವಾಗಿ ಸಂಸ್ಕೃತ ಸಮಾಸಾಕೀರ್ಣವಾಗುತ್ತದೆ. ಘೋರಾರಣ್ಯದ ಭೀಕರತೆ ಮನಮುಟ್ಟಬೇಕಾದರೆ ಭಯಂಕರ ಶಬ್ದಪ್ರಯೋಗ ಅನಿವಾರ್ಯವೆಂದು ಕವಿಯ ಅಭಿಪ್ರಾಯವಾಗಿರಬೇಕು :

ಶರಭದ್ವೀಪಿದ್ವಿಪೇಹಾಮೃಗಮಹಿಷವೃಕ ಕ್ರೋಡ ಖಳ್ಗಾಋಭುಕ್ಸಂ
ಬರಗೋಳಾಂಗೂಳ ಗೌಧೇಯಕ ಕಳಕಳಿತಂ ಕೋಕ ಕೋಯಷ್ಟಿಗವಾರ್
ಶರಟ ವ್ಯಾಘಾಟಕಂ ಕುರ್ಕುರ ಕುರರರದ ವ್ಯೂಹದಂಶಾಹಿ ತಿ
ತ್ತಿರಿ ಕೇಕೀಭಾಷನಾದಂ ಒಕಬಕಕೃತ ಕೋಳಾಹಳಂ ತದ್ವನಾಂತಂ
ಲೀಲಾ 6-31

ಈ ವೃತ್ತದಲ್ಲಿ ಔಷಧಿಗಾದರೂ ಕನ್ನಡ ಪದವಿಲ್ಲ; ಇದು ಸಂಸ್ಕೃತ ಕಾವ್ಯದಿಂದ ತೆಗೆದ ಅವತರಣಿಕೆಯಂತಿದೆ. ಬೆಳ್ಳಕ್ಕರಿಗನಿಗಿರಲಿ, ಅಕ್ಕರಿಗನಿಗೂ ಇದರಿಂದ ತಲೆಯಿರಿತ ಬರುತ್ತದೆ. ವ್ಯಾಕರಣ ಕೋಶಗಳನ್ನು ಬಿಚ್ಚಿಕೊಂಡು ಸಂಧಿಸಮಾಸಾರ್ಥ

ಗಳನ್ನು ಪಗಟಮಾಡಿಕೊಳ್ಳುವ ವ್ಯರ್ಥಾಯಾಸ ಅನವಶ್ಯವೆಂದು ತಲೆಯೊಗೆಯು ಬೇಕಾಗುತ್ತದೆ. ವಟವೃಕ್ಷದ ಭೀಮಾಕೃತಿಯನ್ನು ಬಣ್ಣಿಸುವಾಗ ಸಮಾಸ ಲಾಂಗೂಲ ವಾಗುತ್ತದೆ. "ವಿಟಪಾಗ್ರಾಂಕುರಲಿಖ್ಯಮಾನಸಮದವದ್ದಿಕ್ಕುಂಭಿ ಕುಂಭಸ್ಥುಟೋತ್ಕಟಮಮಂ, ತುಂಗ ಶಿಖಾಸಹಸ್ರವಿಚರಚ್ಚಂದ್ರಾರ್ಕ ಸಂಚಾರ ಸಂಕಟಮಮಂ, ಭೀಮತಮಸ್ತಮಳಮಳಿಸಚ್ಛಾಯಾಮವತ್ಸ್ಯೋಟರಾವಟಮಮಂ" (ಲೀಲಾ 8-41) ಈ ಪದ್ಯ ಸಮುಚ್ಚಯವನ್ನುಚ್ಚರಿಸುವಾಗ ಹಲ್ಲುದುರಿ, ಅಂಗುಳು ಒಣಗಿ, ಕಣ್ಣು ತೇಲುವಂತಾಗುತ್ತದೆ.

ಗದ್ಯದಲ್ಲಿ ಇದೇಘಾಟಿ ಮೇಲಿಂದ ಮೇಲೆ ಕಾಣಿಸಿಕೊಳ್ಳುತ್ತದೆ. ಕೈಲಾಸಪರ್ವತವನ್ನೆತ್ತಲು ಹೋಗಿ ವಿಫಲನಾದ ರಾವಣನಂತೆ, ಮೈಯೆಲ್ಲ ಬೆವತರೂ ಹನುಮಂತನ ಲಾಂಗೂಲವನ್ನಲುಗಿಸಲಾರದೆ ಭಗ್ನಮನೋರಥನಾದ ಭೀಮನಂತೆ ಓದುಗ ಇಲ್ಲಿಯ ದೀರ್ಘವಾಕ್ಯಗಳನ್ನೋದಲಾರದೆ ತಡಪಡಿಸಬೇಕಾಗುತ್ತದೆ: ತಿಟ್ಟನ್ನೇರುವ ದುರ್ಬಲ ಮನುಷ್ಯನಂತೆ ಉಸಿರು ಕಟ್ಟಿ ಏದಬೇಕಾಗುತ್ತದೆ: "ನಿರ್ದಳಿತ ಸಂವಿದಿತ ಸಂತತ ಮಸೃಣದಶಾಸಿಪೀತಗಂಧತೈಲ ಪರಿಣತ ಪರಿಮಳ ಜ್ವಾಳೋದ್ಗಾರಿ ಗುರುನಿತಂಬಿನಿ ನೀರಾಜಿತಮಂಗಳ ಪ್ರದೀಪ ದೀಪ್ತಿ ಪ್ರತಿಫಲಿತ ಮುಖಮಯೂಖನಲ್ಲಿಂ ಪೊಱಮಟ್ಟು" (5-16 ಗದ್ಯ) ಕೊನೆಯಲ್ಲಿ ತಗುಲಿಹಾಕಿಕೊಂಡಿರುವ ಎರಡು ಕನ್ನಡ ಪದಗಳ ಸ್ಥಿತಿ ಕರುಣಾಜನಕವಾಗಿದೆ. ತಾಕತ್ತಿದ್ದರೆ ಮುಂದಿನ ವಾಕ್ಯವನ್ನೂ ಓದಿ ಜೀರ್ಣಿಸಿಕೊಳ್ಳಬಹುದು: "ಪುಣ್ಯ ಪಾತಕ ಪ್ರಕರ ಪಠ್ಯಮಾನನಾನಾನವದ್ಯ ಪದ್ಯಗದ್ಯ ಪದಾರ್ಥಾಕರ್ಣಕೀರ್ಣಾಂತಃಕರಣಂ ತತ್ಸಮಯ ಸಮುಪಗತ ಪ್ರಗಲ್ಭ ತರುಣ ಪ್ರಾಯಪರಿಜನ ಪರಿವೃತಂ ತಮಿಸ್ರಾತ್ರಸ್ತಶರಣಾಗತ ಸಹಸ್ರಕಿರಣಸಂಕುಚಿತ ಕಿರಣಾಯಮಾನಕರ ದೀಪಿಕಾ ಸಹಸ್ರಪರಿವೇಷ್ಟಿತನಭಿನವಾಂಕುರಿತಾಕರಾಳ ತರಣಿ ತೇಜಃ ಕಲ್ಪಕರತಳಚಾಲಿತಚುಬರಿಕಾಚುಬರಿತಮರೀಚಿಕವಚಿತಕಮನೀಯಕಾಯನತಿ ತ್ವರಿತಗತಿಯಿಂ ಬಂದತಿ ಬಹಳ ಕಾಳಾಗರು ಧೂಪಧೂಮಪಟಲನಿಪೀತ ಪೀತ ಪ್ರಭಾ ಪ್ರಸರ ಪ್ರದೀಪ್ತ ದೀಪಮಂಜರೀ ಮನೋಹರಮುಂ ದರದಲಿತ ಮಾಲತೀ ಮಲಯಜ ದ್ರವದತ್ತ ಪರಿಮಳ ಪಾನ ಮತ್ತ ಮಧುಕರನಿಕರ ಝುಂಕಾರಮುಖರಿತಮುಮಪ್ಪ . . ." (5-15 ಗದ್ಯ). ಇಲ್ಲಿ ಹುಡುಕಿ ನೋಡಿದರೆ ಎರಡೇ ಎರಡು ಕನ್ನಡ ಕ್ರಿಯೆಗಳು ಅಜ್ಞಾತ ಮೂಲೆಯನ್ನಾಶ್ರಯಿಸಿ ತಲೆಮರೆಸಿಕೊಂಡಿರುವಂತೆ ಕಾಣುತ್ತವೆ. ಈ ಭೂತ ದರ್ಶನದಿಂದ ವಾಚಕನ ಕರುಳು ಕಂಪಿಸಿ ಜಂಘಾ ಬಲವುಡುಗಿ ಹೃದಯಕ್ರಿಯೆ ನಿಂತು ಬುದ್ಧಿ ಮೂರ್ಛಾಗತವಾದರೆ ಆಶ್ಚರ್ಯವಿಲ್ಲ; ಪ್ರಜ್ಞೆ ಜಾಗೃತವಾದರೂ ಪೂರ್ವಜ್ಞಾನ ಮರಗಟ್ಟಿಕೊಂಡಿರುತ್ತದೆ.

ನೇಮಿನಾಥಪುರಾಣವನ್ನು ರಚಿಸುವ ವೇಳೆಗೆ ಕವಿ 'ಚತುರ್ಭಾಷಾಪಂಡಿತ' ನಾಗಿದ್ದರೂ ಅವನ ಶೈಲಿ, ಯೋಗಾಸನಾದಿ ಸಾಧನೆಯಿಂದ ಕೊಬ್ಬು ಬೊಜ್ಜುಗಳನ್ನು ಕಳೆದುಕೊಂಡು ಉಕ್ಕುಮಿಂಚುಗಳ ಶಕ್ತಿ ತೇಜಸ್ಸುಗಳನ್ನಳವಡಿಸಿಕೊಂಡ ಶರೀರದಂತೆ, ಕಸುವು ಬನಿಬಂಡಗಳನ್ನು ಪಡೆದಿದೆ. ಶಬ್ದಜ್ಞಾನ ವೈಭವದ ಪ್ರದರ್ಶನಬುದ್ಧಿಯನ್ನು ಗಂಟುಕಟ್ಟಿಟ್ಟು, ಶಬ್ದ ಕಾವ್ಯದ ವಾಹಕ ಶಕ್ತಿಯೆಂಬುದನ್ನರಿತು, ನವಾರನ ಮತಿಮರ್ಜ

ಗನುಗುಣವಾಗಿ ಶಬ್ದಶಕ್ತಿಯು ಗತಿ ನಿರ್ಣಯವಾಗಬೇಕೆಂಬ ತತ್ತ್ವರಹಸ್ಯವನ್ನು ಕವಿ ಮನದಟ್ಟುಮಾಡಿಕೊಂಡಿದ್ದಾನೆ. ಕೊಂಕು ಬಾಗುಗಳಿಂದ ಸ್ಪಷ್ಟತೆ ಸಿಬಿರತೆಗಳಿಂದ ವಿವೇಕಮೂಲವಾದ ಮಿತವ್ಯಯಾಸಕ್ತಿಯಿಂದ ಅವನ ಶೈಲಿಗೆ ಹೊಸ ಮೆರುಗು ಬಂದಿದೆ; ದೇಸಿ ಶೈಲಿಯ ಗುಟ್ಟು ಅವನಿಗೆ ಮನದಟ್ಟಾಗಿದೆ. ಹಿತಮಿತವಾದ ಹಾಳತವಾದ ಸಂಸ್ಕೃತ ಪದಪ್ರಯೋಗದಿಂದ ಅವನ ಕನ್ನಡ ಶೈಲಿಗೆ ಗಾಂಭೀರ್ಯ ಪ್ರೌಢಿಮೆಗಳೊದಗಿವೆ. ಕೆಲವೆಡೆ ಸಂಸ್ಕೃತ ಪದಪ್ರಯೋಗ ಮಿತಿಮೀರಿದಂತೆ ಕಂಡರೂ ದೀರ್ಘಸಮಾಸಾಭಾವದಿಂದ ಕೃತಕತೆಯ ಕಿಸುರಿಲ್ಲದ ಕ್ಲಿಷ್ಟತೆಯ ಕ್ಲೇಶವಿಲ್ಲದ ರೀತಿ ಹೃದಯಂಗಮವಾಗುತ್ತದೆ:

ಮಾನಂ ಸದ್ಧೈರ್ಯ ದೀಕ್ಷಾಗುರು ಸುರಗಿರಿಗಂ ಕಲ್ಪವೃಕ್ಷಕ್ಕೆ ಹಸ್ತಂ ।
ದಾನೋಪಾಧ್ಯಾಯನಾತ್ಮಾಕೃತಿಯು ತನುಗೆ ಬಲ್ಲೋಜನೋಜಃ ಪ್ರಸಾದಾ
ಧೀನಂ ತಸ್ಮುಕ್ತಿವಾಗ್ನರ್ತಕಿಗಖಿಳ ಕಳಾಲಾಸ್ಯ ಶೈಲೂಷನಾಗ
ಲ್ತಾನಾಯ್ತೆಂಬನ್ನಮಾದಂ ಜಗಮನೆಱಗಿಸಲ್ ಸುಪ್ರತಿಷ್ಠಂ ಗರಿಷ್ಠಂ
ನೇಮಿ 4-35

ಒಂದೊಂದು ಪದಗುಚ್ಛವೂ ಅರ್ಥಗರ್ಭಿತವಾಗಿದ್ದು ಸರಳವಾಗಿದ್ದು ವಸ್ತ್ವಲಂಕಾರ ಧ್ವನಿಗಳಿಂದ ಕೂಡಿದ್ದು ಶ್ರವಣ ಸುಭಗವಾಗಿದೆ. ಇದಕ್ಕಿಂತ ಕಠಿನವಾದ ವೃತ್ತಗಳು ಈ ಗ್ರಂಥದಲ್ಲಿ ವಿರಳ, ಇಲ್ಲವೇ ಇಲ್ಲವೆನ್ನಬಹುದು. ಕೆಲವು ಕಡೆ ಸಂಸ್ಕೃತ ಪದಗಳು ಕನ್ನಡದ ಶೀಲವನ್ನು ಮೆರೆಯುತ್ತ ಕನ್ನಡದಲ್ಲಿ ಕನ್ನಡವಾಗಿ ಬಿಡುತ್ತವೆ; ನಿರ್ದಿಷ್ಟಾರ್ಥವನ್ನು ಸ್ಪಷ್ಟವಾಗಿ ಅತ್ಯಂತ ಶೀಘ್ರವಾಗಿ ಪ್ರಚೋದಿಸುತ್ತವೆ. ಸಂಸ್ಕೃತ ಕನ್ನಡ ಪದಗಳ ಕೂಡಿಕೆಯಲ್ಲಿ ಇಜ್ಜೋಡಿ ಇಬ್ಬಗೆ ಇಬ್ಬಂದಿಗಳಿಗೆ ಎಡೆಯೇ ಇಲ್ಲ; ಮುತ್ತು ರತ್ನಗಳ ಹೊಂದಾಣಿಕೆಯಿದೆ:

ನರರುಂ ದೇವರ್ಕಳುಂ ನೋಡಿದಪರಿಳೆಯೊಳಂ ಬಾನೊಳಂ ನೂಂಕಿ ನುಗ್ಗಾ
ಗಿರೆ ನೋಟ್ಪರ್ ನಾಳೆಯೇಂ ನೋಡಿದಪರೆ ನೆಱೆ ನೋಡ್ಕೆಂದು ಚಾಣೂರನಂ
ನೋಟ್ಪರ ನೇತ್ರಾನಂದಮಂ ನಂದಿಸುವುದುಚಿತಮಲ್ತೇಂ ಪೊಡರ್ದಂ ವಿನೋದ
ಕ್ಕರಿಗಾತ್ಮಪ್ರಾಣಮಂ ತೋಱದ ಹರಿ ಹರಿಗೊಟ್ಟಂತು ಬಲ್ಲೊಂದು ಜಾವಂ
ನೇಮಿ 8-100

ಇಲ್ಲಿ ಹತ್ತೊಹನ್ನೊಂದೊ ಸಂಸ್ಕೃತ ಪದಗಳಿವೆ. ಇವುಗಳಲ್ಲಿ ಕೆಲವು ಸಂಸ್ಕೃತವೊ ಕನ್ನಡವೊ ಎಂಬ ಭ್ರಮೆ ಮೂಡಿಸುವಂತಿವೆ. ನೇತ್ರಾನಂದ, ಆತ್ಮ ಪ್ರಾಣ ಇವೇ ಇಲ್ಲಿಯ ಉದ್ದನೆಯ ಪದಗಳು. ಉಳಿದುವೆಲ್ಲ ಬಿಡಿಬಿಡಿ ಪದಗಳು. ಕಠಿನಾಕ್ಷರಗಳ ಬಳಕೆಯೂ ಇಲ್ಲ. ಆದರೂ ಕೃಷ್ಣ ಚಾಣೂರ ಯುದ್ಧದ ಮಹತ್ವ ಸೊಗಸಾಗಿ ಧ್ವನಿತವಾಗಿದೆ. ಇಲ್ಲಿ ಮಾರಕಾಸ್ತ್ರಗಳ ಭೀಕರಾಸ್ಫೋಟನೆಯಿಲ್ಲ, ರಣವಾದ್ಯದ ಸದ್ದು ಗದ್ದಲವಿಲ್ಲ; ಯೋಧರ ಪರಸ್ಪರ ಮೂದಲಿಕೆಯ ಘೋರರವವಿಲ್ಲ; ನೊಂದವರ ಮತ್ತು ಸಾಯುವವರ ನರಳುದನಿಯಿಲ್ಲ; ರಕ್ತಮಜ್ಜೆಮಾಂಸಗಳ ಕಟುವಾಸನೆಯಿಲ್ಲ; ಆದರೂ ಅವುಗಳ

ಸಾಮೂಹಿಕ ಸಂಘಟನೆಯಿಂದ ಸಂಭವಿಸಬಹುದಾದ ಪರಿಣಾಮ ರಮಣೀಯತೆಯಿದೆ. ಹೇಳಿರುವ ವಿಷಯ ಹೊಸದಲ್ಲ, ರೀತಿ ವಿನೂತನವಾದದ್ದು. ಸರರೂ ದೇವತೆಗಳೂ ಬುಬಿಬಾನಿನಲ್ಲಿ ಸೂಕುಸುಗ್ಗಾಗಿ ನಿಂತು ಯುದ್ಧ ನೋಡುವುದೇನೂ ಕನ್ನಡ ಸಾಹಿತ್ಯ ವನ್ನೋದಿದವರಿಗೆ ಹೊಸದಲ್ಲ. "ನಾಳೆಯೇಂ ನೋಡಿದಪರೆ ನೆಱೆ ನೋಳ್ಪ" ಎನ್ನುವ ಪದಸಮೂಹ ಕವಿಶೈಲಿಯ ವಿಶಿಷ್ಟತೆಯನ್ನು ಕಾಪಾಡುತ್ತದೆ, ಭಾವ ಭೂಮಿಕೆಯಲ್ಲಿ ಯುದ್ಧದ ಮಹತ್ವವನ್ನು ಹಿರಿದಾಗಿ ತೋರಿಸುತ್ತದೆ. ಕಿರಿದರಲ್ಲಿ ಹಿರಿದನ್ನು ತೋರಿಸುವ ಬಲ್ಮೆ ಇಲ್ಲಿದೆ.

ಕದಳೀಪಾಕ ಮೃದುಶಯ್ಯೆಗಳಿಂದ ಚಿತ್ತಾಹ್ಲಾದಕಾರಿಯಾದ ಕಂದಗಳು ನೇಮಿಚಂದ್ರನ ಪ್ರತಿಭಾ ಸಾಮರ್ಥ್ಯದ ದ್ಯೋತಕವಾಗಿವೆ. ಒಂದೊಂದು ಕಂದವೂ ಕಳಿತು ಸುಲಿದ ಸಂಜನಗೂಡು ರಸಬಾಳೆ, ಮಾಗಿದ ಓಟೆಯಿಲ್ಲದ ಬಾದಾಮಿ ಮಾವು, ಚಂದ್ರನ ಕಲೆ, ಕಲ್ಪಭೂಜದ ಫಲ ಮತ್ತು ಕಾಮಧೇನುವಿನ ಹಾಲಿನ ರಸಾಯನಕ್ಕೆ ಕಾಮನ ಬಿಲ್ಲಿನ ಬಣ್ಣವನ್ನು ಬೆರಸಿ ಘನೀಭೂತಗೊಳಿಸಿದ ಪೆಪ್ಪರಮೆಂಟು; ಕುಶಲ ಕರ್ಮಿ ನೇಯ್ದ ಜಾರ್ಜೆಟ್ ಕಣ; ವೀಣಾಪಾಣಿಯೂ ಮಯೂರವಾಹನೆಯೂ ಆದ ಸರಸ್ವತಿಯೇ ಸೃಷ್ಟಿಸಿದಂತಿರುವ ಸೂಕ್ಷ್ಮತನುವಿನ ಸುರಸೌಂದರ್ಯದ ಕನ್ನಡದ ಚೆಲುವೆ, ನೇಮಿನಾಥ ಪುರಾಣದ ಯಾವ ಪುಟ ಮಗುಚಿದರೂ ಇಂಥ ಒಂದೆರಡು ಪದ್ಯಗಳು ಸಿಗುತ್ತವೆ. ಕೇವಲ ನೀತಿ ಬೋಧಕವಾದ ಕಂದ ಪದ್ಯಗಳನ್ನೇ ನೋಡಿ:

ಪಡೆದುಂ ಪಣಮಂ ಪಾತ್ರಂ  
ಒಡೆಯದೊಡದು ನಿಃಫಲಂ ಫಲಾರ್ಥಿಗೆ ಪಾತ್ರಂ  
ಬಡೆವುದೆ ಪುಣ್ಯಂ ಪಣಮಂ  
ಪಡೆವುದು ಪುಣ್ಯಮೆ ಪಣಂ ಮಹಾಹಿಗಮಿಲ್ಲಾ 4-42  
ತಡೆಯದೆ ಮುಗಿಲ್ಗೆ ಕುಡುವುದು  
ಕಡಲಿತರ ಜನಕ್ಕೆ ಕೈಪೆಯಪ್ಪುದು ಕುಡಲು  
ಳ್ಪೊಡೆ ಪಾತ್ರಮಱಿದು ಮಾಣದೆ  
ಕುಡುವುದಪಾತ್ರಕ್ಕೆ ಕೊಟ್ಟೊಡೇಂ ಪುರುಳುಂಟೇ 4-43  
ಕುಡುವಾತನರ್ಥಿಯಪ್ಪಂ  
ತೊಡರದೆ ಕೊಳ್ವಾತನುತ್ತಮ ಪ್ರಭುವಪ್ಪಂ  
ಕಡೆಗಣಿಸಿ ಧರ್ಮಪಾತ್ರಂ  
ಪಡೆದುನ್ನತಿಯಂ ಸುರಾದ್ರಿಯುಂ ಪಡೆದಪುದೇ 4-48

ದಾನದ ಸ್ವರೂಪವನ್ನುಗ್ಗಡಿಸುವಲ್ಲಿ ಶುಷ್ಕವಾಗಬೇಕಾಗಿದ್ದ ಮಾತುಗಾರಿಕೆ ಕಲೆಗಾರಿಕೆಯಾಗಿದೆ. ಇಲ್ಲಿ ಉಪಮೆಗಳ ಸೊಗಸಿದೆ, ಭಾವದ ಕಾವಿದೆ, ಮೃದು ಪದ ಬಂಧದ ನಯವಿದೆ. ವನೇಚರ ವನೇಚರಿಯು ಕಣ್ಣ ಬೆಳಗಿನ ಸಹಾಯದಿಂದ ಕತ್ತಲಿಡಿದ ಕಾಡನ್ನು ಪ್ರವೇಶಿಸುವುದು ಪ್ರಸಿದ್ಧವಾದ ಕವಿಯ ಸಮಯ. ಆದರೂ ಅದನ್ನು ವ್ಯಕ್ತಪಡಿಸುವ ವಿಧಾನ ಮೋಹಕವಾಗಿದೆ.

ಎನಿತುಂ ಕಟ್ಟುಲಿಸಿದೊಡಂ
ವನೇಚರಂ ನಡೆವನಡರೆ ಪೊಳೆದಡಗದ ಮಿಂ
ಚಿನ ಗೊಂಚಲಂತೆ ಮಿಂಚುವ
ವನೇಚರಿಯ ಬಿಳಿಯ ಕಣ್ಣ ಬೆಳಗಿಂ ಬನದೊಳ್ 3-57

ತನ್ನ ಮಕ್ಕಳನ್ನು ಕಂಸ ಶಿಲೆಯೊಳೊಗೆದ ಘೋರ ಸಂಗತಿಯನ್ನು ಕೇಳಿದಾಗ ಬಸಿರಲ್ಲಿ ಕುಸುಬೆಯುರಿ ಉರಿದಂತೆ ದೇವಕಿ ಅತ್ತು ಕರೆದು ಸತ್ತು ಹುಟ್ಟಿದಳಂತೆ. ಕುಸುಬೆ ಯುರಿಯ ಚುರುಕು ಧಾರವಾಡ ಬಿಜಾಪುರದ ಜನರಿಗೆ ಮಾತ್ರ ಗೊತ್ತು.

ಅಸಕಟಿದಬಲಂ ಬಸಿಱೊಳ್
ಕುಸುಂಬೆವುರಿಯುರಿಯೆ ಸತ್ತಳತ್ತಳ್ ಬಸಿಱಿಂ
ಪೊಸೆದಳ್ ಜಿಗಿದಳ್ ನೀಡುಂ
ಬಿಸುಸುಯ್ದಳ್ ನುಡಿದು ಕೆಡೆದು ಬಿದಿಯಂ ಬಯ್ದಳ್ 7-35

ಅವಳ ಶೋಕದ ಬೇಗೆ ಯುಗಯುಗಾಂತರಗಳನ್ನು ದಾಟಿ ಸಾಂಪ್ರತಯುಗದ ವಾಚಕನ ಹೃದಯವನ್ನು ತಟ್ಟದಿರದು. ಶ್ರೀಕೃಷ್ಣನ ಬಾಲಲೀಲೆಯ ವರ್ಣನೆಯಲ್ಲಿ ಮುಗ್ಧಮನೋಹರತೆಯೂ, ಕವಿಯ ಭಾವೈಶ್ವರ್ಯವೂ ಪ್ರತಿಬಿಂಬಿಸುತ್ತವೆ:

ಎಳವೆಯ ಮುದ್ದಂ ರೂಪುಂ
ಬಳೆಯಿಸೆ ಮೋಹನಮನವರ ಮನದೊಳ್ ಮದನಂ
ಬಳೆದಂತೆ ಬಳೆದು ಕೃಷ್ಣಂ
ಬಳೆದಂ ಗೋಪಿಯರ ತೋಳೊಳಂ ತೊಟ್ಟಿಲೊಳಂ 7-60

ಇಲ್ಲಿಯ ಗೋಪಿಯರ ಚಿತ್ರ ಅತ್ಯಂತ ಮನೋಹರವಾಗಿದೆ. ಕೃಷ್ಣನ ರೂಪ ಲೀಲೆಗಳು ವರ್ಧಿಸಿದಂತೆ ಗೋಪಿಯರ ಮೋಹವೂ ವರ್ಧಿಸುತ್ತಿತ್ತು. ಅವರ ಮನೋಗರ್ಭದಲ್ಲಿ ಮದನ ಬೆಳೆದಂತೆ ಕೃಷ್ಣ ಅವರ ತೋಳು ತೊಟ್ಟಿಲುಗಳಲ್ಲಿ ಬೆಳೆದನಂತೆ. ಕೃಷ್ಣ ಗೋಪಿಯರ ಸುಮಧುರ ಬಾಂಧವ್ಯ ಅಪೂರ್ವ ಸುಂದರವಾಗಿ ಅಭಿವ್ಯಕ್ತಗೊಂಡಿದೆ.

ಸ್ವಲ್ಪವೂ ಬೇಸರಿಕೆಯಾಗದಂತೆ ಅನುಸ್ಯೂತವಾಗಿ ಕ್ರಿಯಾಪದಗಳ ಮಾಲೆ ಯನ್ನು ಜೋಡಿಸಿ ವಿವಿಧಾರ್ಥ ಪ್ರಕಟವಾಗುವಂತೆ, ಭಾವ ತೀಕ್ಷ್ಣತೆ ಶಿಖರಕ್ಕೇರು ವಂತೆ, ವರ್ಣ್ಯ ಸಂಗತಿಯ ಸಮಗ್ರಚಿತ್ರ ಮನಸ್ಸಿನ ಮೇಲೆ ಅಚ್ಚೊತ್ತುವಂತೆ ಪರಿ ಣಾಮ ರಮಣೀಯತೆಯನ್ನು ಸಾಧಿಸುವ ಕೈಚಳಕ ನೇಮಿಚಂದ್ರನ ಹುಟ್ಟುಗುಣ. ಕೃಷ್ಣ ಚಾಣೂರರ ಮಲ್ಲಗಾಳಗ ಕಣ್ಣಿಗೆಕಟ್ಟಿದಂತೆ, ಮೂರ್ಧನ್ಯಾಕ್ಷರ ಘಟಿತವಾದ ಕ್ರಿಯಾಪದಪಂಕ್ತಿಯಿಂದ ಅದರ ಭೀಕರತೆ ಮನವುಗುವಂತೆ ವರ್ಣಿತವಾಗಿದೆ:

ಕೆಡೆದರ್ ಪೋರ್ದರ್ ಪೊರಳ್ದರ್ ಮಿಗೆ ಪಿಡಿದರ್ ಅರ್ದೋತ್ತಿದರ್ ಮತ್ತಮೆರ್ದರ್
ನಿಡುಗಯ್ಯಿಂ ಜೇಡಿದರ್ ನೀಡಿದರ್ ಎಡೆದು ನೆಲಕ್ಕಿಕ್ಕಿದರ್ ಕೂಂಕಿದರ್ ಮೇ

ಗಡಿಯಾದರ್ ಪತ್ತಿ ಗಾಯಂಗೊಳಲೆ ಮಿಡುಕದಾರಯ್ದರ್ ಆರಯ್ದು ಗಾಯ
ಕ್ಕೆಡೆಗೊಟ್ಟರ್ ಕೊಟ್ಟುಕೊಂಡರ್ ಪೊಣೆದು ಬಿಡಿಸಿದರ್ ಕೃಷ್ಣಚಾಣೂರಮಲ್ಲರ್.

(ನೇಮಿ 8-9)

ಕೇವಲ ಕ್ರಿಯಾಪದಗಳಿಂದಲೇ ಸಮಗ್ರಚಿತ್ರವನ್ನು ಕುಂಚಿಸುವ ಜಾಣ್ಮೆ ಕೃಷ್ಣನ ಬಾಲಲೀಲಾವರ್ಣನೆಯ (7-85) ವೃತ್ತದಲ್ಲಿಯೂ ಪ್ರಕಟವಾಗುತ್ತದೆ.

ಶಬ್ದಾಡಂಬರಪ್ರಿಯತೆ ನೇಮಿಚಂದ್ರನಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಾಣುವುದಾದರೂ, ಕನ್ನಡ ಸಂಸ್ಕೃತಪದಗಳ ಸಾರ್ಥಕಸಮ್ಮಿಶ್ರಣವೇ ಅವನ ಪ್ರಿಯಪದ್ಧತಿಯಾಗಿರುವಂತೆ ಕಾಣುತ್ತದೆ; ಇದೇ ಅವನ ಶೈಲಿಯ ಜೀವಾಳ; ಕನ್ನಡ ಹಾಸಾದರೆ ಸಂಸ್ಕೃತ ಹೊಕ್ಕು; ಕನ್ನಡದ ರತ್ನಹಾರದಲ್ಲಿ ಸಂಸ್ಕೃತದ ಮುತ್ತು. ಆಂಡಯ್ಯನ ಛಲವಿಲ್ಲದಿದ್ದರೂ ಅವನ ತಲೆಯನ್ನು ಮಟ್ಟುವಂಥ ಅಚ್ಚಗನ್ನಡದ ವೃತ್ತಕಂದಗಳನ್ನು ಕವಿ ಅಪ್ರಯತ್ನಪೂರ್ವಕವಾಗಿ ಅಪ್ರಯಾಸವಾಗಿ ಸುಮಧುರವಾಗಿ ನಿರರ್ಗಳವಾಗಿ ರಚಿಸಬಲ್ಲನೆಂಬುದಕ್ಕೆ ಸಾಕಷ್ಟು ಸಾಕ್ಷಿ ಅವನ ಗ್ರಂಥಗಳಿಂದಲೇ ಒದಗುತ್ತದೆ. ಅವನು ಅನ್ಯಭಾಷಾದ್ವೇಷಿಯಲ್ಲ; ಆದರೆ ಅಮೋಘವೂ ದುರ್ದಮ್ಯವೂ ಆದ ಕನ್ನಡಾಭಿಮಾನ ಅವನಲ್ಲಿ ಅಪಾರವಾಗಿದೆ. ಹದವಾಗಿ ಮಾಗಿದ ದ್ರಾಕ್ಷಿಯ ಗೊಂಚಲಿನಂತಿವೆ, ಅಚ್ಚಗನ್ನಡದಲ್ಲಿ ರಚಿತವಾದ ಪದ್ಯಗಳು. ಕನ್ನಡ ಪದ್ಯಗಳ ಕಂಪು ಪರಿಸರಣವನ್ನೆಲ್ಲ ಪರಿಮಳಿಸುತ್ತದೆ;

ನೆನೆದರ ಚಿತ್ತಮುಂ ನೆರೆಯೆ ಕಮ್ಮನೆ ನೋಟ್ಪರ ಕಣ್ಣ ಬೆಳ್ಪುಕ
ಮ್ಮನೆ ಮಿಗೆಮಾತನಾಡುವರ ಮೆಲ್ನುಡಿ ಕಮ್ಮನೆ ಮೆಯ್ಗಳೆಯ್ದೆ ಕ
ಮ್ಮನೆ ದೆಸೆಕೂಡೆ ಕಮ್ಮನೆ ಕರಂ ನವಕೌಮುದಿ ಕಮ್ಮನಾಗೆ ಕಂ
ಪಿನ ಪೊಸಲೆತ್ತಲುಂ ಪರಿವ ಪೂವಿನ ಸಂತೆಯನೆಯ್ದಿದಂ ನೃಪಂ

ಲೀಲಾ 2-26

ಹೂವಿನ ಸಂತೆಯಲ್ಲಿ ಘ್ರಾಣೇಂದ್ರಿಯ ಹೊರತಾಗಿ ಉಳಿದೆಲ್ಲ ಇಂದ್ರಿಯಗಳು ಸ್ತಬ್ಧ; ಅನ್ಯೇಂದ್ರಿಯಗಳು ಕ್ಷಣಕಾಲ ಮತಾಂತರ ಅಥವಾ ಧರ್ಮಾಂತರ ಹೊಂದಿದಂತೆ ಕಾಣುತ್ತವೆ. ಕಣ್ಣಿನ ಬೆಳ್ಪು ಬಿಳುಪಲ್ಲ, ಕಂಪು; ಶಬ್ದಗಳು ಗಂಧಯುಕ್ತ; ಕೌಮುದಿಯಲ್ಲಿಯೂ ಕಂಪಿನ ಪೆಂಪು. 'ಕಮ್ಮನೆ' ಎಂಬ ಅವ್ಯಯದ ಪುನರಾವೃತ್ತಿ ಸುಗಂಧ ಪ್ರಜ್ಞೆಯನ್ನು ಘನವಾಗಿ ಮನವರಿಕೆಮಾಡಿಕೊಡುತ್ತದೆ. ಸಂಭಾವ್ಯ ಮತ್ತು ಅಸಂಭಾವ್ಯ ಘಟನೆಗಳನ್ನು ಒಟ್ಟಿಗೆ ಜೋಡಿಸಿ ಅಸಂಭಾವ್ಯವೂ ಸಂಭಾವ್ಯವೆನ್ನುವಂಥ ಭ್ರಮೆ ಮೂಡಿಸಿ, ಅದರಿಂದಲೇ ನೆಲ್ಲುಗದ್ದೆಯ ಸ್ವಾಭಾವಿಕ ದೃಶ್ಯದ ಸ್ವಾರಸ್ಯ ಇಮ್ಮಡಿಸುವಂತೆ, ಮನಸ್ಸಿನ ಚಿತ್ರ ಶಬ್ದದಲ್ಲಿ ಸ್ಪಷ್ಟವಾಗಿ ಪಡಿಮೂಡುವಂತೆ ನಿರಾಡಂಬರವಾಗಿ ವರ್ಣಿಸುವ ಶಬ್ದಶಿಲ್ಪಕೌಶಲವೂ ಕಲ್ಪನಾಚಮತ್ಕಾರವೂ ನೇಮಿಚಂದ್ರನಿಗೆ ಸಂಸ್ಕಾರವಶವಾಗಿ ಒದಗಿಬಂದಿವೆ.

ಬಳ್ಗಿಳಿಗಳ್ ಬಱಲ್ದು ತೆನೆಗಳ್ ತೊನೆಯುತ್ತಿರೆ ಪಾಯ್ದು ಪಾಯ್ದು ಪಾ
ಲ್ಗೆಲ್ಗಳನಗ್ರತುಂಡದೊಳೆ ಖಂಡಿಸೆ ಗಲ್ಗಲಸೊಕ್ಕ ಪಾಲ ತಂ
ದಲ್ಗಳಿನಾವಗಂ ಮಡಿಯಸೀರ್ ಕಡುವೆಳ್ಪಿನೊಳೊಂದೆ ಪದ್ಮಜಂ
ಪಾಲ್ಗಳ ಪೊಯ್ದು ಪೊಯ್ದು ಬಳೆಯಿಪ್ಪವೊಲಿರ್ದುವು ನೆಲ್ಲಗರ್ದೆಗಳ್
ಲೀಲಾ 5-53

ಕನ್ನಡದ ಗದ್ಯ ಪ್ರಾಚೀನಕಾಲದಿಂದ ಗದ್ಯವಾಗಿ ಬೆಳೆದು ಬರಲಿಲ್ಲ. ಚಂಪೂ ಕಾವ್ಯಗಳಲ್ಲಿ ಅದು ವಚನವಾಗಿ ನಾಮಾಂತರ ಪಡೆದಂತೆ ಸ್ವರೂಪವೂ ಭಿನ್ನವಾಯಿತು; ಪದ್ಯಕ್ಕೆ ಸನ್ನಿಹಿತವಾಯಿತು. ಅನಿಯತವಾದ ಗತಿಲಯ ಅವೆರಡರ ಗಡಿಯನ್ನು ನಿರ್ಣಯಿಸಿದರೂ, ಆ ಗಡಿರೇಖೆ ಅತಿ ಸೂಕ್ಷ್ಮವಾಗಿದ್ದು ಪದ್ಯದ ಧರ್ಮವನ್ನೇ ಪ್ರತಿಬಿಂಬಿಸುತ್ತಿತ್ತು. ವೈವಿಧ್ಯಕ್ಕೆನ್ನುವಂತೆ ಗತಿ ತುಸು ಮಂದವಾದರೂ, ಗದ್ಯದ ನಿರಾಭರಣ ಸೌಂದರ್ಯವಾಗಲೀ, ಸ್ಪಷ್ಟತೆಯಾಗಲೀ, ಸರಳತೆಯಾಗಲೀ, ಅದಕ್ಕೆ ಲಭಿಸಲಿಲ್ಲ; ಕಾಲಕ್ರಮೇಣ ಈ ವಚನ ದಿನಬಳಕೆಯ ಗಾದೆ ನುಡಿಗಟ್ಟುಗಳನ್ನು ಗರ್ಭೀಕರಿಸಿಕೊಳ್ಳುತ್ತ, ಆಲೋಚನೆ ವಿಚಾರಗಳ ಅಭಿವ್ಯಕ್ತಿಗೆ ಯೋಗ್ಯ ಸಾಧನವಾಗುತ್ತ, ಕೊನೆಗೆ ಕನ್ನಡ ನುಡಿಗಟ್ಟಿನ ನಾಡಿಯನ್ನು ಬಲ್ಲ ನಯಸೇನನ ಸಿದ್ಧಹಸ್ತದಲ್ಲಿ ಅಪೂರ್ವ ಶಕ್ತಿದೀಧಿತಿಯನ್ನು ಪಡೆಯಿತು; ಹೊಸ ಚೂಪು ಬಾಗುಗಳನ್ನು ಕೊಂಕು ಬಿಂಕಗಳನ್ನು ಮೈಗೂಡಿಸಿಕೊಂಡಿತು. ಪ್ರಾಯಶಃ ಈ ವಚನವೇ ಮುಂದೆ ಶಿವಶರಣರ ಅಧ್ಯಾತ್ಮ ಪ್ರಭೆಯಲ್ಲಿ ಮಿಂದು, ವಿಚಾರದ ಕ್ರಾಂತಿಯಲ್ಲಿ ಮುಳುಗಿ, ದೇದೀಪ್ಯಮಾನವಾದ ಪವಾಡಸದೃಶವಾದ ಮಂತ್ರಶಕ್ತಿಯಾಯಿತು.

ನೇಮಿಚಂದ್ರನ ವಚನ ರಚನೆಯಲ್ಲಿ ನಯಸೇನನ ಶೈಲಿಯ ಕಾಂತಿಯನ್ನು ಹೆಜ್ಜೆ ಹೆಜ್ಜೆಗೂ ಗುರುತಿಸಬಹುದು: ಒಂದೇ ಒಂದು ಭಾವವನ್ನೊ ಸಂಗತಿಯನ್ನೊ ಅನೇಕ ಉಪಮಾನಗಳಿಂದ ಸ್ಪಷ್ಟಪಡಿಸುವ ಪದ್ಧತಿ ನಯಸೇನನದು. ಔಚಿತ್ಯದ ತೂಕ ತಪ್ಪಿದರೂ ಅಸಂಬದ್ಧತೆಯ ದೋಷರಾಹು ಬಡಿಯುತ್ತಿದ್ದರೂ ಮೇಲಿಂದ ಮೇಲೆ ಉಪಮಾನಗಳ ಹೊರೆ ಹೇರುವುದು ಪ್ರಬಲ ದೌರ್ಬಲ್ಯವಾದರೂ, ಅದು ಅವನ ಹುಟ್ಟುಸುಳಿ. ಹುಟ್ಟುಸುಳಿ ಸುಟ್ಟರೂ ಹೋಗುವುದಿಲ್ಲವೆಂಬ ಗಾದೆಯಿದೆ. ನಯಸೇನನ ದೌರ್ಬಲ್ಯವನ್ನು ಬಲ್ಲ ನೇಮಿಚಂದ್ರ ಉಪಮಾನಗಳನ್ನು ತಕ್ಕಮಟ್ಟಿನ ಸಂಯಮದಿಂದ ಬಳಸುತ್ತಾನೆ. ಸೂಳೆಯ ಬಳ್ಳಡೆಯನ್ನು ಸೋತ ಮೆಯ್ಯನ್ನು ವಿದೂಷಕ ದೊರೆಗೆ ಪರಿಚಯಮಾಡಿಕೊಡುವ ಬಗೆಯಿದು: "ಈಕೆ ಹುಟ್ಟುಗೆಟ್ಟ ಹುಟ್ಟಗೆಯಂತೆ ಹಡಣಮೊಣಗಿದ ಹಳೆಯ ಸಿದ್ದಿಗೆಯಂತೊಣಕುಟ್ಟದೆ ಪತ್ತಿದ ಹಾಱೂರ ನಾಯಂತೆಯೊಡಲಂ ಪತ್ತಿದ ತೊನ್ನರ ತುಟಿಯಂತೆ ಕಣ್ಣೊಂಬು ಬಿರ್ದ ಕಬರ್ಗಳೆಯಂತೆ ಕಾಗೆ ಹಱಿದ ಹಱುಗಲಂತೆ ಸುಸಿಲ್ದೊಡೆಯಂ ದಾಂಟಿಸಲಾಱದಡಿ ಸತ್ತೊಡೆ ತನ್ನ ದೌರ್ಭಾಗ್ಯಮಂ ಬೇಟದಮೇಲೆ ನೆವಮಿಕ್ಕಿದಪಳ್" (2-116 ಗದ್ಯ) ಯಾವುದಾದರೂ ಘಟನೆಯ ಪರಿಣಾಮವನ್ನು ಘೋರವಾಗಿ ಚಿತ್ರಿಸುವಾಗ ಅನೇಕ ಪ್ರತಿಘಟನೆಗಳನ್ನು ಕೊಂಡಿಜೋಡಿಸುವ ನಯಸೇನನ ಸಾಹಸಗುಣವೂ ನೇಮಿಚಂದ್ರನ

ಶೈಲಿಯಲ್ಲಿ ಮೊಗದೋರಿದೆ. ಸೂಕರದೌರ್ಜನ್ಯಕ್ಕೆ ಬೆದರಿದ ಗೊಲ್ಲರ ಹೃದಯ ವಿದ್ರಾವಕ ಪರಿಸ್ಥಿತಿಯ ಭಾಗಶಃ ಚಿತ್ರಣವಿದು: ". . . ಪತಿಗಪಾಯಮಮುಪಪತಿಗೆ ಶುಭೋದಯಮಕ್ಕೆಂದು ಮನದೊಳೆ ಮನೆದೈವಕ್ಕೆ ಪರಕಿಕೊಳ್ವ ಪುಂಶ್ಚಲಿಯರುಮಂ, ಪಸುಗೂಸಸಮರ್ಚಿಕೊಂಡೊಳಗಣ್ಣಾಂ ಪೊಱಗಣ್ಣಾಂ ಬರ್ಪ ಜಾಳಕಿಯರುಮಂ, ಗುಬ್ಬಿಯಂತೆ ಬಾಯಂ ಬಿಡುವ ಗರ್ಭಿಣಿಯರುಮಂ, ಬಱುಗಣ್ಣ ನೀರನಿಕ್ಕುವ ಬಂಜೆಯರುಮಂ, ಬಸಿಱಂ ಪೊಸೆದುಕೊಳ್ವ ಬದ್ದೆಯರುಮಂ, ಮೂಸುಡಂಮೋದಿಕೊಳ್ವ ಮುದ್ದುಗಣ್ಗಳುಮಂ, ಸೊಸೆಗೆ ಪಲ್ಲಂತಿಸುತ್ತೆ ಸೆತ್ತಿಯಂ ಪೊಯ್ದುಕೊಳ್ವತ್ತೆಯರುಮಂ . . . ಕಂಡು ಡೊಂಬರ ಬೀಡಿನೊಳಬ್ಬರಮಾದಂತೆಯುಂ, ಬೆಳ್ಳಿಲಿಯ ಬಿಲದೊಳ್ ನೀರ್ ಪೊಕ್ಕಂತೆಯುಂ ತುಱುಪಟ್ಟಿಯೆಲ್ಲಂ ಕಿಟ್ಟಲೆಯುಂ ಕಿಬಂದಲೆಯುಂ ಕಲ್ಲಿಯುಂ ಕವಿಯುಮಾದಪುದಿದೇನೆಂದು ಸಂಭ್ರಮಿಸಿ" (5-114 ಗದ್ಯ) ಸೂರೆಹೋದ ಹಳ್ಳಿಯದೃಶ್ಯದ ಸಮಗ್ರಚಿತ್ರವನ್ನು ಮನದಟ್ಟುಮಾಡಿಕೊಡುವುದೇ ಕವಿಯ ಉದ್ದೇಶ. ಇದಕ್ಕಾಗಿ ತನ್ನ ಅಮಿತ ಶಬ್ದಭಾಂಡಾಗಾರವನ್ನೆಲ್ಲ ಸೂರೆಗೊಳ್ಳುತ್ತಾನೆ. "ದವಸಕ್ಕೆ ಪೂವಂ ಕರ್ಜಿಂಗೆ ಪಣ್ಣಂ, ತಣ್ಣೆರಲ್ಗೆ ಮೆಯ್ಯಂ, ಬೀಣೆಗೆ ನಾಲಗೆಯಂ, ಕಾಮಂಗೆ ರೂಪನಱಸುವ್ವದೆಗ್ಗನ ಸುಗ್ಗಿಯಾದಂತಕ್ಕುಂ" (7-87 ಗದ್ಯ) —ಇದೂ ನಯಸೇನನ ಧಾಟಿಯಲ್ಲದೆ ಮತ್ತೇನು? ಸ್ಫೂರ್ತಿ ನಯಸೇನನದಾದರೂ ಗದ್ಯವನ್ನು ನಡೆಸುವ ಬೀಸುವ ಪೋಷಿಸುವ ದ್ರವ್ಯ ನೇಮಿಚಂದ್ರನ ಮೇಧಸ್ಸಿನಿಂದ ಇಳಿದುಬಂದದ್ದು.

ಅವನ ಪದ್ಯಗದ್ಯಗಳು ಪಂಪರನ್ನ ನಾಗವರ್ಮ ನಯಸೇನಾದಿ ಪೂರ್ವಕವಿಗಳಿಂದ ಪ್ರಭಾವಿತವಾಗಿದ್ದರೂ ಎರಡು ಅನಿಲಗಳ ಸಂಪರ್ಕದಿಂದ ಬೇರೊಂದು ನೂತನವಸ್ತು ಉದಯಿಸುವಂತೆ, ನೇಮಿಚಂದ್ರನ ಶೈಲಿ ಹೊಸಮೆಯ್ಯನದಿಂದ ವಿಶಿಷ್ಟವಾಗಿದೆ. ಅವನ ಭಾಷಾಪ್ರಭುತ್ವ ಅಸದೃಶವಾದುದು. ಬತ್ತಳಿಕೆಯ ಬಾಣಗಳಂತೆ, ಎತ್ತರದ ಒತ್ತಡದಿಂದ ಕಿರುನಳಿಗೆಯಲ್ಲಿ ಬೀಳುವ ನೀರಿನಂತೆ, ಆಕಾಶಬಾಣದಿಂದ ಆಸ್ಫೋಟನೆಗೊಳ್ಳುವ ಸಂಕೀರ್ಣವರ್ಣದ ವಿಸ್ಫುಲಿಂಗಗಳಂತೆ, ಕವಾಯಿತಿನ ಸಿಪಾಯಿಗಳಂತೆ ಶಬ್ದಗಳು ಅನಿರ್ಬಂಧವಾಗಿ ಅವನ ಸ್ಮೃತಿಕೋಶದಿಂದ ಹೊರಸುಗ್ಗಿ ಬರುತ್ತವೆ. ಒಮ್ಮೊಮ್ಮೆ ಅವನಲ್ಲಿ ಭಾವಾರ್ಥದಾರಿದ್ರ್ಯ ಕಲ್ಪನಾತಿರೇಕ ಕಾಣಬಹುದೇ ಹೊರತು ಅವನ ಶಬ್ದಸಾಗರ ಮಾತ್ರ ಅನಂತವಾದುದು. ಭಾವದ ಕಾವಿನಿಂದ, ಆಲೋಚನೆಯ ಘನತೆಯಿಂದ ಜ್ಞಾನದ ಗಭೀರತೆಯಿಂದ ಲೋಕಾನುಭವದ ಲಾವಣ್ಯದಿಂದ ಕಲ್ಪನೆಯ ಐಂದ್ರಜಾಲಿಕ ಶಕ್ತಿಯಿಂದ ಕವಿಯ ಮನಸ್ಸು ಪ್ರಫುಲ್ಲಗೊಂಡಾಗ ಶೈಲಿ ವರ್ಣರಂಜಿತವಾದ ನವಿಲಂತೆ ನರ್ತನಗೆಯ್ಯುತ್ತದೆ; ಸಮಯೋಚಿತವಾಗಿ ಅದರಗತಿ ವಿವಿಧ ಲಯ ಲೀಲೆಗಳನ್ನು ಪಡೆಯುತ್ತದೆ. ಈ ಗುಣ ನೇಮಿಚಂದ್ರನ ಕಾವ್ಯಗಳಲ್ಲಿ ತಾರುಮಾರಿಗೆ ತಲೆಯೆತ್ತುತ್ತದೆಯೇ ಹೊರತು ಸಕ್ರಮವಾಗಿ ವ್ಯಾಪಕವಾಗಿ ಕಾಣುವುದಿಲ್ಲ. ಆದರೂ ಮಾತಿನ ಮರ್ಜಿಯನ್ನು ಅದರ ಬಾಗುಬಳುಕುಗಳನ್ನು ಮುರಿವು ಹರಹುಗಳನ್ನು ಸೂಕ್ಷ್ಮವಾಗಿ ಬಲ್ಲ ಶಬ್ದಮಾರ್ಗಜ್ಞ. ವನಿತಾಸಂಕುಲದ ಕಣ್ಣ ಬೆಳಗಿಂದ ಭೂಪಾಲ ಕೇಳೀಗೃಹ "ಕಾಮದೇವನ ಭಂಡಾರದ ಬಾಗಿಲಂ ತೆಱೆದ

ವ್ರೋಲ್" ಕಂಗೊಳಿಸುತ್ತಿದೆನ್ನುವಾಗ ಸೌಂದರ್ಯರಾಶಿ ಸನ್ನಿಕಟವಾದಂತೆ ಭಾಸವಾಗುತ್ತದೆ. ಆಗಾಗ್ಗೆ ಅವರ ಭಾಷೆಯು ಮಗ್ಗದಲ್ಲಿ ಜನಬಳಕೆಯ ನುಡಿಗಟ್ಟಿನ ಜರತಾರಿ ಗಾದೆಯ ಸರಿಗೆ ಸೇರಿಕೊಂಡು ಮನಸ್ಸಿಗೆ ಹಬ್ಬವಾಗುವುದಲ್ಲದೆ, ಭಾವಪ್ರಕರ್ಷದ ಮತ್ತು ಅರ್ಥಸ್ಪಷ್ಟತೆಯ ಅನರ್ಘ್ಯಲಾಭವೊದಗುತ್ತದೆ. ವಿಳಾಸವತಿ "ಸಿರಿಗೆ ಸಿರಿಯುಮಂ ಪುಲ್ಲೆ ಕೈಕೊಳ್ಳಳ್, ಆ ಭಾರತಿಯುಂ ವಿದ್ಯಾಗುಣಕ್ಕೊಂದಡಕೆಗವೆಣಿಸಳ್, ರಂಬೆಯುಂ ಸಿಂಬೆಯೆಂಬಳ್" (ನೇಮಿ 3-4) ಎಂಬುದಾಗಿ ಅವಳ ಗುಣಾತಿಶಯವನ್ನು ಮೆರೆಸುವಾಗ, "ಬಾಂಬರಿಯೊಳ್ ಮಾರ್ತಂಡನುಮಂ ಪುಲ್ಲಕಡ್ಡಿಗಂ ಕೈಕೊಳ್ಳಳ್" (ಅದೇ 3-6) ಎಂಬುದಾಗಿ ಅವಳ ಗಗನಗತಿಸಾಮರ್ಥ್ಯವನ್ನು ಹಿರಿಹಿರಿ ಹಿಗ್ಗಿ ಮೆಚ್ಚುವಾಗ ಕವಿಯ ಮಾತಿನ ಆಯ್ಕೆಗೆ ಮಾರುಹೋಗುತ್ತೇವೆ. ಹೀಗೆಯೇ "ಗಂಡುಸೊಣಮಡ್ಡಂ ಪಾಱಿದಂತಾಗಿ ಸುತ್ತಲುಂ ಕಟ್ಟಿದ ಕಟ್ಯಾನೆಗಳಿಂ (ಅದೇ 4-85 ಗದ್ಯ), ಕುಮಾರನಾಕಾರಮನೇೞಿಯುಮಿಱಿಯುಂ ನೀಡುಂ ಭಾವಿಸಿ ನೋಡಿ" (ಅದೇ 6-16 ಗದ್ಯ), "ನಾಗಸಂಪಿಗೆಯೆಸಳಂತಿರ್ದ ಕನಕಪತ್ರಮನಲ್ಲಿ ಕಂಡು ಬೀಸುಂ ಬೞಿಯುಮಿಲ್ಲದೆ ನಿಬಿಡಮಾಗಿ ಬರೆದಿರ್ದಕ್ಕರಂಗಳನನುಮಾನಿಸಿ ತಾನೇ ನೋಡಿ" (ಅದೇ 6-70 ಗದ್ಯ), "ಬೇಡಿದ ಕಾಡೊಳೆ ಮಱಕೊಂಡುದೆಳಕುಱಿಗೊಳ್ವಂಗೆಱಂಗೊಟ್ಟಂತಾಯ್ತು ಕವರುಕತ್ತಿಗೆಕಡಿತಂ ಬಂದಂತಾಯ್ತು" (ಅದೇ 6-71 ಗದ್ಯ), "ಸೂರ್ಯಂ ಕಬ್ಬುಲೆಯುಂ ಮದ್ದಿಂಗಮಱಿಸಿ ಕಂಡೆಡೆಯುಂಟೇ" (ಅದೇ 7-23), "ನಚ್ಚಿಸೆಮ್ಮೆ ಕೋಣನ ನೀದಂತಾದುದು" (ಅದೇ 7-50 ಗದ್ಯ) "ಕನಸಿನ ಬತ್ತಕ್ಕೆ ಗೋಣಿಯಾಂಪರೆ" (ಲೀಲಾ 4-65) ಮುಂತಾದ ಹೊಸಹೊಸ ಸರಕು ಕವಿಯ ಕಿರಾಣಿ ಅಂಗಡಿಯಲ್ಲಿ ಆಗಾಗ್ಗೆ ದೊರೆಯುತ್ತದೆ. ಸಮುದ್ರವಿಜಯ ತಮ್ಮ ವಸುದೇವನಿಗೆ ಬುದ್ಧಿವಾದ ಹೇಳುವಲ್ಲಿ ಕನ್ನಡನುಡಿಯ ಮೆಲ್ಲುನಯಗಾರಿಕೆಗಳು ತೃಪ್ತಿಕೊಡುತ್ತವೆ: "ದೇವಕುಮಾರರುಂ ರಾಜಕುಮಾರರುಮಾರ್ಕಂಡರಾರ್ಕೆೞ್ದರಂಬಂತಿರವೇೞ್ಕುಂ ತಿಟ್ಟನೆ ತಿರಿದ ಬಟ್ಟಸರಿವಂದೊಡೆ ಮೆಯ್ಯುಬಣ್ಣಮುಂ ಪುಣ್ಯಮುಮರಿಸಿನದ ಪಿಂಜಿಯಂತೆ ಪಾಱಿಪೋಕುಂ. ಲೋಕದ ಕಿಸುರುಂ ಕಣ್ಣೆಂಜಲುಂ ಪತ್ತುಗುಂ." (ನೇಮಿ 5-4 ಗದ್ಯ) ಅತಿಮುಕ್ತಕಮುನಿ ಜೀವಂಜಸೆಯನ್ನು ಕುರಿತು "ಎಮ್ಮ ಪರಕೆಗೆ ತೆಱೆವ ಬಾಯುಂ ಬಯ್ಗುಳಿಂಗೆ ತೆಱೆಯಿಸಿದೆ, ಕ್ಷಮೆಗೆ ಬಂದ ಮನಮುಂ ಮುನಿಸಿಂಗೆ ಬರಿಯಿಸಿದೆ" (ಅದೇ 7-10 ಗದ್ಯ) ಎನ್ನುವಾಗ ಅರ್ಥ ಬುಗ್ಗೆಯೊಡೆದು ಚಿಲುಮೆಯಾಗಿ ಉಕ್ಕುತ್ತದೆ. ಕಂಸನ ಶತ್ರು ಬೆಳೆಯುತ್ತಿರುವ ಸಂಗತಿಯನ್ನು ತಿಳಿಸುವಾಗ ಬಳಕೆಗೊಂಡಿರುವ "ಕಿವಿಗೆ ಮಾತಿಕ್ಕದ ಮುನ್ನಮೆ ಕಣ್ಬನಿಯನಿಕ್ಕಿ" (ಅದೇ 7-66 ಗದ್ಯ) ಎಂಬ ಜಾಣ್ನುಡಿ ನೈಮಿತ್ತಿಕನ ಸ್ವಭಾವವನ್ನು ಸುರಮ್ಯವಾಗಿ ಸ್ಪಷ್ಟಪಡಿಸುತ್ತದೆ. "ರಾಜಪುತ್ರ ಶ್ರುತಿಗತಿಥಿಯದೊಂದಾಯ್ತು ವೀಣಾಪ್ರಣಾದಂ" ಈ ರೂಪಕ ಕವಿಯ ಆತ್ಮಾನುಭವದ ತುಣುಕಿನಂತೆ ರಂಜಿಸುತ್ತದೆ. ಶ್ರದ್ಧಾನಿಷ್ಠೆಯಿಂದ ಪ್ರಾಮಾಣಿಕವಾಗಿ ಔಚಿತ್ಯಪೂರ್ಣವಾಗಿ ಆತ್ಮಾನುಭವದ ಸಂಕೇತವಾಗಿ ನುಡಿಯನ್ನು ಬಳಸಿದಾಗ ಅದು ಕಾಮಧೇನುವಾಗುತ್ತದೆ, ಇಂದ್ರಿಯಾತೀತವಾದ ಸೌಂದರ್ಯವನ್ನು ಪ್ರತಿಬಿಂಬಿಸುವ ಕನ್ನಡಿಯಾಗುತ್ತದೆ. ಕವಿಯ ಲೋಕಾನುಭವ

ವಿಸ್ತಾರವಾದಂತೆಲ್ಲ ಅದರ ಸಾರ ಕಾವ್ಯಭೂಮಿಕೆಯಲ್ಲಿ ಇಳಿದಂತೆಲ್ಲ ಕಾವ್ಯದ ಸ್ವಾದುತ್ವ ಮಿಗಿಲಾಗುತ್ತದೆ, ಉಪ್ಪಿನಕಾಯಿ ಮೊದಲಾದ ವ್ಯಂಜನಗಳು ರಸನೆಯ ರುಚಿಸಾಮರ್ಥ್ಯವನ್ನು ಚುರುಕುಗೊಳಿಸುವಂತೆ. ನೇಮಿಚಂದ್ರನ ಲೋಕಾನುಭವ ಸಂಕುಚಿತವಾದುದಾದರೂ, ಕೇವಲ ನಗರದ ವಿಲಾಸಜೀವನಕ್ಕೆ ಸೀಮಿತವಾಗಿರುವುದಾದರೂ ಹರಿದಾರಿಗೋ ಗಾವುದಕ್ಕೋ ಲೋಕಾನುಭವ ಗರ್ಭಿತವಾದ ಸುಂದರ ಸೂಕ್ತಿಗಳು ಸುಳುಹುದೋರುತ್ತವೆ. ಪುಣ್ಯವಂತರ್ಗೆ ಮಣ್ಣಂ ಪಿಡಿದೊಡಂ ಪೊನ್ನಕ್ಕುಮೆಂಬಂತಿರೆ (ಲೀಲಾ 14-132 ಗದ್ಯ); "ಸಿರಿಬರೆ ಮೊಬಕಾಲನಾಂಪನಾವನೊ ಗಾಂಪಂ" (ಅದೇ 14-113); "ಅತಿಸುಗುಣಾಂ ಚೋರಲಕ್ಷಣಮೆಂಬಂತೀಗಡಿಸ ಗಂಡರ ನಾಲಗೆಯ ನನ್ನಿಯಂ ಕಚ್ಚೆಯ ಶೌಚಮುಮಿವೆಲ್ಲ ನಿಲಲಱಿವುವೆ?" (ಅದೇ 14-116 ಗದ್ಯ) "ಲೋಕಕ್ಕುಪಕರಿಸುವನೊಳ್ ದೋಷಮುಂ ಸ್ತುತ್ಯಮಲ್ತೆ" (ಅದೇ 2-9); "ಅಣ್ಣನಿಕ್ಕಿದುಗುಬುಮಂ ದಾಂಟದೆ" (ನೇಮಿ 5-5 ಗದ್ಯ); "ಕಲ್ಪಿಸವೇಳ್ಪುದೇ ಪುರುಡಿನೊಳ್ ಪೆಂಡಿರ್ಗೆ ಪಾಂಡಿತ್ಯಮಂ" (ಅದೇ 3-32) "ಶರ್ಕರೆ ನಾಲಗೆ ಸ್ಪರ್ಶದೆ ಕರ್ತರಿಯೆಂಬುದು ಜಳಕನಾದುದೆಮ್ಮಗ್ರಜನಿಂ" (ಅದೇ 5-9); "ಎನ್ನಯ ತುಪ್ಪದೊಳಾನೆ ಬೆಂದೆನ್" (ಅದೇ 5-47); "ಕಾರ್ಯವಶಕ್ಕೆ ಕತ್ತೆಯ ಕಾಲ್ಪಿಡಿದನೆಂಬಂತೆ" (ಅದೇ 7-50 ಗದ್ಯ); "ಪಾವೆಂದೊಡೆ ಪಡೆ ನಡುಗುವುದೇವೆಯೊ ಪಸೆಯಲ್ಲಿ ಪಾವು ಕೊಳ್ವೊಸಗೆಯನೋವೊವೊ" (ಅದೇ 8-31); "ವಧು ಕೂರ್ತೊಡೆ ಪೆತ್ತರ ಮಾತುಗೇಳ್ವಳೆ" (ಲೀಲಾ 7-32); "ಪುಲ್ಲಕಿರ್ಚುಗಂ ಪೊಲೆಯನ ಕೆಳೆಯುಂ ಮಾಡದಾವಂಗೆ ಕೇಡಂ (ಅದೇ 9-20) ಕಡುನೊರ್ಕಿದವರ್ಗೆ ಲಜ್ಜೆಗಳೊಳವೆ" (ಅದೇ 9-52) "ಒಳ್ಳಿಮೊದಲಾಗಿ ಮೊದಲೊಳಗೆಳ್ಳನಿತುಂ ಪೊನ್ನನಿಕ್ಕದೊಡೆ ಪರ್ಬದು" (ಅದೇ 1-43); ಕಸಮುಂ ಕಿಟ್ಟಮಿಲ್ಲದೆ ಪೊಸಸಸಿಗಳ್ ಕೈಕೊಳ್ವವು (ಅದೇ 1-28).

ಹೋಳಿಗೆಗೆ ಹಾಲಿದ್ದಂತೆ, ಕೀರಿಗೆ ದ್ರಾಕ್ಷಿಯಿದ್ದಂತೆ, ಕಾವ್ಯಕ್ಕೆ ಉಪಮೆ. ಎರಡು ವಸ್ತುಗಳ ಬಾಹ್ಯಾಂತರಂಗನಿಷ್ಠವಾದ ಸಾದೃಶ್ಯಸಂಬಂಧದ ಸ್ವರೂಪ ಕ್ಷ-ಕಿರಣ ಸಾಮರ್ಥ್ಯವುಳ್ಳ ಪ್ರತಿಭಾ ಚಕ್ಷುವಿಗೆ ಮಾತ್ರ ಪ್ರತ್ಯಕ್ಷವಾಗುತ್ತದೆ. ಪ್ರತಿಭಾಂಧನಿಗಾಗಲೀ ಅಂತಃಕರಣಜಡನಿಗಾಗಲೀ ಸೃಷ್ಟಿಯ ಸಚರಾಚರವಸ್ತುಗಳ ನಿಗೂಢರಹಸ್ಯ ಸಾಕ್ಷಾತ್ಕಾರವಾಗದು. ಅಂಥವನು ಪಿತ್ರಾರ್ಜಿತ ಆಸ್ತಿಯನ್ನಾಶ್ರಯಿಸಿ, ಕಡತಂದ ಸ್ಫೂರ್ತಿಯನ್ನವಲಂಬಿಸಿ, ಯಾಚಿತಕೌಶಲವನ್ನು ನೆಮ್ಮಿ ಅಹನ್ಯಹನಿ ಕಾಲಕ್ಷೇಪ ಮಾಡಬೇಕಾಗುತ್ತದೆ. ಆದರೆ ನೇಮಿಚಂದ್ರ ಪ್ರತಿಭಾಶೂನ್ಯನಾದ ನಿಕೃಷ್ಟ ಕವಿಯಲ್ಲ; ಅವನ ಪಾಂಡಿತ್ಯದ ಪಿತ್ತಚೇಷ್ಟೆಯಿಂದ ಜೀವರಸೋತ್ಪಾದಕ ಪ್ರತಿಭಾಗ್ರಂಥಿ ನಿಶ್ಚೇಷ್ಟವಾಗಿದೆ; ಪಾಂಡಿತ್ಯದ ಠೇಂಕಾರಕ್ಕೆ ಸೋತು ಅದು ಮೂಲೆ ಸೇರಿದೆ: ದುಷ್ಟಬುದ್ಧಿಯ ಕೌರ್ಯಾಗ್ನಿಯಲ್ಲಿ ಸತ್ತು ಸುಣ್ಣವಾದ ತಬ್ಬಲಿ ಚಂದ್ರಹಾಸನಂತಿದೆ. ಅವನ ಉಪಮಾಕೋಶದಲ್ಲಿ ಸಂಗ್ರಹವಾಗಿರುವ ದ್ರವ್ಯದಲ್ಲಿ ಕೆಲವು ಆನುವಂಶಿಕವಾಗಿ ಬಂದ ನಾಣ್ಯಗಳು; ಕೆಲವು ಅವನ ಸ್ವಂತ ಟಂಕಸಾಲೆಯಲ್ಲಿ ಸಿದ್ಧವಾದುವು; ಸ್ವಂತನಾಣ್ಯಗಳಲ್ಲಿ ಅಷ್ಟೊ ಇಷ್ಟೊ ಹದಿನಾಲ್ಕು

ಕ್ಯಾರೆಟ್ ಚಿನ್ನದಲ್ಲಿ ತಯಾರಾದುವು. ಕೇವಲ ಮ್ಯೂಸಿಯಮ್‌ನ ವಸ್ತುವಾಗಿ ಧೂಳಿಡಿದು ಕತ್ತಲಲ್ಲಿ ಅವಸ್ತುವಂತೆ ಬಿದ್ದಿರಬೇಕಾಗಿದ್ದ ಹಳೆಯ ನಾಣ್ಯಗಳನ್ನು ಯಥೋಚಿತವಾಗಿ ಮತ್ತೆ ಚಲಾವಣೆಗೆ ತಂದು ಅವುಗಳ ಚಾರಿತ್ರಿಕ ಮಹಿಮಾ ಪ್ರಕಾಶನಕ್ಕೆ, ಅವುಗಳ ಜೀರ್ಣೋದ್ಧಾರಕ್ಕೆ ಕವಿ ಕಾರಣನಾಗಿದ್ದಾನೆ; ಈ ಜೀರ್ಣೋದ್ಧಾರ ಕಾರ್ಯ ಅವಿಶ್ರಾಂತವಾಗಿ ನಡೆಯುತ್ತಿರಬೇಕೆಂದು ಮುಂದಿನವರಿಗೆ ಮಾರ್ಗದರ್ಶನ ಮಾಡಿದ್ದಾನೆ. "ತುಂಬಿಗೆ ಪರಿಮಳಮಂ ಕೊಂಡು ಕೊಸೆದು ಪೇೞ್ವವೊಲ್" (ಲೀಲಾ. 4-33); "ಗುಬ್ಬಿಯುಂತೆ ಬಾಯುಂಬಿಡುವ ಗರ್ಭಿಣಿಯರುಮಂ," "ಬೆಳ್ಳಿಲಿಯ ಬಿಲದೊಳ್ ನೀರ್ ಪೊಕ್ಕಂತೆಯುಂ" (ಅದೇ 5-114 ಗದ್ಯ); "ಮೂಗರ್ ಕಂಡ ಕನಸಿನಂತೇನುಮೆನಲಱಿಯದೆ" (ಅದೇ 7-83 ಗದ್ಯ); "ಪಾರದದಿಂ ಪೂಸಿದವೊಲ್ ಪೊನ್ನಮುಕುರಮಂ" (ಅದೇ 9-8); "ಕಾಮನ ಕಯ್ಪೊಡೆಯನೆತ್ತುವಂತೆ ಬಣ್ಣದ ಬಾಸಿಂಗಂಗಳಂ" (ಅದೇ 2-26 ಗದ್ಯ); "ರವಿ ಕಾಣದುದಂ ಕವಿ ಕಾಣ್ಬನೆನಿಪ್ಪ ವಚನಮೇಂ ತಪ್ಪುಗುಮೇ" (ನೇಮಿ. 1-33); "ಕೋಣನನೇಱಿದ ಭಗವತಿಯಂತೆ" (ಅದೇ 3-18 ಗದ್ಯ); "ಪುಟ್ಟುಂಗುರುಡಂ ಕಾಣ್ಬನೆ ಬಟ್ಟೆಯಂ" (ಅದೇ 4-55); "ಕೆಮ್ಮುಗಿಲ ಪೊರೆಯೊಳ್ ಪೊಳೆವೆಳಮಿಂಚಿನಗೊಂಚಲಂತೆ" (ಅದೇ 4-85 ಗದ್ಯ); "ಮಾರಿಯುಟಿದಾಡಿನಂತೋಡಿ" (ಅದೇ 6-63 ಗದ್ಯ); "ಬೇಡಿದ ಕಾಡೊಳೆ ಮಱೆಕೊಂಡುದು" (ಅದೇ 6-11 ಗದ್ಯ); "ಪುಳ್ಳೆ ಪಾಲಂ ಕಿಡಿಸುವಂತೆ" (ಅದೇ 6-74 ಗದ್ಯ); ನೀರ್ಪೊಱಗಿಟಿದ ಬಾಳೆಯಂತೆ ಮಿಡುಮಿಡುಮಿಡುಕಿ," "ಅಟಲಕಿರ್ಚು ಪೋೞ್ಮರದ ಕಿರ್ಚಿನಂತೆೞಗೊಳಗಳುರೆ" (ಅದೇ 7-12 ಗದ್ಯ); "ಕ್ರೂರಕಾಳಾಹಿ ತನ್ನ ತತ್ತಿಯಂ ತಾನೆ ತಿನಲಿರ್ಪಂತೆ" (ಅದೇ 7-26 ಗದ್ಯ); "ಎಸಡಿಯ ಬಸಿಱನೊಡೆದು ಪುಟ್ಟುವೆ ಮಱಗಳ್" (ಅದೇ 6-72); "ಬಿಸುನೀರ್ ಮನೆಯಂ ಸುಡುಗುಮೆ" (ಅದೇ 6-73 ಗದ್ಯ); "ಅಱಸುವ ಬಳ್ಳಿ ಕಾಲ್ತೊಡರ್ದುದೆಂದು" (ಅದೇ 7-50 ಗದ್ಯ); "ಕಣ್ಬಡೆದ ಕುರುಡನಂತಿರೆ," "ಪೆಣ್ಬಡೆದ ಸೂಳೆಯಂತಿರೆ," "ಜಾಣ್ಬಡೆದೊಕ್ಕಲಿಗನಂತೆ" (ಅದೇ 7-51) "ಪಾಡೞ್ದೀದ ದೇವತೆಗಳಂತೆ ಪಲ್ಲೋದ ಪಾವಿನಂತೆ" (ಅದೇ 8-16 ಗದ್ಯ); "ಪಾವಡರ್ದ ಪಂದೆಯಂತೆ" (ಅದೇ 8-51 ಗದ್ಯ)—ಇವು ಎರವಲು ಪಡೆದುವಾದರೂ, ಈ ಬಂಡವಾಳದಿಂದ ಸಾಕಷ್ಟು ಹುಟ್ಟುವಳಿ ಪಡೆದು, ಅದನ್ನು ಸಾರ್ಥಕಪಡಿಸಿಕೊಂಡದ್ದರಲ್ಲಿ ಕವಿಯ ಜಾಣ್ಮೆಯಿದೆ. ಎರವಲು ಬಂಡವಾಳವನ್ನು ಪೋಲುಮಾಡಿದಾಗ ಅಸತ್ಯ ಹವ್ಯಾಸಗಳಿಗೆ ಬಳಸಿದಾಗ ಕವಿಯ ಹೆಸರಿಗೆ ಮಸಿ ತಗಲುತ್ತದೆ. ಯಥಾರೀತಿಯ ಪೂರ್ವಜರ ಬಂಡವಾಳವಿಲ್ಲದೆ ಯಾರುತಾನೆ ಅಭಿವೃದ್ಧಿ ಹೊಂದಲು ಸಾಧ್ಯ? ಆ ಬಂಡವಾಳದ ಹೂಡಿಕೆಯ ಮೇಲೆ ತಾನು ಸ್ವಂತವಾಗಿ ಸಂಗ್ರಹಿಸಿದ ಆಸ್ತಿಯ ಸೆಲೆಬಿಲೆಗಳಿಂದ ಕವಿಯ ಶಕ್ತಿಸಾಮರ್ಥ್ಯಗಳನ್ನಳೆಯಬೇಕಾಗುತ್ತದೆ. "ಮೇರುವಂ ಸಾರ್ದ ಕಾಗೆ ಪೊಂಬಣ್ಣಮಾದಂತಿರಾ ಜಾತರೂಪಧರರಂ ಸಾರ್ದು ಶಬರಂ ಸುವ್ರತಸ್ವೀಕಾರ ಭಾಸುರನಪ್ಪುದುಂ" (ಅದೇ 3-74 ಗದ್ಯ); "ಅತನುವನತಿಶಯದಿಂ ಋತುತತಿಗಳ್ ಬಳಸುವವೋಲ್ ಎಳಸಿ ಬಳಸಿದರಂತಾ

ಕ್ಷಿತಿಪತಿಸುತನಂ ವಿಟಪಂಡಿತಸಟ ಪರಿಹಾಸಕಾದಿ ಸರ್ವಸಹಾಯರ್" (ಅದೇ 4-133); "ಕಾಗೆ ಪೊರೆದನಿತಱಿಂದಂ ಕೋಗಿಲೆ ತಾಸದಱ ಪಿಳ್ಳೆಯಕ್ಕುಮೆ" (ಅದೇ 6-69);—ಇವು ಸರ್ವಸಾಧಾರಣವಾದ ಪಳೆಯುಳಿಕೆಗಳಾದರೂ, ಮತ್ತೆ ಮತ್ತೆ ಬಳಸಿದಾಗ ಸಾಣೆಹಿಡಿದಂತಾಗಿ ಹೊಸಮೆರುಗಿನಿಂದ ಮೆರೆಯುತ್ತವೆ; ಇವುಗಳ ಬಳಕೆಯಿಂದ ಉಪಮೇಯದ ಸೊಗಸು ವರ್ಧಿಸಿದೆ. "ಪಱಿಮೆಗಾರದೆ ಪೂಗಿಡುಗಡಿದರೆಂಬಂತೆ" (ಲೀಲಾ 14-47ಗದ್ಯ)—ಇವೇ ಮೊದಲಾದ ಹೊಸ ಉಪಮೆಗಳನ್ನು ಪ್ರಾಚೀನ ಉಪಮೆಗಳ ಸಾಮ್ಯದಿಂದ ಸೃಷ್ಟಿಸುವಾಗಲೂ ಕವಿಯ ಜಾಣ್ಮೆ ಪ್ರಕಟವಾಗುತ್ತದೆ.

ನೇಮಿಚಂದ್ರನ ಮಾನಸೋತ್ಪನ್ನಗಳೆನ್ನಬಹುದಾದ ಉಪಮೆಗಳು ಸಂಖ್ಯಾಬಾಹುಳ್ಯದ ದೃಷ್ಟಿಯಿಂದ ತೃಪ್ತಿಕಾರಕವಾಗಿರದಿದ್ದರೂ ಗುಣ ಪ್ರಮಾಣದ ದೃಷ್ಟಿಯಿಂದ ತಕ್ಕಮಟ್ಟಿಗೆ ಸಮಾಧಾನಕರವಾಗಿವೆ. "ಬಗೆಯ ಜೈಕೆಗೆ ನಾಲಗೆ ಪಿಸುಣನೆಂಬಂತೆ" (ಲೀಲಾ 4-63 ಗದ್ಯ); "ಜೀಸುವ ಜಾಲಂಗಳಿಂ ಕಚ್ಚೆಯ ಕೆಚ್ಚಲುಗ್ಗೆಗೆ ಪಕ್ಕಿಯೆಱಗುವಂತೆಯುಂ" (ಅದೇ 5-85 ಗದ್ಯ); "ಬಾಂದೊಱೆಯಪರತಟದೊಳೆಱಿಮಿಾಂಗುಱುಕುವ ಬಕದಂತಿರ್ದುದಿಂದುವ ಬಿಂಬಂ" (ಅದೇ 7-99); "ಕಣ್ಣಬೇನೆಗಾಱದೆ ತಲೆಯಂ ತಿವಿಸಿಕೊಂಡರೆಂಬಂತೆ" (ಅದೇ 14-47 ಗದ್ಯ); "ಸೂರ್ಕಾನೆ ದಿಂಬಂಗಾಡೆ ಹೋಟಗೆಯೆಂಬಂತೆ' (ನೇಮಿ 6-63 ಗದ್ಯ); "ಎಳಕುಱಿಗೊಳ್ಪಂಗೆ ಱಂಗೊಟ್ಟಂತಾಯ್ತು, ಕವರು ಕತ್ತಿಗೆ ಕಡಿತಂ ಬಂದಂತಾಯ್ತು" (ಅದೇ 6-71 ಗದ್ಯ); "ಪುಟ್ಟಿದ ಮನೆ ಪೊಕ್ಕ ಮನೆಯೆರಡುಂ ಕೇಡನಾದಿ ತೋರ್ಪಂತೆ" (ಅದೇ 7-9 ಗದ್ಯ); "ರಜತಾಚಳಮಿಕ್ಕಿದ ತತ್ತಿಗಳೆನೆ ತೊಳತೊಳಗುವುವು ಸೌಧಸದನಾವಳಿಗಳ್" (ಅದೇ 2-81); "ಪೂವಂ ತೋಱದೆ ಪಸಸು ಫಲಾವಳಿಯಂ ಪಡೆವ ತೆಱದೆ" (ಅದೇ 7-27); "ದೆಸೆದೇವತೆಯೆ ಕುಸುಂಬೆಯ ಕುಸುಮಂಗಳಿನಿಂಡೆಯಾಡುವಂತಿರೆ" (ಅದೇ 7-32); "ಲೋಯಿಸರದ ಮೇಲೆ ಬಾಡಿ ಪರಿದಂತು" (ಅದೇ 7-76); "ಕಜ್ಜಯೊಳುಬ್ಬುತ್ತ ಕವಡಿಕೆಯಂ ಬಿತ್ತಿದಂತೆ" (ಅದೇ 7-92 ಗದ್ಯ); "ಮೊಳೆಯೊಳೆ ಪೆರ್ಗೂಡಲಿಗಳುಂ ಕೊಳಲಾಱದೆ ಮುಕ್ಕುವೋದುವೆಂದೊಡೆ" (ಅದೇ 8-17)—ಈ ಉಪಮೆಗಳಲ್ಲಿ ಮಾತಿನ ಮೋಡಿಯಿದೆ, ಸಾದೃಶ್ಯಸಂಪತ್ತಿದೆ, ಔಚಿತ್ಯದ ಮೇಳವಿದೆ, ಲಾವಣ್ಯಲಾಲಿತ್ಯಗಳಿವೆ, ಕಲ್ಪನೆಯ ಚಮತ್ಕಾರವಿದೆ, ಉದ್ದಿಷ್ಟ ಭಾವಾರ್ಥಗಳನ್ನು ನಿಷ್ಕೃಷ್ಟವಾಗಿ ಹೊರದೋರುವ ಹೊಳಹಿದೆ, ಬುದ್ಧಿಮಾಂದ್ಯಕ್ಕೆ ಜೀರ್ಣಾಗ್ನಿಯಿದೆ. "ಬಿಸಿಲಿಂದೆ ಬೆಂಧರಂ ಕೇಸುರಿಯಿಂದೆ ಕಾಸಿದವೊಲ್" (ಲೀಲಾ 5-5); "ಸಯ್ಗೋಡುಗಳಿಂ ಲೋಯಿಸರದ ಕಾಡಂ ಕಾಲೆತ್ತಿದಂತೆಯುಂ," "ಕವಿದ ಕಿವಿಗಳಿಂ ಜಾವಲಪಿಂಡು ಪಕ್ಕಮಂ ಬಡಿವಂತೆಯುಂ" (ಅದೇ 5-85 ಗದ್ಯ); "ಲತೆಯೆನಿತ್ತು ಬಳ್ಳಿತ್ತಾದೊಡಂ ಮರದಿಂ ಬಳ್ಳಿತಲ್ತು" (ನೇಮಿ 3-18 ಗದ್ಯ); "ಪಸೆಯೊಳ್ ಪಾವು ಕೊಂಡುದೆಂಬಂತೆ" (ಅದೇ 3-28 ಗದ್ಯ); "ಬಳ್ಪುಲ್ಲ ಮೇಲೊಂದು ದಳ್ಳುರಿ ಜೀಬ್ಬಂತೆವೊಲ್" (ಅದೇ 4-51); "ಅಱಲ್ಕೊಂಡನ ಮೇಲೆ ತೊಱೆ ಬಂದತ್ತೆಂದು ಸಂತಸಂಬಟ್ಟು" (4-56 ಗದ್ಯ); "ನೊಣಂ ಪುಣ್ಣಂ ಸಾರ್ವವೊಲ್" (ಅದೇ 4-88); "ಅಟ್ಟಿತಿಂಬ ದೈವಕ್ಕೆ

ಪ್ರಾಬಂಬಟ್ಟಂತೆ" (ಅದೇ 6-62 ಗದ್ಯ); ಪ್ರದ್ಯೋತನಂಗೆ ಪದ್ಮಿನಿಯುಂ ಪಣಿದಂ ಜೊಯ್ದುಂತಾಯ್ತು" (ಅದೇ 6-71 ಗದ್ಯ); "ಇಟ್ಟಗರ್ಗಾಱದೆ ಪೆಟ್ಟೆಯುಂ ಕಚ್ಚುವಂತೆ" (ಅದೇ 7-9 ಗದ್ಯ); "ಕನ್ನದೊಳ್ಸತ್ತ ಕಳ್ಳನ ತಾಯುಂತೊಳಗೊಳಗಬುತೆ" (ಅದೇ 7-12 ಗದ್ಯ); "ಪಶುದಿಂಬಂಗಾಡಂ ತಿಂಬುದೇಂ ಪಾತಕಮೇ" (ಅದೇ 7-26): "ಕಿಲುಂಬೇಱಿದ ಕಾಂಸ್ಯದಂತೆ" (ಅದೇ 7-26 ಗದ್ಯ); "ಆನೆಯುನೆತ್ತುವಂಗಾಡು ಚಿಕ್ಕಾಡೆಂಬಂತೆ" (ಅದೇ 7-82 ಗದ್ಯ); "ಸೋಂತರ ಪಗೆಯನೆಟ್ಟೆಱಿದಂತೆ" (ಅದೇ 8-32 ಗದ್ಯ); "ನೀರೊಳಗೆ ಬಿಟ್ಟ ಘನ ಬಿಂದುವಿನಂತಿರೆ" (ಅದೇ 7-34); ದ್ವಿಪದ ಪಿಂಗಾಲಂ ಪಿಡಿದು ಪಂದಿಯನೆಡೆವಂತೆ (ಅದೇ 8-86 ಗದ್ಯ) "ಪಂದಿಗೆಱಗಿದ ನಾಯುಂ ಹೆಕ್ಕಳಿಸುವಂತೆ" (ಅದೇ 8-106 ಗದ್ಯ)—ಇವು ವಾಚಕರ ಪ್ರಶಂಸೆಯ ಕ್ರಯಕ್ಕಾಗಿ ಹಿಮ್ಮಣಿ ಚೀಲದಲ್ಲಿ ತುಂಬಿಕೊಂಡು ಅಲೆದಾಡುತ್ತಿರುವ ಕವಿಯ ಬೆಳ್ಳಿ ತಾಮ್ರದ ನಾಣ್ಯಗಳು. ಗಗನದ ನಕ್ಷತ್ರ ಸಮುದಾಯ ಗೌರಿಯ "ಮುಖ ಪದ್ಮದೊಳ್ ಮೊಡವಿ ಮೂಡಿದವೋಲಿರೆ" (ಲೀಲಾ 2-2) ಎಂಬ ಉಪಮೆಯಲ್ಲಿ ವಿಲಕ್ಷಣಕ್ಕಿಂತ ಅವ ಲಕ್ಷಣದ ಕೋಡು ಮೂಡಿದಂತೆ ಕಾಣುತ್ತದೆ. ಮೊಡವಿ ಯೌವನದ ಹೊಂಗಳಸ, ಕಂದರ್ಪನ ವಿಜಯಪತಾಕೆ ಎಂಬ ಕಲ್ಪನೆಗೆ ತೋರುಬೆರಳಾಗಿ ತೋರಿದರೂ, ಮುಂದಿನ ಪದ್ಯದಲ್ಲಿ "ಎರ್ದುವು ಬಲ್ಪೆಮರಂತೆ ತಾರಕಾಸಂಕುಳಂ" ಎನ್ನುವ ಉಪಮೆ ಸಹೃದಯನ ಭಾವಕೋಶವನ್ನು ಪ್ರವೇಶಿಸಲು ಅತ್ಯವಶ್ಯವಾದ ಪಾಸ್‌ಪೋರ್ಟ್ ಅನ್ನು ದೊರಕಿಸಿಕೊಳ್ಳಲಾರದೆಂದು ಖಚಿತಪಡಿಸಬಹುದು. ಹೀಗೆಯೇ

ಕಡುಗೊಬ್ಬಿದ ಕಡಸುಗಳಿಂ
ಕಡೆಯೊಳ್ ಬರುತಿರ್ಪ ಧೇನು ಬಡವಾಗಿರ್ದುಂ
ಬಿಡೆ ಕರಮೆಸೆದುದು ಚಾಗಿಯ
ಬಡತನಮುಂ ಖಳನ ಸಿರಿಯಿನಗ್ಗಳಮಲ್ತೇ ಲೀಲಾ 5-92

ಎಂಬ ಪದ್ಯದಲ್ಲಿ ಕಡಸುಗಳನ್ನು ಖಳನಿಗೆ ಹೋಲಿಸುವಾಗ ಔಚಿತ್ಯವಾಗಲೀ ವಿಶೇಷ ಚಮತ್ಕಾರವಾಗಲೀ ಕಾಣುವುದಿಲ್ಲ. ಒಟ್ಟಿನಲ್ಲಿ ನೇಮಿಚಂದ್ರನ ಶೈಲಿಯಲ್ಲಿ ಸಂಕೀರ್ಣನಾದದ ವೈವಿಧ್ಯವಿಲ್ಲ, ಕಾಮನ ಬಿಲ್ಲಿನ ಮೋಹಕತೆಯಿಲ್ಲ, ನಾನಾವರ್ಣ ಸಂಶೋಭಿತವಾದ ಸಹ್ಯಾದ್ರಿವನರಾಜಿಯ ವೈಭವವಿಲ್ಲ, ಚಿದಂಬರ ರಹಸ್ಯವೂ ಇಲ್ಲ. ಭಾಷೆ ಕಠಿನವಾದರೂ ಭಾವಾರ್ಥಗಳು ಸುಲಭಗ್ರಾಹ್ಯ; ಪ್ರತೀಯಮಾನಾರ್ಥ ಕ್ಕಿಂತಲೂ ವಾಚ್ಯಾರ್ಥಕ್ಕೆ ವಿಜಯ. ತನ್ನ ಶೈಲಿಯ ಬಗೆಗೆ ಆತ್ಮ ವಿಶ್ವಾಸವಿದೆ, ಬಹುಶಃ ಅಟ್ಟಹಾಸವೂ ಇದೆ. ಲೀಲಾವತಿಯಲ್ಲಿ ವಿಕಾಸ ಪಥದಲ್ಲಿದ್ದ ಅವನ ಶೈಲಿ ನೇಮಿನಾಥ ಪುರಾಣದಲ್ಲಿ ಸಿದ್ಧಿ ಪಡೆದಿದೆ. ಕಾವ್ಯ ವಿದ್ಯಾಪ ಚಯ ಪರಿಚಯದಿಂದ ಸಂಲಬ್ಧವಾದ ಸಂಸ್ಕಾರ, ಚಿಂತನ ಮಂಥನಗಳಿಂದ ಪರಿಷ್ಕಾರಗೊಂಡ ಅಪೂರ್ವ ಪದ ಪ್ರಯೋಗ ಇವೆರಡರ ಸಂಯೋಗಸಮ್ಮಿಲನದಿಂದ ಸಂಘಟಿತವಾದ ವಿಶಿಷ್ಟ ಶೈಲಿ ನೇಮಿಚಂದ್ರನದು. ಪಂಪರನ್ನರ ಮಹಾಶೈಲಿಯ ಔನ್ನತ್ಯಕ್ಕೇರದಿದ್ದರೂ, ಒಮ್ಮೊಮ್ಮೆ ಕೃತಕತೆಯ ದೋಷ ಅಂಗೈ ಹುಣ್ಣಿನಂತೆ ಸ್ಪಷ್ಟವಾಗಿದ್ದರೂ, ಅಪೂರ್ವ ಪದ

ಪ್ರಯೋಗದಿಂದ, ವಿಶೇಷ ನುಡಿಗಟ್ಟಿನ ವಿಶಿಷ್ಟ ಬಳಕೆಯಿಂದ, ಸಂಸ್ಕೃತ ಕನ್ನಡ ಪದಗಳ ಸುಮಧುರ ಸಮ್ಮಿಶ್ರಣದ ಲಲಿತಬಂಧದಿಂದ, ಸಿವುರು ಸಿಕ್ಕು ತಗ್ಗು ತಿಟ್ಟು ಅಡೆತಡೆಯಿಲ್ಲದ ಬೊಬ್ಬೆಯಬ್ಬರಗಳಿಲ್ಲದ ಸರಾಗ ಶೀಲದ ಗಂಭೀರ ಗಮನದಿಂದ, ಸೂಕ್ಷ್ಮಭಾವ ಗಹನ ವಿಚಾರಗಳನ್ನು ಲೀಲಾಜಾಲವಾಗಿ ಸ್ಫಟಿಕಸ್ಪಷ್ಟವಾಗಿ ಆವಿಷ್ಕಾರಗೊಳಿಸಬಲ್ಲ ಗಮಕ ಸಾಮರ್ಥ್ಯದಿಂದ ಸುಪ್ರಸನ್ನವೂ ಸರ್ವಸಮರ್ಪಕವೂ ಸುಸಮರ್ಥವೂ ಸುಪಕ್ವವೂ ಆದ ಗದ್ಯ ಶ್ರೀಮಂತತೆಯಿಂದ ನೇಮಿಚಂದ್ರನ ಶೈಲಿಗೆ ಕನ್ನಡ ಭಾಷಾಶೈಲಿಯ ಇತಿಹಾಸದಲ್ಲಿ ವಿಶಿಷ್ಟ ಸ್ಥಾನವಿದೆಯೆಂದು ಧಾರಾಳವಾಗಿ ಹೇಳಬಹುದು.

## ೧೦. ಕಾವ್ಯಗಳಲ್ಲಿ ಜನಜೀವನ

ಪ್ರಾಚೀನ ಕನ್ನಡ ಸಾಹಿತ್ಯದ ವ್ಯಾಸಂಗ ವಿಶ್ಲೇಷಣೆಗಳಿಂದ ಅಂದಿನ ಜನಜೀವನದ ಬಾಹ್ಯರೂಪರೇಷೆಗಳು ಸಮೃದ್ಧವಾಗಿ ಸುಸ್ಪಷ್ಟವಾಗಿ ರೂಹುದೋರುತ್ತವೆಂದು ಹೇಳಲಾಗದು. ಈ ಅಭಾವಕ್ಕೆ ಆಗಿನ ಕಾವ್ಯೋದ್ದೇಶ ಧ್ಯೇಯ ದೃಷ್ಟಿಗಳೇ ಕಾರಣ. ಪೌರಾಣಿಕ ವ್ಯಕ್ತಿಗಳ ರಾಜಮಹಾರಾಜರುಗಳ ಪ್ರಣಯಸಾಹಸ ಮತ್ತು ಶೌರ್ಯಪರಾಕ್ರಮಗಳ ವರ್ಣನೆಗೆ ಮೀಸಲಾಗಿದ್ದ ಕವಿಲೇಖನಿಗೆ, ಶೃಂಗಾರಾದ್ಭುತ ವೀರರಸ ನಿರೂಪಣೆಗೆ ಭಕ್ತಿ ಪ್ರತಿಪಾದನೆಗೆ ಆತ್ಮಸಮರ್ಪಣ ಮಾಡಿಕೊಂಡಿದ್ದ ಕವಿಪ್ರತಿಭೆಗೆ, ರಾಜಾಸ್ಥಾನದ ಮಾನಮರ್ಯಾದೆಗಳಿಗೆ ಆತ್ಮವಿಕ್ರಯಮಾಡಿಕೊಂಡಿದ್ದ ಕವಿಗಳಿಗೆ ಸಾಮಾನ್ಯ ಜನ ಮತ್ತು ಜೀವನ ಅಸ್ಪೃಶ್ಯವಾಯಿತು. ಮಹಾಕವಿ ಕೃತಿಗಳನ್ನು ಬಿಟ್ಟರೆ ಉಳಿದುವುಗಳಲ್ಲಿ ಸಮಕಾಲೀನ ಜನಜೀವನದ ಚಿತ್ರ ದೊರೆಯುವುದಿಲ್ಲ. ಈ ದೋಷಾರೋಪಣೆಗೆ ನೇಮಿಚಂದ್ರ ಹೊರಗಲ್ಲ. ಚಿತ್ತಾಕರ್ಷಕವಾದ ಗೊಲ್ಲರ ಮತ್ತು ಬೇಡರ ಸಂಸಾರ ಜೀವನದ ಸ್ವಜಚಿತ್ರ ಹೊರತಾಗಿ ಸಮಕಾಲೀನ ಸಮಾಜದ ಸ್ವರೂಪ ದರ್ಶನ ಅವನ ಕಾವ್ಯಗಳಿಂದ ಲಭಿಸುವುದಿಲ್ಲ. ಶೃಂಗಾರದ ಕೆಸರುಸುಳಿನಲ್ಲಿ ಭಾವಾವಳಿಯ ಮರುಭೂಮಿಯಲ್ಲಿ ವಿಶ್ವತೋಮುಖವಾದ ಜನಜೀವನದ ರೋಮಾಂಚಕರವಾದ ರಮ್ಯಾದ್ಭುತ ವಾಸ್ತವ ಸಂಗತಿಗಳು ಮುರುಟಿಹೋಗುತ್ತವೆ. ರಾಜರಾಣಿಯರ ಶೃಂಗಾರಜೀವನ, ಆ ಜೀವನಕ್ಕೆ ಸಾಮೀಲಾಗಿ ಪೋಷಕರಾಗಿ ಪ್ರಣಯಸಚಿವರಾಗಿ ಸ್ಮರತಂತ್ರಜ್ಞರೆಂಬ ಬಿರುದಿಗೆ ಪಾತ್ರರಾದ ವಿಟವಿದೂಷಕಕುಂಟಣಿಯರ ರಸಿಕಜೀವನ, ಪ್ರಣಯಜೀವನದ ಕಾರ್ಯಕ್ಷೇತ್ರವಾದ ನಗರ ನಂದನ ತಟಾಕಾದಿಗಳ ಕಲ್ಪನಾಸಾಧ್ಯಮಾತ್ರವೂ ಸಂಮೋಹನಕಾರಿಯೂ ಭೋಗಸಮೃದ್ಧವೂ ಆದ ಸ್ವರ್ಗೀಯ ವಾತಾವರಣ—ಇವುಗಳಲ್ಲಿಯೇ ಸದಾ ವಿಹರಿಸುತ್ತಿರುವ ಕವಿಚೇತನ ಜೀವನದ ಇತರ ಮೌಲ್ಯಗಳ ಕಡೆಗೆ ಮುಖ ತಿರುಗಿಸಲಾರದು. ಕಾವ್ಯಲೋಕದಲ್ಲಿ ಕಾಣುವ ಕ್ಲೇಶಕಾರ್ಪಣ್ಯಗಳಿಲ್ಲದ ಭೋಗವೈಭವದ ಮತ್ತು ರಸಿಕಜೀವನದ ಮುಕ್ಕುಚಕ್ಕೆಯಾದರೂ ವಾಸ್ತವ ಜೀವನದಲ್ಲಿ ಕಂಡುಬಂದದ್ದಾದರೆ, ಆ ಸಮಾಜ ಮೆಚ್ಚತಕ್ಕದ್ದೆ, ಆದರ್ಶಪ್ರಾಯವಾದದ್ದೆ. ಲೀಲಾವತಿಯಲ್ಲಿ ಬರುವ ವಿರಹದಗ್ಧರಾದರೂ ಪರಸತಿ ಪರಪುರುಷರ ಕಡೆಗೆ ಮರೆತೂ ಕಣ್ಣೆತ್ತಿನೋಡದ, ಸಕಲಗುಣಭರಿತರಾದ ನಾಯಕನಾಯಿಕೆಯರು, ಪ್ರಭುಚಿತ್ತಾನುವರ್ತಿಯೂ ಆತ್ಮಸಮರ್ಪಣ

ಲೋಲುಪನೂ ಆದ ಗಿಳಿಯು ಮಕರಂದ, ರಾಜಕುಮಾರಿಯ ಶುಶ್ರೂಷೆಯಲ್ಲಿ ಸುಖವನ್ನು ಕಾಣುವ ಕಳಾವತಿ ತಮಾಳಿಕೆಯರು ಸಂಸ್ಕೃತಿಸಂಪನ್ನವಾದ ಎಂಥ ಸಭ್ಯ ಸಮಾಜಕ್ಕಾದರೂ ಹೆಸರು ತರುವಂಥವರು. ವೇಶ್ಯಾವಾಟಿಕೆ ಮಹಾನಗರಗಳ ಅನಿವಾರ್ಯಾಂಗವಾಗಿತ್ತು. ಜೋಳದ ಹೊಲಕ್ಕೆ ಮುತ್ತುತ್ತಿದ್ದ ಪಕ್ಷಿಗಳನ್ನು ಬೆದರಿಸುತ್ತ, ಪಾಂಥರನ್ನಾಕರ್ಷಿಸಿ ನೀರುಬಡಿಸುತ್ತಿದ್ದ ಪಾಮರಿಯರು ಗ್ರಾಮಸಂಸ್ಕೃತಿಯ ಜೀವನಾಡಿಗಳಂತಿದ್ದರು. ಯಕ್ಷಿಣಿ ಇಂದ್ರಜಾಲವಿದ್ಯೆ ಮಾಯ ಮಾಟ ಮತ್ತು ದಿವ್ಯಗಳಿಗೆ ಸಮಾಜದ ಸಕಲವರ್ಗಗಳಲ್ಲಿಯೂ ಪುರಸ್ಕಾರ ದೊರೆಯುತ್ತಿದ್ದಂತೆ ಕಾಣುತ್ತದೆ. ಅಪುತ್ರರಿಗೆ ಗತಿಯಿಲ್ಲವೆಂಬ ನಂಬಿಕೆಯೂ, ಮಕ್ಕಳಿಲ್ಲದಾಗ ಋಷ್ಯಾಶೀರ್ವಾದ ಫಲದಾಯಕವಾಗುತ್ತದೆಂಬ ಭರವಸೆಯೂ ಸರ್ವವ್ಯಾಪಿಯಾಗಿತ್ತು. ಹಾಗೆಯೇ ಸ್ವಪ್ನಫಲದಲ್ಲಿ ಶ್ರದ್ಧೆ ಅಚಲವಾಗಿತ್ತು. ಶ್ರೀಮಂತ ಮನೆತನದ ಅಪುತ್ರವತಿಯರು ಸಂತಾನಾಪೇಕ್ಷೆಯಿಂದ ಪದ್ಮಾವತಿ ಮೊದಲಾದ ಮನೆ ದೇವರಿಗೆ ಮುತ್ತಿನಕೊಡೆ ಚಾಮರವಿಕ್ಕುವ ಹರಕೆ ಹೊರುತ್ತಿದ್ದರೆ, ಸಾಮಾನ್ಯರು ಕುರುಳುಕೊಯ್ದು ದೇವರಿಗೆ ಸಮರ್ಪಿಸುತ್ತಿದ್ದರು. 'ವಸುದೇವನರಸಿ ಮಣ್ಣಂ ಮೆಲ್ಲಳ್' (ನೇಮಿ 7-39) ಎನ್ನುವಾಗ ಮಣ್ಣು ತಿನ್ನುವ ಬಸುರಿಬಯಕೆ ಎಷ್ಟು ಪ್ರಾಚೀನವಾದದ್ದೆಂಬುದು ವಿದಿತವಾಗುತ್ತದೆ. ಜನಸಮಯದಲ್ಲಿ ಆಚರಿಸುತ್ತಿದ್ದ ರೂಢಿಸಂಪ್ರದಾಯಗಳ ವಿವರಣೆ ಲೀಲಾವತಿಯಲ್ಲಿ (7-68 ಗದ್ಯ) ಸಾಕಷ್ಟು ಸಿಗುತ್ತದೆ. ರಾಜನಿಗೆ ಮತ್ತು ರಾಷ್ಟ್ರಕ್ಕೆ ಕೇಡೊದಗುವ ಕಾಲಕ್ಕೆ ಹಗಲು ಉಲ್ಕಾಪಾತವಾಗುತ್ತದೆಂಬ ಮತ್ತು ಭೂಮಿ ಮೊಳಗುತ್ತದೆಂಬ ಮೌಢ್ಯಜ್ಞಾನ ಜನರಲ್ಲಿ ಹರಡಿತ್ತು. (ನೇಮಿ 7-63). ಹಳ್ಳಿಗಳಲ್ಲಿ ಗ್ರಾಮದೇವತೆಗಳಿಗೆ ವಿಶೇಷ ಪುರಸ್ಕಾರ ಸಲ್ಲುತ್ತಿತ್ತೆಂದು ತೋರುತ್ತದೆ. ನೇಮಿಚಂದ್ರ ಅಂಥ ಪದ್ಧತಿಯನ್ನು ಲೇವಡಿಮಾಡುತ್ತಾನೆ (ನೇಮಿ 7-50 ಗದ್ಯ; ಲೀಲಾ 7-40, 49) ಆಗಿನ ಸಮಾಜದಲ್ಲಿಯೂ ಸ್ತ್ರೀಸಂತಾನ ಅನಪೇಕ್ಷಣೀಯವಾಗಿತ್ತು. ಹೆಣ್ಣು ಹುಟ್ಟಿದಾಗ ತಂದೆತಾಯಿಯರು ಮತ್ತು ನೆಂಟರಿಷ್ಟರು ಅಸಂತೃಪ್ತಿಯಿಂದ ದೇವರುದಿಂಡರನ್ನು ಶಪಿಸುತ್ತಿದ್ದರು. (ನೇಮಿ 7-50 ಗದ್ಯ). ಸಂಗೀತ ನೃತ್ಯ ಹರಿಕಥೆ ನಾಟ್ಯಕ ಪುರಾಣಗಳ ಶ್ರವಣದರ್ಶನದಿಂದಲ್ಲದೆ ಕೋಳಿಜೂಜು ಮೊದಲಾದ ಹವ್ಯಾಸಗಳ (ಲೀಲಾ 4-13) ಮೂಲಕ ಜನ ಆಸರು ಬೇಸರುಗಳನ್ನು ಪರಿಹರಿಸಿಕೊಳ್ಳುತ್ತಿದ್ದರು. ಎಱೆಯಪ್ಪ (ನೇಮಿ 7-91 ಗದ್ಯ), ಮೈಲಾರ (ಲೀಲಾ 8-19) ಜೋಕೋರ (ನೇಮಿ 6-19 ಗದ್ಯ) ಮೊದಲಾದವರನ್ನೂ ಸಾಮಾನ್ಯಜನ ಪೂಜಿಸುತ್ತಿದ್ದಂತೆ ಕಾಣುತ್ತದೆ. ಮತೀಯದ್ವೇಷ ಪರದೈವನಿಂದೆ ಮೊದಲಾದ ಹಾನಿಕಾರಕ ಪ್ರವೃತ್ತಿಗಳು ಆಗಾಗ್ಗೆ ಹೆಡೆಯೆತ್ತುತ್ತಿದ್ದಿರಬೇಕೆನ್ನುವುದಕ್ಕೆ ವಿಡಂಬನಾತ್ಮಕವಾದ ಒಂದೆರಡು ಪದ್ಯಗಳು (ನೇಮಿ 7-55, 60) ಸಾಕ್ಷಿಯಾಗಿವೆ.

ಶಾಸ್ತ್ರೀಯ ಸಂಗೀತದಲ್ಲಿ ಶ್ರೀಮಂತರೂ, ಜನಕೆವಾಡಿನಲ್ಲಿ ಸಾಮಾನ್ಯರೂ ಪ್ರಾವೀಣ್ಯ ಪಡೆದಿದ್ದಂತೆಯೂ, ಒಟ್ಟಿನಲ್ಲಿ ಜನಸಮುದಾಯ ಸಂಗೀತಲೋಲುಪರಾಗಿದ್ದರೆಂದೂ ವ್ಯಕ್ತವಾಗುತ್ತದೆ. ಆ ಕಾಲದ ಭೋಜನಪದ್ಧತಿಯೂ, ಭೋಜನರಸಿಕತೆಯೂ ಕೆಳಗಣ ಪದ್ಯಗಳಲ್ಲಿ ಪ್ರತಿಬಿಂಬಗೊಂಡಿವೆ:

ಬಗಿದಗುೞೊಂದದಂತೆ ತೆಗೆದಾಱಿಸಿದೋಗರದೊಳ್ ಪೊದಬ್ದು ಕ
ಮ್ಮಗೆ ಕೆನೆಗೊಂಡ ಗೆಡ್ಡೆಮೊಸರಂ ಸುರಿದೇಲೆಯು ಚೂರ್ಣವಿಕ್ಕಿ ಪೊ
ಯ್ದೊಗುಮಿಗೆ ಬೇಳೆಗೆಯ್ದು ಮೆಳಸಂ ತಳಿದಲ್ಲದ ಚಲ್ಲಿಯಂ ಪವ
ಣ್ಬುಗೆ ಕಲಸಿರ್ದ ತಣ್ಗಲಸುಗೂೞನಿಳಾ ಪತಿಗಿತ್ತನೞ್ತಿಯಿಂ ಲೀಲಾ 5-62

ಪಿಪ್ಪಲಿ ಚಲ್ಲಗಾಯ್ ವೆೞಸು ಮಾಗುಳಿವೇರ್ವೊಳೆಯಲ್ಲವೇಲೆ ಕ
ಮ್ಮಿಪ್ಪ ಸುಭದ್ರೆ ಮಾಮಿಡಿ ಕರಂಜಿಕೆಯಂಬಟೆ ನಿಂಬೆ ನೆಲ್ಲಿಗಾಯ್
ಕಪ್ಪುರಗಂಪನೊಪ್ಪಿಸುತುಮಿರ್ಪರೆ ಮಾದುಫಲಂಗಳಾದಿಯಾ
ದುಪ್ಪಿನ ಕಾಯ್ಗಳಂ ಮಗಮಗಿಪ್ಪವನಿಕ್ಕಿದನಬ್ಜಪತ್ರದೊಳ್ ಅದೇ 5-63

## ೧೧. ಪೂರ್ವಕವಿ ಋಣ

ನೇಮಿಚಂದ್ರ ಕಾವ್ಯಾರಂಭದಲ್ಲಿ ಯಾವ ಕನ್ನಡ ಕವಿಯ ಹೆಸರನ್ನೂ ಉಲ್ಲೇಖಿಸಿಲ್ಲ. ಸಮಂತಭದ್ರ ಅಕಳಂಕದೇವ ಪೂಜ್ಯಪಾದ ಗೃಧ್ರಪಿಂಛಾಚಾರ್ಯ ಕೊಂಡಕುಂದಾಚಾರ್ಯ ಪರಮೇಷ್ಠಿ ಜಿನಸೇನ ವೀರಸೇನ ಗುಣಭದ್ರಾಚಾರ್ಯರ ಪಾದಕ್ಕೆ ಮೊದಲು ಹೂವುಹಾಕಿ, ಅನಂತರ ಕಾವ್ಯರಚನೆಗೆ ತೊಡಗುತ್ತಾನೆ. ಇವರು ಕನ್ನಡಿಗರಾಗಿರಬಹುದಾದರೂ ಕನ್ನಡದಲ್ಲಿ ಕಾವ್ಯರಚನೆ ಮಾಡಿದ್ದರೆಂದು ಹೇಳುವಂತಿಲ್ಲ. ನೇಮಿಚಂದ್ರನಿಗೆ ಮಹಾಪುರಾಣದ ಗಾಢಪರಿಚಯವಿತ್ತೆಂಬುದಕ್ಕೆ ಸಾಕಷ್ಟು ಸಾಕ್ಷಿ ಅವನ ಪುರಾಣಕಾವ್ಯದಲ್ಲಿ ದೊರೆಯುತ್ತದೆ. ಭಾಸ ಕಾಳಿದಾಸ ಸುಬಂಧು ದಂಡಿಯರ ಗ್ರಂಥಾವಳಿಯನ್ನೂ ಜೊತೆಗೆ ಪ್ರಾಕೃತ ಅಪಭ್ರಂಶ ಕಾವ್ಯರಾಶಿಯನ್ನೂ ಹೃದ್ಗತಮಾಡಿಕೊಂಡಿರಬೇಕು. ಸಂಸ್ಕೃತ ಪ್ರಾಕೃತಗಳಲ್ಲಿ ಕಾವ್ಯರಚನೆಮಾಡುವ ಸಾಮರ್ಥ್ಯವೂ ಅವನಿಗೆ ದಕ್ಕಿದ್ದಿತು. ಆದರೆ ಅವನು ಯಾವ ಕನ್ನಡ ಕವಿಯನ್ನೂ ಹೆಸರಿಸದಿರುವುದು ಆಶ್ಚರ್ಯವಾಗುತ್ತದೆ. "ಬೇೞ್ ಕವಿಗಳ್ಗೆ ವಿನಯಂ ದೋಱದೆ. . . ವಿಧುವಿಶದಕೀರ್ತಿ ಭುವನತ್ರಯದೊಳ್" (ಲೀಲಾ 1-42) ಪ್ರಾಪ್ತವಾಗುವುದಿಲ್ಲವೆಂದೂ, "ಶ್ರೀಯನೊಲಿಸುವಡೆ, ತಾಂ ಕವಿನಾಯಕನೆನಿಸುವೊಡೆ, ತನ್ನ ಕೃತಿಕಲ್ಪಾಂತ ಸ್ಥಾಯಿಯೆನಿಸುವೊಡೆ, ಬಲ್ಲರ ಬಾಯಂ ಪೊಕ್ಕೋದಿ ಕಲ್ಗೆ ಕವಿ ಸಕಲಮುಮಂ" (ನೇಮಿ 1-34) ಎಂದೂ, "ಬಗೆಗೊಂಡೋದದೆ ಕೇಳದೆಲ್ಲ ಕಳೆಯಂ ಕಾವ್ಯಜ್ಞರಿಂ ಕಲ್ಲದೆ" (ಅದೇ 1-35) ಕಟ್ಟಿದ ಕನ್ನಡದಕಬ್ಬ ಕಾಬ್ಗಬ್ಬಗಳಾಗುತ್ತವೆಂದೂ ಅವನು ಉದ್ಗಾರ ತೆಗೆದಿರುವಾಗ ಪೂರ್ವಕವಿ ಕೃತಿಗಳನ್ನು ಚೆನ್ನಾಗಿಯೇ ಅಭ್ಯಾಸಮಾಡಿರಬೇಕೆಂದು ಊಹಿಸಬಹುದಾಗಿದೆ. ಪಂಪ ರನ್ನ ನಾಗವರ್ಮ ನಯಸೇನಾದಿ ಪೂರ್ವಕವಿಗಳ ಕೃತಿಗಳಿಂದ ಅವನು ತಕ್ಕಮಟ್ಟಿಗೆ ಉಪಕಾರ ಪಡೆದಿದ್ದಾನೆಂಬುದು ಕೆಳಗಿನ ನಿದರ್ಶನಗಳಿಂದ ಸುಸ್ಪಷ್ಟವಾಗುತ್ತದೆ. ಕವಿರಾಜಮಾರ್ಗದ

ಒಂದೊಂದಱ ಸೌಂದರ್ಯಮ
ನೊಂದೊಂದೀಕ್ಷಿಸಲೊಡರ್ಚಿ ನಾಸಿಕಮಡ್ಡಂ

ಬಂದಂದಮನೀಕ್ಷಿಸಿ ಪೆಱ
ಗಿಂದಂದೀಕ್ಷಿಸುವುವವಳ ನಿಡಿಯೆಸಳ್ಗಣ್ಗಳ್ 3-234

ಈ ಕಂದಪದ್ಯ ಅಲ್ಪಸ್ವಲ್ಪ ವ್ಯತ್ಯಾಸಗಳೊಡನೆ ಲೀಲಾವತಿಯಲ್ಲಿ (3-41) ಕಾಣಿಸಿಕೊಳ್ಳುತ್ತದೆ. ಸಂದರ್ಭ ಸಾಮ್ಯವಿಲ್ಲದಿದ್ದರೂ ಕಾದಲೆ ಬೊಜಂಗನೊಬ್ಬನನ್ನು ಕುರಿತು ಹೇಳುವ "ನೆನೆಯುದಿರೇನುಮಂ, ನೆನೆವೆಯುಪ್ಪೊಡೆ ನೀಂ ನೆನೆಯೆನ್ನ ಮಾಟ್ಟ ಬರ್ದನೆ ನೆನೆವಂದು" ಎಂಬ ಭಾಗ (ಲೀಲಾ 2-114) ಪಂಪಭಾರತದ "ನೆನೆಯದಿರಣ್ಣ ಭಾರತದೊಳಿಂ ಪೆಱರಾರುಮಂ" ಎಂಬ ಪ್ರಸಿದ್ಧ ವೃತ್ತವನ್ನು ತಕ್ಷಣ ನೆನಪಿಗೆ ತರುತ್ತದೆ. ಲೀಲಾವತಿಯಲ್ಲಿ ಬರುವ ರಂಭೆಯ ನೃತ್ಯದ ವರ್ಣನೆ ನೀಳಾಂಜನೆಯ ನೃತ್ಯದಿಂದ ಪ್ರೇರಿತವಾದಂತಿದೆ. ಲೀಲಾವತಿಯ

ಕಿಸುಸಂಜೆ ತೊಲಗೆ ತೊಳಗುವ
ಶಶಿಲೇಖೆ ಮಯೂಖ ನಿಕರಮಂ ಕೆದಱುವವೊಲ್
ಕುಸುಮಾಂಜಳಿಯಂ ತೆಳ್ಪಿನ
ಪೊಸಜವನಿಕೆ ತೊಲಗೆ ಪೊಳೆದದೇಂ ಕೆದಱಿದಳೋ (ಲೀಲಾ 4-106)

ಓಸರಿಸೆ ಸಂಜೆ ಜವನಿಕೆ
ಯೋಸರಿಸಿದ ತೆಱದೆ ರಾತ್ರಿನರ್ತಕಿ ಪುಗುತುಂ
ಸೂಸಿದ ಪುಷ್ಪಾಂಜಳಿಯೆನೆ
ಭಾಸಿಸಿದುವು ಗಗನರಂಗದೊಳ್ ತಾರಗೆಗಳ್ (ಲೀಲಾ 10-24)

ಈ ಎರಡು ಕಂದಗಳನ್ನು ಆದಿಪುರಾಣದ ಕೆಳಗಣ ಕಂದದೊಡನೆ ಹೋಲಿಸಿ ನೋಡಬಹುದು.

ಓಸರಿಸಿದ ಜವನಿಕೆಯೊಡ
ನೋಸರಿಸಿದನಿಸಲೆ ಕಂತು ಪುಷ್ಪಾಂಜಲಿಯಂ
ಸೂಸಿದ ಪದದೊಳೆ ಸಭೆಗಂ
ಸೂಸಿದನೊಡನೊಡನೆ ನನೆಯ ಮೊನೆಯಂಬುಗಳಂ 9–21

ಇವಲ್ಲದೆ ಮುಂದಿನ ಎರಡು ಕಂದ ಪದ್ಯಗಳನ್ನು ಅಕ್ಕಪಕ್ಕದಲ್ಲಿಟ್ಟು ನೋಡಿದಾಗ ಹೋಲಿಕೆ ಕೇವಲ ಆಕಸ್ಮಿಕವೆನಿಸದೆ, ಒಂದರಿಂದ ಮತ್ತೊಂದು ಪ್ರೇರಿತವಾಗಿದೆಯೆಂದು ಧಾರಾಳವಾಗಿ ಹೇಳಬಹುದು:

ದಳದಳಿಸಿರೆ ಮುಕ್ಕುಳಿಸಿದ
ಬೆಳುದಿಂಗಳನುಗುಳ್ವ ನೆಯ್ದಿಲಲರ್ಗಳ ಸಿರಿ ತ
ನ್ನೊಳೆ ದಳ್ಳಿಸೆ ಬೆಳ್ಪೆಳಗಮ
ರ್ದೆಳಸುವ ಸುಸ್ನಿಗ್ಧದೃಷ್ಟಿಗಳ್ ಸುರವಧುವಾ (ಲೀಲಾ 4-112)

ಪೊಸವೆಳ್ದಿಂಗಳ್ ದೆಸೆದೆಸೆ
ಗೆಸೆದುದು ಕುಮುದವನಮಲರ್ದುದೆಂಬಂತಿರದೇ
ನೆಸೆದುಃದೊ ಕಟಾಕ್ಷಮಾಲಾ
ಪ್ರಸರಂ ಭ್ರೂಲಾಸ್ಯ ಸೌಂದರಂ ನರ್ತಕಿಯಾ ಆದಿ 9-34

"ಜಗಕೆ ಜಿನೇಂದ್ರರುಕ್ತಿಯೆ ಸರಸ್ವತಿಯಾಕೆಗೆ ರಮ್ಯ ರೂಪು ಚಿತ್ರಗುಣ ವಿಳಾಸ ಮಿಲ್ಲೆನಲವೇಡ" (ನೇಮಿ 1-38) ಎಂಬ ವಾಕ್ಯ "ಪರಮ ಜಿನೇಂದ್ರ ವಾಣಿಯೆ ಸರಸ್ವತಿ ಬೇಱದು ಪೆಣ್ಣರೂಪಮಂ ಧರಿಯಿಸಿನಿಂದುದಲ್ತು" (ಆದಿ 1-9) ಎಂಬ ಪಂಪೋಕ್ತಿಯ ಭಾಷಾಂತರವಲ್ಲವೆ? "ದೇವಕಿಗುರ್ವಿದ ಗರ್ಭದ ಚಿಹ್ನಂ ಮೂಡಿದುದಾ ಕಂಸಂಗೆ ಮಿಟ್ಟು ಮೂಡುವ ತೆಱದಿಂ" (ನೇಮಿ 7-37) ಎನ್ನುವ ಪದ್ಯಭಾಗಕ್ಕೆ "ನೇಸಱ್ ಮೂಡಿದುದು ಬಕಂಗೆ ಮಿಟ್ಟು ಮೂಡುವ ತೆಱದಿಂ" (ವಿಕ್ರ 3-27) ಎಂಬ ಪದ್ಯಭಾಗದಿಂದ ಸ್ಫೂರ್ತಿ ದೊರೆತಿರಬೇಕೆನ್ನುವುದರಲ್ಲಿ ಸಂದೇಹವಿಲ್ಲ. ಹೀಗೆಯೇ ಪಂಪಭಾರತದ "ಅಯನಯ ಪರಾಕ್ರಮೋಪಾಶ್ರಯಂಗಳಂ" (9-35) ಎಂಬ ಕಂದ ವನ್ನು ಲೀಲಾವತಿಯ "ಅಯನಯ ಪರನೆನಿಸಿದ ನಿನ್ನಯ ದೆಸೆಯುಮಂ" (4-36) ಎಂಬ ಕಂದಪದ್ಯದೊಡನೆ ಹೋಲಿಸಬಹುದು.

"ಪಡೆಯೆಡೆಯ ಕಡೆಯ ಬಡವರ್ಕುಡೆ ಪಡೆದನೊ" (ಗದಾ 1-37) ಎನ್ನುವ ರನ್ನನ ಪದಸರಣಿಯನ್ನು "ಲೋಕಮುಮನೆಱಗಿಸುವ ನಿಮ್ಮಡಿಯ ತಪೋರಾಜ್ಯಮೆ ಎಡೆಯ ಕಡೆಯ ಬಡವರುಮನೆಱಗಿಸಲಾಱದೆ" (ನೇಮಿ 6-22 ಗದ್ಯ) ಎಂದು ನೇಮಿಚಂದ್ರ ನಕಲು ಮಾಡಿದಂತಿದೆ. "ಇದು ನಿನ್ನೀಯೇಣನೆನ್ನೀಕ್ಷಣಕೆ ನೆಣಸಿ ತಾಂ ಬೆರ್ಚಿ ನೋಡಲ್ಕೊಂದು ದರ್ಪಕ್ಕಿದು, ನಿನ್ನೀಯಾಲವೆನ್ನೀಯಧರದಳದೊಳಾ ದೀರ್ಘಯಿಂ. ಪಣ್ತುಗರ್ವಕ್ಕಿದು..." (ಲೀಲಾ 2-46) ಎಂಬ ವೃತ್ತದಲ್ಲಿ "ಇದು ಲಾಕ್ಷಾಗೇಹದಾಹಕ್ಕಿದು ವಿಷಮ ವಿಷಾನ್ನಕ್ಕಿದು" (ಗದಾ 8-19) ಎಂಬ ರನ್ನನ ಸುಪ್ರಸಿದ್ಧ ವೃತ್ತದ ನಾದಲಯಗಳಿವೆ. "ನಿನ್ನಂ ಪೆತ್ತಳ್ ಮೊಲೆವೆತ್ತಳೆ ವೀರಜನನಿ ವೆಸರಂ ಪೆತ್ತಳ್" (ಗದಾ 4-55) ಎಂಬ ರನ್ನನ ನುಡಿನಾಣ್ಯವನ್ನು ಕರಗಿಸಿ ತನ್ನ ಟಂಕಸಾಲೆಯಲ್ಲಿ "ಅವನಂ ತೋಳ್ವಾಸದೊಳ್ ಕಟ್ಟಿ ತೂಗದೊಡಂ ಪೇೞ್ ಮೊಲೆ ವೊತ್ತನೇ ಅವನ ವೇಷಂಬೊತ್ತೆನಬ್ಬಾನನೇ" (ಲೀಲಾ 11-80) ಎಂಬ ಹೊಸನಾಣ್ಯ ವನ್ನು ತಯಾರುಮಾಡಿಕೊಂಡಂತಿದೆ.

"ಎಲೆ ಶೃಂಗಾರಾರ್ಣವಂ ಸಗ್ಗದಿನಿೞಿದತಿಶ್ವೇತಮೆಂಬನ್ನೆಗಂ" (ಲೀಲಾ 2-13) ಮತ್ತು, "ಮೃಗಮದದೊಳ್ ಪೊರಬ್ದು, ಪೊಸಸೌಸವದೊದ್ದೆಯೊಳಟ್ಟು, ಬ್ಬಿಟ್ಟು ಮಲ್ಲಿಗೆಯ ಪರಾಗದೊಳ್, ಪೊರೆದು ಕಪ್ಪುರದೊಳ್" (ಲೀಲಾ 10-39) ಎಂಬಲ್ಲಿ ಕಾದಂಬರಿಯಲ್ಲಿ ಬರುವ "ಎಲೆ ತಾರಾಗಂ ಹರಂ ಕಣ್ಣಿಡೆ ಕರಗಿದುದಂತಲ್ತು (3-12) ಮತ್ತು "ಕುಮುದರಜಂಗಳೊಳ್ ಪೊರೆದು ವಾಃಕಣ ಜಾಲಮನಾಂತು"[1] (3-11) ಎಂಬ ಪದ್ಯಗಳ ಪ್ರಭಾವವನ್ನು ಗುರುತಿಸಬಹುದು. ಗದ್ಯ ಭಾಗದಲ್ಲಂತು ನಯಸೇನನ

[1] ಇಲ್ಲಿಯ ಪದ್ಯಗಳನ್ನು ಕಾದಂಬರಿ ಸಂಗ್ರಹದಿಂದ ಉದ್ಧರಿಸಿದೆ.

ಶೈಲಿ ವಿಶೇಷವಾಗಿ ಪ್ರತಿಧ್ವನಿ ಕೊಡುತ್ತದೆ. ನೇಮಿಚಂದ್ರ ವಾಚ್ಯವಾಗಿ ಪೂರ್ವಕವಿ ಸ್ಮರಣೆ ಮಾಡದಿದ್ದರೂ, ಅವರು ಹಾಕಿಕೊಟ್ಟ ಹೆದ್ದಾರಿಯಲ್ಲಿ ನಡೆದು, ನಡುನಡುವೆ ಅವರ ಭಾವಾಲೋಚನೆ ಶೈಲಿಯನ್ನನುಕರಿಸಿ, ಅವರಿಗೆ ಮೌನಗೌರವವನ್ನು ಸಲ್ಲಿಸಿದ್ದಾನೆಂದೇ ಹೇಳಬೇಕು.

## ೧೨. ನೇಮಿಚಂದ್ರನ ಕಾವ್ಯಮಾರ್ಗ

ನೇಮಿಚಂದ್ರ ಕಾವ್ಯದ ಸ್ವರೂಪಲಕ್ಷಣ ಸಾಮರ್ಥ್ಯ ಪ್ರಯೋಜನಗಳನ್ನು ವಿದ್ವಜ್ಜನ ಸಮ್ಮತವಾಗುವಂತೆ ವಿವರಿಸಿ, ತನ್ನ ಕಾವ್ಯಗಳ ಶ್ರೇಷ್ಠತೆಯನ್ನು ಆತ್ಮ ವಿಶ್ವಾಸದಿಂದ ಘೋಷಿಸಿಕೊಂಡಿದ್ದಾನೆ! ಕೋಮಳಗುಣ, ಆಯ್ದಿಟ್ಟ ಪದ, ನುಣ್ಪುಗಳಿಂದ ಕಾವ್ಯ ಬಾಸಿಗವನ್ನು ಹೋಲುತ್ತಿರಬೇಕು; ರಸವೊಸರುತ್ತಿರಬೇಕು; ರಸಿಕರ ಮನಸ್ಸಿಗೆ ಹೊಸ ಇಂಪನ್ನು ಊಡುತ್ತಿರಬೇಕು; ವಾಚ್ಯಾರ್ಥಕ್ಕಿಂತ ಪ್ರತೀಯಮಾನಾರ್ಥ ಪ್ರಧಾನವಾಗಿರಬೇಕು; ರಸಭಾವ ಅಲಂಕಾರಗಳು ತುಂಬಿತುಳುಕುತ್ತಿರಬೇಕು; ಪದನ್ಯಾಸದಿಂದ ಇಂಬಾದ ವೃತ್ತಿಯಿರಬೇಕು; ರಸಾಲಂಕಾರಗಳಿಗೆ ತಕ್ಕ ರೀತಿ ಮಾರ್ಗಗಳು ರಂಜಿಸುತ್ತಿರಬೇಕು; ಪೊಸೆದೇಸೆಯಿಂದ ಶೋಭಾಯಮಾನವಾಗಿ ರಸಗ್ರೇಯದಂತಿರಬೇಕು (ಲೀಲಾ 1-62, 64, 66, 72, 73)

ಉತ್ತಮ ಕವಿ ಪಡೆದಿರಬೇಕಾದ ಗುಣ ವಿಶೇಷಗಳನ್ನು ನೇಮಿಚಂದ್ರ ನಿರೂಪಿಸಿದ್ದಾನೆ. "ಮಿಗೆ ಪದಮಿಡಲಱಿಯದ ನಾಲಗೆವೆಟ್ಟರ್, ಸದರ್ಥಮಂ ಕಾಣದ ಬಗೆಗುರುಡರ್ ಕಬ್ಬಿಗರಕ್ಕುಮೆ?" (ಲೀಲಾ 1-23) ಎಂದು ಹುಬ್ಬು ಕುಣಿಸುತ್ತಾನೆ. ಅಕ್ಷರದರಿದ್ರರಿಂದ ಕಾವ್ಯರಚನೆ[1] ಸಾಧ್ಯವಿಲ್ಲವೆಂದು (ಲೀಲಾ 1-67) ಕಡ್ಡಿ ತುಂಡಾಗುವಂತೆ ಹೇಳುತ್ತಾನೆ. "ಗಿರಿಯಂದದಿ ಎಂದುದನೆನುತಿರ್ಪರ್" ಕಲ್ದೆರ್ಗವಿಗಳೆಂದು (ಅದೇ 1-25) ಅಬ್ಬರಿಸಿದ್ದಾನೆ.

ಕವಿಯೆಂಬುವನು ಅಸಾಧಾರಣವ್ಯಕ್ತಿ; ಅವನು ಭೂಲೋಕದ ಬ್ರಹ್ಮ. ಆ ಬ್ರಹ್ಮನಿಗಿಂತಲೂ ಈ ಬ್ರಹ್ಮ ಮಿಗಿಲಾದವನು. ಇವನೊಬ್ಬ ವಿಶ್ವಾಮಿತ್ರ; ಶಾಪಾನುಗ್ರಹಸಮರ್ಥ. ಅವರು ಕರಿದನ್ನು ಬಿಳಿದು ಮಾಡಬಲ್ಲರು, ಬಿಳಿದನ್ನು ಕರಿದು ಮಾಡಬಲ್ಲರು. ಹೀಗಿರುವಾಗ "ಅವರನುಱದೆ ಕಿಡುವರ್ ಕೆಲಬರ್" (ಲೀಲಾ 1-9) ಎಂದು ನೇಮಿಚಂದ್ರ ಆಗ್ರಹಗೊಂಡಿದ್ದಾನೆ. ರೋಮಾಂಚಕರವಾದ ಕವಿ ಮಹಿಮೆಯನ್ನು ಅವನ ಬಾಯಿಂದಲೇ ಕೇಳುವುದೊಳ್ಳೆಯದು:

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮನಕ್ರಮಂ
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ ಹರಸಂ ನರನಿಕ್ಕಿ ಗಂಟಲಂ
ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿಬಂಧದೊಳಲ್ತೆ ಕಟ್ಟಿದರ್
ಮುಟ್ಟಿದರಿಕ್ಕಿ ಮೆಟ್ಟಿದರಿದೇನಳವಗ್ಗಳಮೋ ಕವೀಂದ್ರರಾ (ಲೀಲಾ 1-11)

---

[1] ಶಬ್ದದರಿದ್ರಂಗಕ್ಕುಮೆ ನವೀನ ಕಾವ್ಯಾರಂಭಂ ಎಂಬ ಹರಿಹರನ ಮಾತನ್ನೂ ಗಮನಿಸಿ.

ಮರನೀಗುಂ ಮಣಿಯಾಗುಮೊಂದು ಪಶುವೀಗುಂ ಕೇಳಿವೆಂದೋಳಿಯೊಳ್
ಪುರುಡಂ ಪುಟ್ಟಿಸಿ ಕಾಷ್ಠಮುಂ ಕೊಸರಿಪರ್, ಕಲ್ಲಲ್ಲಿ ನಾರೆತ್ತುವರ್
ಮರುಳಂ ಪೋ ಪುರುಳಾಗಿಪರ್ ಕಿವಿಗಳೊಳ್ ಪೀಯೂಷಮಂ ಪಿಂಡಲು
ರ್ವರೆಯೊಳ್ ಸಂದಕವಿ ಪ್ರವೇಕರೆ ವಲಂ ಬಲ್ಲರ್ ಪೆಜರ್ ಬಲ್ಲರೇ (ಅದೇ 1-13)

ಅವರು ಅಘಟನಘಟನಾ ಸಮರ್ಥರು; ಕವಿಗಳ ಕೃಪಾಕಟಾಕ್ಷಕ್ಕೊಳಗಾಗದಿದ್ದರೆ ರಾಮಕೃಷ್ಣಾದಿಗಳ ಪಾಡೇನಾಗುತ್ತಿತ್ತೊ? ಶ್ರವಣೇಂದ್ರಿಯದ ಮೂಲಕ ಸಮಸ್ತ ರಸಗಳನ್ನು ಕುಡಿಸುವ ಚಮತ್ಕಾರವನ್ನು ಕವಿ ಬಲ್ಲನೇ ಹೊರತು, ಬ್ರಹ್ಮ ಬಲ್ಲನೇ (ಅದೇ 1-12) ಎಂದು ಮುಡಿಗೆಯೆಸೆಯುತ್ತಾನೆ; "ರವಿಕಾಣದುದಂ ಕವಿಕಾಣ್ಬನೆನಿಪ್ಪ ವಚನಮೇಂ ತಪ್ಪುಗುಮೇ" (ನೇಮಿ 1-33) ಎಂದು ಅಟ್ಟಹಾಸದಿಂದ ನುಡಿಯುತ್ತಾನೆ. ಮಾಣಿಕಕೊಟ್ಟು ಮೊಸರುಕೊಳ್ಳುವ ಮರುಳನಂತೆ ಕವಿ ಚತುರ್ದಶಭುವನದ ಬೆಲೆಗೆ ಸಾಟಿಯಾದ ಕಾವ್ಯವನ್ನು ಕಾಂಚನಕಣಿಕೆಗೆ ಮಾರಕೂಡದೆಂದು ಎಚ್ಚರಿಕೆ ನೀಡುತ್ತಾನೆ. (ನೇಮಿ 1-46)

ಬೆಲೆಯಿಂದಕ್ಕುಮೆ ಕೃತಿ ಗಾ
ವಿಲ ಭುವನದ ಭಾಗ್ಯದಿಂದಮಕ್ಕುಂ ನೋಲ್ಪಂ
ಬೆಲೆಗೊಟ್ಟು ತಾರ ಮಧುವಂ
ಮಲಯಾನಿಲನಂ ಮನೋಜನಂ ಕೌಮುದಿಯಂ ಅದೇ 1-45

ನೇಮಿಚಂದ್ರನ ಮುತ್ತಿನಂಥ ಈ ಮಾತುಗಳಲ್ಲಿ ಪಕ್ಷಪಾತದ ಸೊವಡು ಎರಚಿದರೂ ಚಿರಕಾಲಿಕ ಸತ್ಯವಿದೆ.

ಇಂಥ ಕಾವ್ಯದ ರಸಾಸ್ವಾದನೆ ಗುಣಗ್ರಾಹಿಯಾದ ಸಮರ್ಥ ಸಹೃದಯನಿಂದ ಮಾತ್ರ ಸಾಧ್ಯ. ಲೋಕಶಾಸ್ತ್ರ ವಿಲೋಚನವಿಲ್ಲದ ನರನಿಗೆ ವಿವಿಧಕಲಾ ಚತುರನೆನಿಪ ಕವಿಯ ಕಾವ್ಯಾರ್ಥ ಗಗನಕುಸುಮವಾಗುಳಿಯುತ್ತದೆ (ಲೀಲಾ 1-18) ಕಡುಕಂಪನ್ನೂ ತಂಗಾಳಿಯನ್ನೂ ಎಂತು ಹಿಡಿಯಲು ಸಾಧ್ಯವಿಲ್ಲವೋ, ಬೆಳ್ದಿಂಗಳನ್ನೆಂತು ಕುಡಿಯಲು ಸಾಧ್ಯವಿಲ್ಲವೋ ಅಂತೆಯೇ ಕಾವ್ಯಾಮೃತಾಸ್ವಾದನ ಅವರ್ಣನೀಯ (ನೇಮಿ 1-31) ವೆಂದು ವಚನಿಸುತ್ತಾನೆ.

ಕಾವ್ಯಮೀಮಾಂಸೆಯ ಪ್ರವಚನಾನಂತರ ತನ್ನ ಕಾವ್ಯಗಳ ಹಿರಿಮೆಯನ್ನು ಕವಿ ವಿವರಿಸುತ್ತಾನೆ; ತಾನೇ ಬರೆದ ಪ್ರಶಂಸನ ಪತ್ರವನ್ನು ಪೀಠಿಕೆಗೆ ಲಗತ್ತಿಸುತ್ತಾನೆ. ವಿಭಾವಾನುಭಾವ ವ್ಯಭಿಚಾರಿ ಭಾವಗಳಿಂದ ಪರಿಪುಷ್ಟವಾಗಿ ಸ್ಥಾಯಿಭಾವದಿಂದ ಉತ್ತೇಜನಗೊಂಡ ಶೃಂಗಾರರಸ ಕಾವ್ಯದಲ್ಲೆಲ್ಲ ತುಂಬಿತುಳುಕುತ್ತಿದೆಯೆಂದೂ (ಲೀಲಾ 1-81), ಪ್ರಿಯರ ಗೆಯ್ಮೆಯಂತೆ ರಸಭಾವ ಮೇಳವಿಸಿದೆಯೆಂದೂ, ನಲ್ಲರ ಪ್ರೇಮ ಸಂದೇಶದಂತೆ ಮಾತುಗಳಿಂದ ಇಂಪು ಒಸರುತ್ತಿದೆಯೆಂದೂ, ಪ್ರಿಯರು ತೊಡಿಸಿದ ವಿಭೂಷಣದಂತೆ ಕಾವ್ಯಭೂಷಣ ಶೋಭಾಯಮಾನವಾಗಿವೆಯೆಂದೂ (ಅದೇ 1-82) ತಿಳಿಸಿ, ಕರ್ಣರಸಾಯನದಂತಿರುವ ಲೀಲಾವತಿಯನ್ನು ಬಾಯ್‌ಬಾಯ್

ಬಿಡುತ್ತಿರುವ ಚತುರಸ್ತ್ರೀಯರಿಗಾಗಿಯೂ ಕವಿಗಳಿಗಾಗಿಯೂ ರಚಿಸುತ್ತಿರುವುದಾಗಿ (ಅದೇ 1-84) ಹೇಳುತ್ತಾನೆ. ಇನ್ನೂ ಒಂದು ಹೆಜ್ಜೆ ಮುಂದೆಹೋಗಿ

> ಪಿರಿದನುರಾಗದೋದುವರನಾಲಗೆಗಳ್ಗಮರ್ದಾದುದೊಲ್ದು ಕೇ
> ಳ್ವರ ಕಿವಿಗಳ್ಗೆ ಮಾಣಿಕದ ಮಂಜರಿಯಾದುದು ಭಾವಿಸುತ್ತುಮಿ
> ರ್ಪರ ಬಗೆಗಳ್ಗೆ ಪೊಚ್ಚಪೊಸವೇಟದ ಪೆಣ್ಣವೊಲಾದುದಿಂಪಿನಿಂ
> ಸುರುಚಿರ ಕಾಂತಿಯಿಂ ಸೊಬಗಿನಿಂದೆಸೆವೀಕೃತಿ ನೇಮಿಚಂದ್ರನಾ
>
> ಅದೇ 1-77

ಎಂದು ಲೀಲಾವತಿಯ ಮೇಲ್ಮೆಯನ್ನು ಘೋಷಿಸುತ್ತಾನೆ. ನವರಸಾಲಂಕಾರ ಸಮೃದ್ಧವಾದ ನೇಮಿನಾಥ ಪುರಾಣವೊಂದು 'ನವ್ಯಕಾವ್ಯ' (ನೇಮಿ 1-36) ವೆಂದೂ, ಪರಮಾರ್ಥಸಾಧಕವೂ ಪಾಪವಿನಾಶಿಯೂ ಆದ ನೇಮಿನಾಮಸಂಕೀರ್ತನವೇ ನೇಮಿನಾಥ ಪುರಾಣದ ಉದ್ದೇಶವೆಂದೂ ಹೇಳಿ, ಆ ಕಾವ್ಯದ ಉತ್ಕೃಷ್ಟತೆಯನ್ನು ವ್ಯಾವರ್ಣಿಸುತ್ತಾನೆ:

> ರಸಮೊ ರಸಾಯನವೋ ಶ್ರುತಿ
> ವಸಂತಮೋ ಕಿವಿಗಳಮೃತಮೋ ನೇಮಿಯ ವಾಕ್
> ಪ್ರಸರಮದಱಿಸಕದಿಂ ನಿ
> ಪ್ಪೊಸತಾದುದು ಜಗಕೆ ನೇಮಿನಾಥಪುರಾಣಂ ಅದೇ 1-28

ನೇಮಿಚಂದ್ರ ಪ್ರಾಚೀನ ಸಂಪ್ರದಾಯದಂತೆ ಒಂದು ಲೌಕಿಕ ಕಾವ್ಯವನ್ನೂ ಒಂದು ಆಗಮಿಕ ಕಾವ್ಯವನ್ನೂ ರಚಿಸಿದ್ದಾನೆ. ಅವನ ಲೌಕಿಕಶ್ರದ್ಧೆ ಶೃಂಗಾರಕಾವ್ಯ ರಚನೆಗೂ ಧಾರ್ಮಿಕಶ್ರದ್ಧೆ ಪುರಾಣಕಾವ್ಯಸೃಷ್ಟಿಗೂ ಕಾರಣವಾದುವು. ಸಂಸಾರದಲ್ಲಿ ಬಿದ್ದಮೇಲೆ ಕಷ್ಟಕಾರ್ಪಣ್ಯಗಳು ಬಂದೇ ಬರುತ್ತವೆ. ಆದರೆ ಸದಾ ಅವುಗಳ ಬಗ್ಗೆ ಚಿಂತಿಸುತ್ತ, ತಲೆಯಮೇಲೆ ಕೈಹೊತ್ತು ಕುಳಿತು, ಜೀವನವನ್ನು ನಿಸ್ಸಾರಗೊಳಿಸುವುದು ತರವಲ್ಲ. ಪ್ರಪಂಚದಲ್ಲಿ ಸುಖವೂ ಇದೆ. ಮನುಷ್ಯನಾಗಿ ಹುಟ್ಟಿದ ಮೇಲೆ ಅದನ್ನನುಭವಿಸಲೇ ಬೇಕು. ಒಮ್ಮೆ ಜಾರಿಹೋದ ಸುಖ ಮತ್ತೆ ಕೈಗೆ ಸಿಗುವುದಿಲ್ಲ. ಪ್ರಣಯಸುಖಕ್ಕೆ ಈಡಾದ ಸುಖವಿಲ್ಲ. ಶೃಂಗಾರವಿಲ್ಲದ ಬಾಳು ಬರಡು, ಕಾಮ ಕೆಟ್ಟದ್ದಲ್ಲ; ಪುರುಷಾರ್ಥಗಳಲ್ಲೊಂದು. ಸತ್ಯಧರ್ಮಗಳು ದಡವಾಗುಳ್ಳ ಶೃಂಗಾರನದಿಯಲ್ಲಿ ಎಷ್ಟು ಮುಳುಗಿದರೂ ದೋಷವಾಗದೆಂದು ಕವಿಯ ಅಭಿಮತ. ಆದ್ದರಿಂದಲೇ 'ಧರೆ ಲೇಸೆಂಬಾಸೆಗಾಱಿಂ' (ನೇಮಿ 1-37) ಎಂಬುದಾಗಿ ತನ್ನನ್ನು ಕರೆದುಕೊಂಡು, ತನ್ನ ಜೀವನದರ್ಶನವನ್ನು ವ್ಯಕ್ತಪಡಿಸಿದ್ದಾನೆ. ಆ ಜೀವನದರ್ಶನ ಲೀಲಾವತಿಯಲ್ಲಿ ಮೂರ್ತಸ್ವರೂಪ ತಾಳಿದೆ. ಧರ್ಮಶ್ರದ್ಧೆ ಆ ಜೀವನದರ್ಶನದ ಜೀವಾಳ. "ಮಹಾಧರ್ಮದೊಳ್ ಮಚ್ಚರಕಾಱ" ನಾದ ಕವಿ ನೇಮಿ ನಾಮ ಸಂಕೀರ್ತನಾರ್ಥವಾಗಿ ಪುರಾಣವನ್ನು ರಚಿಸಿ, ಕೃತಕೃತ್ಯತೆಯನ್ನು ಪಡೆಯುತ್ತಾನೆ.

ನೇಮಿಚಂದ್ರ ಆತ್ಮವಿಶ್ವಾಸದಿಂದ ಮತ್ತು ಹೆಮ್ಮೆಯಿಂದ ಮಾಡಿಕೊಳ್ಳುವ ಆತ್ಮ

ಪ್ರಶಂಸೆ ಅತಿರೇಕದ ಪರಾಕಾಷ್ಠೆಯನ್ನು ಮುಟ್ಟುತ್ತಿದೆಯೆಂದರೆ ಕವಿಗೆ ಅಪಚಾರವೆಸಗಿದಂತಾಗುತ್ತದೆ. ನೇಮಿಚಂದ್ರನಂಥ ವಿದ್ವತ್ಕವಿ ಆತ್ಮಪ್ರತ್ಯಯದಿಂದ ಸ್ವವಿಷಯ ಹೇಳಿಕೊಳ್ಳುವಾಗ ಒಂದೆರಡು ಮಾತು ಅತಿಯಾಗಿ ತೋರಿಬಂದರೆ ಅಕ್ಷಮ್ಯ ಅಪರಾಧವಾಗುವುದಿಲ್ಲ. ಅವನೇ ಪ್ರತಿಪಾದಿಸಿರುವ ಕಾವ್ಯಮೀಮಾಂಸೆಯ ಸೂತ್ರಗಳ ಹಿನ್ನೆಲೆಯಲ್ಲಿ ಅವನ ಎರಡು ಕೃತಿಗಳನ್ನು ಒಟ್ಟಿಗೆ ಸಮೀಕ್ಷಿಸಿದಾಗ ಸ್ವಪ್ರಶಂಸೆ ಅತಿಯಲ್ಲವೆಂದು ನಿರ್ವಿಕಾರ ವಿವೇಚನೆಗೆ ತೋರದಿರಲಾರದು. ಭವಾವಳೀ ವರ್ಣನೆಯ ಶುಷ್ಕತೆಯಿಂದ ಪಾರಾಗಿ, ಮತೀಯ ಪ್ರಕ್ರಿಯೆಗಳ ವಾಸನೆಯಿಲ್ಲದೆ ರಚಿತವಾಗಿರುವ ಜೈನಪುರಾಣಗಳು ಅತಿವಿರಳ. ಇಲ್ಲಿ ನೇಮಿಚಂದ್ರ ಇತರರಿಗೆ ಮಾದರಿಯಾಗಿದ್ದಾನೆ. ನೇಮಿನಾಥ ಪುರಾಣ ಪರಿಪೂರ್ಣವಾಗಿದ್ದರೆ ಅವನಿಗೆ ಮಹಾಕವಿಪಟ್ಟ ಕಾದಿರುತ್ತಿತ್ತು. ಅವನು ಪೀಠಿಕೆಯಲ್ಲಿ ಸೂಚಿಸಿದ ಯೋಜನೆಯಂತೆ (ನೇಮಿ 1-40, 41) ಕೃತಿ ಪೂರ್ಣಗೊಳ್ಳಲಿಲ್ಲ. ಈ ಅಪೂರ್ಣತೆಗೆ ಮುಪ್ಪೋ ಸಾವೋ ಕಾರಣವಾಗಿರಬೇಕು. ವರ್ಣನೆಯ ಒಗ್ಗರಣೆಯಿಲ್ಲದೆ ಕಾವ್ಯಸೌಂದರ್ಯ ಪರಿಮಳಿಸುವುದಿಲ್ಲ; ಆದರೆ ಒಗ್ಗರಣೆ ಅತಿಯಾಗಿ ವಮನಕಾರಿಯಾಗಬಾರದು. ಲೀಲಾವತಿಯ ವರ್ಣನಾಂಶಗಳು ಆಧುನಿಕ ಅಭಿರುಚಿಗೆ ಒಗ್ಗುವುದಿಲ್ಲ. ಬಹುಶಃ ನಮಗಿಂತ ನೇಮಿಚಂದ್ರನಿಗೆ ಸಮಕಾಲೀನ ಕಾವ್ಯಾಭಿರುಚಿ ಸ್ವರೂಪ ಚೆನ್ನಾಗಿ ತಿಳಿದಿದ್ದಿರಬೇಕು. ವಸ್ತು ಘನವಾಗಿದ್ದು, ಸುವಿಧಾನ ಕೌಶಲಪ್ರದರ್ಶನಕ್ಕೆ ಅವಕಾಶವಿದ್ದು, ಪಾತ್ರಗಳು ಭವ್ಯವಾಗಿದ್ದು, ಭಾವವೈವಿಧ್ಯ ರಸೋತ್ಕರ್ಷ ಮತ್ತು ಲೋಕಾನುಭವಸಮಾವೇಶದ ಪ್ರಸಕ್ತಿಯಿದ್ದರೆ ಲೀಲಾವತಿಯ ಸ್ಥಾನಮಾನವೇ ಬೇರೆಯಾಗುತ್ತಿತ್ತು. ಸ್ವಯಂಕೃತಾಪರಾಧದ ರೂಪದಲ್ಲಿ ದುರದೃಷ್ಟದ ಶನಿ ಅವನ ಹೆಗಲೇರಿತ್ತು. ವಸ್ತುವಿನ ಆಯ್ಕೆಯಲ್ಲಿ ಅವನು ಎಚ್ಚರಿಕೆ ವಹಿಸಬೇಕಾಗಿತ್ತು.

ಆದರೂ ಅವನು ವಸ್ತುವಿನ ಆಯ್ಕೆಯಲ್ಲಿ ಹೊಸ ಜಾಡು ತುಳಿದನು. ರಮ್ಯಾದ್ಭುತವಾದ ಪ್ರಣಯಕಥೆಯನ್ನಾರಿಸಿದ್ದರಲ್ಲಿ ಅವನ ಸ್ವತಂತ್ರದೃಷ್ಟಿ ಕಾಣುತ್ತದೆ. ತೂಕದ ವಸ್ತುವಿಲ್ಲದಿದ್ದರೂ, ಪುಷ್ಟವಾಗಿ ಬೆಳೆದ ಪಾತ್ರಗಳಿಲ್ಲದಿದ್ದರೂ, ಮನೋಹರವಾದ ವರ್ಣನೆಗಳೂ ಸುಂದರವಾದ ಕಲ್ಪನೆಗಳೂ ನಿರರ್ಗಳವಾದ ಶೈಲಿಯೂ ಅವನ ಸಾಮರ್ಥ್ಯಕ್ಕೆ ಸಾಕ್ಷಿಯಾಗಿವೆ. ಅದರ ಜೊತೆಗೆ ನೇಮಿನಾಥಪುರಾಣವನ್ನೂ ಸೇರಿಸಿ ಸಮೀಕ್ಷಿಸಿದಾಗ, ಅವನು ಸುಪ್ರತಿಭೆಯ ಸತ್ವಶಾಲಿಯಾದ ಕವಿಯೆಂದೂ, ದ್ವಿತೀಯ ದರ್ಜೆಯ ಕವಿಗಳಲ್ಲಿ ಅಗ್ರಮಾನ್ಯನೆಂದೂ ಧೈರ್ಯವಾಗಿ ಹೇಳಬಹುದು.

## ೧೩. ಕವಿಯ ಪ್ರಭಾವ ಮುದ್ರೆ

ಇಷ್ಟಾದರೂ ನೇಮಿಚಂದ್ರ ಬಹುಜನಪ್ರಿಯನಾದ, ಐತಿಹ್ಯಗಳಿಂದ ಸುಪ್ರಸಿದ್ಧನಾದ ಪುಣ್ಯವಂತ ಕವಿ. ಈಚಿನ ಕವಿಗಳು ಸಂಕಲನಕಾರರು ಮತ್ತು ಲಕ್ಷಣಕಾರರು ಮಹಾಕವಿಗಳೊಡನೆ ಅವನ ಹೆಸರು ಮೇಳೈಸಿ ಹೊಗಳುತ್ತಾರೆ. ಅವನ ಆಗಮಿಕ ಕಾವ್ಯಕ್ಕಿಂತ ಲೌಕಿಕ ಕಾವ್ಯವೇ ಬಹು ಜನರ ಮನ್ನಣೆಗೆ ಪಾತ್ರವಾದಂತಿದೆ. ಅಷ್ಟಾದಶ ವರ್ಣನೆಗೆ ಎತ್ತಿದ ಕಾವ್ಯವಾದ್ದರಿಂದ ಪ್ರಾಚೀನ ಸಂಕಲನಕಾರರು ಲೀಲಾವತಿ

ಯಿಂದ ಉದ್ಧರಿಸಿರುವಷ್ಟು ಪದ್ಯಗಳನ್ನು ಮತ್ತೆ ಯಾವ ಕಾವ್ಯದಿಂದಲೂ ಉದ್ಧರಿಸಿದಂತಿಲ್ಲ. ಆದರೆ ಕೇಶಿರಾಜ ಕೆಲವೇ ಕೆಲವು ಅವತರಣಿಕೆಗಳಿಂದ ತೃಪ್ತನಾದಂತಿದೆ. ಕವಿಗಳ ದೃಷ್ಟಿಯಲ್ಲಂತು ಇವನೂ ಪಂಪರನ್ನರಂತೆ ಅನುಸರಣೀಯನಾದ ಆದರ್ಶ ಕವಿ. ಜನ್ನ 'ನೇಮಿಯುದ್ಯೋಗಿ'ಯೆನ್ನಲು, ಎರಡನೆಯ ಗುಣವರ್ಮ 'ನೇಮಿಯ ಚಮತ್ಕೃತಿ'ಯೆನ್ನಲು, ಕಮಲಭವ 'ನೇಮಿಚಂದ್ರ ಬುಧ'ನೆನ್ನಲು, ಭಾಸ್ಕರ (1424) 'ನೇಮಿಯ ರೀತಿ'ಯನ್ನು ಪ್ರಶಂಸಿಸುತ್ತಾರೆ. ಬಾಣನ ಕಾದಂಬರಿಯನ್ನು ಸುಡಿಸಿ ಲೀಲಾವತಿಗೆ ಕಪ್ಪನಿಡಿಸಿದಂತೆ ಒಂದು ಐತಿಹ್ಯವಿದೆ. ನಂಜುಂಡನ ರಾಮನಾಥ ಚರಿತದಲ್ಲಿ ಈ ಅರ್ಥ ಬರುವ ಕೆಳಗಿನ ಪದ್ಯವಿದೆ;

ಕಾದಂಬರಿಯ ಸುಡಿಸಿ ಲೀಲಾವತಿ
ಗಾದರದಿಂ ಕಪ್ಪನಿಟ್ಟು
ಮೇದಿನಿಯೊಳು ಮೆಚ್ಚಿಸಿದ ನೇಮಿಚಂದ್ರನ
ಪಾದಗಳನು ಬಲಗೊಂಬೆ 1-1-31

ದೊಡ್ಡಯ್ಯ (1550), ಬಾಹುಬಲಿ (1560) ಮತ್ತು ದೇವಚಂದ್ರ (1838)ರ ಗ್ರಂಥಗಳಲ್ಲಿಯೂ ಇದೇ ಕಥೆ ಉಲ್ಲೇಖಗೊಂಡಿದೆ.

ಇದರ ಜೊತೆಗೆ ಮತ್ತೊಂದು ಐತಿಹ್ಯವೂ ಪ್ರಚಾರದಲ್ಲಿದೆ. ಒಂದುದಿನ ಏಳಂದೂರಿನಲ್ಲಿ ನೇಮಿಚಂದ್ರನ ಲೀಲಾವತಿಯನ್ನು ಆನೆಯ ಮೇಲೆ ಅಂಬಾರಿಯಲ್ಲಿಟ್ಟು ಮೆರವಣಿಗೆ ಮಾಡುತ್ತಿದ್ದರು. ರಸ ಸೋರಿ ಕೆಳಗೆ ಬೀಳಬಾರದೆಂದು ಆನೆಯ ಹೊಟ್ಟೆಗೆ ತೊಟ್ಟಿಲು ಕಟ್ಟಿದ್ದರು. ಇದನ್ನು ನೋಡಿದ ಷಡಕ್ಷರಿ ಒಂದು ವರ್ಷದೊಳಗಾಗಿ ಲೀಲಾವತಿಗಿಂತಲೂ ಹೆಚ್ಚು ರಸಭರಿತವಾದ ರಾಜಶೇಖರ ವಿಳಾಸವನ್ನು ರಚಿಸಿದನಂತೆ. ಈ ಕಥೆ ಏನೇ ಇರಲಿ, ಲೀಲಾವತಿಯ ಪ್ರಭಾವಮುದ್ರೆ ರಾಜಶೇಖರವಿಳಾಸದ ಮೇಲೆ ಸಾಕಷ್ಟು ಅಚ್ಚೊತ್ತಿದೆಯೆಂದು ಹೇಳಬಹುದು.[2]

ಸರ್ವರ ಸಮ್ಮತಮೆನಗಿದು
ಗರ್ವದ ಮಾತಲ್ಲ ಶಾಸ್ತ್ರ ಲೌಕಿಕ ಕಲೆಯೊಳ್
ಜೀರ್ವರಿದ ನೇಮಿ ಜನ್ನರು
ಮಿರ್ವರೆ ಕರ್ಣಾಟಕೃತಿಗೆ ಸೀಮಾಪುರುಷರ್

ಎಂಬ ಮಧುರನ ಹೊಗಳಿಕೆ ಸ್ವಲ್ಪ ಅತಿಶಯಾಯಿತೆಂದೇ ಹೇಳಬಹುದು. 'ಸೀಮಾ

[1] ಆಖ್ಯಾತ ಪ್ರಕರಣದ 217 ನೆಯ ಸೂತ್ರದಡಿಯಲ್ಲಿ ಮಾತ್ರ ಲೀಲಾವತಿಯಿಂದ ತೆಗೆದ ಈ ವಾಕ್ಯಗಳಿವೆ: ಕವಿಗಳ್ ಕೃತಿಬಂಧದೊಳಕ್ಕೆ ಕಟ್ಟಿದರ್ ಮುಟ್ಟಿದರ್ ಮೆಟ್ಟಿದರ್; ಕೆಗೆದರ್ ಪೊಕ್ಕದ ಬಟ್ಟೆಯಂ (ಲೀಲಾ 3-93). ನಾಗವರ್ಮ ಹಿಂದಿನವನಾದ್ದರಿಂದ ಕಾವ್ಯಾವಲೋಕನದಲ್ಲಿ ಲೀಲಾವತಿಯ ಅಥವಾ ನೇಮಿನಾಥ ಪುರಾಣದ ಪದ್ಯಗಳು ಸಿಗುವುದಿಲ್ಲ.

[2] ಡಾ. ಆರ್. ಸಿ. ಹಿರೇಮಠ ಮತ್ತು ಡಾ. ಸುಂಕಾಪೂರ್ ಅವರು ಸಂಪಾದಿಸಿರುವ ರಾಜಶೇಖರ ವಿಳಾಸದ ಮುನ್ನುಡಿ (ಪುಟ LX-LXiii). ನೋಡಿ.

ಪುರುಷರ್' ಎಂಬ ಮಾತಿನ ಅವನ ಕಲ್ಪನೆಯಾಗಲೀ ವ್ಯಾಪ್ತಿಯಾಗಲೀ ಈಗ ಗ್ರಾಹ್ಯವಾಗುವುದಿಲ್ಲ. ಶಾಸ್ತ್ರಲೌಕಿಕ ಕಲೆಯಲ್ಲಿ ಇವನನ್ನು ಮೀರಿಸಿರುವ ಕವಿಗಳು ಬೇರೆ ಇದ್ದಾರೆ. ಜೈನಮತ ಕುಸಿದು ಚಂಪೂಪದ್ಧತಿ ಬಿಲವಾಗುತ್ತಿದ್ದ ಸಮಯದಲ್ಲಿ ಅವುಗಳನ್ನು ಪುನರುತ್ಥಾಪನೆಮಾಡುವ ದಿಟ್ಟತನ ತೋರಿಸಿದ್ದಕ್ಕಾಗಿ ಮಧುರ ಅವರನ್ನು ಸೀಮಾಪುರುಷರೆಂದು ಕರೆದಿರಬೇಕು. ಶೃಂಗಾರ ಕಾವ್ಯದಲ್ಲಿ ಜೈನ ಮತದ ವಾತಾವರಣವನ್ನು ಕಲ್ಪಿಸಿ ಹೊಸದಾರಿ ತುಳಿದದ್ದೂ ಆ ಬಿರುದಿಗೆ ಕಾರಣ ವಾಗಿರಬೇಕು. ಮಹಾಕವಿ ಎನ್ನುವ ಅರ್ಥದಲ್ಲಿ ಆ ಬಿರುದನ್ನು ಬಳಸದೆ ಸಂದರ್ಭೋ ಚಿತವಾಗಿ ಆ ಮಾತಿಗೆ ಸತ್ವಸಂಪನ್ನನಾದ ಕವಿ ಎಂಬರ್ಥವನ್ನು ಕಲ್ಪಿಸಿಕೊಂಡರೆ ತಪ್ಪಾಗಲಾರದು. ಒಟ್ಟಿನಲ್ಲಿ ನೇಮಿಚಂದ್ರ ಹಲವಾರು ತಲೆಮಾರುಗಳ ಕವಿ ಪರಂಪರೆಗೆ ಗುರುಸ್ಥಾನದಲ್ಲಿದ್ದುಕೊಂಡು ಸ್ಫೂರ್ತಿದಾಯಿಯಾಗಿ ಪ್ರೇರಕ ಶಕ್ತಿ ಯಾಗಿ, ಕಾವ್ಯ ಶರೀರಿಯಾಗಿ ಆ ಕವಿಕುಲವನ್ನು ತಿದ್ದುತ್ತ ಬೆಳಗುತ್ತ ಸೀಮಾ ಪುರುಷನಾಗಿ, ಕನ್ನಡಿಗರ ಹೃದಯಸಿಂಹಾಸನದಲ್ಲಿ ಶಾಶ್ವತ ಸ್ಥಾನ ಗಳಿಸಿಕೊಂಡಿ ದ್ದಾನೆ.

## ೧೪. ಪದ್ಮಾವತೀ ಉಪಾಸನೆ

ಶೃಂಗಾರ ಕಾವ್ಯವಾದ ಲೀಲಾವತಿಯಲ್ಲಿ ಮತಪ್ರಕ್ರಿಯೆಗಳ ತೊಡಕಿಲ್ಲದ ಪರಮತ ದ್ವೇಷದಿಂದ ಕಾಲುಷ್ಯಗೊಳ್ಳದ ಜೈನ ಮತದ ಸುಂದರ ವಾತಾವರಣವನ್ನು ಕವಿ ಕಲ್ಪಿಸಿದ್ದಾನೆ. ಕಾವ್ಯದಲ್ಲಿ ನಡುನಡುವೆ ಸಿದ್ಧರ ಯಕ್ಷಯಕ್ಷಿಯರ ತೀರ್ಥಂಕರರ ಸ್ತುತಿ ಪದ್ಯಗಳು ಧಾರಾಳವಾಗಿ ಬರುತ್ತವೆ. ಕಂದರ್ಪದೇವ ಪ್ರಣಯಕಾತರನಾಗಿ ಹುಚ್ಚನಂತೆ ಅಲೆದಾಡುತ್ತಿದ್ದರೂ ಸಿದ್ಧರ ದರ್ಶನದಿಂದ ಚಂದ್ರಪ್ರಭ ತೀರ್ಥಂಕರನ ಪೂಜೆಯಿಂದ ಅವನ ಮನಸ್ಸು ಪ್ರಫುಲ್ಲಗೊಳ್ಳುತ್ತದೆ. ಇಲ್ಲಿ ಬರುವ ಜೈನ ದೇವತೆ ಗಳಲ್ಲೆಲ್ಲ ಪದ್ಮಾವತಿಯ ಪ್ರಭಾವವೇ ಮೇಲುಗೈಯಾಗಿರುವಂತೆ ತೋರುತ್ತದೆ. ನೇಮಿನಾಥ ತೀರ್ಥಂಕರನ ಯಕ್ಷಿಯಾದ ಅಂಬಿಕೆಯ ಹೆಸರು ಸಹ ಮಿಂಚಿ ಮಾಯ ವಾಗುತ್ತದೆ. ಆದರೆ ಪಾರ್ಶ್ವನಾಥ ತೀರ್ಥಂಕರನ ಯಕ್ಷಿಯಾದ ಪದ್ಮಾವತಿ ಕಾವ್ಯದ ಅಧಿಷ್ಠಾನ ಶಕ್ತಿಯಂತಿದ್ದು, ಘಟನಾಸನ್ನಿವೇಶ ಪಾತ್ರಗಳ ತೊಡಕುಗಳೆಲ್ಲ ಅವಳ ಅನುಗ್ರಹದಿಂದ ಪರಿಹಾರವಾಗುವಂತೆ, ಅವಳ ಆಶೀರ್ವಾದ ಪರಿವೇಶ ಕಾವ್ಯದ ರಕ್ಷೆಯಾಗಿರುವಂತೆ ವರ್ಣಿತವಾಗಿದೆ. ಕವಿಯ ಪದ್ಮಾವತೀ ಪರವಾದ ಪಕ್ಷಪಾತ ನೇಮಿನಾಥ ಪುರಾಣದಲ್ಲಿಯೂ ವ್ಯಕ್ತವಾಗುತ್ತದೆ (6-16 ಗದ್ಯ). ಲೀಲಾವತಿ ಪದ್ಮಾವತಿಯ ವರಪ್ರಸಾದದಿಂದ ಜನಿಸಿದವಳು. ಮಕ್ಕಳಿಲ್ಲದ ವಿಭ್ರಮಲೇಖೆ ಕುಲ ದೇವತೆಯಾದ ಪದ್ಮಾವತಿಯನ್ನು ಸ್ತುತಿಸುವಲ್ಲಿ ಭಕ್ತಿಭಾವದ ಪ್ರಕರ್ಷವನ್ನು ಕಾಣ ಬಹುದು :

ಪರಸದ ದೈವಕ್ಕೆಲ್ಲಂ
ಪರಸಿ ಪರಿಶ್ರಮವನೆಯ್ದಲೇಂ ನಿನ್ನ ಪದಾಂ

ಬುರುಡಕ್ಕೆ ತುಂಬಿಯಾದೊಡೆ
ದೊರೆಕೊಳ್ಳವೆ ಕಂಪಿನಂತೆ ಬೇಟ್ಪವರಂಗಳ್ 7-40
ಕಟ್ಟಿದಪೆನಮಳ ಮಣಿಮಯ
ಪಟ್ಟಮನಾಂ ನಿನ್ನ ಬಾಳ ಪಟ್ಟದೊಳೊಳ್ಪಂ
ಕೊಟ್ಟತನು ಚಕ್ರವರ್ತಿಗೆ
ಪಟ್ಟಂಗಟ್ಟಿಸುವ ಮಗಳನೀವುದು ದೇವೀ 7-47

ಕಂದರ್ಪದೇವನಾದರೂ 'ಪದ್ಮಾವತೀ ಪ್ರೇರಿತಮಾರ್ಗದಿಂದ' ಕನಸಿನ ರಾಣಿಯನ್ನು ಹುಡುಕಿಕೊಂಡು ಹೋಗುತ್ತಾನೆ. "ದೈವಬಲಮುಳ್ಳವರ್ಗಾಗದುದುಂಟೆ ಲೋಕದೊಳ್," ಪದ್ಮಾವತಿಯು ಪಸಾಯದಣುಗಿನ ಕೂಸಾದುದರಿಂದ ಅವಳನ್ನು ಪೂಜಿಸಿದರೆ ಮನೋರಥ ಈಡೇರುತ್ತದೆಂದು ಸಖಿಯರು ನಿವೇದಿಸಿಕೊಂಡಾಗ ಲೀಲಾವತಿ ಕುಸುಮಪುರದ ಪೊಱಪೊೞಲ ವಸಂತಕದೋದ್ಯಾನದ ನಡುವೆ ವಸಂತಲಕ್ಷ್ಮಿಯಿರ್ಪಂತೆ ನೆಲಸಿ ನಿಂದ ಪದ್ಮಾವತಿಯಂ ಬಲಂಗೊಂಡು ನಿಡಿಪೊಡವಡಾಡಿ ನಿಜಪ್ರತಿಬಿಂಬದೊಳ್ ಮುಂದಾಡುವಂತೆ ಮಣಿಪೀಠದೊಳ್ ಪೆಱನೊಸಲನಿಟ್ಟು ಪೊಡೆವಟ್ಟು ಕೆಯ್ಗಳಂ ಮುಗಿದು ಮುಂದೆ ನಿಂದು,

ನೀವಾಗಕೆಱೆಯುಳಿಂದೀವರಲೋಚನೆ
ದೇವಸ್ತ್ರೀ ಚಿಕುರಪರಿವೃತಪಾದೆ ಪ
ದ್ಮಾವತಿ ವರದೆಯೆಮಗಕ್ಕೆ"

ಎಂದು ಪ್ರಾರ್ಥಿಸುತ್ತಾಳೆ. "ಉತ್ಪಲಿನಿಗಮೃತಕಿರಣಂ ಬರ್ಪಂತೆ" ನಿಜರಮಣ ಅವಳ ಬಳಿಗೆ ಬರುತ್ತಾನೆಂದು ಪದ್ಮಾವತಿ ಹರಸುತ್ತಾಳೆ; ಹರಕೆ ಕ್ಷಿಪ್ರವಾಗಿ ಫಲಿಸುತ್ತದೆ.

ಈ ವಿವರಣೆಯಿಂದ ನೇಮಿಚಂದ್ರನ ಕಾಲದ ಕರ್ನಾಟಕದ ಜೈನರಲ್ಲಿ ಪದ್ಮಾವತಿಯ ಉಪಾಸನೆ ತುಂಬ ಪ್ರಿಯವಾಗಿದ್ದಿರಬೇಕೆಂದು ತಿಳಿಯುತ್ತದೆ. ಜೈನ ದೇವತೆಗಳಲ್ಲಿ ತೀರ್ಥಂಕರರಿಗೆ ಅಗ್ರಸ್ಥಾನ; ಮೊದಮೊದಲು ಆ ಸಂಪ್ರದಾಯದಲ್ಲಿ ಸ್ತ್ರೀದೇವತೆಗಳಿಗೆ ಸ್ಥಾನವೇ ಇರಲಿಲ್ಲವೆಂದು ತೋರುತ್ತದೆ. ನೆರೆಹೊರೆಯ ವೈದಿಕ ಸಂಪ್ರದಾಯಾನುಯಾಯಿಗಳು ಪುರುಷದೇವರುಗಳ ಜೊತೆಗೆ ಸರಿಸಮನಾಗಿ ಸ್ತ್ರೀ ದೇವತೆಗಳನ್ನು ಪೂಜಿಸುತ್ತಿದ್ದಾಗ, ಹಿಂದೊಮ್ಮೆ ಆ ಗುಂಪಿನಿಂದಲೇ ಹೊರಸಿಡಿದು ಬಂದ ಜೈನರಲ್ಲಿ ಸ್ತ್ರೀದೇವತೆಗಳ ಅಭಾವದಿಂದ ಅತೃಪ್ತಿ ಅಂಕುರಿಸಿರಬೇಕು. ಆಗ ಪ್ರಾಯಶಃ ಪದ್ಮಾವತಿ ಅಂಬಿಕೆ ಜ್ವಾಲಾಮಾಲಿನಿಯರ ಕಲ್ಪನೆ ರೂಪುಗೊಂಡು, ಕಾಲಕ್ರಮೇಣ ಅವರ ಉಪಾಸನೆ ಸಾರ್ವತ್ರಿಕವಾಗಿ ರೂಢಿಗೆ ಬಂದಿರಬೇಕು. ಕಾಲಾನಂತರದಲ್ಲಿ ಈ ದೇವತೆಯರಿಗೆ ಜೈನದೇವತೆಗಳ ಸಮೂಹದ ದ್ವಿತೀಯಸ್ಥಾನ ದೊರಕಿರಬೇಕು.

ಕ್ರಿಸ್ತಶಕ ಎರಡನೆಯ ಶತಮಾನದಿಂದ ತಮಿಳುನಾಡಿನಲ್ಲಿ ಯಕ್ಷಿಪೂಜೆ

ಸಾರ್ವತ್ರಿಕವಾಗಿ ರೂಢಿಯಲ್ಲಿದೆ. ಎಂಟನೆಯ ಶತಮಾನದಿಂದ ಇದಕ್ಕೆ ಶಾಸನಾಧಾರಗಳು ದೊರೆಯುತ್ತವೆ. ದಕ್ಷಿಣ ಆರ್ಕಾಟ್ ಜಿಲ್ಲೆಯ ತಿರುಕ್ಕೋವಿಲ್ ತಾಲ್ಲೂಕಿನ ಜೋಳವಾಂಡಿಪುರಂ ಹಳ್ಳಿಯ ಬಳಿಯ ಆಂಡಿಮಲೈ ಬೆಟ್ಟದಲ್ಲಿ ಪದ್ಮಾವತಿಯ ಮೂರ್ತಿಯಿದೆ. ಅದನ್ನು ಕಾಳಿಯಮ್ಮ ಎಂಬುದಾಗಿ ಜನ ಕರೆಯುತ್ತಾರೆ. ಈ ಪ್ರತಿಮೆ ಗೊಮ್ಮಟ ಮತ್ತು ಪಾರ್ಶ್ವನಾಥರ ನಡುವೆ ಪ್ರತಿಷ್ಠೆಗೊಂಡಿರುವುದರಿಂದ ಆ ದೇವತೆಗೆ ಹಿಂದೆ ತುಂಬ ಪ್ರಾಶಸ್ತ್ಯವಿದ್ದಿರಬೇಕು. ಈ ವಿಗ್ರಹ 10 ನೆಯ ಶತಮಾನದ್ದೆಂದು ಹೇಳಲಾಗಿದೆ. ಕೆಲವು ಕಡೆ ಜಿನನನ್ನೇ ಮರೆಸಿಬಿಡುವಷ್ಟು ವಿಶೇಷ ಸ್ಥಾನವನ್ನು—ಜಿನನಿಗೆ ಸರಿಸಮಾನ ಸ್ಥಾನವನ್ನು ಕೊಡುವುದುಂಟು. ಆಂಧ್ರ ಪ್ರದೇಶದಲ್ಲಿಯೂ ಪದ್ಮಾವತಿಯ ಪೂಜೆ ಸಾಕಷ್ಟು ಜನಾದರಣೀಯವಾಗಿದ್ದಿರಬೇಕು. ಹಿರಂಗಲ್ಲಿನ ಬಳಿಯ ಅನುಮಕೊಂಡದ ಮೇಲೆ ಪ್ರತಿಷ್ಠಾಪಿತವಾಗಿರುವ ಪದ್ಮಾಕ್ಷಿ (1117) ಜೈನದೇವತೆ ಪದ್ಮಾವತಿಯ ನೆನಪು ತರುತ್ತದೆ.[1]

ಕನ್ನಡನಾಡಿನಲ್ಲಿ ಯಕ್ಷಿ ಪೂಜೆ ಕ್ರಿ. ಶ. ಎರಡನೆಯ ಶತಮಾನದಿಂದಲೂ ರೂಢಿಯಲ್ಲಿರುವುದಾಗಿ ತಿಳಿದುಬಂದಿದೆ. ಯಕ್ಷಿಯರಲ್ಲೆಲ್ಲ ಪದ್ಮಾವತಿಗೇ ಅಗ್ರಸ್ಥಾನ. ಅವಳೇ ಮುಖ್ಯದೇವತೆ. ಸಿಂಹನಂದಿ ಪದ್ಮಾವತಿಯ ವರದಿಂದ ಗಂಗರಾಜ್ಯವನ್ನು ಸ್ಥಾಪಿಸಿದನೆಂಬುದಾಗಿ ಐತಿಹ್ಯವಿದೆ. ಅವಳೇ ಶಾಂತರಸರ ಮನೆದೇವತೆ. ಜಿನದತ್ತ 9 ನೆಯ ಶತಮಾನದಲ್ಲಿ ಪದ್ಮಾವತಿಯ ಕೃಪೆಯಿಂದ ಹೊಂಬುಚ್ಚಪುರದಲ್ಲಿ ರಾಜ್ಯ ಸ್ಥಾಪನೆ ಮಾಡಿದನೆಂದು ಪ್ರತೀತಿಯಿದೆ. ಲೊಕ್ಕಿಗಿಡದಲ್ಲಿ ವಾಸಮಾಡುವುದರಿಂದ ಅವಳಿಗೆ ಲೊಕ್ಕಿಯಬ್ಬೆಯೆಂಬ ಹೆಸರೂ ಉಂಟು. 11-12 ನೆಯ ಶತಮಾನದ ಪ್ರಶಸ್ತಿಗಳಲ್ಲಿ 'ಪದ್ಮಾವತೀದೇವಿ ಲಬ್ಧವರಪ್ರಸಾದ'ರೆಂದು ಶಿಲಾಹಾರರೂ ರಟ್ಟರೂ ಕರೆದುಕೊಳ್ಳುತ್ತಾರೆ. ಬಾಸವೂರದ ಶಿಲಾಹಾರರೂ ಪದ್ಮಾವತಿಯ ಆರಾಧಕರು. 1182 ರ ಅಯ್ಯಾವಳೆಯ ಶಾಸನದಲ್ಲಿ ಪದ್ಮಾವತಿ ಆ ಊರಿನ ಆರಾಧ್ಯ ದೇವತೆಯಾಗಿದ್ದಳೆಂದು ಉಲ್ಲೇಖವಿದೆ.[2] ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಚಲಿತವಾಗಿರುವ ಈ ದೇವತೆಯನ್ನು ಕುರಿತ ಜಾನಪದ ಗೀತೆಗಳು ಅವಳ ಜನಪ್ರಿಯತೆಗೆ ಸಾಕ್ಷಿಯಾಗಿವೆ.

ಮೇಲಿನ ಸಂಗತಿಗಳಿಂದ ಪದ್ಮಾವತಿಯ ಉಪಾಸನೆ ಕನ್ನಡನಾಡಿನಲ್ಲೆಲ್ಲ ಪ್ರಚಾರದಲ್ಲಿತ್ತೆಂದೂ, ಪ್ರಾಯಶಃ ನೇಮಿಚಂದ್ರ ಆ ದೇವತೆಯ ಉಪಾಸಕನಾಗಿದ್ದಿರಬೇಕೆಂದೂ ನಿರ್ಣಯಿಸಬಹುದು.

## ೧೫. ಕೊನೆಯ ಮಾತು

ಕಾವ್ಯಕಲಾನಿಧಿ ಪ್ರಕಾಶನದಿಂದ ಮುದ್ರಿತವಾಗಿದ್ದ ಲೀಲಾವತೀ ಕಾವ್ಯದ ಪ್ರತಿಗಳು ದೊರಕುತ್ತಿರಲಿಲ್ಲವಾದ್ದರಿಂದ ಅದನ್ನು ಪುನರ್ಮುದ್ರಿಸಬೇಕೆಂದು ಯೋಚಿಸಲಾಯಿತು. ಅವಶ್ಯವೆಂದು ತೋರಿದಾಗ ಪ್ರಾಚ್ಯಸಂಶೋಧನ ಸಂಸ್ಥೆಯ ಕೆ 14 (ಘ), ಕೆ 172 (ಜ) ಮತ್ತು ಕೆ 371 (ಕ) ಈ ಮೂರು ಹಸ್ತಪ್ರತಿಗಳನ್ನು ಬಳಸಿ

---

[1] Jainism in Karnataka by Sharma p 13 : [2] ಈ ವಿವರಗಳನ್ನು ಶ್ರೀ ಪಿ. ಬಿ. ದೇಸಾಯಿಯವರ Jainism in South India ಎಂಬ ಗ್ರಂಥದಿಂದ ಸಂಗ್ರಹಿಸಿದೆ.

ಕೊಂಡು ಈ ಮುದ್ರಣವನ್ನು ಸಿದ್ಧಪಡಿಸಿದೆ. ಕಾವ್ಯಕಲಾನಿಧಿ ಪ್ರಕಾಶನದ ಮುದ್ರಣವನ್ನು ಪ ಎಂಬ ಸಂಕೇತದಿಂದಲೂ ಅದರಲ್ಲಿರುವ ಪಾಠಾಂತರಗಳನ್ನು ಗ ಎಂಬ ಸಂಕೇತದಿಂದಲೂ ಗುರುತಿಸಿದೆ. ಕಾರಣಾಂತರಗಳಿಂದ ಸಂಪಾದನ ಕಾರ್ಯದಲ್ಲಿ ಕೆಲವು ಲೋಪಗಳೂ ಅಚ್ಚಿನ ದೋಷಗಳೂ ಉಳಿದಿವೆಯೆಂಬ ವಿಷಯ ಸಂಪಾದಕರಿಗೆ ತಿಳಿದಿದೆ.

ನನ್ನ ವಿದ್ಯಾಗುರುಗಳಾದ ಮಾನ್ಯ ಶ್ರೀ ಕೆ. ವೆಂಕಟರಾಮಪ್ಪನವರ ಜೊತೆಯಲ್ಲಿ ಈ ಗ್ರಂಥವನ್ನು ಸಂಪಾದಿಸುವ ಅವಕಾಶ ದೊರೆತದ್ದು ಅತ್ಯಂತ ಹರ್ಷದಾಯಕವಾದ ಸಂಗತಿಯಾಗಿದೆ. ವಯೋನುಗುಣವಾದ ಆಯಾಸವನ್ನು ಲೆಕ್ಕಿಸದೆ ಹಲವಾರು ಸಂಜೆಗಳನ್ನು ಈ ಕಾರ್ಯಕ್ಕಾಗಿ ವಿನಿಯೋಗಿಸಿದರಲ್ಲದೆ, ದೀರ್ಘವಾದ ಶಬ್ದಕೋಶವನ್ನು ಸಿದ್ಧಗೊಳಿಸಿದ್ದಾರೆ. ಅವರಿಗೆ ನನ್ನ ಗೌರವಪೂರ್ವಕವಾದ ಪ್ರಣಾಮಗಳು ಸಲ್ಲಬೇಕಾಗಿವೆ.

ಮಾನ್ಯ ಮಿತ್ರರಾದ ಶ್ರೀಮಾನ್ ಎಚ್. ಎಂ. ಶಂಕರನಾರಾಯಣರಾಯರ ಸಹಾಯವಿಲ್ಲದೆ ಈ ಗ್ರಂಥ ಮತ್ತೆ ಬೆಳಕು ಕಾಣುತ್ತಿರಲಿಲ್ಲ. ಅವರ ಅದಮ್ಯ ಧೈರ್ಯಸಾಹಸಗಳಿಗಾಗಿ ಸಂಪಾದಕರು ಕೃತಜ್ಞರಾಗಿದ್ದಾರೆ.

ಪ್ರಾಚ್ಯ ವಿದ್ಯಾಸಂಸ್ಥೆಯ ಡೈರೆಕ್ಟರ್ ಆದ ಶ್ರೀಮಾನ್ ಎಚ್. ದೇವೀರಪ್ಪನವರೂ, ಅಸಿಸ್ಟಂಟ್ ಡೈರೆಕ್ಟರ್ ಆದ ಶ್ರೀ ಬಿ. ಎಸ್. ಸಣ್ಣಯ್ಯನವರೂ ಅನೇಕ ರೀತಿಗಳಲ್ಲಿ ನೆರವು ನೀಡಿದ್ದಾರೆ. ಅವರಿಗೂ ನಮ್ಮ ವಂದನೆಗಳು.

16-4-66 **ದೇ. ಜವರೇಗೌಡ**

ಗುರುಕೃಪಾ, ಮೈಸೂರು—2



ನೇಮಿಚಂದ್ರ ವಿರಚಿತ

# ಲೀಲಾವತೀ ಪ್ರಬಂಧಂ

# ನಾಯಕಾಭ್ಯುದಯ ವರ್ಣನಂ

## ಪ್ರಥಮಾಶ್ವಾಸಂ

ಶ್ರೀಪಾದಾಕ್ರಾಂತಲೋಕಂ, ಪರಮಹಿಮಕರಂ, ಸೂ[1]ತನ[1]ಕ್ಷತ್ರಕಾಂತಂ, ತಾಪಧ್ವಾಂತಾಪಸೋದಕ್ಷ ಮನ್ವಮೃತಕಲಾವಲ್ಲಭಂ, ವಿಶ್ವವಿದ್ಯಾಕೂಪಾರೋಜ್ಜೀವಜೈವಾತೃಕನತನುಕೃ[2]ತಸ್ವಾಂತ[2] ಸೌಖ್ಯಂ, ತ್ರಿಲೋಕೀದೀಪಂ ತಳ್ಕೈಸುಗೆಸ್ಮನ್ಮತಿಕುಮುದಿನಿಯಂ ನೇಮಿಚಂದ್ರಂ ಜಿನೇಂದ್ರಂ ೧

ವಿಧುಕಾಂತಂ, ಕಾಮದಂ, ಪ್ರೋದ್ಧತಮಕರಪತಾಕಂ, ನತಭ್ರೂಲತಾಪುಷ್ಪಧನುರ್ಲೇಖಂ, ಮನೋಲಕ್ಷ್ಯಕಮಸೃಣದರಸ್ಮೇರನೇತ್ರಪ್ರಸೂನಾಯುಧನುದ್ಯದ್ವ್ಯಾರತೀಶಂ, ಕುಡುಗೆಮಗಮೃತಶ್ರೀಸಮುತ್ಕಂಠೆಯಂ, ಸನ್ಮಧುರಾಜಶ್ರೀಮನೋಜ್ಞಂ, ಜಿನವದನಮಯಂ [3]ಮ[3]ನ್ಮಥಂ, ದಿವ್ಯರೂಪಂ

ಆಯತದಿವ್ಯಮೂರ್ತಿ, ಶಿವಸೌಖ್ಯಕರಂ, ಹರಿಪೂಜ್ಯನೂರ್ಜಿತಶ್ರೀಯುವತೀಶ್ವರಂ, ಮಧುವಿರುದ್ಧವಿಭೂತಿ, ವಿಯೋಗಿಚಿತ್ರಮಂ ನೋಯಿಸದೊಂದಿ ನಿಂದ, ರತಿರಾಗಮನಾಗಿಸದತ್ಯಪೂರ್ವಪುಷ್ಪಾಯುಧನೀವನಕ್ಕೆಮಗೆ, ಶಾಂತಿಜಿನಂ, ವೃಜಿನೈಕಶಾಂತಿಯಂ ೩

ಒಱಲದೆ ಪುಷ್ಪಬಾಣಹತಿಯಿಂ, ಪುಳಕಂಗಳನಾನದುಣ್ಮೆ ನಾಣಱಿಯದೆ, ಜಾಣನಿ[4]ಕ್ಕ[4]ದೆ, ಬೆಮ[5]ರ್ತಱು[5]ತ್ತಾಱದೆ, ತೀರ್ದು ತಾನೆ ಮೆಯ್ಕಟಲೆ ಕಡಂಗಿ ಮುಕ್ತಿಯೊಡಗೂಡಿದ ಪೆಂಪಿನ ಸೌಖ್ಯದಿಂಪು ಪೊಂಪುಱಿಯೆನಿಸಿರ್ದ, ಸಿದ್ಧರೆಮಗೀಗೆ, ವಿಶುದ್ಧರಭೀಷ್ಟಸಿದ್ಧಿಯಂ ೪

ಜಿನಪದಬೋಧವಾರ್ಧಿಭವೆ, ಭವ್ಯಮನೋಹ[6]ರ[6]ಕಾಂತೆ, ಕಾಮಸಂಜನನಿ, ಯಶೋವಿಕಾಸಿನಿ, ಗು[7]ಣೀಕೃತ[7]ಸಂಸೃತಿದೋಷೆ, ಪುಣ್ಯಭಾಗಿನಿ, ಭುವನ[8]ಪ್ರಬೋ[8]ಧಿನಿ, ಸುಖಾಮೃತದಾಯಿನಿ, ಬಂದು ನೇಮಿಚಂದ್ರನ ಮುಖಪದ್ಮದೊಳ್, ಸಿರಿವೊಲಿರ್ಪ ಸರಸ್ವತಿ ನಿಲ್ಕೆ ನಲ್ಮೆಯಿಂ ೫

ಬಱದೆ, ಮರಲ್ದರಲ್ದ ಕುಕವಿವ್ರಜಶಾಲ್ಮಲಿಯಂ ಮಲಂಗದೆ, ಬ[9]ಱುಸದೆ, ದುರ್ವಿವೇಕಮುಖಕುಟ್ಮಲದಿಂದವಗಂಧಮಂ, ಮರುಳ್ದೆಱಗದೆ ಮುಗ್ಧಚಂಪಕದೊಳೊಲ್ಲದೆ, ಸರಸ್ವತಿಯೆಂಬ ತುಂಬಿ ಬಂದೆಱಗುಗೆ, ನೇಮಿಚಂದ್ರನ ನವಸ್ಮಿತಜಾತಮುಖಾಂಬುಜಾತದೊಳ್ ೬

---

1 ತ್ನ (ಕ) 2 ತಾಶ್ರಾಂತ (ಗ ಘ) 3 ಮಾ (ಖ) 4 ಕ್ಕ (ಕ) 5 ರ್ತಱು (ಗ ಘ)
6 ೦ (ಗ) ರೆ (ಘ) 7 ಣತ್ರಯ (ಕ) 8 ಪ್ರಮೋ (ಗ ಘ) 9 ಚ್ಚ (ಕ ಘ)

ಎನಗೆ ಸಮಂತಭದ್ರನೆ ಕವೀಶ್ವರರೊಳ್, ಸಕಲಾಕಲಂಕದೇ
ವನೆ ವರವಾದವಿದ್ಯರೊಳಶೇಷವಿಶೇಷಕಪೂಜ್ಯಪೂಜ್ಯಪಾ
ದನೆ ಪದವಾಕ್ಯಕೋವಿದರೊಳತ್ಯಭಿ[1]ನೂತನರನ್ನ[1]ರಪ್ಪ ಮ
ತ್ತಿನ ಕವಿವಾದಿಶಾಬ್ದಿಕರೊಳಾರ್ಗೆನಿತುಳ್ಳೊಡಮುಳ್ಕುಱುಳ್ಳೊಡಂ

ಪಾಷಶುಭೋದಯಮಂ ವಾ
ಗ್ವ್ಯಾಪಾರದಿನನತಸತರ್ಗೆ ಮಾೞ್ಕುಂ, ಸಹಜಂ
ಕೋಪಪ್ರಸಾದಮೆಂದೊಡೆ
ಶಾಪಾನುಗ್ರಹಸಮರ್ಥರಲ್ಲರೆ ಕವಿಗಳ್ ೮

ಕಡುಗೆಱುದಯಶಂ, ಪೆಸರಿಡೆ
ಕಡುವಿಳಿದಾಯಿತ್ತು ಕೀರ್ತಿ, ಕವಿಗಳ್ ಕಱುದೆಂ
ದೊಡೆ ಕಱುದವರ್ಗಳ್ ಬಿಳಿದೆಂ
ದೊಡೆ ಬಿಳಿದೇಕವರನುಱುದೆ ಕಿಡುವರ್ ಕೆಲಬರ್ ೯

ಸುಭಗಕವಿತ್ವಪಕ್ಷಶುಭದ
ಸ್ವಭಾವಸರಸಪ್ರಬಂಧಬಂಧುರಗುಣಸೌ
ರಭಮಂ, ಪೊತ್ತೆಸಗುವ ವಾ
ಗ್ವಿಭವಮುಮುಂಟಾದೊಡವನೆ ಸೇವ್ಯಂ ಜಗದೊಳ್ ೧೦

ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ, ವಾಮನಕ್ರಮಂ
ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ, ಹರನಂ ನರ[2]ನೊತ್ತಿ[2] ಗಂಟಲಂ
ಮೆಟ್ಟುಗೆ ಮೆಟ್ಟದಿರ್ಕೆ, ಕವಿಗಳ್ ಕೃತಿಬಂಧದೊಳಲ್ತೆ ಕಟ್ಟಿದರ್
ಮುಟ್ಟಿದ[3]ರೊತ್ತಿ[3] ಮೆಟ್ಟಿದರದೇನಳವಗ್ಗಳಮೋ, ಕವೀಂದ್ರರಾ ೧೧

ಕಿವಿಯಿಂದೀಂಟಿಸುವರ್ ಸಮಸ್ತ ರಸಮಂ, ತೋರ್ಪರ್ ಸರೋಜಾತಮಂ
ಯುವತೀಪ್ರೌಢಲತಾಗ್ರದೊಳ್, ಕು[4]ಮುದ[4]ಪೊಂದೊಂದಲ್ಲಿಯಾ ಬಾಲಪ
ಲ್ಲವಮಂ ಪುಟ್ಟಿಪರಾರ್ಯಮೋಹನಮುಮಂ ಮಾಳ್ಪೀ ಚಮತ್ಕಾರಮಂ
ಕವಿಗಳ್ ಬಲ್ಲವೊಲನ್ಯರೆತ್ತಱುವರಂತಾ ಬ್ರಹ್ಮನುಂ ಬಲ್ಲನೇ ೧೨

ಮರನೀಗುಂ, ಮಣಿಯಾಗು, ನೊಂದುಪಶುವೀಗುಂ, ಕೇಳಿಮೆಂದ್ರೋಳಿಯೊಳ್
ಪುರುಡಂ ಪುಟ್ಟಿಸಿ, ಕಾಪ್ಪಮಂ ಕೊನರಿಪರ್, ಕಲ್ಲಲ್ಲಿ ನಾರೆತ್ತುವರ್,
ಮರುಳಂ ಪೋ, ಪುರುಷಾಗಿಪರ್, ಕಿವಿಗಳೊಳ್ ಪೀಯೂಷಮಂ ಪಿಂಡಲು
ರ್ವರೆಯೊಳ್ ಸಂದ ಕವಿಪ್ರವೇಕರೆ ವಲಂ ಬಲ್ಲರ್, ಪೆಱರ್ ಬಲ್ಲರೇ ೧೩

[1] ನೂತನನಂತ (ಗ ಫ) [2] ನಿಕ್ಕಿ (ಖ ಫ) [3] ರಿಕ್ಕಿ (ಖ) [4] ಸುಮ (ಕ)

ನಿಶ್ಚಿತಮಿದೆನಗೆ,ಸಕಲವ
ಚಶ್ಚತುರಜನೋಪದೇಶದಿಂ,ಪಿಶುನವಚೋ
ವೃಶ್ಚಿಕವಿಷಹರಮಖಿಳವಿ
ಪಶ್ಚಿನ್ನುತಿಮಂತ್ರಮೆಂಬುದಿನ್ನುಂ ಮುನ್ನುಂ ೧೪

ಕಾಯಮಿರೆ,ಮನಮನಂಗಜ
ಸಾಯಕಮುರ್ಚುವವೊಲುರ್ಚದಿತರೇಷು,ಕುಶಾ
ಗ್ರೀಯಮತಿ ಕವಿಜನಾಭಿ
ಪ್ರಾಯಮನಱುವಂತೆ ಪೆಱಸದೇನಱುದಪನೇ ೧೫

ಅಧಮಕೃತಿವೇಣುವಿದಳನ
ವಿಧುರಿತಮೃತ್ತಱುಗುವುರಸವಿಬುಧಭ್ರಮರಂ,
ಬುಧವಿಧುವಿಕಸಿತ,ಸುಕವಿ
ಪ್ರಧಾನಕೃತಿಕುಮುದಮಧುರಮಧುರಸದಿಂಪಂ ೧೬

ಕವಿಗ[1]ಳ,ಬ[1]ಸುಟ್ಟ ಬಗೆಯುಂ,
ತವಗುಂಟೆ, ವಿದಗ್ಧಹೃದ್ಯಕಾವ್ಯವಿಚಾರ
ಕ್ಕವಟವಿಸಿ, ಗಂಟಲೊಡೆದೊಣ
ಗುವಿನಂ, ಬಾಯ್ಮಾಟ್ಪರೇಕೆ,ಬೆಳ್ಳಕ್ಕರಿಗರ್ ೧೭

ಔಚಿತ್ಯವೇದಿ,ವಿವಿಧಕ
ಲಾಚತುರನೆನಿಪ್ಪ,ಕವಿಯ ಕಾವ್ಯಾರ್ಥಮದೇಂ,
ಗೋಚರಮೆ,ಲೋಕಶಾಸ್ತ್ರವಿ
ಲೋಚನಮಿಲ್ಲದ ನರಂಗೆ,ವಸುಧಾತಲದೊಳ್ ೧೮

ಊದುವ ತಣ್ಣೆಲರುಂ,ಶೀ
ತೋದಕಮುಮಸೇವ್ಯಮಲ್ತೆ ಹಿಮಸಮಯದೊಳಾ
ರಾದರಿಪರುಚಿತವಱಯದ
ವೈದಿಕಕವಿಗಳ,ಕವಿತ್ವಮಂ, ವಸುಮತಿಯೊಳ್ ೧೯

ಸೃಕ್ವದಿ[2]ಸು[2]ಗೆ ಸೊರೆ,ದುಷ್ಕವಿ
ಶಾಕ್ವರಸೇಂ,ಮೇದು,ಮೆಲ್ಕನಿಱಯದೆ,ಕಟ್ಟುಕಂ
ಠಕ್ವಣಿತಮಪರಿಮಿತಪರಿ
ಪಕ್ವತರೋದಾರಕಾವ್ಯಸಸ್ಯೋತ್ಕರಮಂ ೨೦

---

[1] ಳ್ಬ (ಕ ಫ) [2] ಸೊ (ಕ)

ಲೋಗರ ಬಗೆ[1]ಗೋ[1]ದಿಸೊಳಸು
ರಾಗಮನಾಗಿಸದೊಡೋದಿದಂಗೋದಿದೊಡೋ
ದಾಗದು, ಪೇಟಕ್ಕುಮೆ, ಮೊಲೆ
ನಾಗಂ, [2]ಕಿವಿ[2]ಗಿವುಡುವೀಟ್ವಿಸಂ, ಗುಪದುದೇ ೨೧

ಅಸ್ತವ್ಯಸ್ತಂ ಪದಮು
ಪ್ರಸ್ತುತಮೃತಿವಿಹಿತಮೃರ್ಧ[3]ಷೆ[3]ನೆ ದುಷ್ಕೃತಿಯಂ
ವಿಸ್ತಾರಿಸಿ, ಸಲೆ, ಸುಜನಶಿ
ರಸ್ತೋದಮನೇಕೆ ಮಸಗಿ ಮಾಟ್ಪರೊ ಕೆಲಬರ್ ೨೨

ಮಿಗೆ ಪದಮಿಡಲಱಿಯದ ನಾ
ಲಗೆವೆಟುವರ್, ಸಲೆ ಸ[4]ದ[4]ರ್ಥಮಂ ಕಾಣದ ಪೋ
ಬಗೆಗುರುಡರ್, ಬಗವೊಡೆ ಕ
ಬ್ಬಿಗರಕ್ಕುಮೆ, ಓದುಗೇಳದಕ್ಕರಗಿವುಡರ್ ೨೩

ನೀರೊಳಗಣ ಪೆಣ[5]ಸಂತೆವೊ[5]
ಲಾರೆದೆ[6]ವೊ[6]ಡಮುರುಳೆವರಿದು, ಪುರುಳಿಲ್ಲದಸಂ
ಕಾರದೊಳೆ ಜಾತು ಬಲ್ಮೆಗೆ
ಹಾರೈಸುವರೇಕೆ, ಬಯಕೆಗವಿಗಳ್ ಕೆಲಬರ್ ೨೪

ಎಂದುದನೆಸುತಿರ್ಪರ್ ಗಿರಿ
ಯಂದದಿನತಿನಿಶಿತಸುಕವಿವಾಕ್ಕುಲಿಶಂ ಬೀ
ಟ್ಪಂದೊಡಮೆರ್ದೆಯಂ ಸೀ[7]ಡ್ದೊ ಡ[7]
ಮೊಂದಕ್ಕರಮಿಲ್ಲೆ ನಿಪ್ಪ, ಕಲ್ಲೆರ್ದೆಗವಿಗಳ್ ೨೫

ಆಸುಂ ಬುಧರೊಡನೆ ಸೃಪಾ
ಸ್ಥಾನದೊಳಿ[8]ರ್ದಪ್ಪೆನೆಂದು[8]ಕುಕವಿಕದಂಬಂ,
ಬಾಸುದ್ದಮಪ್ಪುದೇಕು
ದ್ಯಾನದೊಳೊಡಸಿರವೆ, ಕಾಗೆಯುಂ ಕೋಗಿಲೆಯುಂ ೨೬

ಏವೊಟ್ಟುಮುಱಿಗುಮೋ, ವಿ
[9]ಸ್ತಾ[9]ಪಕಮೋ, ಕಾವ್ಯರಸವಿಶೇಷಕದೊಳ್, ದು
ವ್ಯಾಪ[10]ಶ[10]ದರ್, ಸುಕವಿಯಶೋ
ದೀಪಾಂಕುರದಗ್ಧಕರ್ಣಕೋಟರಕುಟಿಗಳ್ ೨೭

---

[1] ಡೋ (ಕ ಘ) [2] ತಲೆ (ಕ) [3] ಮ (ಕ) [4] ಮ (ಕ) [5] ದಂತಿರ (ಕ)
[6] ದೊ (ಖ) [7] ಬ್ದರು (ಕ) [8] ರ್ಪೆಂದಲೆದು (ಗ) [9] ಸ್ತಾ (ಕ) [10] ಯ (ಕ)

ಕಸವಂ ಕಿಟ್ಟಿಲ್ಲದೆ ಪೊಸ
ಸಸಿಗಳ್ [1]ವೈಗೊಳ್ಳ[1]ವೆತ್ತಿ ಕಳೆಯದೆ ಖಳತಾ
ಮಸಮಂ, ಬೇರ್ವೆರಸಿಂ ಪಸ
ರಿಸುಗುಮೆ, ಬುಧವಿಧುಗೆ, ವಿಮಳಕೃತಿದೀಧಿತಿಗಳ್ ೧೮

ತಕ್ಕರನೆ ಮಱಸಲೆಂದೆಡೆ
ವೊಕ್ಕೊಡೆ, ಖಳ[2]ರ[2]ಱವ[3]ರ[3]ಱದು ಕಳೆದಪ[4]ರ[4]ನಬ್ಬಿಂ
ಬಕ್ಕೆ ಮಱೆಯಪ್ಪ ಮುಗಿಲಂ
[5]ಮೊ[5]ಕ್ಕ[6]ನೆ ಪೋಗಿ[6]ಸದೆ ಪವನನೆನಗೇಂ ನಿನಗೇಂ ೧೯

ಒಳಗಱಿಯರ್, ಪೊಱಗಱಿಯರ್,
ವಿಳಸತ್ಕೃತಿಯನೆ ತಗುಳ್ದು ದೂಷಿಸಲುಜ್ಜೃಲ್ಲಂ
ಖಳಖಳರ್ಕೃತಿಪ್ರಸಾರಿತ
ಗಳರಪ್ಪರ್, ಗಳಿತಲಜ್ಜರೇಂ ಗಳ ಗೆಯ್ಯರ್ ೨೦

ಆತಂಗೆ ನಮಸ್ಕಾರಮು
ಚಾತುರ್ಯಂ ರಾಜತತಿಗೆ, ರಾಹುವ ವದನಂ
ಶೀತಾಂಶುಗೆ, ಕಾವ್ಯಮಣಿ
ಜ್ಯೋತಿಗೆ ದುರ್ಜನಪತಂಗಮಾವನಿನಾಯ್ತೋ ೨೧

ಕೇಳೆ, ಕಡುಸುರ್ಕಿ, ಕುಸಿದಪು
ದೇಳಿಸಿ ಗುಣಮೆಂದೊಡಮಮ ದೋಷಕ್ಕೊರ್ಮೆ
ನೀರ್ಗಳಂ ನಿಮಿರ್ದಪುದಿತಿವ್ವಾ
ಚಾಳರ ನಾಲಗೆಗೆ, ಜಿಗುಪ್ಸೆಯೇನಪ್ಪುದೊ ಪೇಳ್ ೨೨

ಪರಿಕಿಪೊಡೆ, ಪಿಶುನಸಗ್ಗದ
ಹರನೊಳ್ ಪುರುಡಿಸುವನೆಂದೊಡುಟಿದರ ಪುರುಳೇಂ,
ಕೊರಲೊಳ್ ವಿಷಮಂ ತಳೆದೊಡೆ
ಗಿರಿಶಂ, ತಾಂ ತಳೆದನಲ್ತೆ ತುದಿನಾಲಗೆಯೊಳ್ ೨೩

ನಿನಗೆ ನಗೆಯಲ್ಲದೇಂ ದು
ರ್ಜನನೆಂಬೀಪೆಸರ್ಗೆ ಮೆಯ್ಯುಗುರ್ವಿಸುವುದು ಕೇಳ್
ಕನಸಿನೊಳಂ, ಗರ್ದಭದ
ರ್ಶನಮುಗಿವಿನಮಾರ್ಗೆ ಮಾಡದಶುಭೋದಯಮಂ ೨೪

1 ಕೈಕೊಳ್ಳ (ಖ ಫ) 2 ನ (ಕ ಫ) 3 ನ (ಕ ಫ) 4 ನ (ಕ ಫ) 5 ನೊ (ಗ)
6 ಆಪೋಡಿ (ಕ ಫ)

ಭೀತನುಮಂ, ಖಳಕೃಪಣಕ
ಪೋತನುಮಂ ಪಡೆದು, ಲೋಕಮಂ ಕಿಡಿಸಿದ ಬ
ಮ್ಮೇತಿಯಲೆಯದೊಡೆ, ಮೊಗದೊಳ
ಗೇತರ್ಕೆ ಪಿತಾಮಹಂ ಚತುರ್ಮುಖನಾದಂ ೩೫

ಅತಿಪೀಡಿಸುಗುಂ, ಸ್ಥಾನ
ಚ್ಯುತನಾಗಿಯುಮಖಿಳಮಂ, ಖಳಂ, ವೃತ್ತಿವೀರು[1]
ತ್ಪತಿತಂ ಪಥಿಕರ ಪದತಳ
ಹತಿಯಂ, ಹತಕಂಟಕಾಂಕುರಂ ಮಾಡುವವೊಲ್ ೩೬

ಸೆತ್ತುಂ ಪಿಶುನಂ ಪೆಱಗಾರ್
ಪತ್ತಂ ಮಾಡದಿರನೆಂದು ಮಱುಗಿದಪುದು ಮ
ಚ್ಚಿತ್ತಂ, ಮೃತಮೂಷಮುಖಂ
ಮತ್ತೆನಿಸದೆ, ಬವಸಮೆಯ್ದಿ ಪವೊಲ್ಲುಂಬವಸಂ ೩೭

ಕಡೆಗಣಿಸಿದೊಡಂ ದರ್ಪಂ
ಗಿಡಿಸಿದೊಡಂ, ಕಳೆವುದರಿದು ಖಳನಂ, ರಸೆಯೊಳ್
ಮಡಗನೆ ಬಿದಿ, ಪದಮುಮನೇಂ
ಪಡೆದನೆ ಬಂದೇಕೆ ಪಿಡಿವುದುರಗಂ ಧರೆಯೊಳ್ ೩೮

ನೋಡಿರೆ ಸದ್ಗುಣಂಗಳನೆ ಕೇಳ್ದು ಕನಲ್ವ ಖಳಂ[2]ಗೆ,[2]ಕರ್ಣಮಂ ಮಾಡಲೆ ಪೋಗಿ, ಮಸ್ತಕಮನಯ್ಯೊ ವಿಧಾತ್ರನದೆಂತು ಸರ್ಪನೊಳ್ ಮಾಡಿದನಾಬುಧಂಗಮಿದು ಸರ್ಪನಿವಂ ಖಳನೆಂಬ ಬುದ್ಧಿ ಮೇಣ್ ಕೂಡದೊ ಕಂಡೊಡಂ, ಕಮಲಗರ್ಭನುಮಂ, ಖಳನಾಳಿಗೊಂಡನೋ ೩೯

ತಲೆಯಂ ತೂಗುವನೊರ್ವನುರ್ವಿ[3] ಕೆಲದೊಳ್, ಕಾಲ್ಕಬ್ಬಮಂ ಕಟ್ಟಿಕೋ ಟಲೆಗೊಂಡೂಲ್ವವನೊರ್ವನೊಲ್ದವರ ಚಾತುರ್ಯಕ್ಕೆ ಕೈ[4]ವಾರ[4]ಮಂ ಪೊಲೆಗೆಟ್ಟೀವವನೊರ್ವನಿಂತಕಟ, ಯಕ್ಷ್ಣೋಯಾದೃಶಸ್ತಾದೃಶೋ ಬಲಿಯೆಂಬುಕ್ತಿಗೆ, ದುರ್ವಿದಗ್ಧರೆ ವಲಂ ನೋಂತರ್, ಪೆಱರ್ ನೋಂತರೇ ೪೦

ನೆಲಕೆ, ನೆಗಡ್ತ್ರಗ[5]ರ್ಥ[5]ಮನೆ ಮಾಟ್ಪುದಱಿಂ, ಬಿದಿ ಮಾ[6]ಟ್ಪುದೇ[6]ಕೆ, ಗ ಲ್ಗಲಸಹಿಮಸ್ತಕಕ್ಕೆ ಮಣಿಯಂ, ಪಲವಾಗಿರೆ ಲೋಭಿಯೆಂಬ ಕಾ ವಲುಮನೊಱಲ್ದು ಮಾಡುವುದಱಿಂ[7]ದುಱ[7] ಮಾ[8]ಡನ[8]ದೇಕೆ, ಮತ್ತಮೊಂ ದೆಲವಮನೊಡನಂದೊಡೆದ ಗುಳ್ಳೆಯನೊಳ್ಳೆಯನಬ್ಜಸಂಭವಂ ೪೧

---

[1] ತೀರರೋ (ಫ) [2] ಸ್ವ (ಕ) [3] ರ್ಬ (ಕ ಫ) [4] ಚಾಗ (ಗ ಫ) [5] ರ್ತ (ಖ)
[6] ದನೇ (ಖ) [7] ಮಱ (ಕ) [8] ಡುವ (ಫ)

ಬೇಱು ಕವಿಗಳ್ಗೆ ವಿನಯಂ
ದೋಱದೆ, ಬೇಟ್ಪವರ್ಗೆ ಬೇಟ್ಪ ತೆಱದಿಂ ಧನಮಂ
ಬೀಱದೆ, ಬರ್ಕ್ಕುಮೆ, ನಿಂಬಿಯ
ಸೂಱೆಯೆ, ವಿಧುವಿಶದಕೀರ್ತಿ, ಭುವನತ್ರಯದೊಳ್ ೪೨

ಬಳ್ಳಿ ಮೊದಲಾಗಿ, ಮೊದಲೊಳ
ಗೆಳ್ಳನಿತುಂ, ಪೊನ್ನ ನಿಕ್ಕದೊಡೆ, ಪರ್ಬದು, ಪೊ
ನ್ನುಳ್ಳ ನರನಿತ್ತೊಡಲ್ಲದೆ
ಬೆಳ್ಳನೆ ಪರ್ಬುಗುಮೆ, ಕೀರ್ತಿಲತೆ ದಿಕ್ತಟಮಂ ೪೩

ಜೀವಿಸುಗೆ ವಜ್ರಲೋಭಿ ಯು
ಗಾವಧಿವರಮಲ್ಲದಂದು ಧಾತ್ರನ ಬಲದಿಂ
ಪಾವಾಗಿ ಪುಟ್ಟಿ, ಧನಮಂ
ಕಾವಂತುಟೆ, ಲೋಕಮೆಲ್ಲಮಂ ಮೆಲ್ಲದಿರಂ ೪೪

ಕಾಣನೆ ಜವನೇಕೆ ನಿಜ
ಪ್ರಾಣಮನಿಡುವನೊ ಮಡಂಗಿದೊಡವೆಯೊಳ್ಧಮಂ,
ಕ್ಷೋಣಿಯೊಳಗಬ್ಬೆಯಱಿಯದ
ಕೋಣೆಯುಮಾತೂಣನಾಡದೆಡೆಗಳುಮೊಳವೇ ೪೫

ಪಾಷಾಣಮುಮೊಳಗಾಗಿ, ವಿ
ಶೇಷಣಮಂ ಪಡೆದು, ದೇವಕುಳಮಕ್ಕುಮದೇಂ
ದೋಷಮೆ, ಪುರುಷಾಕಾರದ
ಪಾಷಾಣಮದೆಲ್ಲಿ ಬಾರ್ತೆಯಾದುದು, ಪೇೞಿಂ ೪೬

ನಿಲ್ಕ್ಮಾಸಸನೆಂಬರೆ, ನಿ
ಲ್ವಲ್ಮೀಕೋರಗಸಸಪ್ರತೀಕಾರಶ್ರೀ
ಗುಲ್ಮವ್ಯಾಧಿಯನೀ[1]ವಸ[1]
ಶಾಲ್ಮಲಿಯಂ, ಲುಬ್ಧನೆಂಬ ಗೃಹಲುಬ್ಧಕನಂ ೪೭

ಕಾಡಿ ಕೞೆಯದ ಘಟೋದ್ಘ್ನಿಯ,
ಕೋಡಿಯನೋಡಿಸದ ಕೆಱೆಯ, ಕುಡದೊಡಲೊಳಗ
[2]ಬ್ಬಾಕ್ಕೆ[2]ಡುವ ಕುಬುದ್ಧಿಯ್ವೋದಿನ,
ಕೇಡಂ ಕಾ[3]ಣ[3]ರೆ, ಕದರ್ಯ್ಯರೇಕೆಯೊ, [4]ಕೆಡುವರ್[4] ೪೮

---

1 ನತ (ಕ ಘ) 2 ಕ್ಕಾ (ಕ) 3 ದ (ಕ) 4 ಕಿವುಡರ್ (ಕಖಘ)

ಫಣಿಯ ಫಣಾಮಣಿಯುಂ,ವಾ
ರಣರದಮುಂ,ವ್ಯಾಘ್ರಚರ್ಮಮುಂ,ಚಮರಮೃಗೀ
ಗಣವಾಲಮುಮತಿಕೃಪಣನ
ಪಣಮುಂ,ಬಾಬಲ್ಕೆ,ಸಾರಪ್ಪಾರುಮನೆಂದುಂ ೪೯

ಸಾಯದ[1]ದೇವ[1]ಗೆ ಸುಡೆಯುಂ
ಸೀಯದೆ,ಸಲೆ ಪಿಶುನಶುನಕನೋಯದೆ,ತಿನೆಯುಂ
ನೋಯದ,ಬೇಯದ,ಬಾಯದ
ಕೀಯದ,ಪೆಣ[2]ನಲ್ತೆ[2],ಕುಡದ,ಕೊಳ್ಳದ,ಕೃಪಣಂ ೫೦

ಕರೆದುಚ್ಚಾಸನದಲ್ಲಿ ಕುಳ್ಳಿರಿಸಿ,ಪೂಜಾಪೂರ್ವಕಂ ಕಾವ್ಯಸಾ
ಗರನಂ,ಪೊಯ್ಯೊಡಮೆನ್ನದೇಕೆ ನೆನೆಗುಂ,ಮೂರ್ಖಂ,ಮಹೋತ್ತುಂಗಮಂ
ದಿರಮಧ್ಯಸ್ಥಿತಪೀಠದೊಳ್,ನಿ[3]ಱು[3]ಸಿ,ದೈವಂಮಾಡಿ,ತೀರ್ಥಾಂಬುವಂ
ಸುರಿದೆಲ್ಲಂ ಪೊಡೆವಟ್ಟು ಪೂಜಿಸಿದೊಡಂ,ಕಲ್,ಮೆಲ್ಲಿತೇನಾದುದೇ ೫೧

ನಿಂದಿಸಿದಪರೆಂದಾದೊಡ
ಮೊಂದನೆ,ಗುಣದೊಳ್ ದುರಾತ್ಮನೆಂದಿನಿತುಮನಾ
ನೆಂದೆನುಟಿದಂತಿರೆಮಗೇ
ವಂದಪ್ಪುದೊ,ಪೆಱರ ಗುಣದೊಳಂ,ದೋಷದೊಳಂ ೫೨

ಆರ್ಯರ ಯಶಮಿದು,ಖಳರ ಕ
ದರ್ಯರ ದುರ್ಯಶಮಿದೆಂದು ತೋರ್ಪಲ್ಲಿಯೆ ತಾ
ತ್ಪರ್ಯಮೆನಗಾಂ ಜಗಕ್ಕಾ
ಚಾರ್ಯನೆ,ಕಣ್ಣೂಱು ಕಲ್ಪಿಪಂತೆಲ್ಲರುಮಂ ೫೩

ಅದಱಿಂ,ಜನಮಂ ಪಡೆವೊಡೆ
ವಿದಗ್ಧಕವಿವೃಷಭನಪ್ಪುದೇಗೆಯ್ದುಮದಾ
ಗದೊಡೆ ಗುಣಿಯಪ್ಪ[4]ದ[4]ದುಮಾ
ಗದೊಡೊಪ್ಪುವ ಚಾಗಿಯಪ್ಪುದಪ್ಪೊಡೆ ಪುರುಷಂ ೫೪

ಕುಡುವವನೇನ[5]ನಿತ್ತ[5]ಪನೊ,ಕಟ್ಟಿ ಬುಧಾಳಿಗೆ,ಪೊನ್ನ ಮೊಟ್ಟೆಯಂ
ಕುಡುವೊಡೆ,ಚೆಚ್ಚರಂ ಕುಡುವುದುಳ್ಳುದನಂತದು ತೀರಿದಂದು ಕೈ
ಯುಡುಗದೆ,ತಂಬುಲಂಗುಡುವುದಂತದು ತೀರಿದೊಡಂ,ಪ್ರಭುತ್ವದೊಳ್
ತೊಡರ್ದಿರದಾ[6]ಱು[6],ಕೂಱು[6]ನಯದಿಂ ವಿನಯಂಗೆಯಲೇನೊ,ತೀರದೇ ೫೫

[1] ವೊಳವೆ (ಕ ಫ) [2] ನಂತೆ (ಕ) ದಂತೆ (ಫ) [3] ಲಿ (ಕ) [4] ದು (ಖ) [5] ಕೊಟ್ಟ (ಕ ಫ) [6] ಱಿ ಕೂಡೆ (ಕ)

ಕಾಯಿಲ್ಲದೆ ಪಣ್ಣಂ, ತನ
ಗಾಯಿಲ್ಲದೆ ಬಾಟಿಸುತ್ತು ಬಿತ್ತದೆ ಫಲಮಂ,
ಈಯದೆ ವಿಧುವಿಶದಯಶಃ
ಶ್ರೀಯಂ, ಬಯಸಿದೊಡೆ ಬ[1]ರ್ಕುರ್[1]ಮೇ, ಬಗೆವಾಗಳ್ ೫೬

ಇತ್ತು ಶರೀರಮಂ ಖಚರನಂದಹಿವೈರಿಗೆ, ಮರ್ತ್ಯಲೋಕಸಂ
ಪತ್ತುಮಸ್ಸೈದೆ, ಕಾ[2]ದ[2]ನಹಿಲೋಕಮನೊಂದನೆ ಕಾದ[3]ನಲ್ತ್ಮವಂ[3]
ತುತ್ತಿದೊಡುರ್ವಿಯಂ, ತಳೆದ ಶೇಷನನೆತ್ತಣ, ಭೂತಧಾತ್ರಿ ತಾ
ನೆತ್ತಣ ವಾರ್ಧಿಯೆತ್ತಣ, ಕುಲಾಚಲವೆತ್ತಣ ಜೀವರಾಶಿಗಳ್ ೫೭

ಭಯಮಿನಿತೇಕೆ ಕಾಂಚನಕೆ ಸಜ್ಜನರತ್ತಣೆನಿಂದುಕಾಂತಕೀ
ರ್ತಿಯೊಳೆ, ನಿಜಾಂಗಮಂ ಬಿಳಿದುಮಾಡಿದಪರ್ ಬುಧರೆಂದು, ತಾಂ ಧರಿ
ತ್ರಿಯೊಳಡಗಿರ್ದೊಡಂ, ಕರೆದು ಕಲ್ಲೊಳಗಿರ್ದೊಡಮೊಲ್ಲದೊಡ್ಡಿ ಲೋ
ಭಿಯ ಮಜುವೊಕ್ಕೊಡಂ, ತೆಗೆದು ಕೊಟ್ಟಪರಲ್ತೆ, ವದಾನ್ಯವಲ್ಲಭರ್ ೫೮

ಆವ ಗುಣಕ್ಕಮಿಾವ ಗುಣಮುಗ್ಗಳಮಾಗುಣಮೊಂದೆ ಮರ್ತ್ಯ[4]ರೊ[4]ಳ್
ತೀವಿದೊಡಾಗಳಂತೆ, ಕವಿತಾರದೆ ತಾನೆ, ಪಯೋಧಿಗುಳ್ಳ ಗು
ಣ್ಣಾವಗಮಿಂದ್ರಜಾತನದಟಾವಗಮಾಗಸದೊಳ್ ಪೊದಟ್ದ ಪಂ
ಪಾವಗಮಬ್ಜಗರ್ಭನಱವಾವಗಮರ್ಕನ ತೇಜಮಾವಗಂ ೫೯

ಕಣಿಯೊಳಪೊಕ್ಕು ತ್ಹಾರದೆ, ಪರೀಕ್ಷೆಗೆ[5]ಪಾ[5]ರದೆ, ತೂಗಿ ಕೊಂಡು ಕೇ
ವಣಿಸದೆ, ವೆಜ್ಜಮಂ ಕಳೆದು ಕೋಯದೆ, ತಾಂ ಮಱುಮೆಯ್ಗೆ ವರ್ಪ ಸ
ದ್ಗುಣಮಣಿಯೆಂಬ ಭೂಷಣದಿನಾವನಲಂಕೃತನಾ ಮಹಾತ್ಮನಂ,
ಗುಣಕಱುಗೊಂಡು ಕೊಂಡು, ಕೊಸೆದ್ಹಾರ್ಗಳ್ಳ ಕೀರ್ತಿಸರೀಧರಿತ್ರಿಯೊಳ್ ೬೦

ನಿಲ್ಲದ ತಣ್ಣೆಲರ್, ಗಳಿಗೆಯೊಳ್ಕಳಿವಾ, ಫಲಮೊಂದು ಮೂರ್ತಮುಂ
ಸಲ್ಲದ ಬೇಂಟಮುಲ್ಲಟಿಸಿ ಮಿಂಚುವ, ಮಿಂಚಿರುಳಾಗಿ ಪೊತ್ತ[6]ಱಿಂ[6]
ಗಿಲ್ಲದ ಚಂದ್ರಕಾಂತಿ, ನೆಲೆಗೊಂಡುದುಗಂಡುಮದೇಕೆ ಕಾವ್ಯದೊಳ್
ಬಲ್ಲ ಮಹಾತ್ಮರುಂ ನಿಲಿಸಲೊಲ್ಲರೊ ಭಂಗಚಲದ್ಗುಣಂಗಳಂ

ನಿಟ್ಟೆಗೆವಂ[7]ದು[7] ಕೋಮಲಗುಣಂ ಗೆಡೆಗೊಂಡಿರೆ, ಪೂವಿಸಂತಿರ್ಪಾ
ಯಿದ್ದಿಟ್ಟ ಪದಂ ಬೆಡಂ[8]ಗೆನಿಸೆ[8]ಬಣ್ಣ[9]ಸರಂ[9]ಪೊಸತಾಗೆ, ಸುಣ್ಪೊಡಂ
ಬಟ್ಟಿರೆ ಬಂದವೊಂದೆ, ಚತುರಾಳಿ, ಕರಂ ಬಸದಾಗೆ, ಬಾಸಿಗಂ
ಗಟ್ಟುವಸಂತು ಕಟ್ಟುವುದು ಕಬ್ಬಮಸುಬ್ಬಿಸಮಾಗೆ ಕಬ್ಬಿಗಂ ೬೧

---

[1] ಕ್ಕು (ಕ) [2] ಯ್ದ (ಕ ಘ) [3] ನಂತವಂ (ಗ ಘ) [4] ಸೊ (ಕ ಘ) [5] ವಾ (ಖ)
[6] ಡಿಂ (ಕ) [7] ದ (ಕ) [8] ಗಿನಿಸು (ಕ ಘ) [9] ರಸಂ (ಕ)

ಅಕ್ಕರಿಗರ ಬಗೆಗಂ, ಬೆ
ಳ್ಳಕ್ಕರಿಗರ ಬುದ್ಧಿಗಂ, ಪ್ರಭಾವಾರ್ಥತೆ[1]ಯಿಂ[1],
ಸಕ್ಕದಮುಂ, ಕನ್ನಡಮುಂ,
ಸಕ್ಕಸಮಂ, ಕೇಳ್ವೊಡೆನಿಸಿ ಪೇೞ್ವುದು ಕೃತಿಯುಂ ೬೩

ರಸಿಕರ, ಪೊಸಬಗೆಗಿಂಪಂ
ಪೊಸತಂ, ಪೊಸಯಿಸುತುಮೊಂದೆ, ಪೊರೆಯೆತ್ತಲೊಡಂ,
ರಸಮೊಸರದೊಡೇಂ, ಬಸಸವೆ,
ಬಿಸುಡುವುದಾ[2]ಪು[2]ಟಿತ, ಕಬ್ಬುಮಂ, ಕಬ್ಬಮುಮಂ ೬೪

ಓದ[3]ಲೊ[3]ಡಮಿಂಪಿನಿಂದೆಲ
ರೂದ[4]ಲೊ[4]ಡಂ, ಸುರಭಿಶೀತದಾಮೋದದಿನೇಂ
ಮೋದದೊಡೆ, ಕವಿತೆಗಂ ಕಡು
ವಾ[5]ದ[5]ಂ ಪೂ[6]ವಿಂಗೆ[6]ಪ್ಪೊ[6]ಗ್ಗ ಮುಡಿಗಿಕ್ಕುವುದೇ ೬೫

ಲಲಿತಂ ಪ್ರತೀಯಮಾನೋ
ಪಲಕ್ಷಿತಂ, ವಾಚ್ಯಮಾದೊಡೊಪ್ಪದು ಕೃತಿ, ಪೆ
ರ್ಮೊಲೆಯಂ ಮೆಱೆ[7]ದೊಡೆ[7], ಸಲೆ ಕ
ಣ್ಮಲರಂ ಮೆಱೆಯದೊಡೆ, ಯುವತಿಯೇನೊಪ್ಪುವಳೇ ೬೬

ಅಕ್ಷರದರಿದ್ರರಳಿಕವಿ
ಚಕ್ಷಣರೋದಿದೊಡಮಪ್ಪುದೇಂ, ಕಾವ್ಯಕಳಾ
ಶಿಕ್ಷಕರೊಸೆದು, ಪರೀಕ್ಷಕ
ರೀಕ್ಷಿಸೆ ಕೃತಿಯುಂ, ಕೃತಾರ್ಥರಲ್ಲರೆ, ಕವಿಗಳ್ ೬೭

ದುರ್ಜನರೆ ದೋಷಮಂ ಕಳೆ
ದಾರ್ಜಿಸುಗೆ ಗುಣಾತಿಶಯಮನೆಮ್ಮಯ ಕೃತಿ ಸಂ
ಮಾರ್ಜನಿಗವಕರನಿಕರವಿ
ಸರ್ಜಸದೊಳ್, ಮುಖ್ಯವೃತ್ತಿಯೇನಿಲ್ಲದುದೇ ೬೮

ಪಾಷಾಣಹೃದಯರ[8]ಪ್ಪೊಡೆ[8]
ದೂಷಿಸಿ ಮತ್ಕಾವ್ಯಮಂ ಪರೀಕ್ಷಿಸುಗೆ, ಗುಣಾ
ನ್ವೇಷಿಗಳಪ್ಪೊಡೆ ಕನಕನಿ
ಕಾಷದೊಳೇಂ, ನಿಕಷ[9]ದೃಷದಮ[9]ಱಸದರೊಳರೇ ೬೯

---

[1] ಗಂ (ಕ) [2] ಹು ಫ (ಕ) [3] ದೊ (ಕ) [4] ದೊ (ಕ) [5] ದಾವೂ (ಖ)
[6] ಮೇ (ಖ ಫ) [7] ಯದ (ಕ ಫ) [8] ಪ್ಪರೆ (ಕ) [9] ತುಷಮನ (ಫ)

ಸ್ಮರಶರ[1]ಪಾ[1]ತದಿಂ ಬಿರಿವ ಮೂರ್ಛೆ[2]ಮನು[2]ದ್ರವಿಸುತ್ತಿರಲ್ ಸುಧಾ
ಕರಕಿರಣಂಗಳಿಂದೊಸರ್ವ ,ಶೀತಕರೋಪಲದಂದದಿಂ ,ಮನೋ
ಹರಸರಸತ್ವವೆಂಬ, ಗುಣ[3]ಮಾ[3]ಳಿಸಿ ,ಮೇಳಿಸುವೆನ್ನ, ಕಾವ್ಯಮಂ,
ಪೊರೆದು ,ಮೃದುತ್ವದೊಳ್, ಖಳನುಮೇಂ ಗಳ ,ಕೇಳದೆ, ಪೋಗ[4]ಲಾರ್ಕು[4]ಮೇ ೨೦

ಮತಿಮಂಥಾದ್ರೀಂದ್ರದಿಂದಂ ,ಜಿನಪತಿಮತವಾರಾಶಿಯೊಳ್, ನೂತ್ನರತ್ನ
ತ್ರಿತಯಂ ಮುಂತಾಗಿ ಧರ್ಮಾಮೃತಮನಯುಸುರೋರ್ವೀಜಮಂ ಸಾರಸಾರ
ಸ್ವತಲಕ್ಷ್ಮೀದೇವಿಯಂ ನಿರ್ಮಲಗುಣನಿಧಿಯಂ, ಪೆತ್ತೆನೊತ್ತಿರ್ದ, ಧೂರ್ತೋ
ಕ್ತಿತರಂಗಕ್ಷ್ವೇಡಮಂ ನುಂಗುವಿನಮಮಳಮತ್ಕೀರ್ತಿಚಂದ್ರಾವತಂಸಂ ೨೧

ರಸಭಾವಂ ಪೊಣ್ಮೆ ವಕ್ತ್ರಂ ತೊಳಗೆ ,ವಿಕಸಿತಂ ಜಾತ್ಯಲಂಕಾರಮಾಳೋ
ಕಿಸೆ ,ಕೊಂಕುಂ ರೇಖೆಯುಂ ರಂಜಿಸೆ ,ಮಿಸುಗೆ ಪದನ್ಯಾಸಮಿಂಬಾಗೆ ವೃತ್ತಿ
ಪ್ರಸರಂ ,ದೃಷ್ಟಿಪ್ರಸಾದಂ ಪಸರಿಸೆ ಸತತಂ, ಭಾರತೀದೇವಿಯೆನ್ನೀ,
ರಸನಾರಂಗಾಗ್ರದೊಳ್, ನರ್ತಿಸುಗೆ ಬುಧಜನಸ್ತೋತ್ರತೂರ್ಯಂಗಳಿಂದಂ ೨೨

ಜತಿಗಳವಟ್ಟಬಣ್ಣದಿನಮರ್ಚಿ ತೊಡರ್ಚಿದ [5]ಚಂದ[5]ದಿಂದಳಂ
ಕೃತಿ[6]ಗಳವಟ್ಟ[6] ಮಾರ್ಗದಿನಿದಿರ್ಚಿದ ರೀತಿಯಿನಾಳ್ದ ಧಾತುವಿಂ
ಸ್ತುತಿಗೊಳಗಾದ ಮಾತಿನ ತೆರಳ್ಕೆಗಳಿಂ, ರಸಗೇಯದಂತಿರೀ
ಕೃತಿ ಪೊಸದೇಸೆಯಿಂದೆಸೆದು ,ಸೋಲಿಪುದಚ್ಚರಿಯೇ ರಸಜ್ಞರಂ ೨೩

ಏಣಗಣಕ್ಕೆ ಸೂಸದೆ ಸುಖೋದಯಮಂ, ಶ್ರುತಿಮೂರ್ಛಿತಂ ರಣ
ದ್ವೀಣೆಯ ಸುಣ್ಣರಂ ,ಫಣಿಗವಿಪ್ಪವುದು ,ಲೋಚನಗೋಚರಂಗಳಂ,
ಪ್ರೀಣಿತಸರ್ವಶೂನ್ಯಹೃದಯಂ, ರಸವತ್ಕೃತಿಬಂಧಬಂಧುರಂ
ವಾಣಿ, ಬುಧಾಳಿಗೇಂ ಕುಡದೆ, ಸಮ್ಮದಮಂ ,ಕವಿರಾಜಮಲ್ಲನಾ ೨೪

ಅಲರಂಬಿಕ್ಷುಧನುಸ್ಸಹಾಯ[7]ಮ[7]ಮೃತಾಂಶುದ್ಯೋತನಂ, ಯಾಮಿನೀ
ಲಲಿತಂ, ಸೋಲಿಸುಗುಂ ,ವಸಂತಸಮಯಪ್ರಾದೇಶಿಕಂ, ದಕ್ಷಿಣಾ
ನಿಲಸಂತೆ[8]ಲ್ಲಿ[8]ದು ,ನಿಸ್ಸಹಾಯಸುಭಗಂ ,[9]ನಿಷ್ಕಾಮಿ, ನಿಶ್ಶೇಷ[9]ಕೋ
ಮಲಮೆಂದುಂ ,ಮಧುರಸ್ವಭಾವಸುಖದಂ, ಕಾವ್ಯಂ ,ಕಲಾಕಾಂತನಾ ೨೫

ಸರಸಮಹಾಕವೀಶ್ವರಮಹೀತಳದೊಳ್, ಪುಳಕಾಂಕುರಂಗಳು
ಬ್ಬರಿಸೆ ,ಮೃದೂಕ್ತಿಬಿಂದುಚಯಮಂ ,ಸವಿದಾಱೆ ,ವಿದಗ್ಧಚಾತಕಂ,
ಸರಪಸಭಾಸಭಸ್ಸ್ಥಳದೊಳುನ್ನತಿವೆತ್ತು ರಸಪ್ರವಾಹಮಂ
ಸುರಿವುದನಾರತಂ ಸುಕರಕಾವ್ಯಘನಂ ಕವಿರಾಜಮಲ್ಲನಾ ೨೬

---

[1] ಘಾ (ಖ) [2] ಮನಂ (ಕ) ನನಾರವೆಯಂದದಿಂ [3] ವೇ (ಕ) [4] ಲಕ್ಕು (ಘ)
[5] ಶುಂಡ (ಕ) [6] ಗೆಳಸಿದ (ಕ ಘ) [7] ನ (ಕ) [8] ಲ (ಕ ಘ) [9] ನಿಶ್ಶೇಷ ನಿಷ್ಪಂದ (ಕ)

ಪಿರಿದನುರಾಗದೊೞ್ದುವರ ನಾಲಗೆಗಳ್ಗಮರ್ದಾದು[1]ದೊ[1]ಲ್ದು ಕೇ
ಳ್ವರ ಕಿವಿಗಳ್ಗೆ ಮಾಣಿಕದ ಮಂಜರಿಯಾದುದು, ಭಾವಿಸುತ್ತುಮಿ
ರ್ಪರ ಬಗೆಗಳ್ಗೆ ಪೊಚ್ಚ ಪೊಸವೇಟದ ಪೆಣ್ಣವೊಲಾದುದಿಂಪಿನಿಂ
ಸುರುಚಿರಕಾಂತಿಯಿಂ, ಸೊಬಗಿನಿಂದೆಸೆವೀ ಕೃತಿ ನೇಮಿಚಂದ್ರನಾ ೭೭

ಸಾತಿಶಯಾರ್ಥಮುಮಂ[2] ನೆ[2]
ಲ್ವಾತುಮನೊಪ್ಪಿಸಿದರೊಸೆದು ತಮಗಿಲ್ಲದುದಂ
ಖ್ಯಾತಂಗೆ, ಸುಕವಿನೇಮಿಗೆ,
ಭೂತಘವದ್ಖ್ಯಾವಿಕವಿಗಳೇನೊಳ್ಳಿದರೋ ೭೮



ಯುವತಿ ಸರಸತಿ ಪುರಾತನ
ಕವಿ[3]ರಮಣ[3]ನಱಿದಳಿಲ್ಲ. ನಿರ್ಮಳದಶನ
ಚ್ಛವಿಕುಸುಮಿತರಸನಾಪ
ಲ್ಲವತಲ್ಪದೊಳಿರ್ದು ಸುಕರಕವಿಶೇಖರನಾ ೭೯

ಚತುರರೆರ್ದೆಯಿಂದಮಿಟಿಯಳ್
ಸ್ಮೃತಿಯಿಂ ನಾಲಗೆಯಿನಗಲಳೆಂದುಂ, ತನ್ನೀ
ಕೃತಿಕಾಂತೆ ನಿಜಕಳಾಕುಶ
ಲತೆಯಿಂ ಮತ್ತೆಂತು ಪೆಱವನೋ, ಕವಿಧವಳಂ ೮೦

ಅನುಭಾವವ್ಯವಸಾಯಸುಪ್ರಕಟಿತಂ, ನಾನಾವಿ[4]ಭಾವ[4]ಪ್ರಧಾ
ನನಿಮಿತ್ತಂ ವ್ಯಭಿಚಾರಿಭಾವಪರಿಪುಷ್ಟಂ, ಸ್ಥಾಯಿಭಾವಾತ್ಮಕಂ,
ತನು ಶೃಂಗಾರರಸಕ್ಕೆ. ಸಂದಣೆಸಿದಾಶೃಂಗಾರಮಂ, ಕಾವ್ಯಬಂ
ಧನದೊಳ್ ತಾಂ ಸೆಱೆಗೆಯ್ದು ಮೆಯ್ಮೆಯೊಳಿವಂ ಶೃಂಗಾರಕಾರಾಗೃಹಂ ೮೧

ಓತರ ಗೆಯ್ತ್ತದಂತೆ, ರಸಭಾವಮೊಡಂಬಡೆ, ನಲ್ಲರಟ್ಟಿದೊ
ಳ್ಮಾತುಗಳಂತೆ, ಮಾತುಗಳೊಳಿಂಪೊಸರುತ್ತಿರೆ, ಕಾವ್ಯಭೂಷಣಾ
ರ್ಥಾತಿಶಯಂ ಪ್ರಿಯರ್ ತುಡಿಸಿದರ್ಥವಿಭೂಷಣದಂತಿರೊಪ್ಪೆ ಪೇ
ಲ್ದಾತನದಾರೊ [5]ನಾನ[5]ಱಿಯೆನೆಂತಿನಿಯಂ, [6]ರತಿ[6]ರಾಗದೋಹಳಂ ೮೨

ಇ[7]ನ್ನು[7] ಕವಿವ್ರಜಂ ಪಡೆಯ[8]ಲ್ಲೀ[8]ಪೊಸದೇಸೆಯನೀಸದರ್ಥಮಂ
ಮುನ್ನಿನ ಸತ್ಕವೀಶ್ವರರ್ಗಮೇಂ ದೊರೆಕೊಂಡುದೆ ಕೂಡೆ ಬಿನ್ನಣಂ
ಸನ್ನಿದವಾದುದಕ್ಕರದಮರ್ಕೆಯಿನೀಕೃತಿಯಂ, ಕೃತಾರ್ಥನೊ
ಲ್ದೆನ್ನನೊ, ಪೇಲ್ದನೇನಱಿಯ, ನಮ್ಮರಸಂ ಕವಿರಾಜಕುಂಜರಂ ೮೩

---

[1] ವೊ (ಕಘ) [2] ಮೆ (ಕ) [3] ವಿವರಮ (ಕ) [4] ಧಾನ (ಕ) [5] ಪೇಟಿ (ಕ)
[6] ಕವಿ (ಕ) [7] ನ್ನೆ (ಕ) [8] ದೀ (ಕಘ)

ಈಯಂದದಿನತಿಚತುರ
ಸ್ತ್ರೀಯರುಮತಿಚತುರಕವಿಗಳುಂ, ಕೇಳ್ದೊಲವಿಂ
ಬಾಯಂ ಬಿಡುತಿರೆ, ಕರ್ಣರ
ಸಾಯನಮೆನೆ, ಪೇಳ್ವೆನೆಸೆಯೆ, ಲೀಲಾವತಿಯಂ ೮೪

ಪೂಸುವ ಬೂದಿಗಂಗಭವನಂ ಭವಸಾರನನಾರ್ದು ಸುಟ್ಟ ಭೂ
ತೇಶನ ಬುದ್ಧಿಗುದ್ದವಣಿದಾಂ ಪೊಗಡೆಂ, ಪೊಗಳ್ವಂ ಮನೋಜನಂ
ಕೇಸುರಿಯಂತೆ ಪರ್ಬಿಪಟ್ಟುವಾಗಿ ಪೊದಟ್ಟುಳುರ್ದಂತರಂಗಮಂ
ಕಾಸಿ ಕಪಾಲಿಯಂ ಪಿಡಿದೊಱಲ್ದರೆವೆಣ್ಣನೆ ಮಾಡಿಬಿಟ್ಟನಂ ೮೫

ಅದೆಂತೆನೆ—

ಫಣಿರಾಜಸ್ಪರ್ಧಿದೀರ್ಘಂ, ಪ್ರಚಲದಸಿಲತಾಲೋಲಜಿಹ್ವಾಂಕುರಂ ಜ್ಯಾ
ಕಿಣರೇಖಾಂಕಪ್ರಕೋಷ್ಠಂ, ತಳೆಯೆ ಧರಣಿಯಂ ತನ್ನ ದೋರ್ದಂಡಶೇಷಂ,
ಪ್ರಣತಕ್ಷೋಣೀಶಚೂಡಾಮಣಿಗಣರುಚಿನೀರಾಜಿತೋಚ್ಚಾಂಘ್ರಿಚೂಡಾ
ಮಣಿಯೆಂಬಂ ಚಂದ್ರಚೂಡಾಮಣಿನಿಭನದಟಿಂದೊರ್ವನುರ್ವೀಶನಾದಂ ೮೬

ಅಹಿರಾಜಂ ಪೆಡೆ[1]ತಟ್ಟುವೀ[1]ಡೆ, ದಿಗಿಭವ್ರಾತಂ ಕೊರಲ್ಕುಗ್ಗೆ ದು
ರ್ವಹಧಾತ್ರೀಭರಮಂ ಪುರಾಣಕಮಠಂ ಬೆಂ[2]ಬ[2]ತ್ತೆ, ಪೊತ್ತಿರ್ದೊಡಾ
ವಹಿತಂ ಪೇೞ್ ಪ್ರಜೆಗೆಂದು ಪೊತ್ತನತುಲಾಜ್ಞಾರೂಪದಿಂ ದುಷ್ಟನಿ
ಗ್ರಹಶಿಷ್ಟಪ್ರತಿಪಾಲನಪ್ರಥಿತನಂದಾ ಪಾರ್ಥಿವಂ ಪೃಥ್ವಿಯಂ ೮೭

ಫಲಮಾಲಾಪಲ್ಲವೋಲ್ಲಾಸಿತೆ, ಮಲಮಲಿನಚ್ಛಾಯೆ, ಭಿನ್ನೇಭರಕ್ತಾ
ವಿಲಮುಕ್ತಾಪುಂಜಗುಂಜಾಭರಣೆ ಧೃತದಳತ್ಖಂಡಪಾಲಾಶ[3]ಪುಷ್ಪೋ[3]
ಜ್ಜ್ವಲೆ ತದ್ಭೂಪಾಲಶಸ್ತ್ರೀಶಬರಿ ಸುಭಟಸೇನಾಟವೀಶೀರ್ಷತಾಳೀ
ಫಲಮಂ ಪ್ರ[4]ತ್ಯರ್ಥಿ[4]ಭೂಭೃತ್ಕಟಕದೊಳದಟಿಂದಾಯ್ದುಕೊಯ್ಯುತ್ತುಮಿರ್ಪಳ್ ೮೮

ತಳಿರುಡೆ ಮೆಯ್ಗೆ ಬಾಯ್ಗೆ ತನಿವಣ್ ಸಡುಸೆತ್ತಿಗೆ ತಣ್ಣೆೞಲ್ಗಳಂ
ದಳವಡೆ, ಮೆಚ್ಚಿ ನಿರ್ಭಯದೆ ಕಾನನದೊಳ್ ತದರಾತಿಜಾತಮೀ
ಗಳುಮದೆ ಲೋಕಮಂತದನೆ ಕಂಡು ವನೇಚರರೆಂಗುಮಾಗಳುಂ
ತಳರದಿರಲ್ಕೆ ಮಾನಸರ್ಗಮುಗ್ರವನಕ್ಕಮದಾವ ಸಮ್ಮದಂ ೮೯

ಮತ್ತಮಾನರೇಂದ್ರನಮರೇಂದ್ರನಂತಧಿಕವಿಲೋಚನನುಂ, ಜಾತವೇದನಂತತುಲಪ್ರಭಾವಸುತಮೋಹನನುಂ, ಅಂತಕನಂತೆ ಮಹಿಷಾಸನಾಧಿಷ್ಠಿತನುಂ, ನಿಋತಿಯಂತೆ ಸದ್ವಿ[5]ಲ[5]ಕ್ಷ ಸತ್ತ್ವಸಮೇತನುಂ, ವರುಣನಂತಿರಪ್ರತ್ಯಕ್ಷಕರಣನುಂ, ಪವನನಂತೆ

[1] ದಡ್ಡು ಬೀ (ಕ) [2] ಬೊ (ಕ ಘ) [3] ಪುಲ್ಲೋ (ಕ ಘ) [4] ತ್ಯಂತ (ಕ) [5] ರಾ (ಗ ಘ)

ಪದ್ಮಾಮೋದಮಂದಿರನುಂ, ಧನದನಂತೆ ಪುಣ್ಯಜನೇಶ್ವರನುಂ, ಭೂತೇಶನಂತೆ ವಿಭೂತಿನಿಮಿತ್ತ್ರಕೃತಕಾಮದಾಹನುಂ, ನಾರಾಯಣನಂತೆ ವರಾಹ[1]ಪುಷ್ಕರೋ[1]ದಯೋದ್ಧೃತಧರಣೀವಲಯನುಂ, ಸರೋಜಸಂಭವನಂತೆ ಸಕಲಸಾರಸ್ವತಾಮರಸಭಾಸುಭೂತಿಯುಂ, [2]ಶತಾನಂದಭೂತಿ[2]ಯಂತೆ ಸಮಕ್ಷಣಾನಂದಿತದರ್ಶನನುಂ, |ಭದ್ರಗುಣನಾಗಿಯುಮನಾಗನುಂ, ವಿಬುಧಪತಿಯಾಗಿಯುಂ ಕುಲೀನನುಂ, ಅತಮನಾಗಿಯುಂ ವಿಬುಧವಿದ್ವೇಷಿಯುಂ, ಅಜಾತಶತ್ರುವಾಗಿಯುಂ ಸದಾನಯಶಸ್ಕಾರಿಯುಂ, [3]ಅ[3]ಪ್ರಮಾಣನಾಗಿಯುಂ ಮಾನವೇಶಿಯುಂ, ತಾರ್ಕ್ಷ್ಯಪ್ರಿಯನ್ನಾಗಿಯುಂ ಸಮಗ್ರಾಹಿಯುಂ, ಸುವರ್ಣಧರನಾಗಿಯುಮನಾದಿತ್ಯಾಗನುಮೆನಿಸಿದನಂತುಮಲ್ಲದೆಯುಂ—

ಅಮೃತಮಯೋಜ್ಜ್ವಲಾಶಯಮನಾಶ್ರಿತಗೋತ್ರಸಮೇತಮುಂ ಮಹಾ
ಹಿಮಕರಸತ್ತ್ವಮುಂ ಸುಜನಸಾಗರಮುಂ ಸಲೆ ಪೆರ್ಚಸೆಯ್ದಿಪಂ
ಕುಮುದವನಪ್ರಿಯಂ ಸಕಲಮಂಡಲಭಾಸಿ ಸದಾನಭೋಗನು
ದ್ಗಮರುಚಿ ಶರ್ವರೀವಿರಹಸಂಪದನಾ ನರಲೋಕಚಂದ್ರಮಂ ೯೦

ಸಕಲ[4]ಕಲಾ[4]ಧಿದೇವತೆಗೆ ದೇಗುಲಮಾದುದು ಲಕ್ಷ್ಮಿಗಾಲಭಂ
ಜಿಕೆಯೆನೆ ತೋಳ್ಗಳೆಂಬ ಮಣಿಗಂಭದೊಳೊಂದಿರೆ ಸಂದ ಸಿಂಹಶೂ
ದ್ರಿಕನೆನೆ ಶೂರವೀರ[5]ಮಣಿ[5]ವೃತ್ತಿ ಸುವರ್ಣಮಯಂ ಮುಖಂ ಪ್ರದೀ
ಪಕಕಲಶೋಪಮಾನಮೆನೆ ತನ್ನೃಪಮೂರ್ತಿ ಯಶಸ್ಸುಧಾತ್ಮಕಂ

ಆವಿಭುವಿಂಗೆ ರಾಗರಸರಾಶಿ ಮನೋಹರಿಯಾಗಿ ಮಿಕ್ಕ ಮಾ
ದೇವಿಯೆನಿಪ್ಪ ದೊಡ್ಡವೆಸರ್ಗಂ ನೆಲೆಯಾದಳಪೂರ್ವರೂಪಶೋ
ಭಾವತಿ ಪುಣ್ಯಶೀಲವತಿ ಕೇಳಿಕಳಾವತಿ ಪೆಂಪುವೆತ್ತ ಪ
ದ್ಮಾವತಿಯೆಂಬ ರಾಜಸುತೆ ದಾಶರಥಂಗವನೀಜೆಯಂದದಿಂ ೯೨

ಹರಿಯಂ ಸಾಮರ್ಥ್ಯದಿಂ ಸಾಹಸರಸಿಕತೆಯಿಂ ಪೋಲ್ವ ತತ್ಪಾರ್ಥಿವಂಗಂ
ಸಿರಿಯಂ ಸೌಂದರ್ಯದಿಂ ಪೆಂಪಿನೊಳಸಕಳಿವಾಕಾಂತೆಗಂ ಲೋಕಚೇತೋ
ಹರಬಾಣಂ ಪುಟ್ಟಿದಂ [6]ರಾಜಿತ[6]ರತಿರಮಣಂ ದೃಪ್ತಭೂಮಿಾಸಕೇತು
ಸ್ಫುರಿತಂ ಶೃಂಗಾರಕಾರಾಗೃಹನತಿಸುಭಗಂ ರೂಪಕಂದರ್ಪದೇವಂ ೯೩

ವದನಂ ಚಂದ್ರಪ್ರಭಂ ವಿಕ್ರಮಭುಜಮಜಿತಂ ಪಾಣಿ ಪದ್ಮಪ್ರಭಂ ಸಂ
ಪದಮೆಂದುಂ ವರ್ಧಮಾನಂ ಗುಣತತಿ ವಿಮಳಂ ತನ್ನ ಪೆಂಪೊಂದನಂತಂ
ಹೃದಯಂ ಸ್ವಾಧೀನಧರ್ಮಂ ಮತಿ ಪುರುಚರಿತಂ ಶೀತಲಂ ಸುವ್ರತಂ ತಾ
ನದಱಿಂ ಪ್ರತ್ಯಕ್ಷತೀರ್ಥೇಶ್ವರನೆನೆ ನೆಗಳ್ದಂ ವಿಶ್ವವಿದ್ಯಾವಿನೋದಂ ೯೪

---

[1] ವಪುಃಕಳೋ (ಕ) [2] ಸದಾನಂದಸೂತಿ (ಗ ಘ) [3] ಮಧು (ಗ) [4] ಗುಣಾ (ಗ ಘ) [5] ಗುಣ (ಗ ಘ) [6] ರಾಜಕ (ಗ)

ನಿಡುಗಣ್ ಪದ್ಮದಳೋಪಮಂ ಸ್ಮಿತಮುಖಂ ಚಂದ್ರೋಪಮಂ ತೋಳ್ಗಳ
ಪ್ಪೊಡೆ ದಿಙ್ನಾಗಕರೋಪಮಂಗಳುರಮುಂ ಶ್ರೀರತ್ನಪೀಠೋಪಮಂ
ತೊಡೆ ರಂಭಾಲಲಿತೋಪಮಂ ಪದಯುಗಂ ಕೂರ್ಮೋಪಮಂ ತಾನದಾ
ದೊಡಮೇಂ ರೂಪು ವಿಚಾರಿಪಂದನುಪಮಂ ಶ್ರೀರೂಪಕಂದರ್ಪನಾ ೯೫

ಉಳನೆಯರಾತನಂ ಬಯಸಿ ನೋಡಲೊಡಂ ಮದನಾಗ್ನಿದಾಹಮು
ಗ್ಗಳಿಸದೆ ಮಾಣದೆಂದು ಕೃಪೆಯಿಂ ಪಡೆದಂ ಬಿದಿ ಚಂದ್ರಬಿಂಬಮಂ
ಮಳಯಜಮಂ ಮೃಣಾಳಕುಳಮಂ ಕೊಳ್[1]ನಂ[1] ಲತಿಕಾಗೃಹಂಗಳಂ
ತಳಿರ್ಗಳನೆಂದೊಡಂದಮನದೇವೊಗಳ್ವೆಂ ಕವಿತಾವಿಲಾಸನಾ ೯೬

ನಡೆದಡಿಗಳ್ ಪುಗುಡ್ವೆಗೆದುವುಗ್ಗಡಮಾಯ್ತು ನಿದಾಘಮೆಲ್ಲಿ ನೋ
ಡ್ಪೊಡೆ ತಳಿರಿಲ್ಲ ಕಾನನದೊಳೆಂದೊಡೆ ದೈನ್ಯದೆ ನೊಂದು ನೊಂದ ಕೇ
ಸಡಿಗಳನೂದಿ ತಮ್ಮನಿಯರುಣ್ಮೆ ಪಶೋಕೆಯ ಪಲ್ಲವಂಗಳಂ
ಪಡೆದುಡುಗುಂ ವಿರೋಧಿವನಿತಾಜನಮಾರಣರಂಗಮಲ್ಲನಾ ೯೭

ಮುಸಕಂಗುಂದದರಾತಿಪಾರ್ಥಿವವಧೂ ಕಾಂತಾನೇತ್ರನೀರೇಜದೊಳ್
ಬಿಸುನೀರಂ ಸುಕುಮಾರ[2]ಹೃತ್ಕುಸುಮದೊಳ್ ಶೋ[2]ಕಾಗ್ನಿಯಂ ನೀಳ್ದ ಸು
ಯ್ವಿಸಿಲಂ ತನ್ಮುಖಚಂದ್ರಬಿಂಬಚಯದೊಳ್ ವಿಕ್ರಾಂತದಿಂ ನೋಡಿ ಪು
ಟ್ಟಿಸುವಂ ತನ್ನೃಪನಂದನಂ ಪ್ರಭುಗಳೇನಂ ಮಾಡ್ಪೊಡಂ ತೀರದೇ ೯೮

ಜನತಾನಂದೈಕನೇತ್ರಂ ಪ್ರಿಯಮಧುಸಮಯಂ ರೂಪಕಂದರ್ಪದೇವಂ
ಮುನಿಸಿಂ ಚಾಪಕ್ಕೆ ಕೈನೀಡಿದೊಡೆ,ನಡುಗುವರ್, ಪೊಕ್ಕು ನೀರೊಳ್ ಪೊರ್ದುವರ್,
ವನಮಂ ಸಾರ್ದಿರ್ಪರೆಂದುಂ ತಳಿರನುಡುವರಂಭೋಜಮಂ ಪಾಸುವರ್ ಬೆ
ಚ್ಚನೆ ಸುಯ್ವರ್ ಪ್ರಾಜ್ಯರಾಜ್ಯಾಂಗನೆಯ ವಿರಹದಿಂ ವೈರಿವೀರಾವನೀಶರ್ ೯೯

ಓದಿಸದೆಮ್ಮನೇಕುಸಿರದಿರ್ದಪೆಯೋ, ಕುಡುಕಿಕ್ಕಲೊಲ್ಲದಂ
ತಾದುದೆ ರಾಜಪುತ್ರಿಯೆನೆ ಕಾಂಚನಪುತ್ರಿಕೆಯಂ ಶುಕಾಳಿ ಕೇ
ಳ್ದಾದಮೆ ವಾಸರಂ ತೆಱೆದ ಪಂಜರದಿಂದೆ ಬಿಡಾಲಭೀತಿಯಿಂ
ಪೋದುದು ಪಾಱಿ ಕೀರತತಿ ತದ್ದ್ವಿಷದು[3]ದ್ದ್ವಿಷ[3]ಮಂದಿರಂಗಳೊಳ್ ೧೦೦

ಭೂರಿಭುಜವೀರರಾಕ್ಷಸಿ
ವೈರಿಗಳಂ ನುಂಗಲೆಂದು ನೀಡಿದ ಜಿಹ್ವಾ
ಕಾರಮೆನಿಸಿದುದು ರಿಪುರುಧಿ
ರಾರುಣಕರವಾಳವಾ ನೃಪಾಲಕಸುತನಾ ೧೦೧

---

[1] ಮಂ (ಕ) [2] ಹೃತ್ಕಮಲದೊಳ್ ಲೋ (ಗ) [3] ದ್ವಸ (ಗ)

ಕ್ಷಾರತರಂ ಮದಕಲರಣ
ವಾರಣಮಸ್ತಕವಿಮುಕ್ತ ಮಣಿದಂತುರಪೃಥಾ
ಧಾರಿಣಿಯಂ ಕಾದುದು ಮು
ನ್ನೀರಂತಿರೆ ತೋಳ ಬಾಳ್[1]ದೀ[1]ನೃಪಸುತನಾ ೧೦೨

ಮೃಗಧರನಾ ನೃಪತನಯನ
ಪಗೆವರ ಪೊಟ್ಟುರಿವ ಸೌಧಶಿಖರದಿನಸಿತೋ
ರಗನೆಳಸೆ ತನ್ನ ಪುತ್ತ್ರಿಂ
ಗಗಿದ್ದವೊಲತ್ತಿತ್ತ ತೊಲಗುತಿರ್ದಪನಿನ್ನುಂ ೧೦೩

ಬಿರಿದು ವಿಷಮಾಸ್ತ್ರಹತಿಯಿಂ
ಪೊರಳ್ದುಂ ಮೈಮಱೆದರಾತಿನೃಪರಂ ನೆಲದೊಳ್
ನೆರಪಿಯೆ ನಾಣ್ಚದೆ ನೆಲವೆ
ಣ್ಗರಸಂ ತಾನಾದನಭಿನವಂ ಪೃಥುಚರಿತಂ ೧೦೪

ಬಿಡುಮುತ್ತಂ ಗುಣದೊಳ್ ಚೆ
ಲ್ವಿಡಿದಿರೆ ಕೋದಂತೆ ಸುಕವಿಜನದ ಕೊರಲ್ಗಂ
ತೊಡವಾದುದು ಪೊಸಗಬ್ಬದೊ
[2]ಳ್[2]ಡೆ ಜ[3]ಡು[3]ವೆಸರೊಳಿ ಸುಕರಕವಿಶೇಖರನಾ ೧೦೫

ಮದನವ್ಯಾಪ್ತಂ ದಕ್ಷಿಣ
ಸದಾಗತಿಸ್ನಿಗ್ಧನಾ ಕುಮಾರಂ ಮೆಯ್ವೆ
ರ್ಚಿದ ಸುರಭಿಮಾಸದಂತಿರೆ
ಪ್ರದಿದಬಳಾಲತೆಗಳಲರ್ವುದೊಂದಚ್ಚರಿಯೇ ೧೦೬

ಆ ಕುಮಾರಂ ವ್ಯಾಕರಣಕುಶಲನುಂ, ನಯ[4]ಜೇತೋ[4]ವಯನುಂ, ಕವಿತಾಕೋವಿದನುಂ, ವಾ[5]ತ್ಸ್ಯಾ[5]ಯನಧರ್ವನುಂ. ಸರಸಕಾವ್ಯಸರಸೀಸುಭಗ[6]ಸಾರಸ[6]ನುಂ, ಕಥಾಕರ್ಣನಕೃತಕೌತುಕಾದರನುಂ, ನಾಟಕಾವಲೋಕನವಿಕಸಿತವಿಲೋಚನ†[7]ನುಂ, ಭಾಣಪ್ರವೀಣನುಂ, ಪ್ರಹಸನಪ್ರಗಲ್ಭನುಂ, ಪ್ರವಚನವಿಚಕ್ಷಣನುಂ, ಗೀತಗೋಷ್ಠೀವಿಶಾರದನುಂ, ವಲ್ಲಕೀವಲ್ಲಭನುಂ, ವಾಂಶವಾದನವಿದಗ್ಧನುಂ. ನಾಟ್ಯನೃತ್ಯನಿಪುಣನುಂ, ಲಲಿತಲಾಸ್ಯ[8]ಲಾಲಸ[8]ನುಂ, ಲಿಪಿಲಕ್ಷ್ಮೀಲಪನದರ್ಪಣನುಂ, ಸಕಲಕಲಾ[9]ಕೋಶ[9]ಗೃಹನುಂ, ಸುಭಾಷಿತಬಿಂದುಗ್ರಹಣಚತುರಚಾತಕನುಂ, ವಿನೋದನದೀಸಮುದ್ರನುಂ, ಬುಧಸಂಗ್ರಹವ್ಯಸನಿಯುಂ, ಸೌಜನ್ಯಜನಕನುಂ, ಪರಿಹಾಸಪರಿಣತನುಂ, ಪುರುಷಾರ್ಥಪರಮಪಂಡಿತನುಂ, [10]†ಪರಾರ್ಥತೀರ್ಥತಾಪಸನುಂ, ಲಾವಣ್ಯ

---

1 ನಿಧಿ (ಕ) 2 ಳಿ (ಕ) 3 ಸು (ಕ) 4 ಚಿತ್ತಾ (ಖ) 5 ಚ್ಯಾ (ಕ) 6 ಸುರಸ (ಕ)
7 ಚಿತ್ತ (ಕ) 8 ಲಲಿತ (ಗ) 9 ಕುಲ (ಖ ಗ) 10 ಪುರುಕಾಮ ಕುಂಜರನುಂ (ಕ)

ಲಂಪಟನುಂ, ಜಲಕೇಳೀವಿಲೋಲನುಂ, ವನಕೇಳೀವಸಂತನುಂ, ಸುಖಾಮೃತಕೇಳೀ ಕಲಹಂಸನುಂ, ಯೌವನವನಕೇಳೀಕಾಮುಕಕುಂಜರನುಂ, ಆಮೋದಮಧುಕರನುಂ, ಮಧುಸಮಯ[1]ಪುಷ್ಪಧನ್ವ[1]ನುಂ, ಸ್ಮರಸೌಭಾಗ್ಯಸಬ್ರಹ್ಮಚಾರಿಯುಂ, ಚೈತ್ರ ಕೌಮುದೀಕಾಮುಕನುಂ, ಕಾಮಿನೀಕುಚಕಪೋಲಪತ್ರಭಂಗವಿಚಿತ್ರಚಿತ್ರಕರ್ಮವಿಚಿತ್ರಕನುಂ, ಪ್ರೇಯಸೀಪ್ರಸಾಧನವಿಧಿಸಾಧಿತಹಸ್ತ ಕೌಶಲನುಂ, ತರುಣೀಸ್ಫುರದಧರಕಳಿಕಾ ಕೋಕಿಲನುಂ, [2]ಅಧಿ[2]ಕ್ಷೇಪಕೃತನವವಧೂನೀವೀ[3]ವಿನಿರ್ಮೋಚಕ[3] ಚಮತ್ಕಾರಿಯುಂ, ಸುಂದರೀದರಸ್ಮಿತ[4]ಕುಸುಮವನ[4]ಪಾಲನುಂ, ವನಿತಾವಕ್ಷಸ್ಸ್ಮರ ವಿರಹದವನಿಕ್ಷೇಪಣ ನಿಪುಣಪುಳಿಂದನುಂ, ಸ್ಮರಶರಪ್ರಹಾರಪಾರವಶ್ಯಪರಿಭೂತಭಾಮಿನೀರೋಮ ಭೇದ ಭಲ್ಲೂಕ ಮುಖವಿಲಿಖಿತಸುಕುಮಾರಶರೀರನುಂ, ವಿಟವಿದೂಷಕಶುಕ [5]ಪಿಕ[5] ಪ್ರಕರ ಮಧುರಮಾಕಂದನುಂ, ಶೃಂಗಾರಸಾರಸರ್ವಜ್ಞನುಂ, ನಾಗರಿಕ ನಾಗಯೂಥಪ್ರಿಯ ಪ್ರಸಾದಸಲ್ಲಕೀಪಲ್ಲವನುಮೆನಿಸಿ ಮನಸಿಜರಾಜನಟ್ಟಿಯಿನಿತ್ತುಂಗಜರಾಜಲಕ್ಷ್ಮಿಗಂ ನಿಜ ಜನಕನಪ್ಪ ಚೂಡಾಮಣಿಮಹಾರಾಜನೊಸೆದಿತ್ತುಂಗಜರಾಜಲಕ್ಷ್ಮಿಗಂ ಸಮುಚಿತಮಾದ [6]ಮದಪತೀ[6] ದೀರ್ಘಧವಳಾಪಾಂಗಮರೀಚಿ ಮಂಜರೀಚಾಮರಮುಂ ಇಕ್ಕುವ ವಿಮಳಚಾಮರಮೆಂಬುಭಯಚಾಮರಮುಂ ಪೂದುಱುಂಬಿಗೆ ಮೇಗೆ ನೆಗೆದ ತುಂಬಿಗೊಡೆಯುಮೆತ್ತಿದ ಬೆಳ್ಗೊಡೆಯುಮೆಂಬ [7]ಸವಡಿ[7]ಗೊಡೆಯುಮೆಸೆಯೆ ಸಂಸಾರ ಸುಖಮನನವರತಮನುಭವಿಸುತ್ತುಮಿರೆ—

ಅಕಲಂಕಾಗಮವೇದಿ, ನೀತಿನಿಪುಣಂ, ಕಾಲಕ್ರಿಯಾಲೋಕಲಾ
ಕಿಕವಿಜ್ಞಾನವಿಚಕ್ಷಣಂ, ಸಕಲಶಾಸ್ತ್ರಾರ್ಥಪ್ರವೀಣಂ, ಗುಣಾ
ಧಿಕನಾ ರಾಜಕುಮಾರಕಂಗೆ ಗುಣಗಂಧಾಖ್ಯಪ್ರಧಾನಾತ್ಮಜಂ
ಮಕರಂದಂ ಪ್ರಿಯಮಿತ್ರನಾದನುಪಧಾಶುದ್ಧಂ ವಿಶುದ್ಧಾನ್ವಯಂ

ಮಳಯೋತ್ತುಂಗಾಗ್ರದಿಂ ತೆಂಬೆರಲರ್ವೆಲರಿಂ ಸೌರಭಂ ಸೌರಭಶ್ರೀ
ಕಳಿತಂ ಪುಷ್ಪಾಳಿ ಪುಷ್ಪಾವಳಿಯ ಪುದಿದ ಚೆಲ್ವಿಂ ವಸಂತಂ, ವಸಂತೋ
ಜ್ಜ್ವಳಿತಂ ಕಂದರ್ಪನೊಪ್ಪಂಬಡೆವ ತೆಱದಿನಾ ಮಂತ್ರಮಾಣಿಕ್ಯನಿಂ ಭೂ
ತಳದೊಳ್ ಸಂಸೇವ್ಯನಾದಂ ಸರಸಕೃತಿಕಲಾನರ್ತಕೀನೃತ್ಯರಂಗಂ ೧೦೮

ಇದು ವಿದಿತಪ್ರಬಂಧವನವಿಹಾರಪರಿಣತ, ಪರಮಜಿನಚರಣರಮ್ಯ[8]ಹೈಮಾ[8]ಚಲೋಚ್ಛಲಿತ ನಖಮಯೂಖಮಂದಾಕಿನೀಮಜ್ಜನಾಸಕ್ತ, ಸಂತತೋತ್ಸಿಕ್ತದಾನಾಮೋದ ಮುದಿತಬುಧಮಧುಕರಪ್ರಕರ ಕವಿರಾಜಕುಂಜರ, ನೇಮಿಚಂದ್ರವಿರಚಿತಮಪ್ಪ ಲೀಲಾವತಿಯೊಳ್ ನಾಯಕಾಭ್ಯುದಯವರ್ಣನಂ

ಪ್ರಥಮಾಶ್ವಾಸಂ

---

1 ಸದ್ಧರ್ಮ (ಗ) 2 ಆದಿವಾ (ಕ) ಅವಾ (ಗ) 3 ನಿರ್ಮೋಹಕನುಂ (ಕ)
4 ಕುಪಿತವಚನ (ಗ) 5 ಪೋತ (ಗ) 6 ಮಧುದೂತೀ (ಗ) 7 ಜವಳಿ (ಗ)
8 ಹರ್ಮ್ಯಾ (ಗ)

# ದ್ವಿತೀಯಾಶ್ವಾಸಂ

ಶ್ರೀಕಾಂತಾಕಾಂತನಿಳಾ
ಲೋಕಸ್ತುತನೊಪ್ಪಿದಂ ಕುಬೇರನ ಕೆಳೆಯಿಂ
ಶ್ರೀಕಂಠನೊಪ್ಪುವಂತೆವೊ
ಲಾ ಕೆಳೆಯನ ಕೂಟದಿಂದೆ ಕೃತಿಕುಲದೀಪಂ ೧

ಅಂತಾ ಸಹಾಯಂ, ಸಾಹಸದಂತೆ ಸಮರಸಹಾಯನುಂ, ಉದ್ಯೋಗದಂತರ್ಥಸಹಾಯನುಂ, ಶ್ರುತದಂತೆ ಬುದ್ಧಿಸಹಾಯನುಂ, ತ್ಯಾಗದಂತೆ ಕೀರ್ತಿಸಹಾಯನುಂ, ಕಾಮನಂತೆ ಕಾಮಸಹಾಯನುಂ, ದಯಾಗುಣದಂತೆ ಧರ್ಮಸಹಾಯನುಂ, ವಿಭವದಂತೆ ವಿನೋದಸಹಾಯನುಮಾಗೆ ಚೂಡಾಮಣೀಕೃತಚೂಡಾಮಣಿಪದನಖಮಣಿಮಯೂಖನಭಿರಾಮತಾರೂಢಯೌವನಂ ಯುವರಾಜಲಕ್ಷ್ಮೀಸುಖಸಮುದ್ರದೊಳ್ ಮೂಡಿ ಮುಳುಗಾಡುತ್ತುಂ ಕಂದರ್ಪದೇವನಿರ್ಪಿನಮೊಂದು ದಿವಸಂ—

ಕುವಲಯದೀರ್ಘನೇತ್ರ ಮಲರುತ್ತಿರೆ ಮೂಡುವ ಮೀಂಗಳಾಕೆಯೊ
ಪ್ಪುವ ಮುಖಪದ್ಮದೊಳ್ ಪೊಡವೆ ಮೂಡಿದವೋಲಿರೆ ಕಾಳಮೆಂಬ ಶಂ
ಭುವಿನ ಶರೀರದೊಳ್ ಪುದಿದ ಗೌರಿಗೆ ರಾಗಮನೊಟ್ಟಿಕೊಂಡು ಮೂ
ಡುವ ಮೊಲೆಯಂತೆ ಮೂಡಿದುದು ಮೂಡಣ ದಿಕ್ಕಿನೊಳಿಂದುಮಂಡಲಂ ೨

ಸೋಂಕಲೊಡಂ ನಿಶಾತರುಣಿಯಂ ಶಶಿ ಸೋರ್ದುದು ಸಂಜೆ ಸೀರೆವೋಲ್
ಪಂಕಜಲೋಚನಂ ಮುಗಿದು[1]ವೆ[1]ರ್ದು[2]ವು[2] ಬಲ್ಬೆಮರಂತೆ ತಾರಕಾ
ಸಂಕುಳಮಿಂದುಕಾಂತವಿತತಾಚಳತುಂಗನಿತಂಬಬಿಂಬದಿಂ
ದಂ ಕೊಳನಾಗಿ ತುಳ್ಕಿದುವು ತೆಳ್ವದದಂತೆ ನವದ್ರವಾಂಬುಗಳ್

ನನೆಯಿಂ ನೆಯ್ದಿಲನಾಲಿನೀರ್ದಳಿಪದಿಂ ಕಾಮಾಗ್ನಿಯಂ ಮಗ್ಗಿಸಲ್
ಮನಮಂ ತಂದ ವಿಯೋಗಿಜಾಲದೆರ್ದೆ[3]ಯೊಳ್[3] ನಟ್ಟುರ್ಚಿ [4]ಗಾ[4]ಜೇಡ ಬೆ
ಚ್ಚನೆ ಪಾಯ್ತುಂದು ಪೊದಟ್ಟ ರಕ್ತಜಲದಿಂದಂ ತೊಯ್ದ ಕಂದರ್ಪದೇ
ವನ ಚಕ್ರಕ್ಕೆಣೆಯಾಯ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ೪

ಮುಡಿಗವಿದಿರ್ದ ಮಾಣಿಕದ ಮಂಡನದಂತಿರೆ ತಾರಕಾಳಿ, ತ
ಳ್ತಡರ್ದರುಣಾಂಶುಗಳ್ ಕುರುಳ ಕುಂಕುಮದಂತಿರೆ ದೂಳಿಸಿತ್ತು, ಕೆಂ
ಪಿಡಿದ ಬೆಡಂಗಿನಿಂದಮೆ ನಿಶಾಪ್ರಸವೋತ್ಸವದೊಳ್ ವಿಳಾಸದಿಂ
ಮುಡಿದ ಮಹೇಂದ್ರದಿಗ್ವಧುವ ಬಣ್ಣದ ತೊಂಡಲನಿಂದುಮಂಡಲಂ ೫

---

1 ದೆ (ಕ)  2 ದು (ಕ)  3 ಯಂ (ಕ)  4 ಜಾ (ಗ)

ದ್ವಿತೀಯಾಶ್ವಾಸಂ

ಕಳಸದ ಬಾಯ ಕೆಂದ್ದಳಿರನಂಗಜವಿಪ್ರನ [1]ಹೋಮ[1]ಕುಂಡದೊಳ್
ಬಳೆದುರಿಯಂ ನಿಶಾಂಗನೆಯ ಬಟ್ಟಲ ಕುಂಕುಮಮಂ ಮನೋಜನ
ಗ್ಗಳಿಕೆಯ ಗಂಧಸಿಂಧುರದ ನೆತ್ತಿಯ ಸೆಂದುರಮಂ ಪೊದಟ್ದು ಪೋ
ಲ್ತಳವಿಗಳುಂಬಮಾದುದು ಸುಧಾಕರಬಿಂಬದ ರಾಗ[2]ವೇ[2]ಙ್ಗೆಯೊಳ್ ೬

ಅಲೆದಮೃತದೊಡನೆ ತಾರಾ
ಲಲನೆಯರಡಿದಳಿರನೂಡಲೆಂದು ಪದಂಗೆ
ಯ್ದ ಲತಗೆಯ ಪಡಲದಂತೆವೊ
ಲಲೆದುದು ಪರಿಪಕ್ವಬಿಂಬಮೂ ವಿಧುಬಿಂಬಂ ೭

ವಿರಹಿಗುರಿ ನಲ್ಲರೊಳ್ ನೆರೆ
ದರನಾಱುಸುವಮೃತಮೆಂಬುದಂ ತೋಱುಸುವಂ
ತಿರೆ ಶಶಿಯುದಯದ ಕೆಂಪುಂ
ಕರಮೆಸೆದುದು ಬಟಿಕಮಳವಿಗೞದೆಳವೆಳಗುಂ ೮

ಮೃಗಲಕ್ಷ್ಮಂ ಸಂಜೆಗೆಂಪಿಂ[3]ಪುದಿದು[3]ದಯಿಸಿ ಸರ್ವೋರ್ವಿಗಾನಂದಮಂ ವಾ
ರ್ಧಿಗೆ ಪೆರ್ಚಂ ಮಾಡಿ ಮುನ್ನಂ ಬಟಿಕೆರ್ದೆಗಱಿಯಂ ತೋಱಿಯುಂ ಕಂಡು ಲೋಕಂ
ಬಗೆಗೊಂಡಾಲಂ ವೊಲಂ ಪುತ್ತೆರಲೆಯೆನುತದಂ ಕೂರ್ತು ಕೈಗೈಯೊಳಿನ್ನುಂ
ಪೊಗಟ್ದಪ್ಪರ್ ಭಾಪು ಲೋಕಕ್ಕುಪಕರಿಸುವನೊಳ್ ದೋಷಮುಂ ಸ್ತುತ್ಯಮಲ್ತೇ ೯

ತಿಳಿಗೊಳನಲ್ಲಿ ತೋಱುವಸಿತೋತ್ಪಲಮಂ ಫಣಿರಾಜತಲ್ಪದೊಳ್
ತೊಳಗುವ ಕೃಷ್ಣ[4]ಕಾಂತೆ[4]ವಪುವಂ ರತಿದೇವಿಯ ಕೇಳಿಗಿಟ್ಟ ನು
ಣ್ಬುಳುಕಿನ ಬಟ್ಟವಂಜರದ ಕೋಗಿಲೆಯಂ ಗೆಲೆವಂದುದಿಂದುಮಂ
ಡಳದ ಕಳಂಕ[5]ಲೇ[5]ಖೆಯಮರೇಂದ್ರವಧೂಮುಖಪ[6]ತ್ರ[6]ವಿಭ್ರಮಂ ೧೦

ಇಂದುಪ್ರಾಲೇಯಶೈಲದ್ಯುನದಿ, ಶಶಿಶರನ್ಮೇಘಮುಕ್ತಾಂಬುಧಾರಾ
ವೃಂದಂ, ಜ್ಯೋತ್ಸ್ನಾಪ್ರವಾಹಂ, ಕವಿದುದು ವಿಧು[7]ಶಕ್ರೆ[7]ಕ್ಷಿತಂ, ಶೀತರೋಚಿಃ
ಕುಂದೋದ್ಯನ್ಮಂಜರೀನಿರ್ಗತನಿಬಿಡರಜಂ, ಚಂದ್ರರುದ್ರಾಟ್ಟಹಾಸ
ಸ್ಪಂದಂ, ಪ್ರೋದ್ಭಿನ್ನ ಸೋಮಾಮರಕರಟಿಶಿರೋವಾಂತಮುಕ್ತಾಚ್ಛವರ್ಷಂ ೧೧

ಹಿಮರೋಚಿರ್ಮಂಡಲಂ ಕುಂಡಲಿತಕುಸುಮಕೋದಂಡಮಂ ಪೋಲೆ, ಶೃಂಗಾ
ರಮಯಂ ಭೂಲೋಕಮಪ್ಪಂತುಟು, ವಿರಹಿಗೆ ಶಶ್ವದ್ಧನುರ್ವೇದವಿದ್ಯಾ
ಶ್ರಮಮಂ ತೋಱಲ್ ಕಳಂಕ ಸ್ಮರನಿಸೆ ತುಱುಗಲ್ಗೊಂಡು ಪಾಯ್ವುಲ್ಲಸತ್ಕಾ
ಸುಮಬಾಣಾಸಾರದಂತೇಂ ಸುರಿದುದೊ ನವನೀಹಾರ ಕಾಂತಿಪ್ರವಾಹಂ ೧೨

---

[1] ಹೇಮ (ಕ) [2] ದೇ (ಕ) [3] ಪೊದೆದು (ಕ ಗ) [4] ಕಾಂತಿ (ಕ ಗ) [5] ರೇ (ಖ)
[6] ಕ್ಷಿ (ಕ ಗ) [7] ವಕ್ತ್ರೇ (ಕ)

ಎಲೆ ಶೃಂಗಾರಾರ್ಣವಂ ಸಗ್ಗದಿಸಿಟಿದುದತಿಶ್ವೇತವೆಂಬನ್ನೆಗಂ, ಕ
[1]ಱ್ತ[1]ಲೆಯಂ ಬೆಂಕೊಳ್ವವೋಲೆಣ್ದೆಸೆಯನಿತುಮಂ, ಬೇಱುವೇಱುಲ್ಲ ತಾರಾ
ವಲಿಯಂ ತಕ್ಕೈಸುವಂತಾಗಸಮನಿತುಮಂ ಪರ್ವಿದತ್ತೊರ್ಮೊದಲ್ ನೆ
ಯ್ದಿಲನೆಲ್ಲಂ ಚುಂಬಿಪಂತುರ್ವರೆಯನಿತುಮಂ ಚಂದ್ರಪಾದಪ್ರವಾಹಂ ೧೩

ಸೆಗವುತ್ತುಂ ಜ್ವರಂ ವಿಯೋಗಿಜನದೊಳ್, ಕಾಂತಾಮುಖಾಂಭೋಜಮಂ
ನಗಿಸುತ್ತುಂ, ಸ್ಮರಸೂರ್ಯಕಾಂತಶಿಖಿಯಂ ಸೂಸುತ್ತುಮೆತ್ತಂ ಚಕೋ
ರಿಗಳೊಳ್ ತೃಷ್ಣೆಯನೆತ್ತುತುಂ, ನೆ[2]ರ[2]ವುತುಂ ಪ್ರೇಯೋರಥಾಂಗಂಗಳಂ
ಪಗಲಂ ಪುಟ್ಟಿಸುವಂತೆ ಪೊಕ್ಕಿರುಳೊಳೇಂ ಪರ್ವಿತ್ತೊ ಚಂದ್ರಾತಪಂ ೧೪

ತವಕದಿನಪ್ಪಲುಪ್ಪಳಿಸಿಯಂ ಕರವಾದುವು, ಕೊಳ್ವ[3]ಭಿಕ್ಷ[3]ವಾ
ದುವು ಪೊಣರ್ವಕ್ಕಿಗಿಕ್ಕೆ, ವನಜಾವಳಿಯಂ ತುಟಿಯಲ್ಕೆ ಪಾದಮಾ
ದುವು, ಸಲೆ ಕೇತುವಾದುವು ವಿಯೋಗಿಗೆ, ಲೋಕದ ಕಣ್ಗೆ ದಾಮಮಾ
ದುವು, [4]ಸುಧೆ[4]ಯಾದುವೀಂಟುವ ಚಕೋರಿಗೆ ಚಂದ್ರನ ಚಾರುಕಾಂತಿಗಳ್

ಅಮರೇಂದ್ರಾಶಾವಧು ಚಂ
ದ್ರಮುಖಿ, ಸುಧಾರಶ್ಮಿ [5]ಮಧು[5]ರಸಧಾರೆಯನಂ
[6]ದು[6]ಮುಳಿ ಸಘಕೇಸರಮೆ
ಯ್ದೆ ಮುಗುಳ್ತಂತಿರೆ ತೊಳಗಿದುವು ತಾರಗೆಗಳ್ ೧೬

ಚಂದ್ರಿಕೆ ಸುರವರಕರಿಯೆನೆ,
ಚಂದ್ರಂ ತತ್ಕರಿಯ ಕುಂಭಮೆನೆ, ತಾರಗೆಗಳ್
ರುಂದ್ರನಯನಂಗಳೆನೆ, ವಿಯ
ದಿಂದ್ರನದೇಂ ಭುವನ [7]ಜನಕೆ ಕಣ್ಗೊಳಿಸಿದ[7]ನೋ ೧೭

ಮದಚಲಚಕೋರಚಂಚೂ
ವಿದಳನದಿಂದಮೃತರಸದ ಪೊನಲಿಡುತುಂ ಸೂ
ಸಿದ ಬೆಳ್ದಿಂಗಳ ತಿರುಳಂ
ದದಿನಸದಳಮೆಸೆದುದೊಸರ್ವ ಶಶಿಮಣಿವಿಸರಂ ೧೮

ಅತ್ತಲೆ ರಥಾಂಗಾಸುರ
ರಿತ್ತೀಂಟೆ ಚಕೋರ ದಿವಿಜನಾಯಕರುಂ ಸೂ
ಸಿತ್ತಾ ಗಗನಸ್ಥಲಹರಿ
ಯೆತ್ತಿದ ವಿಧುಕುಂಭದಮೃತಕರಧಾರೆಗಳಂ ೧೯

---

[1] ತ್ತ (ಕ) [2] ಗ (ಕ) [3] ಭೀಷುವಾ (ಕ ಗ) [4] ರುಚಿ (ಕ) [5] ಸಿಂಧು (ಗ) ಸೀಧು (ಖ) [6] ತು (ಕ ಗ) [7] ಜನದಕಣ್ಗೊಪ್ಪಿ (ಕ)

ದಾಂಗುಡಿಯಿಟ್ಟುದಿಂಗಡಲ ಬೆಳ್ಪು,ಕರಂ ಮೊಳೆವೋದುದಿಂದುಕಾಂ
ತಂಗಳ ಬೆಳ್ಪು,ಮೂಡಿದುದು ಸೆಯ್ದಿಲ ಬೆಳ್ಪು,ಮಡಲ್ತುದಚ್ಚವೆ
ಳ್ದಿಂಗಳ ಬೆಳ್ಪು,ಬಳ್ಳಿವರಿದತ್ತೆಳವೆಂಡಿರ ಕಣ್ಣ ಬೆಳ್ಪು,ಸೌ
ಧಂಗಳ ಬೆಳ್ಪು,ಪರ್ಬಿದುವು ಬೆಳ್ಪಿನ ಬೆಳ್ಸರಿಯಿಂ ಸುಧಾಂಶುವಾ ೨೦

ಇದು ಮತ್ತೇನೆಂಬೆ,ಬೆಳ್ದಿಂಗಳ ಬೆಳತಿಗೆ[1]ಯಂ ಪಂ[1]ಸೆ ಪಾಲ್ಗೆತ್ತು[2] ಸಾರ್ದ
ಪ್ಪುದೊ,ಮಲ್ಲೀಮಾಲೆಗೆತ್ತೇನೆಱಗಿದಪುದೊ[2]ಭೃಂಗಂ.ಬಿಸಭ್ರಾಂತಿಯಿಂದಂ
ಕರ್ದುಕಲ್ಕೈ[3]ಗೆಯ್ಯೊ[3]ಳಾ[3]ರ್ಕೈದಪುದಿಭಕಳಭಂ ಸಾಂದ್ರ ಚಂದ್ರಾಂಶುವಂ ಜಾ
ಱೆ ದುಕೂಲಂ ಲೀಲೆಯಿಂದಂ ತೆಗೆದಪುದೊ ಕುಚಾಗ್ರಕ್ಕೆ ಕಾಂತಾಕದಂಬಂ ೨೧

ನೆರೆದು ಚಕೋರಪ್ರಕರಂ
ಖರಚಂಚುವಿನುಡಿದು ತಿನೆ ಸುಧಾಕರಕಿರಣಾಂ
ಕುರನಿಕರಮನಮರ್ದಿನ ಸೊನೆ
ಸುರಿದಪುದೆನೆ ಪಸರಿಸಿತ್ತು ಪೊಸವೆಳ್ದಿಂಗಳ್ ೨೨

ಇಂದು ಜಡನಿಧಿಯ ಬಸಿಱೊಳ್
ಬಂದುದು ಪುಸಿ ಕಾಣ,ಪೂರ್ಣಚಂದ್ರನ ಬಸಿಱೊಳ್
ಬಂದುದೊ [4]ಪೇಟ[4]ಂಗಡಲೆಂ–
ಬಂದದ್ದಿನೇಂ,ಪಸರಿಸಿತ್ತೊ ಪೊಸವೆಳ್ದಿಂಗಳ್ ೨೩

ಎಳವೆಳ್ದಿಂಗಳ ಬಳೆದು
ಜ್ವಳಿಕೆಯಿದೇಂ ಕರಮೆ ಕೂರ್ತು,ಕಣ್ಗಾಣದ[5]ರ್ಗ[5]ಂ
ಪೊಳಪಿಸೊ[6]ಳ[6]ತಸುವ[7]ನೆ ತಳಾ[7]
ಮಳಕಂ [8]ಮಾ[8]ಡಿದುದು,ಬಗೆವೊಡಚ್ಚರಿಯಲ್ತೇ ೨೪

[9]ಎನೆ[9] ಚೆಲ್ವುವಡೆದ ಚಂದ್ರೋದಯದೊಳ್ ಚಂದ್ರೋದಯಂ ಪುರ ಪುರಂಧ್ರೀ
ಜನದ ಚಂದ್ರಿಕಾಮಹೋತ್ಸವಮಂ ನೋಡಲುತ್ಸುಕನಾಗಿ ನಾಗ[10]ರ[10]ಕವಿಟ
ವಿದೂಷಕಪೀಠಮರ್ದಕರುಮತಿಚತುರವಿಟನಪ್ಪ ಮಕರಂದನುಂ ಬೆರಸರಮನೆಯಂ
ಪೊಱಮಟ್ಟು ವೇಶ್ಯಾವಾಟಮಂ ಮುಟ್ಟುವರೆ–

ಮುಗುಳ್ಗಳ ಕಂಪಿದಚ್ಚಸನ್ನೆಗಂಪಿದು,ಪೂಗಳ ಕಂಪಿದಿಲ್ಲಿ ಮ
ಲ್ಲಿಗೆಗಳ ಕಂಪಿದುಬ್ಬರಿಪ ಜಾತಿಯ ಕಂಪಿದು ಬೇಱೆವೇಱೆ ಸಂ
ಪಗೆಗಳ ಕಂಪಿದೆಂಬವೊಲಳಿಸ್ವನಮೊಪ್ಪಿರೆ ಬಂದು ಕಂಪನೋ
ಲಗಿಸಿದುದೆತ್ತ ಭೂಪತಿಗದೇನೆಲ್ಲರೋ ಪೊಸಮಾಲೆಗಾಱನೋ ೨೫

---

1 ಯೊಹಂ (ಕ) 2 ಸಾರ್ದಪ್ಪುದು ಮಲ್ಲೀಮಾಲೆಯೆಂದಾರ್ದೆಱಗಿದಪುದು (ಗ) 3 ಯ್ಯಲಾ (ಗ)
4 ಬೆಳೆದಿಂ (ಗ) 5 ಗೇಗ್ರಂ (ಕ ಗ) 6 ಳಿ (ಕ) 7 ತಳಾತ್ತ (ಕ) 8 ಮೂ (ಕ)
9 ಇಂತು (ಗ) 10 ರಿ (ಖ)

ಆ ತಣ್ಣೆಲರೆಂಬ ಕಂಪಿನ ಕಡಲ[1]ನೀಸಿ[1]ಯುಂ ಬಬಲದೆ ಬಂದು—

ಸೆನೆದರ ಚಿತ್ತಮುಂ ಸೆರೆಯೆ ಕಮ್ಮನೆ, ನೋಲ್ಪರ ಕಣ್ಣ ಬೆಳ್ಪು ಕ
ಮ್ಮನೆ, ಮಿಗೆ ಮಾತನಾಡುವರ ಮೆಲ್ನುಡಿ ಕಮ್ಮನೆ, ಮೆಯ್ಗೆಳೆಯ್ದೆ ಕ
ಮ್ಮನೆ, ದೆಸೆ ಕೂಡೆ ಕಮ್ಮನೆ, ಕರಂ ನವಕೌಮುದಿ ಕಮ್ಮನಾಗೆ ಕಂ
ಪಿನ ಪೊನಲೆತ್ತಲುಂ ಪರಿವ ಪೂವಿನ ಸಂತೆಯನೆಯ್ದಿದಂ ನೃಪಂ ೨೬

[2]ಎಯ್ದಿ[2]ಕಾಮನ ಕಯ್ಪೊಡೆಯನೆತ್ತುವಂತೆ ಬಣ್ಣದ ಬಾಸಿಗಂಗಳಂ, ಮೀನಕೇತನ ಮನೆತ್ತುವಂತೆ ಬಿಳಿಯಬಾಸಿಗಂಗಳಂ, ಸ್ಮರಶರಚಾಪಮನೆತ್ತುವಂತೆ ಕಿಸುಗಣಿಗಿಲೆಯ ಪಸುರ ಬಿರಕೆವಾಸಿಗಂಗಳಂ, ಸನೆವಿಲ್ಲನೆತ್ತುವಂತೆ ಸನೆಯ ನಿಡಿಯ ದಂಡೆಗಳಂ, ಅಲರಂಬ†[3]ನಂಬಿನ ಮೂಡಿಗೆಯನೆತ್ತುವಂತೆ ಪೊಸಗೇದಗೆಯ ಪೂಗಳಂ, ಕೈಗೆಯ್ವ ಮನಸಿಜಂಗೆ ಮುತ್ತಿನ ಸರಮನೆತ್ತುವಂತೆ ಮುಗುಳ ಮಾಲೆಗಳಂ, ಚಿತ್ರಜಂ ಬರೆವ ಚಿತ್ರಪಟಮನೆತ್ತುವಂತೆ ನಾನಾವಿಧಬಂಧಬಂಧುರಂಗಳಪ್ಪ ಪೊಸಪೂಮಾಲೆಗಳನೆತ್ತುವ ಮಾಲೆಗಾರ್ತಿಯರ ಕಟಾಕ್ಷ ಕುಸುಮ ಮಾಲೆಗಳಂ, ಸೌಂದರ್ಯಧನದಿಂ ಮಾಱು ಗೊಳುತ್ತರಸಂ ಬರೆವರೆ ಪೂವಿನ ಸಂತೆಯಿಂ ಪೋಱಗೆ—

ತೆಗೆಯೆ ಚಕೋರಿ ಕರ್ಚಿ ಶಶಿಮಂಡಲದಿಂದಮೆ ಕಿಬ್ಬು ಬಿದ್ದ ರ
ಶ್ಮಿಗಳೆಡೆಯಂತೆ ತೋಱುದುದು ಸುಣ್ಣಱಿಯಾ ಕೆಡೆದುಸ್ಮಯೂಖಮಾ
ಲೆಗಳನೆ ಚಂದ್ರಮಂಗೆ ಕುಡಲೆತ್ತಿದವೋಲೆಸೆದಿರ್ದರಲ್ಲಿಗ
ಲ್ಲಿಗೆ ಮಿಗೆ ತೋರಮಲ್ಲಿಗೆಯ ಮಾಲೆಯನೆತ್ತಿದ ಮಾಲೆಗಾರ್ತಿಯರ್ ೨೭

ಆಕೆಗಳ ಕೈಯ ಮಾಲೆಯುಂ [4]ಮಾಱು[4]ಮಾಡಿಕೊಂಡು ಬಾಯೆಂದರಸಂಗೆ ವಿದೂಷಕನಿಂತೆಂದಂ

ಅರಸುತನಕ್ಕೆ ಮೆಚ್ಚಿ ನಿನಗೀಯದೊಡೀವರೆ ತಮ್ಮ ದೀರ್ಘಕೇ
ಶರಸಿತಮಾಲೆಯುಂ ಪಿಡಿದ ಮಾಲೆಯು ಕಂಪನೆ ತಮ್ಮ ಕುಂತಳ
ಕ್ಕಿರದಳಿ ತಮ್ಮ ಚೆಲ್ವಿಕೆಯನೀಯದೊಡೀಯದ ಸುಯ್ಗೆ ಗೆಲ್ಲಮಂ
ಸುರಭಿಸಮೀರಣಂ ಬೆಲೆಯನೀಯದೊಡೀಯದ ಮಾಲೆಗಾರ್ತಿಯರ್ ೨೮

ಎನೆ ಮಾನವಮದನಂ ಮುಗುಳ್ನಗೆನಗುತ್ತುಂ ಸೂಳೆಗೇರಿಯಂ ಪುಗುತಪ್ಪಾಗಳ್—

[5]ಸಮುದಂ ಸದ್ಗೃಹ[5]ಷಡ್ಜ ಷಟ್ಚರಣಮಂದ್ರನ್ಯಾಸಮುತ್ಕೀರಮ
ಧ್ಯಮತಾರಂ ಮೃದುತಾಡಿತೌಡವನವೋದ್ಭಿನ್ನ [6]ಪ್ರಸೂನಂ[6] ಸಪಂ
ಚಮ[7]ಚಂ[7]ಚತ್ಕಳಕಂಠಕಂಪಿತರುತಂ ತಾನೆಂಬ, ಹಿಂದೋಳರಾ
ಗಮೆ ತಾನಾದ ವಸಂತಮೇನೆಸೆದುದೋ ಸಂಪೂರ್ಣಸೋಮೋದಯಂ ೨೯

---

1 ನಿದಿಂಸಿ (ಕ) 2 ಎಂದು (ಖ) 3 ನಲಗಿ (ಕ) 4 ಮಱು (ಖ) 5 ಸಮುದಂಸಂಗ್ರಹ (ಗ) . . . ಚದ್ಗೃಹ (ಖ) 6 ಪ್ರಸನ್ನಂ (ಗ) 7 ಸಿ (ಕ ಗ)

ಈ ರಾಗಮಾರ್ಗಂ ಹಿಂದೋಳರಾಗಾಂಗಸಂಭವಮಪ್ಪ ದೇಶೀಯ ಹಿಂದೋಳಮಿದು ಶೃಂಗಾರಯುಕ್ತಮಪ್ಪುದಱಿಂ ಶೃಂಗಾರಕಾರಾಗ್ರಹನಪ್ಪ ನಿನಗೆ ಕೇಳಲ್ತಕ್ಕುದೆಂದು ರೂಪಕಂದರ್ಪದೇವನೊಳ್ ಮಕರಂದಂ ನುಡಿಯುತ್ತುಂ ಬರೆ ಮತ್ತೊಂದುತ್ತುಂಗ ಮತ್ತವಾರಣದೊಳ್—

ಶೃಂಗಾರಾರ್ದ್ರಂ ಕಕುಭಜನಿತಂ [1]ಧೈವತಂ ಸಂಗ್ರಹನ್ಯಾ
ಸಾಂಗಂ, ತಾರಂ[1]ಸರಿಗಮಪಧನ್ಯುತ್ತರಾಭೋಗವರ್ಧ
ಸ್ಯಂಗಂ ಸಂಕಂಪಿತಮಿ[2]ದಿ[2]ದಱೊಳ್ ಮಧ್ಯಮಂ ಮಂದ್ರಮೆಂಬೀ
ಪಾಂಗಿಂ [3]ವೇ[3]ಳಾವಳಿಯನೊಲವಿಂ ಪ್ರೌಢೆ ಪಾಡುತ್ತುಮಿರ್ದಳ್ ೩೦

ಅದಂ ಕೇಳ್ದೀಯಾಳಾಪಿಸುವ ವಿದಗ್ಧೆ ವಿಪ್ರಲಂಭವೈಶ್ವಾನರದಗ್ಧೆಯೆಂಬುದನೀ ರಾಗಪ್ರಯೋಗಮೆ ಪೇಳ್ದಪ್ಪುದೆಂದು ಸಂಗೀತಗಂಗಾಧರಂ ಸಂತತಂ ಮೆಚ್ಚು[4]ತಂ[4] ಪೋಗೆ ಮುಂದೊಂದು ಮಣಿಮತ್ತವಾರಣದ ಮುಂದಣ ಪೊಸಬೆಸದ ಮಣಿಮಯಸ್ತಂಭಮಂ ತ್ರಿಭಂಗಿಯಿಂ ಸಾಲಭಂಜಿಕೆಯಂತೆ ಸೆಮ್ಮಿ—

ಊಱಿ ಕುಚಾಗ್ರದೊಳ್[5]ಸೋರೆ[5]ಯನೆತ್ತಿದ ಕೆಂದಳದಿಂದಮೌಂಕಿ ಪೊ
ಯ್ದೇಱು ವೆರಲ್ಗಳಿಂದಿಱಿಯೆ ತಂತಿಗಳಂ ಮಿಡಿದಿಂಪು ರಾಗಮಂ
ಬೇಱೆ ಲಯಕ್ಕೆ ಬೀಡೆ ಬಹುಳಕ್ರಿಯೆಗಳ್ ಜತಿಗೂಡೆ ಧಾತು ಮೈ
ದೋಱುದ ಮೆಯ್ಯೊಳಾ ಲವಣಿಯಿಂ ವನಜಾನನೆ ಬಾಜಿ[6]ಪೋ[6]ಜಿಯಿಂ ೩೧

ಅದಂ ಕೇಳ್ದು ಮೆಚ್ಚುತ್ತುಂ ಪೋಗೆವೋಗೆ ಮುಂದೆ ಚಂದನದ ಚೌ[7]ಕಿ[7]ಗೆಯ ಮುಂದೆ ಮರಕತದೊರಲೊಳ್ ಮುತ್ತಿನಕ್ಕಿಯಂ ಪೊಯ್ದು ಕನಕದೊನಕೆಯಂ ನಳಿತೋಳ್ಗಳಿಂ ನೆಗಪಿ—

ಅಂಗಜನೈದು ಶರಂಗಳ ಬಂದ ಬ
ನಂಗಳ ಪುಟಿಲ ತಳಿರುಯ್ಯಲಜ್ಜವೆ
ಳ್ದಿಂಗಳ ಮೇಲೆ ಸಿರಿ ನಿ[8]ಲ್ಕೆ[8] ೩೨

ಮನಮನಂಟುವ ರೂಪು ದನಿ ನಗೆ ಮೆಲ್ಪು ತಂ
ಪನುಗುಣಮುಳ್ಳ ವಧುವಿರೆ ಮತ್ತೆ ಪೂ
ವಿನ ಸರಲದೇಕೆ ಮದನಂಗೆ ೩೩

ಜಾತಿ ಸೂಳೆಗೆ ರಣಭೀತನ ಪುಸಿನುಡಿ
ವಾತನ ಖಳನ ಕೆಳೆಯನ ಬದಗನ
ಬೂತಿನ ಮಾತು ದಿಟಮಲ್ತು ೩೪

1 ಧೈವತಾಂಸಗ್ರಹಂ ನ್ಯಾಸಂ ಸತ್ತಾರಂ (ಕ ಗ) 2 ದ (ಕ) 3 ಪಾ (ಕ) 4 ತೆ (ಖ)
5 ಸೆರೆ (ಗ) 6 ಪೋ (ಕ ಗ) 7 ೦ (ಕ) 8 ಲುಗೆ (ಕ)

ಪತ್ತಿದ ಗಂಡರ ಚಿತ್ತವ ಕಿಡಲೀಯ
ದಿತ್ತುದೇ ಕೋಟಿ ತನಗೆಂಬ ಸೂಳೆಯ
ಹಿತ್ತಿಲಲ್ಲಿರದೆ ಸುರಭೂಜ ೩೫

ಎಱಗಿಸುವುದದುಗೆಟ್ಟು ಪೆಱರ್ಗೆ ತಾ
ನೆಱಗೆ ಪೋಗೆ ಪೋಗಿ ಮೂಗಱವಡೆದರ
ತೆಱನವುದೆಲಗೆ ಬೆಲೆವೆಣ್ಣೆ ೩೬

ಜೇಟದ ಪದನೆಂದು ಕೂಟದ[1]ಮದವೆ[1]ಂದು
[2]ನೋ[2]ಟದೊಳ್ಗಂಡರಱಿವೊಡೆ [3]ಬಡಹಿ[3]ನ
ತ್ರೋಟಿಯೇಕೆಲಗೆ ಬೆಲೆವೆಣ್ಣೆ ೩೭

ಕಂಪೋಡಿದಲರ್ಗಳಸಿಂಪೋಡಿದೊಲುನೆಯಂ
ಸಂಪತ್ತು ಪೋದ ಬೋಜಗನ ಪಿಡಿದಿರ್ಪ
ಗಾಂಪು ನಿನಗೇಕೆ ಬೆಲೆವೆಣ್ಣೆ ೩೮

ಜಯಕಾರನೊಪ್ಪುವ ಪ್ರಿಯತಮನಾಗೆ ಪೆ
ರ್ಮೆಯು ಜೀನು [4]ಫಳಮಾ ಪಣ್ಣು[4] ನೋಂತ ನೋಂ
ಪಿಯ ಫಲ[5]ಮೆಲಗೆ ಬೆಲೆವೆಣ್ಣೆ[5] ೩೯

ನೆಲೆಮೊಲೆಯುಳ್ಳನಂ ನೆಲೆಯುಕ್ಕು ಪೋಪವರ್ಗೆ
ಎಲೆ ಪಣ್ತು ಬಿರ್ದ ಬಟ್ಟೆಯ ಮರನಂತೆ
ಮೊಲೆ ಬಿರ್ದ ಬೞಿಕೆ ಬೆಲೆವೆಣ್ಡಿರ್ ೪೦

ಪರಿಹಾಸಮೊಪ್ಪ ಮಾದರ[6]ವೆ[6]ಲೆ ಗೀತಮ
ಕ್ಕರಗೊಟ್ಟಿಯಲ್ಲದಿರೆ ನಾಡ ಕೋಟಲೆಯ ಕೊ
ಟ್ಟರವದು ಸೂಳೆವನೆಯಲ್ತು ೪೧

ಎಂದಿರ್ಪರೊಂದಾಗಿ ಸೂಳೆಸಿದ್ಧಾಂತಮನೊನಕೆವಾಡಂ ಮಾಡಿ ಪಾಡುವ ಪೆಂಡಿರ ವಿನೋದಕ್ಕೆ ವಿನೋದನದೀಸಮುದ್ರಂ ನ[7]ಸು[7]ನಗುತ್ತುಂ ಪೋಗೆವೋಗೆ—

ಕತ್ತುರಿಯಡ್ಡಬೊಟ್ಟನೆಯೆ ಮುತ್ತಿನ ಮೂಗುತಿಯೊಪ್ಪೆ ಜುಂಜುಗಳ್
ಕತ್ತರಿವೀಲಿಯಂ[8]ತಲೆಯೆ[8] ಜೋಲ್ದಿರೆ ಜೊಲ್ಲೆಯುಮೊರ್ಮೆ ನೀಱರಂ
ಸುತ್ತುತುಮೊರ್ಮೆ ಕನ್ನಡಿಯನೀಕ್ಷಿಸುತುಂ ಕಡೆಗಣ್ಣೊಳಾಗಳಂ
[9]ದೊ[9]ತ್ತಿಗೆ ನಿಂದ ವೃತ್ತಕುಚೆಯಂ ನಡೆ ನೋಡಿದನಾ ಕುಮಾರಕಂ ೪೨

---

[1] ರದನೆಂ (ಕ) [2] ಕೂ (ಕ) [3] ಪದಪಿ (ಕ) [4] ಸಫಳ ಮವಳುಮುಂ (ಕ)
[5] ಮೆಂಗೆ ಬೆಲೆವೆಣ್ಡಿರ್ (ಕ) [6] ನೆ (ಕ) [7] ಗು (ಕ) [8] ತನೆಯೆ (ಗ) [9] ತೂ (ಗ)

ಆಗಳೊರ್ವಳರಸನುಮಂ ಮೊಲೆಯೊಳೊಱಸಿ ಮಲೆದು ನೋಡುತ್ತುಂ,—

ದುಗುಲಮನುಟ್ಟು ತೊಟ್ಟು ಪೊಸಮುತ್ತನೆ ಚಂದನದಣ್ಪನಿಕ್ಕಿ ಮ
ಲ್ಲಿಗೆಯ ಸರಂಗಳಂ ಮುಡಿದು ಚಂಪಕಮಾಲೆಯ[1]ನೆ[1]ತ್ತಿ ಮೇಲೆ ತುಂ
ಬಿಗಳೊ[2]ಲೆ[2]ದಾಡದಂತಱಿಯಲಾಗದವೋಲ್ ನವಚಂದ್ರಿಕಾಚ್ಛವೀ
ಚಿಗಳೊಡಗೂಡಿ ಪೋದಳಭಿಸಾರಿಕೆ ಮುತ್ತಿನ ಬೊಂಬೆಯೆಂಬಿನಂ ೪೩

[3]ಆ[3]ಪೋಪಳನರಸಂ ಮಕರಂದನಂ ತುಱುಸಿ ತೋಱುತ್ತುಂ ಪೋಪಾಗಳ್,—

ನೆರೆದಳಿ ಪಾಱುವಂತಿರೆ ಕುರುಳ್ ಮೊಲೆಗಳ್ ಪೊಣರ್ವಕ್ಕಿ ಪಾಱುವಂ
ತಿರೆ ಪೊಳೆವಕ್ಷಿಗಳ್ ಚಳಚಕೋರಯುಗಂಗಳೆ ತಳ್ತು ಪಾಱುವಂ
ತಿರೆ ಶಿಖಿ ಪಾಱುವಂತಿರೆ ಬಳಲ್ಮುಡಿ, ತಾನಲರಂಬು ಪಾಱುವಂ
ತಿರೆ ಮಿಗೆ ಕೀಱು ಪಾಱು ಗಗನೇಚರಿಯಂತೊಲೆದುಯ್ಯಲಾಡಿದಳ್ ೪೪

ಮತ್ತೊರ್ವಳ್—

ಬೀಱಿದುದೊಂದೆ ಬಾಯಿನಮೆ ಬಾಲಕಿ ಬಾಲಕಿಯರ್ಗೆ ಗಾಡಿಯಂ
ನೀಱರ ಕಣ್ಗೆ ಸೋಲ್ತು ಸುತಿಗಿಂ[4]ದೊಳ[4]ಮಂ ನನೆವಿಲ್ಲ ಪಾಂಗಮೆಂ
ಬಾಱನೆಯಂಬನಾಸ್ಯರುಚಿಯಂ ನವಚಂದ್ರಿಕೆಗಿಂಪನಾಳ್ದು ತಂ
ಪಾಱದ ಬಾಯ ಕಂಪನೆಳದುಂಬಿಗೆ ಬೀಱುತುಮುಯ್ಯಲಾಡಿದಳ್ ೪೫

ಮತ್ತಮೊರ್ವಳ್—

ಇದು ನಿನ್ನೀಯ್ಯೇಣನೆನ್ನೀಕ್ಷಣಕೆ ಸೆಣಸಿ ತಾಂ ಬೆರ್ಚಿ ಸೋಣ್ಪೊಂದು ದರ್ಪ
ಕ್ಕಿದು ನಿನ್ನೀಯಾಲವೆನ್ನೀಯಧರದಳದೊಳಾದೀರ್ಷೆಯಿಂ ಪಣ್ತುಗರ್ವ
ಕ್ಕಿದು ನೀನೆನ್ನಾಸ್ಯದೊಳ್ ಮಚ್ಚರಿಸುವ ವೈಱುಕಕ್ಕೆಂದು ಕಾಲ್ಗಾಲೊಳೀವಂ
ದದೆ ಚಂದ್ರಂಗುತ್ಪ್ರಹಾರಂಗಳನೊದೆದೊಲವಿಂದುಯ್ಯಲಾಡುತ್ತುಮಿರ್ದಳ್ ೪೬

ಮತ್ತಮೊಂದೆಡೆಯೊಳೆಳಮಾವಿನ ತಳಿರುಯ್ಯಲನೇಱಲಂಜಿ ನಡುಗುವ ನಲ್ಲಳ
ನಪೂರ್ವರೂಪಸೌಂದರ್ಯಸದನಂ—

ಇವಳೀಲೋಚನಮೆನ್ನ ಬಾಣದಿವಳೀ ಪುರ್ವೆನ್ನ ಪೂವಿಲ್ಲ ಮಾ
ಧ್ವಿವಳೀ ಸೋರ್ಮುಡಿಯೆನ್ನ ಕೇತನದ ಚೆಲ್ವಂಕೊಂಡೊಡೇನೊಂದು ದೋ
ಷವೆ, ಎನ್ನೋಪಳ ರೂಪನೀಕೆ[5]ಗೆಲಲೇಕೆಂ[5]ದಂಗಜಂ ಕಟ್ಟಿ ತೂ
ಗುವವೊಲ್ತೂಗಿದನುಯ್ಯಲೇಱಿಸಿ ಏಟಂ ಪಿಭ್ರಾಂತೆಯಂ ಕಾಂತೆಯಂ ೪೭

---

[1] ನೊ (ಕ ಫ) [2] ಗೆ (ಕ ಗ ಫ) [3] ಅಂತು (ಫ) [4] ಚರ (ಫ) [5] ನೆಳೆದಂತೆಂ (ಕ) ನೆಳೆದನೆಂ (ಫ)

ಆಕೆಗಳನಾ ಕುಮಾರರಂ ನೋಡು[1]ತ್ತೆ[1]ನಡೆಯೆ—

ಕುಡುವುರ್ವಿಂ ಕೂಂಕುತುಂ ಕಾಮುಕರ ನಿಕರಮುಂ ನೀಱಿರೊಳ್ ಸೋಲಮಂ ಸಾ
ಲಿಡುತುಂ ಬಲ್ಗೈತದ್ದಿಂ ಬಾಯ್ದೆಱೆಯಿನುಗುವ ಕೆಂಪಿಂ ಮನೋರಾಗಮುಂ ಮುಂ
ದಿಡುತುಂ ಕಂದರ್ಪಕಾಲಾನಲನ ಪರಿವವೋಲ್ ನೀಳ್ದಪಾಂಗಂಗಳಿಂ ಕಿ
ಚ್ಚಿಡುತುಂ ಕಾಮಾರ್ತಚೇತೋವಿಪಿನದೊಳಿದಿರಂ ಪೋಯ್ತು ಕಾಂತಾಕದಂಬಂ ೪೮

ಎಂದು ಕೌಮುದೀಪ್ರಮೋದ[2]ಮಂ[2]ತ್ರಾಯಾತಮದನಸಮದಾವೇಶಪರಿಭ್ರಾಂತ ಮೆಂದು ಮಾನವಮದನಂ ಮಕರಂದನೊಳ್ ನುಡಿಯುತ್ತುಂ ಪೋಗೆ—

ಸ್ಮರಕೇತುಶ್ರೀಗೆ ಮೀನಂ ನಿಱಿಸಿದ[3]ಕಡೆಗಣ್[3]ಪುಷ್ಪಬಾಣಕ್ಕೆ ಚಿತ್ರಂ
ಬಿರಿವನ್ನಂ ಕೊಳ್ವ ಕೂರ್ಪಂ ಕಲಿಸಿದ ಕಡೆಗಣ್ಕಾಮಚಾಪತ್ವಮಂ ಕ
[4]ಬ್ಬೊರೆಯಲ್ ಕೂರ್ತಿತ್ತ[4]ಪುರ್ವಂಗಜವಿಜಯಸಹಾಯತ್ವಮಂ ಚಂದ್ರಮಂಗಂ
ಬರಲಿತ್ತಾಸ್ಯೇಂದುಬಿಂಬಂ ತಮಗೆನೆ ಕರಮೊಪ್ಪಿತ್ತು ವೇಶ್ಯಾಸಹಸ್ರಂ ೪೯

ಅಲ್ಲಿಯೊರ್ವಳ್ ಕೆಳದಿಯ ಕಾಲ ಮೇಲೆ ಕವಿದು ಬಿರ್ದು—

ನೆಱೆ ಬಂದೀ ಮಧುವೆನ್ನ ಸಂಗಭವನೆನ್ನಂ ಚಂದ್ರನೆನ್ನಂ ದಲೆಂ
ದೞಿಯೆಂ ಕೇಳವನೆನ್ನ ನೆಂದೞಿಯದಂದೀಗಳ್ ವಿಯೋಗಾರ್ತೆಯೆಂ
ನೆಱೆ ಬಂದೀ ಮಧುವೆನ್ನ ಸಂಗಭವನೆನ್ನಂ ಚಂದ್ರನೆನ್ನಂ ಕೊಲಲ್
ತಱಿಸಂದಿರ್ದಪ[5]ರಾ[5]ತನೊಳ್ ನೆರಪು ನೀಂ ಶ್ರೀರೂಪಕಂದರ್ಪನೊಳ್ ೫೦

ಎಂಬುದುಮಾಕೆ ನಗುತಿಂತೆಂದಳ್—

ನಗೆಗಣ್ಣಂ ಪೋಲ್ತುದೆಂ[6]ದೆನ್ನ ಯ[6]ಮೊಗರಸಮಂ ಪೋಲ್ತುದೆಂ[7]ದೆತ್ತಿ ಕಂಪಂ
ಮಿಗೆಸುಯ್ಯಂ[7]ಪೋಲ್ತುದೆಂದೇಕೆ[8]ಮಗಮಗಿಪ[8] ಪೂವಿಂಗೆ ಚಂದ್ರಗೆ ತೆಂಗಾ
ಳಿಗೆ ಕಾಯ್ದೀ ನಿನ್ನ ನಾವೂಗಳೆ ಮನಸಿಜನಂಬಾಗಿಯಾಚಂದ್ರನಲ್ತೇ
ಬಗೆದುಂ ಕಿಚ್ಚಾಗಿಯಾತೆಂಬೆಲರೆ ಮುನಿದು ನಂಜಾಗಿ ಕೊಂದಪ್ಪುವೀಗಳ್ ೫೧

ಎನೆ ನಾಗರಿಕವಿದಗ್ಧಮುಗ್ಧೆಯ ಮನಮನಾಱಿಸುವ ನೆವದಿನೀಕೆಯ ರೂಪುಮಂ ನಿನ್ನ ಸೊಬಗುಮಂ ಪೊಗೞ್ದಪ್ಪಳೆಂದರಸನಂ ನಾಣ್ಚಿಸಿದಂ ಮತ್ತಮೊರ್ವಳ್ ಮಾತು ಮಾತಿಂ[9]ದೆ[9] ಕೌಮುದೀವ್ಯಾವರ್ಣನಮಾಗಿ ತನ್ನ ಗಂಡಂಗಿಂತೆಂದಳ್—

---

[1] ತ್ತಂ (ಕ ಘ) [2] ಯ (ಕ ಘ) [3] ನಯನಂ (ಕ) [4] (ಖ) ಬಿರಿಯಲ್ ಕೊಂಕಿರ್ದ (ಗ) [5] ನಾ (ಕ ಘ) [6] ದೀಕೆಯ (ಗ) [7] ದೆಂದಾಡಲೆಂದೀಕೆಗಸೂಯಂ (ಕ ಗ) . . . ವಿಂಗೆ ಸುಯ್ಲಂ (ಘ) [8] ಗಮಿಸುಗುವ (ಗ ಘ) [9] ಗೆ (ಖ)

ಪಗಲೆಂದುಂ ತಲೆಯೆತ್ತಲಣ್ಮಳೆನಸುಂ ಚಂದ್ರಂಗೆ ಕೂರ್ತಂತೆ ಪ
ತ್ತುಗೆಗುಂದಳ್ ನಿಸೆಯಪ್ಪುದುಂ ಪರಿದು ದುಗ್ಧಾಂಭೋಧಿಯೊಳ್ ಕೂಡುವಳ್
ನಗುವಳ್ ನೈದಿಲೊ [1]ಳೀಟ್ಟು[1] ಚುಂಬಿಸೆ ಚಕೋರಂಗೊಲ್ವಳೊಲ್ವಾಸೆಯಿಂ
ಪುಗುವಳ್ಕೌಮುದಿಯೆಂಬ ಪೊಚ್ಚ ಪೊಸವೆಣ್ಣೇನೆಂಬ ನಾಣ್ಪೋಜೆಯೋ ೫೨

ಅದಂ ಕೇಳ್ದು ವಿದೂಷಕನೀಕೆಯ ಮನಮುಮೆನ್ನ ಪೆಂಡತಿಯ ಮನಮುಮೊಂದೆಯೆಂದರಸನ ಮೊಗಕ್ಕೆ ಮುಗುಳ್ನಗೆಯನಿತ್ತು ಮತ್ತೊಂದೆಡೆಯೊಳೊಂದೆ ನೋಟದೊಂದೆ ಮೈಯೊಂದೆ ಮನದೆಮ್ಮಂದಿಗರ್ ಮಂದಭಾಗ್ಯೆಯರ್ ನಿನಗೇ [2]ವರೆಂದು[2] ನೊಂದು ನುಡಿದ ನಿಜವಲ್ಲಭೆಗೆ ತನ್ನ ಮುನ್ನುಡಿದ ಪೊಲ್ಲಮೆಯುಂ ತೊಡೆಯಲೆಂದತಿ ಚತುರನಿಂತೆಂದಂ—

ತರಳಾಕ್ಷಿದ್ವಂದ್ವಮೊಂದೊಂದೆರಡೆ ದರಚಳಾಪಾಂಗ[3]ಮೊಂದೊಂದೆ ನೋಡ
ಲ್ಕೆ[3]ರಡೇ ಚೆಲ್ವೊಲ್ಮೆಯೊಂದೊಂದೆರಡೆ ಸರಲಮೀದೋರ್ಲತಾಯುಗ್ಮದೊಂದೊಂ
ದೆರಡೇ ತಣ್ಪಿಂಪಿದೊಂದೊಂದೆರಡೆಸೆವ ನತಭ್ರೂಯುಗಂ ನೋಳ್ಪೊಡೊಂದೊಂ
ದೆರಡೇ [4]ಚಾ[4]ರ್ವಾಸ್ಯಮೊಂದಾದೊಡಮೆರಡೆ ಲಸಚ್ಚುಂಬನಂ ಚಂಡಿ ನಿ[5]ನ್ನಾ[5] ೫೩

ಮತ್ತಮೊರ್ವಳ್ ವಾಸಕಸಜ್ಜಿಕೆ—

ಮುಕುಳಂ ಮಾ[6]ದ[6]ಲರಾಯ್ತು ಮೆಯ್ಯರಿಸಿನಂ ಕಂಪೋಡಿತೀ ಬೆಂದ ದೀ
ಪಿಕೆಯುಂ ಕರ್ಗುಡಿವಟ್ಟುದೆನ್ನಿನಿಯನಿನ್ನುಂ ಬಾರನೇಕೆಂದು ದ
ರ್ಪಕದಾವಾನಲದಗ್ಧತುಂಗಕುಚಶೈ[7]ಲಾಗ್ರಕ್ಕೆ[7] ಸುಯ್ದುಂಬಕಾಂ
ಬುಕಣಾನೀಕಮನಿಕ್ಕಿದಳ್ ಮದನಮೋಹಾಸಾರಮೆಂಬಂತೆವೋಲ್ ೫೪

ಮತ್ತಮೊರ್ವಳ್ ಪೊಸವೇ[8]ಟಮಂ[8] ಪಸರಿಸುವಂತೆ ಬಿರಿದ ಮಲ್ಲಿಗೆ ಬೆಳೆದ ಬೆಳ್ದಿಂಗಳ್ಗಂ ಕರೆವ ಕೋಗಿಲೆಗಂ ತೀಡುವ ತೆಂಗಾಳಿಗಂ ಮತಿಮಱೆದಿಂತೆಂದಳ್—

ನೆರೆವಳ್ ತಂಗಿಯಸಟ್ಟೆ ತಾನೆ ಬರಲೊಲ್ಲಂ ಲಜ್ಜೆ[9]ಯಿಂ[9]ದಾತನಂ
ಕರೆಯಲ್ ವೈಶಿಕವೆಂದಪಂ ಸಖಿ ಸರಣ್ಪೊಕ್ಕಂ ಗಡಾ ನಲ್ಲನಂ
ಬರಿಸೆನ್ನಲ್ಲಿಗೆ ತೋರಮಲ್ಲಿಗೆಯೆಲೇ ಬೆಳ್ದಿಂಗಳೇ ನಿಮ್ಮನಾ
ನೆರೆವೆಂ ಕೋಗಿಲೆ ನಿನ್ನ ಕಾಲ್ವಿಡಿದಪೆಂ ತೆಂಗಾಳಿ ತೊಟ್ಟಾದಪೆಂ ೫೫

ಮತ್ತಮೊಂದೆಡೆಯೊಳ್—

ಮಗಮಗಿಸಿತ್ತು ಕತ್ತುರಿಯ ಕಿತ್ತಲಗಂತದು ಪಲ್ಲ ಮಿಂಚು ಮ
ಲ್ಲಿಗೆಯ ತುಱುಂಬು ಮೆಯ್ಯ ಪಸುರೊಪ್ಪಿದುದಾತನ ವಾ[10]ರಿ[10]ಯಿಂದು [11]ವೇ
ಳೆ[11]ಗೆ ಬರುತಿರ್ದಪಂ [12]ಸಿತಗನೆಂಬುದುಮಂಜಿ[12] ಬೊಜಂಗನೆರ್ದೆ ಮೆ
ಲ್ಲಗೆ ಪೊಱಮಟ್ಟು ಪೋಗೆ ನಗುತಪ್ಪಿದಳಾಗಳೆ ಧೂರ್ತೆ ಧೂರ್ತನಂ ೫೬

---

[1] ಳೊಲ್ದು (ಗ) [2] ಗೆಯ್ವರೆಂದು (ಗ) [3] ಮೊಳ್ಮೆಯ್ಯದೊಂದೆ (ಕ ಗ ಫ) [4] ಜ (ಕ ಫ)
[5] ನ್ನಾ (ಕ) [6] ಯ್ದ (ಕ ಫ) [7] ಲಕ್ಕಂದು (ಕ ಫ) [8] ಟಂ (ಫ) [9] ಯೆ (ಫ) [10] ದಿ (ಕ)
[11] ಪ್ಪೆಳು (ಕ) ಪ್ಪೆಮೆ (ಖ) [12] ಸಿತಗೆಯೆಂಬುದುಮಪ್ಪೆ (ಗ) ಸಿತಗನೆಂಬುದು ಮುನ್ನ (ಖ)

ಮತ್ತಮೊಂದೆಡೆಯೊಳ್—

ಪೊಸವನಿದಾವನಾದಪುದು ಕಂಡಱುವಂತೆವೊಲೆಲ್ಲಿ ಕಂಡೆವೀ
ರಸಿಕನನಂದು ಕಂಡ ತೆಱನ[1]ಲ್ಲಿ[1]ದು ತಾಂ ಬಱ[2]ದೆಂತು[2] ಬಂದನೀ
ಬಿಸಿಲೊಳಿದೇಕೆ ಮೆಯ್ಯುರಿಸಿನಂ ಪಿರಿದಕ್ಕಟ! ತಳ್ತ ಬಾಸುಳುಂ
ಪಸಿಯವು ನೊಂದನೆಂದು ನುಡಿದಳಾ ತಡೆದೊಯ್ಯನೆ ಬಂದ ನಲ್ಲನಂ ೫೭

ಮತ್ತಮೊರ್ವಳ್—

ಮಾಡದೆ ಮಂದನಿಶ್ವಸಿತದಿಂ ತೆರೆಯಂ ತಿಳಿದಿರ್ದ ಕಳ್ಗಳ
ಳ್ಳಾಡದೆ ಪೂವನಲ್ಲಿ ಪಱಿದಿಕ್ಕದೆ ಪೀಱದೆ ಕಳ್ಗ ಬಟ್ಟಲೊಳ್
ನೋಡುತುಮಿರ್ದೊಳೊ[3]ರ್ಬ[3]ಳೊಲವಿಂದರನೇಱಿಲ ಪಣ್ಣ ಬಣ್ಣಮಂ
ಜೋಡಿಸೆ ಕಾದಲಂ ಪಿಡಿಯೆ ಪೊಂಗಿ ಪೊದಳ್ದಧರೋಷ್ಠಮಧ್ಯಮಂ ೫೮

ಮತ್ತಮೊರ್ವಳ್ ಕನ್ನಡಿಯಂ ನೋಡುವಾಗಳಱಿಯಲೀಯದೆ ಪೆಱಗನೆ ಬಂದು ನಲ್ಲಂ ನಿಂದಿರಲೊಡನೆ,

ಕಡೆಗಣ್ಣಾಣದೆ ನೋಡಲ[4]ಟ್ರಿ[4]ವಡುಗುಂ ಚಿತ್ತೇಶನಂ ನೋಡಲುಂ
ಕುಡದೆನ್ನಂ ಕಡುಲಜ್ಜೆಯೆಂದು ಮಱುಗುತ್ತಿರ್ಪಾಕೆ ತಾಂ ಕಂಡು ಕ
ನ್ನಡಿಯೊಳ್ [5]ನಾಡೆ[5]ನಿಜೇಚ್ಛೆಯಿಂ ಮುಖರಸಪ್ರಸ್ಯಂದಮಂ ತೃಷ್ಣೆಯಿಂ
ಕುಡಿವಂತೇನತಿಮುಗ್ಧೆ ಚುಂಬಿಸಿದಳೋ ಪ್ರಾಣೇಶವಕ್ತ್ರೇಂದುವಂ ೫೯

ಮತ್ತಮೊರ್ವಳಾಕೆಯ ನೆರೆಮನೆಯೊಳಿರಲ್ತಕ್ಕಾಕೆ ಬಂದ ಬಳೆಗಾಱಂಗೆ ತಂಬು[6]ಲಮಂ ಕೊ[6]ಟ್ಟಿಂತೆಂದಳ್—

ತುಡಿಸುವುದೇಕೆ ನಿಲ್ಲ ಪಲವುಂ ಬಳೆಯಂ ಬಳೆಗಾಱ ನಿನ್ನ ಕಾ
ಲ್ವಿಡಿದಪೆನಿತ್ತಪೆಂ ನಿನಗೆ ಬೇಡಿತನೆನ್ನಿನಿಯಂ ಕನಲ್ದು ಪೋ
ದೊಡೆ ಬಳೆ ಕೈಗಳಿಂದಿಳಿದು ಬೀಳ್ವವು ಬರ್ಪುದುಮಾಗಳಂತೆ ಕೇ
ಳೊಡೆವುವು ನನ್ನಿ ನಿನ್ನ ಬಳೆಯಂ ಬಳೆದೊಟ್ಟರನಣ್ಣ ಕಾಣಿರೇ ೬೦

ಮತ್ತಮೊರ್ವಳತಿಧೂರ್ತೆ

ಪುರುಡಿಂ ಕೊಂಡವರಾರೊ ನಿನ್ನಣಲ ಪಲ್ಲಂ ಪೆಂಡಿರಾರ್ ಮಂಡೆಯೊಳ್
ನೆರೆಯಂ ಪೊಯ್ದು[7]ವಳಾ[7]ವಳಿಟ್ಟೊಱಸಿದಳ್ ಕೂರ್ತಾಸ್ಯದಿಂ ಮೋಱೆಯೊಳ್
ತೆರೆಯಪ್ಪಂತೆವೊಲೆಮ್ಮ ಕ[8]ಮ್ಮ[8]ಮಿನಿತುಂ [9]ನಿಮ್ಮತ್ತೆ[9] ಮತ್ತೊರ್ವಳೊ
ಳ್ಬರಮಂ ಮಾಡುವುದೆಂದದೇಂ ಮುದುಪನಂ ವಕ್ರೋಕ್ತಿಯಿಂ[10]ಮಾಣ್ದಳೋ[10] ೬೧

1 ಲ್ಲ (ಕ ಫ) 2 ದಿಂದು (ಕ ಫ) 3 ರ್ವ (ಫ) 4 ತಿರ್ (ಫ) 5 ನೋಡೆ (ಕ ಫ) 6 ಲಂಗೊ (ಕ ಫ) 7 ಳದಾ (ಫ) 8 ರ್ಮ (ಫ) 9 ನಿಮ್ಮಂತೆ (ಫ) 10 ಪೂಣ್ದಳೊ (ಕ) ಪೇಳ್ದಳೊ (ಫ)

ಮತ್ತಮೊರ್ವಳ್ ನಗೆನಗೆಯೊಳ್ನೀನೀಗಳೆನಿತು ಬೇಟಮಂ ತಳೆದೆಯೆಂದು ಕಾದಲಂಗಿಂತೆಂದಳ್—

ಅಗಿದೆನ[1]ಗಿಂತು[1] ಸಂಜೆ[2]ಯುನೆ[2] ಸಾಧಿಸಿ ಸೂ[3]ರುಳಿ[3]ದಾಗಳೀಂ ಗಳೂ
ಟಿಗವೆಲೆ ಕಂಡ [4]ಪೊಟ್ಟು[4] ಗುಣದಿಂ ಸಿಸಗೊಲ್ದುದು ಮಾತೆ ಕಾಮನಾ
ಣೆ ಗಡೆಳಮಾವಿನಾಣೆ ಗಡ ಮಲ್ಲಿಗೆಯಾಣೆ ಗಡಿಂದುಬಿಂಬದಾ
ಣೆ ಗಡ ಬಸಂತನಾಣೆ ಗಡ ಬಲ್ಲೊಡವಾಸಟಿಗಂಡರೆಂಬುದಂ ೬೨

ಅದಲ್ಲದೆಯುಂ—

ಸೂಳೆಯು[5]ಗುರ್ಳ್ಳು[5]ದೇಸೆಲವೊ ಕೂರದೊಡಂ ಕಡುಗೂರ್ತರಂದದಿಂ
ಮೇಳಿಸಿ ಗಂಡರಿಂ ಪಡೆವುದರ್ಥಮನಲ್ಲದೊಡೆಮ್ಮ [6]ಪೆರ್ಮೆ[6]ಗಂ
ಪಾಳಿಗಮೊಲ್ದು ಕೊಟ್ಟಪರೆ ಕೂರ್ತೊಡಮೇಂ ಬೆಲೆವೆಣ್ಗೆ ಬೇಟಮೇಂ
ತಾಳಿದಮಕ್ಕುವೋ ಕಟಿಪೆಯೋಗರಮಕ್ಕುವೊ ತುಪ್ಪಮಕ್ಕುವೋ ೬೩

ಮತ್ತಮೊರ್ವಳ್ ಕಡುಗೂರ್ತುದಂ ಕಂಡು ಕಾಡುವ ಮಾಯದ ಬೊಜಂಗಂಗಿಂತೆಂದಳ್—

ಇದೆ ಕಡಿದಿತ್ತ [7]ಕಾಲ್ಚೆರಲ ಕಪ್ಪಡಮುಂ[7] ಬಿಡದೀಗಳಿಂತೆ ತೀ
ವಿದೆಯಿಱುದೇಱುನೊಳ್ ಬಸಿಪಸೆತ್ತರುಮೆನ್ನ ರದೊಳ್ ಕಲೆಗಟ್ಟಿಯಿನ್ನು ಮಿ
ಕ್ಕಿದ ಪೆಸರಕ್ಕರಂ ಮುಳಿಸುವೇಱ್ವುದೆ ಬೇಡ್ವೊಡೆ ಬೇಡದೇಸನೀ
ವುದೊ ಪೊಸಲಂಚಮಂ ಕರಣಮಂ ಪಿಡಿಯಿಂ ಪೆಱತೇಸನಿತ್ತಪಂ ೬೪

ಮತ್ತಮೊಂದೆಡೆಯೊಳ್—

ಬೆಱು[8]ಗೊಂ[9]ಡಕ್ಕ[9]ರ್ದೆಯಿನ್ನು ಮಾಱಿದಲರ್ಗಣ್ಣಿಂದತ್ತ ಕೆಂಪಿನ್ನು [10]ಮೋ
ಸಱು[10]ದಿತ್ತ್ರಂ ಬಿಸುಸುಯ್ವ ಬೆಂಕೆಯುಲೆಪಿಂ [11]ಪಳ್ವಿರ್ದ[11] ಬೆಳ್ವಾಯ [12]ದ
ರ್ದುಱಿಮೇಂ[12] ಮಾಣ್ದುದೆ ತಾಂ ಗಡಕ್ಕಟುಟಿಪಂ ಮತ್ತಿಂ[13]ತು ಸಂತಾಪದಿಂ[13]
[14]ಸಱುವೋಪೆಂ ಪ್ರಿಯ ನಿನ್ನ ರೂಪನೆಡೆಯೊಳ್ ಪೇಡ್ವೋಡಲಿನ್ನೇವೆನೋ[14] ೬೫

ಎಂದಲಗಣಸಂ ತೋಱು ನಿಲಿಸಿದಳ್. ಮತ್ತೊಂದೆಡೆಯೊಳೊರ್ವಳ್ ಸಱುಯಂ ತಳ್ಕೈಸಿದಂತಪ್ಪ ಕಲಿಗೂಂಟಣಿ,

---

[1] ಗಿಸಿತು (ಘ) [2] ಯೊಳೆ (ಘ) [3] ರೊಳ (ಗ) ರುಳ (ಕ ಘ) [4] ಪೊತ್ತು (ಕ ಘ) [5] ಗರ್ಳ (ಘ) [6] ಹೆಮ್ಮೆ (ಕ ಘ) [7] ತಾ ಬೆರಲ ಕಪ್ಪಡಮುಂ (ಗ) ಕೈವೆರಲಕಪ್ಪಡಮುಂ (ಘ) [8] ರು (ಕ ಘ) [9] ಡೆನ್ನೆ (ಗ) [10] ಮೋಪಱಿ (ಕ ಘ) [11] ಪೆಱದಿರ್ದ (ಗ) [12] ಮರ್ಮುಱಿಸೇಂ (ಕ ಘ) [13] ದು ಸಂತಾಪದಿಂ (ಕ) ದು ಸತ್ತಾಪೊಡಂ (ಘ) [14] ಸರಿಪೋಪೆಂ ಪ್ರಿಯೆ ಗಾದರೂಪನಿನಿಯಂ ಪೇಟ್ಕಂಡೊಡಿನ್ನೇವನೇ (ಗ)

ಅಱಿದ ಕುರುಳ್ಗಳೇಸುರುಳಿಗೊಂಡುವೆ ಯೊಂದೆ[1]ರಡಾದ[1]ಸುಯ್ಗಳೊಳ್
ಕಱಿದಸುವೀಗಳೇಂ ಮಗುಡೆ ಬರ್ಪುದೆ ಬೆಂದಲರ್ವಿಲ್ಲನಿನ್ನುಮೇ
ನಿಱಿಪಿದನೇ[2]ಕ[2]ರಂ ಕೊಲೆಯ ಮೇಲೆ ಕವರ್ತೆಯೆ ಎನ್ನ ಕೂಸ[3]ನಿ
ನ್ನು[3]ಱಿದೊಡೆ ನಿನ್ನ ಕಯ್ಯೊಳಱಿವೆಂ ಗಡ! ನೋಡಿಮಿದೊಂದು ಗೊಡ್ಡಮಂ ೬೬

ಎಂದು ದರಿ[4]ಯಂ[4] ಪಾತಾಳಮಂ ತೋಱುದಳೊ ಒಂದೆಡೆಯೊಳೊರ್ವಳೊಲ್ಲದೆ ಕಾಡುವ ನಲ್ಲನನಿಂತೆಂದಳ್—

ಮನೆಗೆಲ್ಲಂ ಪಗೆಯಾದೆನ[5]ಟ್ರೆ[5]ಗೆ ಕರಂ ಗೆಂಟಾದೆನಿಂ ಮೆಚ್ಚದಂ
ಗನೆಯುರ್ಗೊಳ್ಳಿದಳಾದೆನೋಪ ಗುಱಿಯಾದೆಂ ಪಂಚಬಾಣಕ್ಕೆ ಪ
ದ್ಮಿನಿಯಾದೆಂ ವಿಧುವಿಂಗೆ ನಿನ್ನ ಕತದಿಂ ಕೇಳ[6]ಟ್ರೆ[6]ಕಾಱಂಗೆ ಕೂ
ರ್ತೆನಗಿಲ್ಲಿಂ ಪಿರಿದಕ್ಕುಮೆಂದು ಸುರಿದಳ್ [7]ಘೋರೆಂದು[7] ಬಾಷ್ಪಾಂಬುವಂ ೬೭

ಎನೆ ಮತ್ತೊಂದೆಡೆಯೊಳ್—

ಸುಡುವುಣ್ಣಾದಪುದಿಂದು ನಿನ್ನಧರಮಪ್ಪಿಂಗೆಯ್ದುದಂತಾಗಿ ಮೆಯ್
ಬಡವಾಯ್ತುತ್ಕಟದಾರೊಳಾಯ್ತು ವಿರಹಂ ಪೇ[8]ಟ್ಕಣ್ಣ ನೀರೀಗಳುಂ
ಕಡುಗಾಯ್ತೆಂ[8]ದಸನಪ್ಪಿ ಪಾಯ್ದು ನಿಯಸಂ ಬಾಷ್ಪಾಂಬುವಿಂ ನಾಂದು ತಾಂ
ಪಿಡಿದಳ್ ಪೀಡಿಸಿದಳ್ ಪೊದಱ್ದಧರಮಂ ತಾನುತ್ತರಂಗೊಟ್ಟಪಳ್ ೬೮

ಮತ್ತಮೊರ್ವಳ್ ಕಾದಲಂ ಕಸಲಿಸಿ ಕಾಲ್ವಿಡಿಯೆ ಕೆಳದಿಗಿಂತೆಂದಳ್—

ಕರಹಂ ಪೆಂಡಿರದ್ಯೆದೆ ತನ್ನ[9]ದುಱಿವಿಂ[9] [10]ಕಟ್ಟಾಯದೊಳ್ ನಿಂದನೇ
ಕ[10]ರುಣಂ ತನ್ನದು ಕೂರ್ಮೆ ಪೆಂಡಿರದು ಬಿಂಕಂ ತನ್ನದಾಶಂಕೆ ಪೆಂ
ಡಿರದಿಂಪಿಂ ನೆರೆವಿಚ್ಚೆ ಪೆಂಡಿರದು ಕೂಟಂ ತನ್ನದಂತಲ್ತು ಪೆಂ
ಡಿರದೆಂ[11]ದುಂ[11] ಮುಳಿಸೀ ಪ್ರಸಾದಕರುಣಂ ಕೇಳ್ತನ್ನದೆಂದುಂ ಸಖೀ ೬೯

ಮತ್ತಮೊರ್ವಳ್ ಸೂಳೆಗೊಟ್ಟಿಯೊಳ್ ಬೊಜಂಗವಾತಾಗಿ ತನ್ನ ಕೆಳದಿಗಿಂತೆಂದಳ್—

ಎಳಮೆಯೊಳೆಲ್ಲಿ ಕಲ್ತಳಿದನೀಯದೊಡಂ [12]ನೆರೆ[12]ದೀಯನೆಂದು ಬ
ಲ್ಲಳೆ ಮಿಗೆ ಲೋಭಗೂಂಟಣಿ[13]ಯುಮೊಲ್ಲದುದಂ[13] ವಿಟನೊಲ್ಲನೆಂದು ಬ
ಲ್ಲಳೆಯೆಳವೇಟದಾಕೆಯುಮಿದಚ್ಚರಿಯೊಲ್ವೊಡಮೊಲ್ವನೆಂದು ಬ
ಲ್ಲಳೆ ಕಡು[14]ದೇಸೆ[14]ಯುಂ ಚದುರಿದಿಂಪಿದು ಪೆಂಪಿದು ಕೀರ್ತಿಕಾಂತನಾ ೭೦

---

1 ಡೊಂದಿ (ಘ) 2 ಸ್ಮ (ಕ ಘ) 3 ನೀನ (ಘ) 4 ಯೊಳ್ (ಖ) 5 ತ್ರಿ (ಘ)
6 ತ್ರಿ (ಘ) 7 ಬೆಂಬಿರ್ದು (ಕ ಘ) 8 ಟ್ಕಂಡೆ ನಿಲ್ಲೀಗಳುಕರ್ುಡಿದಂತೆಂ (ಖ) ಟ್ಕಂನೆ ನೀವೀಗಳುಕ್ಕುಡಿದಂತೆಂ (ಕ) 9 ದಳಿಪಿಂ (ಘ) 10 ಕಡ್ತಾಯದಿಂ ನಿಂದಿನಿಷ್ಕ (ಗ ಘ)
11 ತುಂ (ಕ) 12 ಮಱೆ (ಕ ಘ) 13 ಯಿನೊಲ್ಲದೊಡಂ (ಘ) ಯುಮೊಲ್ಲದೊಡಂ (ಕ)
14 ಸೇದೆ (ಗ).

ಅವನಾವನೆಂದಱಿಯದಿಂತೆಂದ ಕೆಳದಿಗೆ ಮತ್ತಮಿಂತೆಂದಳ್—

ಪಿರಿದೀವಂ ಕಲಿ ಕೂರೆ ಕೂರ್ಪನುಱುವಂ ನೀಟಿಂ ಕರಂ ಭಾವಕಂ
ಬೆರಸ[1]ಲ್ತಕ್ಕ[1] ನುದಾತ್ತನಿತ್ತು [2]ಸೆರೆವಂ[2] ನಿಗರ್ಾವಿಲಂ ಭೋಗಿ ಸಾ
ಟ್ಕರಸಂ ಗೀತದ ಗೊಟ್ಟಿಗೊಲ್ವನಿನಿಯಂ ತೋಳ್ಗೊಪ್ಪುವಂ ಸೂಳೆಗೈ
ಸಿರಿಯಂತೊಪ್ಪುವನಾವನೀಗಳಱಿದೆಂ ಶೃಂಗಾರಕಾರಾಗೃಹಂ ೭೧

ಆ ಪ್ರಪಂಚಮನಾಲಿಸಿ ವಿದೂಷಕನೆನ್ನುವಸೊ[3]ರ್ವ[3]ಳಿಂತೆಂಬಳಿಲ್ಲ[4]ಕ್ಕುಂ; ಇರ್ಪಂದು[4]ಬಂಟನಾದಪೆನೆಂದಂ. ಮತ್ತೊರ್ಬಳ್ಬೇಂಟದ ಮಾತನಾಡಿ ನಗಿಸುತ್ತಂ—

ಬಿರುದರ ಬಿಂಕಮಂ ಪೊಗಟ್ವ ಕೂಂಟಣಿ[5]ತೋಳ್ಗೆ[5]ಳಸಿರ್ಪ ಸೂಳೆವಂ
ಟರ ಸೊಬಗಿಂಗೆ ಮೈಮಱೆದು ಮೆಚ್ಚುವ ಬಿಂಕದ [6]ಬರ್ದೆಗೆಯ್ತ್ತದೊ[6]ಳ್
ಬೆರಸಿದೊಡಂದೆ ಬರ್ದೆಸನುತಿರ್ಪ ಭುಜಂಗನೆ ತೋಳೊಳಿರ್ಕೆ ಸಾ
[7]ಯಿ[7]ರ ವರಿಸಂಬರಂ ಸುಡುವೆನಾಂ ಗಡ! ಮತ್ತಿನ ಪಾಱುಗಂಡರಂ ೭೨

ಮತ್ತಮೊರ್ವಳ್

ಕುಡುವ ಗುಣಕ್ಕೆ ತಾನೊಡೆಯನೊಲ್ಮೆಗೆ ತಾನೊಡೆಯಂ ಚಲಕ್ಕೆ ತಾ
ನೊಡಸೆರೆವಲ್ಲಿ ತಾನೊಡೆಯನ[8]ಟ್ಟಿ[8]ಗೆ ತಾನೊಡೆಯಂ ದಲೆಂಬ ನಾ
ಣೊಡೆಯನನಪ್ಪಿಯುಂ ಮಗುಟೆ ತಾನಟಿಗಂಡರನಪ್ಪುತಿರ್ಪ ಪೆ
ಣ್ಗಡಣದ ಮುನ್ನಿನುಳ್ಳ ಶಿಶುಭಾಗ್ಯಮುಮೇನರೆಯಾಗಿ ಪೋಗದೇ ೭೩

ಮತ್ತಮೊರ್ವಳ್ ನೀನಿವನನೊಲ್ಲದಿರ್ದೊಡಂ ಕು[9]ಡುವೊಡವೆಗಂ[9] ಕರೆಯಲೆವೇಟ್ಕುಮೆಂದ ಕೆಳದಿಗಿಂತೆಂದಳ್—

ಬಸನಿಗನಾದೊ[10]ಡಂ ಸುಲಭನಾ[10]ದೊಡವಕ್ಕನೆ ಬೇಡ ಕರ್ಕಶಂ
ಕಿಸುಗುಳಿಗಂ ವಿಕಾರಿ [11]ಕಡು[11]ಸಾಣಿಲಿ ಜಬ್ಬು[12]ಲಿ[12] ಬೂತು ಕಾತರಂ
ಪುಸಿವನೊಡಂಬಡಂ ಸುಸಿಲನಿಂ ಪಗೆಯಾವಸೊ[13] ಪೆಣ್ಗೆ[13] ಗಂಡರೇಂ
[14]ಪಸನೆ ಸುಡಾ[14]ತನಂ ಸುಡಿಯವೇಡವನೇವಸೊ ಲಕ್ಕಮೀವೊಡಂ ೭೪

ಅದಲ್ಲದೆಯುಂ—

ಅವನೊಡ[15]ನೊಂದಿರುಳ್ನೆರೆದಳಾದೊಡೆ[15] ಸೂಳೆಗೆ ಸಾವು ಬೇಱವೇ
ಟ್ಕುವೆ ಮನಮಾಗದೊಂದೆವಸಮೆಚ್ಚಱಲುಂ ಕರೆಯಲ್ಕೆ ಕಣ್ಗಳಾ
ಗವು ಮಱೆದಪ್ಪೊಡಂ ತೆರೆಯಲ್ಕೆದೆವಸಂ ಹಡಹಿಂಗೆ ಮೆಯ್ಗಳಾ
ಗವು ಬಟಿಕೆಂದುಮಾ ಪೊಲೆಯಸೀವುದಸಿಕ್ಕುಗೆ ಕಾ[16]ನಕಾ[16]ಡಿನೊಳ್ ೭೫

---

[1] ಲ್ಬಲ್ಲ (ಕ ಘ) [2] ಮೆಱೆವಂ. (ಗ) ಮಱೆವಂ (ಕ ಘ) [3] ರ್ಬ (ಖ) [4] ಕ್ಕುಮೇಂ (ಘ) [5] ಗರ್ಗೆ (ಘ) [6] ಬರ್ದುಗೈಯಸೊ (ಗ) [7] ಸಿ (ಖ) [8] ತ್ತಿ (ಕ ಘ) [9] ಕುಡದೊಡಮೇಂ (ಘ) [10] ಡೊಂದು ಗುಣಮಾ (ಕ ಖ) [11] ಶಠ (ಕ) ಜಡ (ಖ) [12] ಠಿ (ಖ) [13] ಪೇಡ್ಗೆ (ಘ) [14] ಬಿಸುಡುವುದಾ (ಖ) [15] ನೊಂದಿರಲ್ಕರಿದು ಕೇಳ್ವೊಡೆ (ಘ) [16] ವಗಾ (ಖ)

ಮತ್ತಮೊಂದೆಡೆಯೊಳ್—

[1]ಜ[1]ಡಿದೊಡೆ ಪೊಂಗಿ ಪಂದ್ರೊವಲವೊಲ್ಪೊಱಿಯೇಱುವ ಸೊರ್ಕಿದಾಸೆವೊಲ್
ಪಿಡಿದುಗಿಗೊಂಡೊಡಗ್ಗಳಿಪ ಬಗ್ಗಿಸಿ ಪೊಯ್ದೊಡೆ ಬೂತಿಸಂತೆ [2]ಪಾ
ಯ್ದೊ[2]ಡನೆ ಝುಲುಂಮೆಸಲ್ವೆ [3]ಡೆ[3]ಯೆ ಜಾಳಿ[4]ಪ[4] ಜಾಯಿಲನಂತೆ ಮೊಕ್ಕಳಂ
[5]ಬ[5]ಡುವ [6]ಬದಂಗಸಂ ಬೆಸ[6]ನಿಯಲ್ಲದಳಾತನನೊಟ್ಟೆ ಸುಟ್ಟಪಳ್ ೭೬

ಮತ್ತಮೊಂದು ಕೂಂಟಣಿಗೊಟ್ಟಿಯೊಳ್ ಸೂಳೆವಾತಿನೊಳೊರ್ವಳಿಂತೆಂದಳ್—

ಜಗಳಂ ದೇವಸ ವಾರಿಗೀಕೆ ನಡೆವಾಗಳ್ ತೋಟಿ ಮಾಱಾಳಿಯೊ
ತ್ತೆಗೆ ನಿಂದಲ್ಲಿ ವಿಲಾಸಮುಜ್ಜಳಿಸೆ ಭೋಗಕ್ಕೆಂದು ಪೋ[7]ಪಲ್ಲಿ[7] ಕಾ
ಳೆಗವೆಂದುಂ ಬೊಜಗರ್ಗೆ ಪೋಗಳಿವಳೀಗಳ್ ವಾರಿಗಂ ನಿಲ್ಲಳೊ
ತ್ತೆಗೆ ಭೋಗಕ್ಕಗಿದೆನ್ನ ತಂಗಿ ನಡೆಯಳ್ ಸೌಭಾಗ್ಯಮಿಂತಕ್ಕುಮೇ ೭೭

ಮತ್ತಮೊರ್ವಳ್ ತನ್ನ ತಂಗಿಯ ಸೌಭಾಗ್ಯಮಂ ಪೊಗಟ್ದಳಿಂತೆಸೆ—

ಎತ್ತಿದ ಬರ್ದೊರ್ ಮೇಣ್ [8]ಬದಗೊ[8] ಪೇಟಿಮಿದೀಕೆಯ ಕೂರ್ಪೊರ್ ಮೆಲ್ಪೊ ಚಿ
ಕ್ಕೊತ್ತೆಗೆ ಕೊಟ್ಟವಂ ಕುಡುವನಾಗಳೆ ಪ[9]ಡ್ಕ[9]ಗೆ ಪಡ್ಕಗರ್ಥಮಂ
ತೆತ್ತನೆ ನಣ್ಪಿನೊಳ್ ನಡೆವನಾ ಕಡುನಣ್ಪಿನ ಗಂಡನೋಹಿಯೊಳ್
ಪತ್ತುವ ನೋಹಿಗಿತ್ತವನೆ ನಜ್ಜನಕಿತ್ತ[10]ಪ[10]ನೆಂದು [11]ಸುತ್ತುವಂ[11] ೭೮

ಮತ್ತಮೊರ್ವಳ್—

ನೋಡುವೊಡಿಲ್ಲ ಕಣ್ಣಲಸಿ ನಿಪ್ಪೊನತಂ ಮ[12]ನವಂ ಗು[12]ಣಕ್ಕೆ ಬಂ
ದಾಡುವುದಿಲ್ಲ ಗಾಡಿ ಸೆಱು[13]ಗೆಯ್ವುದು[13] ಕಂಡೊಡೆ ಕೊಟ್ಟು ಪತ್ತುವರ್
ಬೇಡುವರಿರ್ದರಿತ್ತಗಲರಿತ್ತುಟಿದಕ್ಕ [14]ಬಟಿಕ್ಕೆ[14] ಸಾರ್ವರೀ
ನೀಡುವರೊತ್ತೆಯಂ ಮನೆಯ ಬಾಗಿಲೊಳಗ್ಗಳಮಾಸೆಮಾಡುವರ್ ೭೯

ಮತ್ತೊರ್ವಳ್—

ಬಿಯಮಂ ಬೇಡಿತನೀವರಗ್ಗದ ಬೊಜಂಗಕರ್ೞ್ತುರ್ ಕಣ್ಣಾಣ[15]ರೊ[15]
ತ್ತೆಯ ಮೇಲೊತ್ತೆ ಬರುತ್ತುಮಿರ್ಪುದುಟಿದರ್ಪೊರ್ಕ್ಕಾ[16]ವಗಂ[16] ಕೊಟ್ಟುಕೋ
ಟಿಯುಮಂ ಕಾದೊಡನಿರ್ಪರಿಲ್ಲ ಪಡಪಿಂದೀ ಕೇರಿಯುಂ ಬಿಟ್ಟು ಸೂ
ಳೆಯರೆಲ್ಲಂ ನೆರೆಪಳ್ಳಿವೋದ[17]ರಿ[17]ವಳೀ ಮಾಧುರ್ಯಮಿನ್ನೆಂತುಟೋ ೮೦

---

[1] ಬ (ಖ) [2] ಬಯ್ದೊ (ಕ ಫ) [3] ಳೆ (ಕ ಫ) [4] ಸಿ (ಕ ಫ) [5] ಬಿ (ಕ ಫ)
[6] ಬದಂಗಿ ದುರ್ಬೆಸ (ಕ ಖ) [7] ಪಂದು (ಕ ಫ) [8] ಬೆಱಿಗೊ (ಗ) [9] ಕ್ಕೆ (ಕ ಫ)
[10] ವ (ಖ) [11] ಕಾಡುವಂ (ಗ) [12] ಗವಂ ಗ (ಕ ಫ) [13] ಗೇವುದು (ಖ)
[14] ವಳಕ್ಕೆ (ಕ ಫ) [15] ದೊ (ಖ) [16] ತನಂ (ಕ ಫ) [17] ಳಿ (ಗ)

ಮತ್ತಮೊರ್ವಳ್—

ಜಿರಕೆಗೆ ಪೇಸುವಳ್ ಬೊಜಗರಪ್ಪರ ನಂಟರೊಳಂಗಹೀನರುಂ
ತರ್ರುವಲಿಗಂಡರುಂ ಮನೆಗೆ ಬಂದೊಡೆ ನಾಣ್ಚುವಳೈದೆ ಬೇಟದೊಳ್
ಕರಮೊಳಗಾಗೆ ಕೂರಿಸಿದವಂಗೆರ[1]ವಂ[1] ಸಡೆ ನೋಡಳೊರ್ಮೆಯುಂ
ನೆರೆವನೆಯೆಂತುಟೆಂದಱಿಯಳೀಕೆಯದೇಂ [2]ಕರ[2]ವಾಯಕಾರ್ತಿಯೋ ೮೧

ಎಂದು ತನ್ನ ತಂಗಿಯಂ ಪೊಗಟ್ದಳ್. ಮತ್ತೊರ್ವಳ್—

ಅವಧರಿಸ[3]ದೇನನಿತ್ತೊಡ
ಮವಚತ್ರವೊಲಿರ್ಪ[3] ಳೋಪಸೊಳ್ ನೆರೆವೊಡೆ ಸೋ
ವವಗಟಿಯಮೀಕೆಗೆಲಸಿಕೆ
ಯಿವಳಿಂದಂ ಬಿಟ್ಟು [4]ಬೀ[4]ಯಕಾರ್ತಿಯರೊಳರೇ ೮೨

ಪಿರಿದುಂ ನುಡಿಯಳ್ ಬಗೆಯಳ್
ಸಿರಿವಂತನನೊಲಿಸಿದವನುಮಂ ಕೈಕೊಳ್ಳಳ್
ಕರಮೆಂದುಂ ಮಾಡಳ್ ಸಿಂ
ಗರಮಂ ರೂಪಿಂಗೆ ಕೂರ್ಪರೆಲ್ಲರುಮಿವಳಾ ೮೩

ತೊಡೆಯುತ್ತಲ್ಲದೆ ಗಂಧಮಂ ಪಡೆವರಾರ್ ಮೈ [5]ಸೋಂಕು[5]ಮಂ ಲಂಚಮಂ
ನುಡಿದುಂ ನೀಂ ದಯೆಗೆಯ್ವುದೆಂದವಳ ಕಾಲೊಳ್ ಬಂದು ಬಿ[6]ದ್ದ[6]ಲ್ಲದಾ
ನೆಡೆ ಬಾಯ್ಗೂಟಮದೆಂತು ತಿಂಗ[7]ಳೊಡವಾಳಂಬಟ್ಟೊ[7]ಡಂ ಕಾಲ್ಗಳಂ
ಪಿಡಿಕೈಸುತ್ತಮೆ ಸೋಂಕಿದಲ್ಲದುಟಿದಂತಾರ್ಕಂಡರಿಂಗೂಟವಂ ೮೪

ಎಂದು ತನ್ನ ತಂಗೆಯ ಕೆಯ್ತಮನೆತ್ತಿ ನುಡಿದಳ್. ಮತ್ತೊರ್ವಳ್—

ತನು ತವುವನ್ನ ಮೋತಗಲದಿರ್ಕೆವನೆನ್ನೊಳೆ, ನೋಡದಿರ್ಕೆವಂ
ಕನಸಿನೊಳಪ್ಪೊಡಂ ಪೆಱರನಿಂ, ಮಱುಮೆಯ್ಯೊಳಮಕ್ಕೆ ಗಂಡನೀ
ತನೆ ತನಗೆಂದು ಮಲ್ಲಿಗೆಯ ಮಾವಿನ, ರೋಹಿಣಿಯೇಢ್ಗವೆತ್ತ ಚಂ
ದ್ರನ, ನೆರೆದೊಪ್ಪುವಾರತಿಯ ಕಾಮನ, ನೋಂಪಿಗಳೀ[8]ಕೆ[8]ಗಾಗಳುಂ ೮೫

ಎಂದು ತನ್ನ ತಂಗೆಯನಾಕೆಯ ನಲ್ಲನುಮಂ ತೋಱಿ ನುಡಿದಳ್ ಮತ್ತೊರ್ವಳ್—

---

[1] ಡಂ (ಘ) [2] ಕಡು (ಗ) [3] ದೆನಿನಪಿತೊತ್ತಡಮ ವನೀಕ್ಷಿಸದಿರ್ಪ (ಗ) [4] ವಾ (ಗ) [5] ಗೂಟ (ಕ ಘ) [6] ರ್ದ್ದ (ಕ ಘ) [7] ಳಿರೆವಾಳಂ ಬಿಟ್ಟ (ಕ) ಳಿರೆವಾಳಂ ಬಿಡ್ದೊ (ಗ) ಳರಸಾಳಂಬಟ್ಟೊ (ಘ) [8] ಗಾದುದಂ (ಗ)

ನಲ್ಲಂಗೆ ಬಯಕೆ ಸುರತಂ
ಪಲ್ಲಟಿಸದು ತನ್ನ ಬೇಟಮುಟಿದವರಂ ಕ
ಣ್ಗೆಲ್ಲದೊಳೆ ಗೆಲ್ವಳಿನ್ನಿವ
ಳಲ್ಲದೆ ಜಗದೊಳಗೆ ಚೆಲ್ಲಗಾರ್ತಿಯರೊಳರೇ ೮೬

ಮತ್ತಮೊರ್ವಳ್—

ಧನಮುಳ್ಳನುಮಿಲ್ಲದನುಂ
ಮನದ್ರಾಣ್ಮನುಮೊತ್ತೆಯಾಣ್ಮನುಂ ನೆರೆವೆಡೆಯೊಳ್
ತನಗೆ ಸರಿಯೆನಿಪ ಬರ್ದಿನ
ವನಿತೆಗೆ ಸಲೆ ಸಂದುದುಬಿದರೊಳ್ ಸಂದಪುದೇ ೮೭

ಮತ್ತಮೊರ್ವಳ್ ತನ್ನ ಮಗಳ ಮೊಗದೊಳ್ ದಾಕ್ಷಿಣ್ಯಮಿಲ್ಲದಿಂತೆಂದಳ್—

ಚೆಲ್ಲಕ್ಕಲಸುವಳಲಸಳ್
ಗೆಲ್ಲಕ್ಕೆ[1]ನೆ[1] ನೋಡೆ ಕಣ್ಣ ಕಾಡಿಗೆಯಂ ಕೊಂ
ಡಲ್ಲದೆ ನಿಲ್ಲಳ್ ನುಡಿದೊಡೆ
ಕಲ್ಲವಿಲಂ ಮಾಡಿ ಬಾಯ ಕೆಂಪಂ [2]ಕೊಳ್ವ[2]ಳ್ ೮೮

ಪೊಸಗಂ[3]ಪ್ಪಾಮೊ[3]ಡಮಕ್ಕುಮೆಂದೆ ಪೆಱಿಂ ಕಿ[4]ಗಾರ್[4]ಳಿಯೊಳ್ [5]ನಿಲ್ವಳೀ[5]
ಕ್ಷ್ಣ [6]ಸಿ[6]ದ್ರೊಳ್ಪಿಂದೆಲೆಗೊಂಡೊಡಲ್ಲದಿವಳಾರ್ಗಂ ಸುಣ್ಣಮಂ ತನ್ನ ಸಂ
[7]ತಸದಿಕ್ಕಳ್ ಸವಿದಲ್ಲದ[7]ಸ್ವಪಧುಗೊಲ್ಬೊಳ್ಗಂಡರಂ ಕಂಡು ಕಂ
ದಿಸುವಳ್ಕಾಡಿಸಿ [8]ಗೆಲ್ವ ಕೈತವ[8] ಮಿದೇಸೀ ಪೆಣ್ಗೆ ಕಣ್ಗೂರ್ತುದೋ ೮೯

ಮತ್ತಮೊರ್ವಳ್—

ಏಱಿದ ಜವ್ವನಂ ನಸು ಬಱಲ್ದುದು ಬೇಟದ ಬೆಂಕೆಯಿಂದೆ ಬೆಂ
ದಾಱಿದುದ್ದೈದೆ ಚಿತ್ತಮತಿಚಿತ್ರರತಂಗಳೊಳಿಚ್ಛೆಯಾಗಳುಂ
ನೀಱರನೀಗಳಾಯ್ದಱಸುತಿರ್ದಪುವೀಕೆಯ ಕಣ್ಗಳೀಕೆ ಕಾ
ಯ್ದಾಱಿದ ಪಾಲವೊಲ್ಸವಿಯನಿನ್ನು ಪಭೋಗಿಸಲಾರ್ಗೆ ಮಾ[9]ಡಿ[9]ಳೋ ೯೦

ಎಂದು ತನ್ನ ಮಗಳ ಮೇಲಪ್ಪ ಹಡಹಿಂಗೆ ಮುಯ್ಯಾಂತಳ್. ಮತ್ತೊರ್ವಳತಿ ಚತುರೆಯಿಂತೆಂದಳ್—

---

[1] ಲಿ (ಕ ಫ) [2] ಕೊಂಬ (ಕ ಫ) [3] ಪೊತ್ತೊ (ಫ) [4] ಗಾ್ಗ (ಕ ಫ)
[5] ನಿಲ್ಲಳೀ (ಕ ಗ) [6] ಸ (ಕ ಫ) [7] ತಸದಿಂ ಕಳ್ಸವಿಗ (ಗ) [8] ಗೆಲ್ಲಕಾರ್ತನ (ಕ ಖ)
[9] ಬ್ಬ (ಗ)

ಮುಗುಳಿಂ ತೋರದುಱುಂಬನಿಕ್ಕಿ ಬರೆದಾ ಕಸ್ತೂರಿಯಿಂ ಗಡ್ಡಮಾ
ಸೆಗಳಂ ಗಂಡುಡೆಯುಟ್ಟು ಮಿತ್ರಜನದೊಳ್ಮಾತಾಡುತುಂ ಕಾಡುತ್ತುಂ
ನಗುತುಂ ನೋಡುತುಮಾತನಂತಿರಲಗಂ ತೂಗುತ್ತೆ ತನ್ನಿರ್ಪ ಚೌ
ಕಿಗೆಯಂ ಪೊಕ್ಕೊಡೆ ಸಸ್ಪೃಹಂ ಸವತಿ ತಂದಳ್ಕಾಲ್ಗೆ ನೀರಂ ಸಖೀ

ಮತ್ತಮೊರ್ವಳತಿ[1]ಚತುರೆ[1] ತನ್ನ ಕೆಳದಿಯ ವೃತ್ತಾಂತಮನಿಂತೆಂದಳ್

ಸೀಯನೆ ಪೇೞ್ವ ಕಾದಲನ ಮಾತನೆ ಭಾವಿಸಿ ಕೇಳ್ವ ಭಾವಮೊ
ಲ್ದೀಯೆ ನಿಜೇಶನಂ ಮನಮನೀಕ್ಷಿಸಿ ನಾಣ್ಚುವ ಪೇೞ್ವ ತಂಗೆಯಂ
ಬಾಯೊಳೆ ಬಾಯನಿಟ್ಟು ನಱುದಂಬುಲಮಿಕ್ಕುವ ಮುಗ್ಧೆ[2]ಯಂ[2]ದುಮೊ
ಟ್ಟಾಯತದಿಂದಮಾನಱಿದೆನಾಕೆಯ ವಲ್ಲಭನಾತನೆಂಬುದಂ ೯೧

ಮತ್ತಮೊಂದು ವಿಟಗೋಷ್ಠಿಯಳೊರ್ವಂ ಸೂಳೆಗಾೞಿ ಬೋಜಗಂ

ನಿಱುಗಳನಿಕ್ಕಿ ದಾಂಟಿಸದೆ ದುಂಡಿಸುವಾಕೆಯನೊತ್ತೆಗೊಳ್ಳದಂ
ತೆಱೆಯದೆ ತೇಪೆಗುಳ್ಳ ಬಳಿನೀರ್ಗಳನಗ್ಗದ ಪೆಣ್ಗೆ ಮೆಯ್ಯನೆ
ಯ್ದಿಱಿಯದೆ ಮತ್ತೆ ಪೇಸಿ ಪೆಱರಪ್ಪದವೋಲ್ ಸ್ಮರಭೈರವಂಗೆ ಪೆ
ಣ್ಗುಱಿಗಳನಿಕ್ಕದೊಂದೆರಡನೇಂ ವಿಟವೃತ್ತಿಗೆ ಮುಯ್ವನಾಂಪುದೇ ೯೨

ಮತ್ತೊರ್ವ[3]ನ[3]ಗಡಿನ ಪೆಂಡಿರೊಳ್ ವ್ಯವಹಾರಮಲ್ಲದೆ ಬೇಟಮಿಲ್ಲೆಂದ ನಿರ್ಗೇಡಿಬೋಜಗಂಗೆ ಸೊಬಗುಬೋಜಂಗನಿಂತೆಂದಂ—

ಆವೆಡೆ ಬೇಟವಿಂದಿನವರ್ಗಂದಿನ ಮಾಳತಿಯಂತೆ ಮಿಕ್ಕ ರ
ತ್ನಾವಳಿಯಂತಿರೆನ್ನ ದಿರಿಮಿಂದಿನ ಚಂದ್ರಿಕೆ ಕಂದು ನಾರ್ತುದೋ
ಗ್ರಾವರದಿಂಪದೇಂ [4]ಪಟ[4]ಸಿತೋ ರತಿ ಮುತ್ತುದೊ ಮೊಟ್ಟನಾದುದೋ
ಕಾವನ ಕೈದು ತೆಂಬೆಲರ ತೀಡದೊ ಪೂವಿನ ಕಂಪು ಕೆಟ್ಟುದೋ ೯೩

ಮತ್ತಮೊರ್ವ ನೆವಕಾಱನಿಂತೆಂದಂ—

ಪಣವೆ ದಿಟಕ್ಕೆ ಸೂಳೆವಸೆಗಲ್ಲ[5]ದದೆತ್ತ,ಗುಣಂ[5] ಧನಂಗಳಂ
ಗಣಿಯಿಸದಿತ್ತು ಸಾರಸುಖ[6]ಮುಳ್ಳೊಡೆಯಂತದು[6] ಮಾತೆ,ಕೂರ್ತವಂ
ರಣಿಸಿವಡುತ್ತೆ ಪತ್ತು[7]ವೊಡಮರ್ಥಿಗೆ[7] ಕತ್ತಿಗೆ,ಸೂಳೆ [8]ಡಾಳೆ[8] ಕೂಂ
ಟಣಿ[9]ತ[9]ಣ್ಣೆಯಂತೆ ಮತ್ತೆ ಮನೆ ತೀ[10]ಸ[10] ತವರ್ಮನೆ[11]ಯೆಂತು[11] ಪತ್ತುವರ್ ೯೪

---

[1] ಚಪಳೆ (ಖ ಗ) [2] ಯೊಂ (ಖ) [3] ನಾ (ಘ) [4] ಬಳ (ಕ ಘ) [5] ದೆ ತೆತ್ತು ಪಣಂ (ಕ ಖ) [6] ಮೆಳ್ಳೆರ್ದೆಯಂತದು (ಕ) ಮಳ್ಳೆರ್ದೆ ವಿಾಯದ (ಘ) [7] ಪತ್ತುವಿಡುವತ್ತಿಗೆ (ಕ ಘ) [8] ದಾಡೆ (ಖ) [9] ಗ (ಖ) [10] ನಿ (ಕ ಘ) [11] ಯೆತ್ತು (ಖ)

ಮತ್ತಮೊರ್ವನತಿಪ್ರೌಢಂ—

ಕಡೆಗಣ್ಣೊಂಟಣಿವಾತು ದೂದವಿ ಮಸಂ ತಾಯ್ತೊಂದೆ ಬಲ್ಗೆಯ್ತಮೊ
ಲ್ದೊಡಪಂದಂ[1]ಸ[1]ಲೆ ತನ್ನ ಬರ್ದುರ್[2]ಬಳಮದೊರ್ಪ್ಪಾ[2]ಯಿಲಂ ಕೂರ್ಮೆ ಕೈ
ಮಡಕಂ ವಂಚನೆ ಮಿಕ್ಕಮಾನಸಿಕೆ ಮಂಚ[3] ಮಂಚಲಂ ತಾನೆ ತಾಂ
ಗೆಡೆವಳ್[3] ಪತ್ತಿದರಾರೊ[4]ಧೂರ್ತ[4] ಪಿಟಹೃತ್ಸಂತಾಪೆಯಂ ತೇಪೆಯಂ ೯೬

ಪಣಗೊಳ್ವಳ್ ಚೆಲ್ಲದಿಂದಂ ಚದುರನ ಚದುರಂ, ಸೇ[5]ಸೆ[5]ಗೊಳ್ವಳ್ ರತಂ ತೋ
ರಣಪೆಂಬಂತೀಕೆ [6]ಸೋಲ್ತೊರ್ಬಸದ ಬಸನಿಯಂ[6], ಕೂರ್ತನಂ ತೊಂಡಿನಿಂ ಕುಂ
ಟಣಿ ಮಾಳ್ಪಳ್ಕೇಣದಿಂ ನಾಣೊಡೆಯಸನೆಡೆಯೊ[7]ಳ್ನಿರ್ಧನಂ[7]ಮಾಳ್ಪಳಿಂತೀ
ಗಣಿಕಾಸಂದೋಹದೊಳ್ತೇಪೆಯೆ ಪುರುಷಗುಣಶ್ರೀಗಳಗ್ರಾ[8] ಹಿಯಲ್ತೇ[8]

ಗುಣದಿಂ ಕೂ[9]ರಿ[9]ಸಿ ಗಂಡರಂ ಕವರ್ದುಕೊಂಡುಳ್ಳರ್ಥಮಂ ಜೇಟಲ
ಚ್ಚಣಮಂ ಮುನ್ನಿಸದೇಸುಮಿಲ್ಲ ತೊವಲೆಂಬಂತಾಗೆ ಮೆಯ್ಯೊಳ್ಖ
ವ್ರಣಮಂ ಮಾಳ್ಪುದೆ ತೇಪೆಗುಳ್ಳ ಬಿಸದಂ ಮುಂಗ[10]ಯ್ಯ[10]ಳೊಳ್ ಜ್ವಾಲತಾ
ಕಿಣಮಂ ಮಾಡಿದಳೀಕೆಯುಲ್ಲಳೆ [11]ಸಮಾಕೃಷ್ಟೇ[11]ಕ್ಷುಕೋದಂಡನಾ ೯೮

ಮತ್ತಮೊರ್ವಂ ಸ್ತ್ರೀಪುರುಷಜೀವಗುಣಗಣವಿಧುರಂ—

ಗಂಡರ ಚಿತ್ರಮಂ ಪಡೆದೊಡಲ್ಲದೆ ಕೇಳ್ವಡಪಿಲ್ಲ ಸೂಳೆಯೊಳ್
ಪೆಂಡಿರೊಳಲ್ಲದಿಲ್ಲ ಸುಖಮೆಲ್ಲಿಯುಮೇದೊರೆಯಂಗಮಿಕ್ಷು ಕೋ
ದಂಡನನಿಕ್ಕಿ ಗೆಲ್ದು ಗಡಯೆತ್ತಿಸಿದುತ್ತಮವೀತರಾಗಸುಂ
ಕಂಡನೆ ಮುಕ್ತಿಯೊಳ್ನೆರೆಯದನ್ನೆಗ[12]ಮೇಂ ಗಡ[12]ಸಂತಸೌಖ್ಯಮಂ ೯೯

ಎಂದೆಲ್ಲರ್ಗಭಿಮತಸಾದಂ. ಮತ್ತೊರ್ವಂ ನೀಸೀಗಳಾಕೆಯ ಮನೆಯತ್ತ
ಲೇಕೆ ಪೋ[13]ಗೆ[13]ಯೆಂದತಿಪ್ರಿಯವಯಸ್ಯಂಗೆ—

ಒಡೆದುಗಿದಲ್ಲದೇಂ ಪಿಡಿವಳೇ ಸೆಱಗಂ ಸೆಱೆ ನಾಣ ತಾಣಮಂ
ಬೆದಕದೆ ಸೈತೆ ಸೋಂಕುವಳೆ ಬೂತುತನಂ [14]ಪೆಱಗಾಗೆ[14] ಮಾತುಗು
ಟ್ಟಿದಪಳೆ ಬೀದಿಯೊಳ್ಬಗಿದು ಮುಂದಲೆಯೊಳ್ ಕಿಱುಸೆಕ್ಕಸಿಕ್ಕಿದ
ಲ್ಲದೆ ಮಱುದಾಕೆ ಸಕ್ಕಱುವಳೇ ಸುಡು[15]ವಳ್[15]ಗಳ ಗಾಳು[16]ಗಂ[16]ಡಸಂ ೧೦೦

ಅದಲ್ಲದೆಯುಂ—

[17]ಬರಡಗೆ[17]ಯೇಱುದಂ [18]ದಸಿಯ[18] ಸೂಲಮನೇಱುದಸೊತ್ತೆಗೊಟ್ಟವಂ
ಕರೆಪಭಿಮಾನಮಂ ಪೆಱರ್ಗೆ ಕೊಟ್ಟವನ್ಸ್ಯಱುದುಯ್ದು ರಾಗದಿಂ

---

[1] ಬ (ಕ ಖ) [2] ಬಳಮದೊಳ್ಪಾ (ಗ) [3] ಸಜ್ಜುವಂ ತಾನೆ ಸಾಲಿಡುವಳ್ (ಗ) ಚಂಚಲಂ . . . . (ಘ) [4] ದತ್ತ (ಖ) [5] ದೆ (ಕ) [6] ಗೆಲ್ದುಬ್ಬಸದ ಬಸನಿಯಂ (ಕ) ಗೊಲ್ದುಬ್ಬ . . . (ಘ) [7] ಳ್ ಲದ್ಧನಂ (ಕ) [8] ಹುವಲ್ತೇ (ಕ ಗ) [9] ಡಿ (ಗ) [10] ಯ್ಯ (ಕ ಘ) [11] ಲಸತ್ ಕೃಷ್ಣೇಕ್ಷು (ಘ) [12] ಮಂಗಜ (ಕ) [13] ದೆ (ಕ ಘ) [14] ಪೊಱಗಾಗೆ (ಕ ಘ) [15] ವೆಂ (ಕ ಘ) [16] ಗುಂ (ಕ ಘ) [17] ಬಱಗಡೆ (ಗ) [18] ಬಸಿದ (ಖ ಘ)

ನೆರೆದ[1]ನೆ[1] ದೂಳಿಯೊಳ್ನೆರೆದನಾಕೆಯ ಹಾಸಮೊ ಬೊಮ್ಮಹಾಸಮೋ
ತರುಣಿಯ ತೋಳೊ ಬಾಳೊ ಸುಡು ಸೂಳೆಯ ಕೂಟಮೊ ಕಾಳಕೂಟಮೋ ೧೦೧

ಎಂದು ವಿರಕ್ತನಾದಂ. ಮತ್ತೊರ್ವಂ ನೀನೀಗಳಾಕೆಯ ನಣ್ಪನೇಕೆಮಾಣ್ದೆ ಯೆಂದಾ ಕೆಳೆಯಂಗಿಂತೆಂದಂ—

ನುಡಿಯೆಲ್ಲಂ [2]ಹೊ[2]ಲೆ,ಸೂರುಳೊಳ್ನಿಱ[3]ಪೊ[3]ಸಂತಿಲ್ ಪೊಂಗೊಳಲ್[4]ಪು[4]ತ್ತುವಾ
ಯ್ಕುಡಿನೀ[5]ರೊರ್ವಗೆ[5] ಕಮ್ಮನಪ್ಪ ಬಳಿನೀರೂ[6]ರೂರ್[6]ದೈವಂಗಳುಂ
ಪಡಿಗೆತ್ತೋಡಿದುವೀಕೆಗಂಜಿ ವಿಟರೆಂದುಂ ಗೆಂಟು ತಮ್ಮಬ್ಬೆ ಸ
ತ್ತೊಡವಿಾ[7]ನಂಜಿನ[7]ಪೆಣ್ಣ ಕಣ್ಗೆ ಹುಸಿಕಣ್ಣೀರಲ್ಲದೇಂ ಬರ್ಕುಮೇ ೧೦೨

ಅದಲ್ಲದೆಯುಂ—

[8]ಮನಮಂ ಬೆಟ್ಟಿತುಮಾಡಲೆಂದೆ ಬಿಡುವಳ್ ಬಲ್ದೋಂಟಿಯಿಂಬೇಂಟದೊಳ್
ಮನಮಂ ಬೇಂಟಮನಾಗಳಂತೆ ಬಳಿವಳ್[8] ಬಲ್ಗಿಯ್ತುದಿಂದೊತ್ತೆಯಾ
ಣ್ಮನೊಳಂ,ಮೆಯ್ಯನೆ ಮಾಱುವಾಕೆ ಭವಮಂ ಪೇಱ್ಮಾಱಳೇ ಸಂತೆಯೊಳ್
ಧನಕಾನಾಱನೆನಿವಳ್ಗೆ ದೈವವಱಿಗಿನ್ನೀ ಸೂಳೆಯಂ ಡಾಳೆಯಂ ೧೦೩

ಮತ್ತಮೊರ್ವಂ ಕಾಮಕಳಾಕೇಳೀಶೀಲನಿಂತೆಂದಂ—

ನೆತ್ತಮನಾಡಿ ಸೋಲ್ತಧರಮಂ ಕಡುಪಿಂದೆನಗಿತ್ತು ಕೊಳ್ವ ತಾಂ
ಮತ್ತಱುತೀವ ಮತ್ತೆ ನಗು[9]ತಂ ತೆಗೆದಾಂ ಪಿಡಿದೀಂಟೆ[9]ನೊಂದು ಬೈ
ಯುತ್ತಮೆ ಮತ್ತೆಯುಂ ಕುಡುವ ಸಾಲ್ವುದು ಸಾಲ್ವುದೆನುತ್ತೆ ಮೋದಿ ಕಾ
ಡುತ್ತುಮೆ ಮತ್ತೆ ಕೊಳ್ವ ಕಿಳಕಿಂಚಿತಮೊಪ್ಪುವುದೆನ್ನ ನಲ್ಲಳಾ ೧೦೪

ಮತ್ತಮೊರ್ವ ಸೌಭಾಗ್ಯಭವನಂ—

ತಡೆದಾಂ,ಪೋಗೆ ಸಗರ್ವಮಡ್ಡಮಿಡುವಳ್ ವಕ್ತ್ರಾಬ್ಜಮಂ,ಜರ್ಬುವಳ್
ಕುಡಿವುರ್ಬಿಂ,ಕುಚವಸ್ತ್ರಮಂ ತೆಗೆಯೆ ಸಾವನ್ನಂ ನಗು[10]ತ್ತಿರ್ಪಳು.
ಳ್ಳು[10]ಡೆಯಂ ಮೆಲ್ಲನೆ ಲೀಲೆಯಿಂ ಸೆಳೆದೊಡೆನ್ನಂ ಸಸ್ಪೃಹಂ [11]ಕೊಳ್ವ[11]ಪೊಲ್
ಕಡೆಗಣ್ಣಿಂದಮೆ [12]ಕೂಂ[12]ಕುವಳ್ ಸಹಜಮಿಾ ಬಿಬ್ಬೋಕಮೆನ್ನಾಕೆಯಾ ೧೦೫

ಎಂದನಂತರಂ ಭಿನ್ನರುಚಿಗಳಪ್ಪ ವಾಚಾಳವಿಟವಚನಂಗಳಲ್ಲದೆ—

---

1 ಡೆ (ಕ ಫ) 2 ಪೊ (ಕ) 3 ಪೊ (ಕ ಫ) 4 ಪ (ಖ) 5 ರೇಂ ವಿಂಗೆ (ಕ ಫ) 6 ರದ (ಫ) 7 ನಂದದಿ (ಕ ಫ) 8 ಮನೆಯುಂ ಬಿಟ್ಟವನ್ನೆದನೆಂದು ಬಳಿವಳ್ ಬಲ್ದೋಂಟಿಯುಂ (ಬಲ್ದೂದಿಯಂ) ಬೇರದೊಳ್ ಮನಮಂ ಬೆಟ್ಟಿತುಮಾಡಲೆಂದು ಮುನಿವಳ್ (ಗ) . . . ನಾಗಳಂತೆ ಪಡೆವಳ್ (ಫ) 9 ತುಂ ತೆಗೆವಾಂ ಪಿಡಿಯಲ್ಕೆ (ಖ) . . . ತೆಗೆ ತಾಂ ಪಿಡಿ . . . (ಗ) 10 ತ್ತಂ ಸಡಿಲ್ದು (ಕ ಫ) 11 ಕೊಲ್ವ (ಕ ಫ) 12 ಕೊಂ (ಗ)

ಕರೆಯದೆ ಕಾಡಿ ಕಂಟಿಸುವ ಕೂಂಟಣಿಯಂ[1]ನೊಣೆಗಬ್ಬೆ[1] ತಿಂಗೆ ಬೆಂ
ಗುರುಟಿ ಬಳಾರಿ ಬಾಡಿಸುಗೆ ಚಂಡಿಕೆ ಸುಂಗುಗೆ, ಮಿಱುತ್ತು ತುತ್ತು[2]ಗ
ಱ್ಕುಱು[2]ಸುಗೆ ಕಾಳಿ ಕೊಳ್ಳೆಱೆಯಪಂ ಮುಱಿದಿಕ್ಕುಗೆ ಮಾರಿ, ಭೈರವಂ
ಹರಹುಗೆ ಮೇಳಿಯಂ ಮುಱಿಗೆ ಮ್ಲಾಳಬೆಗಿಂದು ಪೊಗಾರವೆತ್ತುವೆಂ ೧೦೭

ಗಾಳಿಸು ಗೆಲ್ವನಂ ಹರಹು ಹೂಜಿಗನಂ ಸುಲಿ ಸುತ್ತುಗಾಱನಂ
ತಾಳಿಸು ತೇವಸಂ ಕುಡದೆ ಕಾಡುವನಂ ರಸಬೋನವೆತ್ತು ಮಾ
ಕಾಳಿಗೆ[3]ಡಾ[3]ಳನಂ [4]ನೆ[4]ಗವು ಟಕ್ಕಿಪನಂ ತುಟಿ ಮೇ[5]ಗು[5]ದೋರ್ಪನಂ
ಮಾಳ[6]ಬೆ[6]ಗಿಕ್ಕು ಪೂಱು ಪುಸಿವನಂ ಪೊಸೆದಿಕ್ಕುಗೆ [7]ಪಚ್ಚೆ ಗಾಱ[7]ನಂ ೧೦೭

ಎಂಬ ದರಿದ್ರವಿಟವೇಶ್ಯಾಲಾಪಂಗಳುಮನಲ್ಲಲ್ಲಿಗೆ ನಿಂದು ಕೇಳುತ್ತುಮುಚಿತಾನುಚಿತಚೇಷ್ಟೆಗಳುಮಂ ಪ್ರಚ್ಛನ್ನದಿಂ ನೋಡುತ್ತುಂ ನಾಗರಕಾದಿಚತುರವಚನಂಗಳನಾಲಿಸುತ್ತುಂ ಕಂದರ್ಪದೇವಂ ಬರ್ಪಾಗಳೊರ್ವಳ ಪೊಗದ ಸುಣ್ಣಂಗಂ ಕಣ್ಣ ಬೆಳ್ಪಿಂಗಮೊತ್ತೆಯಿಟ್ಟ ಗೂಟ್ಟಿಗಿರಲ್ಪೋಗಿ ಪರಿತಂದು ವಿದೂಷಕಂ ಸತ್ತೆನೆಂದು ಭಯಮನಭಿನಯಿಸೆ—

ಕಾವುದು ದೇವ ಯಾಚಕನನಂಜದಿರಂಜದಿರೇಕೆ ನೇಲ್ಪ ತೋ
[8]ಲ್ಪಾ[8]ವಲೊ [9]ಮ[9]ತ್ತವಾರಣದ ಸೊಂಡಲೊ ಕಾರ್ದೆರ್ವುತ್ತಿನಿಂದೆ ಪೆ
ರ್ಬಾಪೆರಡೊಡ್ಡುಗೊಂಡು ಪೊಜಮಟ್ಟುವೊ ಪೋದೊಡೆ ಪೊಯ್ದುವೆನ್ನನೋ
ವೋವತಿಭೀತಿಯಾದವುದು ಸೂಳೆಯ[10]ಸೋರ್ಮೊ[10]ಲೆಗಂಡು ಭೂಪತೀ ೧೦೮

ಎಂಬುದುಂ [11]ತದೀಯ ಕರಮಂ ಕರದಿಂ ಪೊಯ್ದು[11] ನಿನ್ನ ಸಾವು ಪುಸಿಯಿದಂ ಕೇಳ್ದರಂ ನಗೆಯ ಕೈಯೊಳ್ ಬಿರಿದು ಸಾವಂತೆ ಮಾಡಿದೆಯೆಂದಾನಂ ನುಡಿಯುತ್ತುಂಬರೆ; ಮತ್ತೊಂದೆಡೆಯೊಳ್—

ಅಡರ್ದ ಕುಚದ್ವಯಂ ದಯಿತೆ ಬಿರ್ದುವಿದೇಕೆನೆ ಬರ್ದೆಯೆಂದಳಿಂ
ತಡಿಗಡಿಗೋಪ ನೀಂ ಸರಸಕಾಮನಿವಾಸದೊಳಿಟ್ಟ ಕ[12]ಯ್ಗಳಿಂ[12]
ಪಿಡಿದಿರೆ ತಮ್ಮೊಳಿಟ್ಟು ಸವಿದೋಱದ ದೂಸಱುನೊಂದಹರ್ನಿಶಂ
ಕೆಡೆದವುವಿಲ್ಲಿಗಾಸ[13]ಱು[13]ಗೆ ಪೆರ್ಮೊಲೆಯಲ್ಲದೊಡಿಂತು ಬೀಱ್ಗಮೇ ೧೦೯

ಮತ್ತಮೊರ್ವನೊಳ್ಕಾದಿ ಮುಳಿಸಿನೊಳ[14]ಮಿಟಿ[14]ಯಿಕ್ಕಿ ಕಾಡುವ ಕಱಂಡು ಬೊಜಗನಂ ಪಿಡಿದು—

---

1 ನೊಣಗಜ್ಜ (ಘ) 2 ಗುಕ್ಕಱು (ಕ ಘ) 3 ಕಾ (ಕ) ಗಾ (ಘ) 4 ತೆ (ಕ) 5 ಕು (ಖ) 6 ಚಿ (ಘ) 7 ಪಚ್ಚಕಾರ (ಕ ಗ) 8 ಳಾ (ಖ ಘ) 9 ಚಿ (ಕ ಘ) 10 ಬೀಳ್ಮೊ (ಘ) 11 ಕಟಕಿಯ ಕಡಾರಂ ಕೊಯ್ದುದೆಂಬವನಂತೆ ಗೆಯ್ದು (ಖ) ಕಟಿಯ ಕಟಿರ ಕೊಯ್ದಂತೆ ಗೆಯ್ದು (ಕ) 12 ಯನಿಂ (ಖ) 13 ವಿ (ಕ ಖ) 14 ಮುಳ್ಮುಳಿ (ಗ) ಮುಳು ವಿಳಿ (ಕ)

ಜಗುಳ್ವೆಯಿದಿರ್ಕೆ [1]ಸ[1]ಬ್ಬವೆನಗಿಲ್ಲದ ದೋಷಮನಿಟ್ಟು ಹಟ್ಟಿಗಾ
ಳೆ ಗ[2]ಳಹಿ[2]ಯೆಂಬುದಂ ಕರೆಯದಿರ್ದೊಡೆ ನೀವ್ಮನೆಗಂಕಮಪ್ಪಿನಂ
ಜಗಳಮೆಯೆಂದೊಡೊಪ್ಪಿಸಿದ[3]ನಿ[3]ನ್ನಯ ಸಣ್ಪೆ ದಲೆಂದು ತಂದ ಹು
ಟ್ಟಿಗೆ[4]ಯಿ[4]ಟಿದೇಡ್ಮೊಳಂಗಟಿದು ಸೇದೆಯ ಬಾವಿಯೊ ಬಂದ[5]ದಾವ[5]ಯೋ ೧೧೦

ಮತ್ತಮೊರ್ವಳ್ ಬಿಡದೆ ಪುರುಡಿಸಿ ಪಿಡಿ ಪಿಡಿಯೆಯುಮೊಟ್ಟೈಸಿ ಪೋಪ ಬೊಜಗನಂ [6]ಪಿ[6]ಡಿದಿಂತೆಂದಳ್—

ಆವೆಡೆಯಿಚ್ಛೆ ನೀಂ ತಳರ್ದೊ[7]ಡೊ[7]ತ್ತಿದುದಿಂತಿದು ನೀಂ ಕೊರಲ್ಗೆ ಬೆ
ಳ್ಗಾವಿಯ ಪೊನ್ನೆ, ನೀಂ ಕುಡುವ ಹುಟ್ಟಿಗೆ ಕಣ್ಬನಿಯಿಂದೆ ನಾಂಗುಪೇ
ಗೋವನೆಯಪ್ಪೆ[8]ಯಿರ್ಪೊಡಿರು[8]ಪೋಪೊಡೆ ಪೋ[9]ಗ[9]ಸಿತೇಕೆ ನಾಯ್ಗೆ ತೆಂ
ಗೇವುದೊ ಕಾಗೆ[10]ಗೇವುದೊ ರಸಾಯನಯುಕ್ತದ ಸಾರಭೋಜನಂ[10] ೧೧೧

ಮತ್ತಮೊರ್ವಳೊಂದೆಡೆಯೊಳ್—

ಕಿತ[11]ವ[11]ಯಿದೆಲ್ಲಿಗಂಗಡಿಗೆ, ತಂಬುಲಮಂ ಪಿಡಿ, ಕೆಮ್ಮಗೆಮ್ಮೊಳೇಂ
ಸಿತಗೆ[12]ಯಿ[12]ದಾವ ಮಾತು, ನಡೆ, ಪೋಗಿಯೆ ಬಾರೆನೆ ಬಾರ[13]ದಿಂದೆ[13]ಯಾ
ಣತಿಬಡೆ[14]ದುಂ ಮಗುಬ್ಮಗುಡೆ[14]ಬಂದಪೆ ಬಂದಪೆನ್ನೊಲ್ಲೆ ಸ್ನೆಲ್ಲಿ ಹು
ಟ್ಟಿತೊ ಶಿವಧರ್ಮವೆಂದೆಡೆದಳೋವರಿಗೊರ್ವನನೊರ್ವಳತ್ತ್ರಿಯಿಂ ೧೧೨

ಮತ್ತಮೊಂದೆಡೆಯೊಳ್—

ನಡೆನಡೆವಂತಿರೇಂ ಭಯಮೆ[15]ನೋಡಿರೆ[15]ನೋಡ್ಪೊಡೆ ಪೊನ್ನೆ ನಣ್ಪಿನಿಂ
ನುಡಿ, ನುಡಿವಂತು ಬ[16]ಕು[16]ಡಿಯೆ, ಬಾರೆಲೆ, ಬರ್ಪೊಡೆ ಪೋವೆ, ಮಾನವಂ
ಬಿಡು, ಬಿಡುವಂತಿರೇಟಿದಿಕೆಗಂಡನೆ, ಗಂಡನೆ ಕೇಳ, ಪೇಟು[17]ಪೇ[17]
ಡ್ಪೊಡೆ ಕವಿರಾಜಕುಂಜರನ ಕಬ್ಬಮೆ, ಕೆಮ್ಮಸಿದೇಕೆ ಸಮ್ಮದಂ ೧೧೩

ಅಂತು ಪೊಲ್ಲಕೆಯ್ದು ಕಾದಲಳನುಡುಬಿ[18]ದೇಬಿಂ[18]ನುಡಿದು ಪೋದನೊಂದೆಡೆಯೊಳೊರ್ವಳ್ ರತಲಾಂಛನಮಂ ಕಂಡು ಕಡುಮುಳಿದು[19]ಪ[19]ರ್ದಡುವ ಸಮಸಂಕರಮಂ ಪಡಿಯುಮಂ ಕೈಕೊಳ್ಳದಿರ್ದ ಬೊಜಂಗನಲ್ಲಿಗೆ ತಾನೆಪೋಗಿ,

ನೆಸೆಯದಿರೇನುಮಂ ನೆಸೆವೆಯಪ್ಪೊಡೆ ನೀಂ ನೆಸೆಯೆನ್ನ ಮಾಟ್ಪ ಬ
ರ್ದನೆ, ನೆಸೆವಂದು ಸೂಳೆತನವೆಂಬುದೆ ಕಷ್ಟಮದರ್ಕೆದೇಕೆ ಪೇಟ್
ಮನಕತವೆನ್ನ ಮಾಟ್ಪ ಬದಗೇಂ[20]ಪೆಟಿತಾ[20]ದುದೆ, ಬೇಡ[21]ಕ[21]ಮ್ಮಗಂ
ಮನೆ ಗುಸುಟೇಕೆ ತನ್ನ ಸುಖಕಲ್ಲದೆ ಕೇಳಿಕೆ ಯಾರ ಬಿಟ್ಟಿಯೋ ೧೧೪

---

[1] ಗ (ಘ) [2] ಹಳಿ (ಕ) [3] ಳಿ (ಘ) [4] ಯ (ಕ ಘ) [5] ತಾವಿ (ಕ ಘ) [6] ಬ (ಖ) [7] ಳೊ (ಕ ಘ) [8] ಯಪ್ಪದಿರು (ಕ ಘ) [9] ಯಿ (ಗ) [10] ಗೇವುದನಿದೇವುದೊ ಕತ್ತೆಗೆ ಕ್ಷೀರಭೋಜನಂ (ಕ ಘ) [11] ವಿ (ಖ) [12] ಗಿ (ಗ) [13] ನಂದಿ (ಕ ಘ) [14] ದುಮ್ಮಗೆಲ್ಲಗಳೆ (ಕ ಘ) [15] ನೋಡವೊ (ಕ ಘ) [16] ಳ್ಕು (ಘ) [17] ಕೇ (ಗ) [18] ನೆಬಿಂ (ಘ) [19] ಪೊ (ಕ ಘ) [20] ಬೆಬಿಗಾ (ಕ ಘ) [21] ಕ (ಕ)

ಎಂದು [1]ಬಿ[1]ಸಿದುಮಸಿದುಮಂ ತೋಱಿ ಸುಡಿದೊಡಂಬಡಿಸಿದಳಾ ಪ್ರಘಟ್ಟಕಮಂ ಕಂಡು ಮಕರಂದನರಸಂಗಿಂತೆಂದಂ—

ಪಡೆದುಣ್ಬ ಪೆಣ್ಣೊಳಿರ್ದಾ
ಗಡಿಸೊಪ್ಪಮೆ ಸಾಲ್ವುದುೞಿದುಮೊಳ್ಪಱಸುವನೇಂ
ಕಡುಗಾಂಪನೊ ತಣ್ಣಾಗಿಬಂ
ಪಡವಿನೊಳೆಲೆಗಟ್ಟಿ ಮುಟ್ಟು [2]ಪಡೆದಱಸುವುದೇ[2] ೧೧೫

ಮತ್ತೊರ್ವಳ್ ನೀನೇಕೆಯಿಂತಾದೆಯೆಂದು ಮೊಗಮಱಿದಾಕೆಗಿಂತೆಂದಳ್—

ಸಂಬಿಸಲಾನೆ ಬಲ್ಲೆನಿದಿರಂ ಧನಮಂ ಪಡೆದಾನೆ ಬಲ್ಲೆ ನಿ
ಸ್ನೆಂಬುದೆ ಲಜ್ಜೆ ಪಜ್ಜೆಯ ಪಸುರ್ಮಣಿಯಂ[3]ಕುಡಲಿ[3]ಲ್ಲದಂತು ಬಾ
ಯ್ತ್ರಂಬುಲಮೆಂಬುದಂ ಪಡೆಯದಂತುೞಿ ಮಾಱುಡೆಗಾಣದಂತಿರ
ಟ್ಟುಂಬರಿಗೊಂಡು ತೇದವುದು ಜೇಟಮಿದೆನ್ನಯ ಪಾಪಮಲ್ಲದೇ ೧೧೬

ಅದಂ ಕೇಳ್ದು ವಿದೂಷಕನೀಕೆ [4]ಹುಟ್ಟುಗೆಟ್ಟ[4] ಹುಟ್ಟಗೆಯಂತೆ, ಹಡಣ ಮೊಣಗಿದ ಹಡಿಯ ಸಿದ್ದಿಗೆಯಂ[5]ತೊಣಕಟ್ಟದೆ[5] ಪತ್ರಿದ [6]†[6]ಹಾಬೂರ ನಾಯಂತೆ, [7]ಯೊಡಲಂ ಪತ್ರಿದ[7] ತೊನ್ನರ ತುಟಿಯಂತೆ, ಕಣ್ಣಂಬು ಬಿರ್ದ ಕ[8]ಬಾ‌ರ್ಳೆಯ[8]ಂತೆ ಕಾಗೆ ಹಱಿದ ಹಱುಗಲಂತೆ ಸುಸಿಲ್ದೊಱಿಯಂ ದಾಂಟಿಸಲಾಱದಡಿ[9]ಸತ್ತೊಡೆ[9] ತನ್ನ ದೌರ್ಭಾಗ್ಯಮಂ ಜೇಟದ ಮೇಲೆ ನೆವಮಿಕ್ಕಿದಪಳೆಂದರಸನಂ ನಗಿಸಿದಂ. ಅತ್ತ ಮತ್ತೊಂದೆಡೆಯೊಳ್—

ಸುಡಿದಪೆಯಿಲ್ಲ ನೀಂ ಮಗಳೆ ನಿನ್ನನಿದೇಂ [10]ಪೊ[10]ಡೆದತ್ತೊ ಬಲ್ಗರಂ
ಪಿಡಿದುದೊ ಕಂದಿ ಕುಂದಿದೆಯಿದೇನುರಿ ಕೊಂಡುದೊ ಕೊಂಡುದೆನ್ನನೆಂ
ದೊಡಮದೆ ಮಾತೆ ಮತ್ತೆ ಪೆಱತಾವುದನೆಂಬೆನೊ ಜೇಟಮೆಂದೊಡಂ
ಸುಡು ಗರಮೆಂದೊಡಂ ಸುಡುವ ದಳ್ಳುರಿಯೆಂದೊಡಮೊಂದೆಯಲ್ಲ[11]ವೇ[11] ೧೧೭

ಮತ್ತೊಂದೆಡೆಯೊಳಗೊರ್ವ ಜೇಟಕಾರ್ತಿಯ ಜೇಟಕ್ಕೆ ಜೇಸತ್ತು ಕೆಳದಿಗಿಂತೆಂದಳ್—

ಸತ್ತೊಡೆ ಪೋಕುಮಲ್ಲದೆಡೆಯೊಳ್ಕಡಿಪೋಕುಮೆ ಜೇಟಪಕ್ಕ ಜೇ
ಸತ್ತೊಡೆ ಮತ್ತೆ ಲಜ್ಜೆ ಗಡ ಮತ್ತೆ ಚಲಂ ಗಡ ಮತ್ತೆ ನಾಣ್ಗಡಂ
ಮತ್ತೆ ಬೊಜಂಗಗೊಟ್ಟಿ ಗಡ ಮತ್ತೆ ಸೊಗಂ ಗಡ ಮತ್ತೆ ತಾಯ್ಗಡಂ
ಮತ್ತೆ ಬರ್ದುಂಕುವಾಸೆ ಗಡ ಪೇೞಿದು ಜೇಟಮೊ ದೈವಕಾಟಮೋ ೧೧೮

---

1 ಬ (ಖ) 2 ಪಡಮರಸುವುದೆ (ಕ) ಪಡಮರಸುವರೇ (ಫ) 3 ತಡವಿ (ಕ ಫ) 4 ಹುಟ್ಟಿಜಂಗೆಟ್ಟ (ಕ) ಹುಟ್ಟಿದಂದುಟ್ಟ (ಫ) 5 ಯಂತಣ ಕಟ್ಟಗೆ (ಕ ಫ) 6 ಪೇನಿನಿ (ಕ ಫ) 7 ಬತ್ತಿದೊಡಲಭ್ಯಂತರಂ (ಕ ಫ) 8 ಕಬಾ‌ರ್ಯಂ (ಫ) 9 ಸತ್ತೋದುತುಂ (ಫ) 10 ಪಿ (ಫ) 11 ದೇ (ಕ ಫ)

ಮತ್ತಮೊಂದು ತಾಣದೊಳ್—

ಅ[1]ಡಿ[1]ಯುಸದೇಕೆ ದಂಡೆಗೊಳುತಿರ್ದಪೆಯೀಟ್ಟುಗುಳಿಂದೆ [2]ಸೋವಡಂ[2]
ತೊಡೆ ತೊಡೆಯಿಂದಿಱುಂಕದಿರು ಮೆಲ್ಲನೆ ಪಾಯ್ದುಪೆಯೌಂಡುಗರ್ಚದಿರ್
ಪಿಡಿಯೆನಡರ್ತುರ್ಜ ಬಾಯ್ದೆಱೆಯದಿರ್ ಮೊಲೆಯುಂ ನಿನಗಬ್ಬೆಯಕ್ಕಟಾ
ಕುಡಳೆಯಿದೇಕೆ ಬಿಕ್ಕಿ ಬಿರಿದಟ್ಟುಪೆಯೆಂದನದೊರ್ವ [3]ನೂ[3]ರಿಚಂ ೧೧೯

ಎನೆ ಕೇಳ್ದು ಕಡ್ಡಗೂಂಟಣಿ ಕಿಡಿಯಂ ಮೆಟ್ಟಿದಂತಾಗೆ ಚೌಕಿಗೆಯ ಬಾಗಿಲ್ಗೆ ಬಂದಿಂತೆಂದಳ್—

ಕೇಳತನಕ್ಕೆ ನೀನಿನಿ[4]ದನಿಕ್ಕದೆ ಗರ್ಭದೊಳಿಂತು ಕೊಲ್ವರೇ
ಸೂಳೆತನಂಗಳಂ ಸರಸವಿಲ್ಲದೆ ತಳ್ತೊಡನಿತ್ತು ಪೋಪುದಿ
ನ್ನಾಳಿಯರೊತ್ತಿನೀ ಮಗವು ನಿನ್ನದೆಗೆಯ್ದೊಡನೆರ್ದು ಪೋಪ ಬೆ
ಳ್ಳಾಳೆ ಬೊಜಂಗ ಬೂತೆ ಪಿಡಿ ನೀಂ ಕುಡುವೊತ್ತೆಯಿನಿಕ್ಕುಕಾಡಿನೊಳ್[4] ೧೨೦

ಮತ್ತಮೊರ್ವ ನಿರ್ಲಜ್ಜಕೂಂಟಣಿ—

ಮತ್ತೆ ಬೊಜಂಗರಿಲ್ಲ [5]ಪೊಱಗೊ[5]ಚ್ಚತವೇಂ ನಿನ[6]ಗುಂಟು ತೋಳ್[6]ಚಿ
ಕ್ಕೊತ್ತೆಗೆ ಪೊಕ್ಕೆಯಿಂತು [7]ಶು[7]ನಿ ಯಂತಿರೆ ನಿಲ್ವರೆ, ಸೂಳೆ ಕೇ[8]ಣಿಯೇ[8]
ಒತ್ತೆಗೆ ನಾಣ್ಚೆಯುಂ ಪೊಱಮಡಾಂ ವೊಱೆಯಿಟ್ಟಪೆನೆಂದು ಸುತ್ತಿದಳ್
ಮುತ್ತಿದಳಬ್ಬೆ ಚೌ[9]ಕಿ[9]ಗೆಯನೊರ್ಬಳೆ ಮಾರಿಯ ಮೂರಿಯಂದದಿಂ ೧೨೧

ಮತ್ತಮೊರ್ವಳ್ ಮಗ[10]ಳಂ ನೀರುಂ ಮಾಱು[10]ಮಾಡಿ ಕೊಳಲಣ್ಮದೆ ಚದುರ ಗೂಂಟಣಿ

ನಾಣಿಲಿ ನಿಟ್ಟುರಂ ಸಿ[11]ತಗ[11]ನಾಟವಿಟಂ ತುದಿಗೋಡ [12]ಪಾಱು[12] ನಿ
ನ್ನಾಣೆ ಗಡಾಗಡುಂ ನಿನಗೆ ಕೂರದರೊಳ್ ಬೆರಸಿರ್ಪನಾತನೇಂ
ಮಾಣಿಕದನ್ನರಪ್ಪ ಪೊಸಜಿನ್ನರನೀಗಳೆ ತರ್ಪೆನೆನ್ನ ನೇ
ರಾಣೆಯ ಹೊನ್ನೆಬೇಡವನ ನಣ್ಪಿದನಾಂ ಸೆಱಗೊಡ್ಡಿ ಬೇಡುವೆಂ ೧೨೨

ಮತ್ತೊಂದೆಡೆಯೊಳ್,

ರತಮನೆ ಮಧ್ಯದೊಳ್ ಮಱಿದು, ತಾಂ ಮಗುವಂ ಮೊಲೆಯೂಡಲೀಶಚುಂ
ಬಿತವದನಾಬ್ಜಮಂ ತೆಗೆದು, ತಾಂ ಶಿಶುವಂ[13] ನುಡಿಸಲ್ಕೆ [13]ಬಲ್ಪಿನಿಂ
ಪತಿಪರಿರಂಭಮಂ ಬಿಡಿಸಿ, ಕೂಸಳೆ, ಸಂಬಿಸಲಿರ್ದ ಸೂಳೆವಾ
ಣತಿಯೆರಡರ್ಕೆ ಜಿಟ್ಟ ಕಱುವೋಲೆಡೆಯಾಡಿದಳೊಂದುಗೇಹದೊಳ್ ೧೨೩

1 ಡೆ (ಕ ಫ) 2 ಸೊಡವಂ (ಕ ಫ) 3 ಮಾ (ಕ ಫ) 4 ಸನಿಕ್ಕಗೆ ಗರ್ಭದೊಳಂಸಕಲ್ವರೆ . . . ಸರಸವಲ್ಲದೆ ತುತ್ತಿಡೆಯಿತ್ತು ಪೋಪುದೇಂ ನಾಂ . . . ಮನವು . . . ನಿಡುವೊತ್ತೆಯದೆ (ನೆ)ಂಬ ಶಾಱಿರೆ (ಕ ಫ) 5 ಹೊಱಸೊ (ಕ ಫ) 6 ನಿನಗುಟ್ಟುಕೊಳ್ಳ (ಕ ಫ) 7 ಸು (ಖ) 8 ಳರೋ (ಕ ಖ) 9 ೦ (ಕ ಫ) 10 ಳಂ ನೀಱುಂ ಮಾಟ (ಕ)ಳನಿರು ಮಾಱು (ಫ) 11 ಕಳ (ಕ ಫ) 12 ಪಕ್ಷಿ (ಫ) 13 ಸುದಿಪಕ್ಕೆ (ಕ) ಪೊದಿಸಲ್ಕೆ (ಖ)

ಪರಿಸ್ಫುಟಸ್ಫಟಿಕವೈಶದ್ಯಮಂಚಾಗ್ರದರ್ಶಿತ ಸುರತರಮಣೀಯರಮಣೋಪರಮಣಾ ರಕ್ತರೂಪೆ—

ಸವಿದಪ್ಪಂ ನಿನ್ನುಮಂ ಕೇಳಲೆ [1]ವಧುಮಧು[1]ಬಿಂಬಾಧರಂ ಕಣ್ಗೆ ಕಣ್ಕೆ<br>
ತ್ತುವವೋಲಾತ್ತಂ ಕೆತ್ತೆ ಕೈಕೂರುಗುರಿಸುಗಿಯೆ ಮೇಣ್ ಕೈಯ್ದುಗೆಯ್ವಂತೆ ರೋಮಾಂ<br>
ಚವನೆತ್ತಂ ತಾಳ್ದೆ ತಣ್ಪಿಂ ಸಡಿಲೆ ಮದನಮೋಹಾಮೃತಂ ಮೆಯ್ಗಳಿಂ ಪೊಣ್ಮುವ<br>
ವೋಲ್ ಘರ್ಮೋದ[2]ಮಾದಂ[2] ಬಿಡುತರೆ ಸೆರೆದಳ್ ಕಾಂತಸೊಳ್ಕಾಂತೆಯೊರ್ವಳ್ ೧೩೩

ರಮಣಾಕೃಷ್ಟಾಳಿಕಾಗ್ರಾಳಕತತಿ ವಿಟವಿ[3]ಕ್ರಾಂ[3]ತಭುಕ್ತಾಧರಂ, ಕೃ<br>
ತ್ರಿಮಮೋಹಭ್ರಾಂತನೇತ್ರಂ, ಕೃತಕಕರಲತಾನೃತ್ಯಗೀತಂ, [4]ವೃ[4]ಥಾವಿ<br>
ಭ್ರಮಮದ್ಭ್ರೂಭಂಗರಮ್ಯಂ, [5]ಮಣಿತರುದಿತ[5]ರೋಷೋತ್ಕಟಂ ಕುಟ್ಟನೀ ಕು<br>
ಟ್ಟಮಿತಂ ಮತ್ತೊಂದು ಸೌಧಾಗ್ರದೊಳೊದವಿದು[6]ದುಚ್ಛ[6]ಷ್ಕ ಸೀತ್ಕಾರಸಾರಂ ೧೩೪

ಮತ್ತೊಂದು ಚಂದ್ರಮರೀಚಿಚಂದನಚ್ಛಟಾಸಿಕ್ತವ್ಯಕ್ತರತಿರಮ್ಯಹರ್ಮ್ಯಾಂಗಣವೇದಿಕಾವಿಲಾಸ ಧವಳದುಕೂಲವಸನವಿಶದಶಯ್ಯಾಮನೋಹರಮಣಿಮಂಚದೊಳ್—

ಕಾದಲನುಟ್ಟುದಂ ಸೆಳೆದೊಡೆನ್ನುಮನೆನ್ನ ಮೊಗಕ್ಕೆ ಸೋಲ್ತು[7] ತಾ<br>
ನಾದ[7]ವೊಲಿಂದು ನಾಣ್ಚಿಸಿದಪಂ, ಸಮಯಂ[8]ಬಿಡೆ[8]ನೆಂದು ಚಂದ್ರನೊಳ್<br>
ಕಾದುವವೋಲ್ ಸೆಱಂಗಿನೊಳೆ ಬೀಸಿದಳುಜ್ಜ್ವಲಪುಷ್ಪಮಾಲೆಯಿಂ<br>
ಮೋದಿದಳೂದಿದಳ್ ತರುಣಿ, ತಂಬುಲದಿಂದುಗಿದಿಟ್ಟಳಿಂದುವಂ ೧೩೫

ಅಂತುಮದನೆಲ್ಲಮನಲ್ಲಲ್ಲಿಗೆ ನಿಂದು ನೋಡುತ್ತುಂ [9]ನರ್ಮ[9] ಸಚಿವರೊಳ್ ನುಡಿಯುತ್ತುಂ ಅರಸಂ ಬರ್ಪನ್ನೆಗಂ—

ಊದಿತ್ತುದ್ದಾಮರಾಮಾರತಿಪರಿಮಳಭಾರಾನ್ವಿತಂ ಕಾಮಮೋಹೋ<br>
ನ್ಮಾದ[10]ಜ್ಞಾ[10]ನಾಂಗನಾದೃಕ್ಕುವಲಯಮುಕುಳಾರಂಭಿ ಸಂಭುಕ್ತಕಾಂತಾ<br>
ಸ್ವೇದಾಸ್ವಾದಪ್ರಗಲ್ಭಂ ಸಮರತಸಮರಶ್ರಾಂತಸೀಮಂತಿನೀಸಾ<br>
ಮೋದವ್ರೋನ್ಮಂದಮಂದಶ್ವಸಿತಮೃದು ಮರು[11]ನ್ಮಾರ್ಗಗಂ[11] ಮಾತರಿಶ್ವಂ ೧೩೬

ಅಂತುವೇಳಾತಿ[12]ಕ್ರಮಮುಮನ್ ಇಂತೀ ಕಾಮಿನೀಸಮೂಹ ಸುರತಶ್ರಾಂತಸುಪ್ತಂ ಸಂದರ್ಶನೀಯಮಲ್ತೆಂಬುದಂ[12] ಮಾಸವಮದನಂಗಱಪಲೆಂದು ಬಂದಂತೆ ಬಂದಾ ಮಂದಮಾರುತಂ ತೀಡಲೊಡನೆ,

---

1 ಮಧುವಿದು (ಕ ಘ) 2 ಭಾರಂ (ಕ ಗ ಘ) 3 ಭ್ರಾಂ (ಗ) 4 ವ್ಯ (ಕ ಘ) 5 ರಚಿತರುಳಿತ (ಕ ಘ) 6 ಡೊಳು (ಕ ಘ) 7 ನಾಣ್ಚೋದ (ಘ) 8 ಬಡ (ಕ ಘ) 9 ತನ್ನ (ಖ) 10 ಗ್ನಾ (ಕ) ವ್ಲಾ (ಖ) 11 ನ್ಮಂದಗಂ (ಕ) 12 ಸಮಯುದೊಳಿನ್ನೀಕಾಮಿನೀ ಸಮೂಹಂ ಸುರತ ಶ್ರಾಂತ ಸುಪ್ತರೀ ದರ್ಶಯನೀ ಯಮಲ್ಲೆಂಬುದಂ (ಕ ಖ)

ಅಂತಪ್ಪಾ ರಾತ್ರಿಸಂಭೋಗಮನತಿ[1]ಮುದದಿಂ[1] ನೋಡಿಯುಂ ನಿರ್ವಿಕಾರ
ಸ್ವಾಂತಂ, ಸರ್ಮಪ್ರಧಾನೋತ್ತಮ[2]ಕರತಲ[2]ಕರ್ಪೂರತಾಂಬೂಲದಾನಾ
ತ್ಯಂತಾಭಿಖ್ಯಾನ್ವಿತಂ ಮನ್ನಿಸಿ ಕಳುಪಿ ಬಟಿಕ್ಕಂದು ಪೋದಂ ಜಯಶ್ರೀ
ಕಾಂತೇಶಂ ತನ್ನ ರಾಜಾಲಯಕೆ ಜನಸುತಂ ರೂಪಕಂದರ್ಪದೇವಂ ೧೩೭

ಇದು ವಿದಿತವಿವಿಧಬಂಧವನವಿಹಾರಪರಿಣತ ಪರಮಜಿನಚರಣರಮ್ಯ [3]ಹೈಮಾ[3] ಚಲೋಚ್ಛಲಿತ
ನಖಮಯೂಖಮಂದಾಕಿನೀಮಜ್ಜನಾಸಕ್ತ ಸಂತತೋತ್ಸಿಕ್ತದಾನಾಮೋದ
ಮುದಿತಬುಧಮಧುಕರಪ್ರಕರ ಕವಿರಾಜಕುಂಜರ ವಿರಚಿತಮಪ್ಪ
ಶ್ರೀ ಲೀಲಾವತಿಯೊಳ್ ರಾತ್ರಿವಿಹಾರವರ್ಣನಂ ದ್ವಿತೀಯಾಶ್ವಾಸಂ



[1] ಸುಖಮಂ (ಘ) [2] ನನಮಳ (ಘ) ಹಮಾರ್ಗ್ಯ (ಘ)

## ತೃತೀಯಾಶ್ವಾಸಂ

ಶ್ರೀಪತಿ ಫಣಿಶಯ್ಯೆಗೆ, ಗಂ
ಗಾಪುಳಿನತಳಕ್ಕೆ ದಿವಿಜವಾರಣ[1]ಹಂಸಂ[1]
ಪೋಪಂತೆ, ಪೋಗಿ ಕೃ[2]ತಿ[2]ಕುಲ
ದೀಪಂ ಪವಡಿಸಿದನಮಳ ಶಯ್ಯಾತಳದೊಳ್ ೧

ಅನ್ನೆಗಂ—

ತೊಡರೆ ಮಿಾನ್ ಮೃಗಲಾಂಛನಧೀವರಂ
ತಡಿಗೆ ಬೀಸಿದ ಜಾಲಮನೊತ್ತಿ[3]ತಂ
ದ[3]ಡಸಿ ಬಾಂ[4]ಗೆಱೆ[4]ಯೊಳ್ ತೆಗೆವಂತೆವೋ
[5]ಉಡುಗಿ [5]ವಂದುವು ತಣ್ಗದಿರೋಳಿಗಳ್ ೨

ಅಲ್ಲಿಂ ಬೞಿಯಿಂ—

[6]ವಾರುಣಿ[6] ಕಳ್ಸೆಂಟಿ ಮಱದಿಕ್ಕಿದ ಬಟ್ಟಲೊ, ಭೀತಿಯಿಂ ನಿಶಾ
ಸ್ವೈರಿಣಿ ಪೋಗೆ ಬಿರ್ದ ಕಿವಿಯೋಲೆಯ ಮೌಕ್ತಿಕಪತ್ರಮೋ, ನಭೋ
ವಾರಣಮೊಲ್ಲದೊಕ್ಕ ದಧಿಪಾಂಡುರಪಿಂಡಮೊ ಪೇೞಿಸಲ್ಕೆ ನೀ
ಹಾರಮಯೂಖಮಂಡಲಮದೇನೆಸೆದಿರ್ದುದೊ ಪಶ್ಚಿಮಾದ್ರಿಯೊಳ್ ೩

ಮತ್ತಮಿನಿಸಾನುಂ ಬೇಗದಿಂ—

ಪುಡಿಯಡರೆ ನಿಮಿರ್ದ ಪೈತ್ರಿನ
ಪುಡಿ ಕೆಡೆದತ್ತಾಲಮೋಲೆದುದದಱಡಿಯೊಳ್ ತೂಂ
ಕಡಿಪ ಮಿಗಂ ಮುಂದಣ್ಗೋ
ಗುರ್ಡಿಸಿದುದೋ ಪಡುವ ಪಡ್ತುವ ಮೃಗಲಾಂಛನನಾ ೪

ಪೊಳಪಿಂ[7]ಬು[7]ವೋಯ್ತು, ತಾರಗೆ
ಗಳು[8]ಗುಱಿದುವು[8] ಹಿಮಕರಂಗೆ ವಾಯ್ದ ಚಕೋರಾ
ವಳಿ ಜೆಬಿಗಾದುವು, ಕುಮುದಂ
ಗಳ ನಗೆ[9]ಯೆ[9]ಗೆಯೆತ್ತಿ ಪೋಯ್ತು ಮುನ್ನೇಸಱನೊಳ್ ೫

---

[1] ಮರಸಂ (ಕ) ಮದು ತಾಂ (ಫ) [2] ತ (ಗ ಫ) [3] ದಂತ (ಗ) [4] ದೊಱೆ (ಕ ಗ)
[5] ಲೊಡನೆ (ಗ) [6] ಧಾಂಣಿ (ಕ) [7] ಚಿ (ಕ ಫ) [8] ಗಱಿದುದು (ಫ) [9] ಯ (ಕ ಖ)

ಅಲ್ಲಿಂ ಬೞಿಯಿಂ—

[1]ವಾರುಣಿಯನೊಲ್ದು ಮುಟ್ಟಿದ[1]
ಕಾರಣದಿಂ ಮುೞುಗುವಂತೆ ತನ್ನಯ ಕಱೆಯಂ
ನೀರೊಳಲೆವಂತೆ ಪಶ್ಚಿಮ
ವಾರಿಧಿಯೊಳ್ ಮಗ್ನನಾದನಂದಮೃತಕರಂ ೬

ಭುವನಮನಾವಗಂ ಪುದಿದು ತೀವಿದ ತಣ್ಗದಿರ್ಗಳ್ ಪೊದಲ್ದು ಕೈ
ರವವನಮಾದುವೆಯ್ದೆ ಪೊಸಮಲ್ಲಿಗೆಯಾದುವು ಮೌಕ್ತಿಕಂಗಳಾ
ದುವು ಸುರಸಿಂಧುವಾದುವು ಸುಧಾರ್ಣವವಾದುವು ಚಂದ್ರಕಾಂತಮಾ
ದುವು ಹಿಮಮಾದುವಲ್ಲದೊಡೆ ಚಂದ್ರನ ಚಂದ್ರಿಕೆ ಮಾಯವಾದುದೇ ೭

ನಿರುಪಮಸುಕುಮಾರತೆಯಂ
ಧರಣಿಗೆ ಸೆಱೆಯಱಿಪಲುಪ್ಪ ಕರನ ಕರಂಗಳ್
ಪರೆಯದ ಮುಟ್ಟದ ಮುನ್ನಮೆ
ಮುರುಟಿದುವೆನೆ ಮುಗಿದುವುತ್ಪಲಪ್ರಕರಂಗಳ್ ೮

ತಾರಗೆಯ ಕುಮುದವನದ ಚ
ಕೋರಂಗಳ ಕಣ್ಗೆ ಕವಿದ ಕಟ್ಟಲೆಯೆನೆ ನೀ
ಹಾರಕರನಲಸಿ ಪೆೞ್ಕೆ[2]ಗೆ
ಸಾರಲೊಡಂ ಮಗುೞ್ದೆ ಮರ್ಬು ಪರ್ಬಿತ್ತಾಗಳ್ ೯

ರಮಣವಸತಿಗಳನಿನನ
ಸ್ತಮಿಸಲೊಡಂ ಬಂದು ಪುಗಿಸಿ ಮಗುೞ್ದಂ ವಿಧುವ
ಸ್ತಮಿಸೆ ಪೊಱಮಡಿಸಿ ಕಳೆದುದು
ತಿಮಿರಂ ಪಾಂಸುಳೆಯರ ದೂತನಾಗಲೆ ವೇೞ್ಕುಂ ೧೦

ಬೆಳಗಾಗಲೆೞ್ದು ಗೞಪುವ
ಗಿಳಿಗಳ, ಚೞುಚುವ ಪಿಕಂಗಳೆಳಸುವ ಕೋಕಂ
ಗಳ ಕಳಕಳದಿನಿಸೊಱಗಿದ
ಕುಳಟೆಯರೆೞ್ಚತ್ತು ಭಯದೆ ತಳವೆಳಗಾದರ್ ೧೧

ರಸದ ಮಳಯಜದ ಘುಸೃಣದ
ಕುಸುಮದ ಕಪ್ಪುರದ ಕವಿವ ಸೊವಡಿಂಗೆಳೆಗಳ್
ಮುಸುಱೆ ಸವಸೀಲಪಟಮಂ
ಮುಸುಕಿದವೋಲ್ಲಸತಿಯೊರ್ವಳಡಿಯಿಡುತಿರ್ದಳ್ ೧೨

---

[1] ಧಾರಿಣಿಯನೊಯ್ದು ಮುದ್ದಿಪ (ಗ) [2] ಕ್ಕೆ (ಕ ಘ)



# ಲೀಲಾವತೀ ಪ್ರಬಂಧಂ

ಮತ್ತಮೊರ್ವಳ್—

ಪೊಲೆವಿಣ್ಪಿಂ ಬಳ್ಕುತುಂ, ಮೆಲ್ಲನೆ ಪದವಿಡುತುಂ, ನೀಳ್ದಪಾಂಗಂಗಳಿಂದಿ
ರ್ಕೆಲನಂ ನೋಡುತ್ತುಮೇತ್ತ್ರಂ ನುಡಿವ ನೆಬಲನಾರಯ್ಯುತುಂ, ದೂರದಿಂ ಬ
[1]ರ್ಪು[1]ಲಿಯಂ ಕರ್ಣಾವತಂಸಕ್ಕೆಳಸುವಳಿಗಳಂ, ಸೋ[2]ವಿ[2] ನಿಂದಾಲಿಸುತ್ತುಂ
ಚಳವೇಣೀಭಾರದಿಂದೋಸಱಿಸುವ ಮುಸುಕಂ ಸಾರ್ಚುತುಂ ಪಾಣ್ಬೆ ಪೋದಳ್ ೧೩

ಉಗುತ್ತುಂ ·ಪೂಮಾಲೆಯಂ ಸೋರ್ಮುಡಿಯಿನೆಡೆಗೆ ಬಿಣ್ಪಿಂಬವೋಲ್
ನೀವಿಯಂ ಸಾ ವಗಿಸುತ್ತುಂ, ತೂಕದಿಂದಂ ನಡೆಗಿಡಿಪ ನಿತಂಬಂಗಳಂ ಕಟ್ಟುವಂತೆ
ಕ್ಷಿಗಳಂ ಮುಚ್ಚುತ್ತೆ ನಿದ್ರಾಜಡತೆಯಿನಡಿಗೋರ್ರೊರ್ಮೆ ಭ್ರೂಚ್ಛಾಯೆಯಂ ನುಂ
ಗುಗುಮೆಂಬಂತಾಗಳಕ್ಕೋರ್ದಯಭಯವಶದಿಂ ಪಾಣ್ಬೆ ಪೋತಂದಳೊರ್ವಳ್ ೧೪

ಪದುಳಿಸದಂಗಮೆಬ್ಬುಱದ ಕಣ್ಮಲರ್ಗಾಱದ ಸೇದೆ ಮಗ್ಗುಲಿ
ಕ್ಕದ ಪುಳಕಂಗಳಿಂಗದ ಬೆಮರ್ಮಿಡುಕೋಡದ ಪುರ್ವು ಬೀಗಿ[3]ಱೇ
ಯದ[3] ತುಟಿ ಕೆತ್ತುಗುಂದದ ಕುಚಂ ನಡುಕಂಗಿಡದೂರು ಗಂಡೆಯೇ
ಱದ ಕರಘಾತಮೊಪ್ಪೆ ನುಸಿಲಿಂ ತಣಿದೊಯ್ಯನೆ ಜಾರೆ ಜಾಱಿದಳ್ ೧೫

ಮತ್ತಮೊರ್ವಳ್

ಇನಿಯನಲಂಪಿನಿಂ ತೆಗೆದು ಚುಂಬಿಸಿ ತಂಬುಲಮಿಕ್ಕಿ ನುಯ್ದು ಪೊ
ಯ್ದು ನುಮಿಸಿ ಕೂಡೆ ನೊಂದ ತುಟಿಯಂ ತುದಿನಾಲಗೆಯಿಂದೆ ಪತ್ತಿದಿಂ
ಪನೆ ನವಿವಂತಿರೀಂಟಿ ಕುಚದೊಳ್ ನಸು ನಾಂಟಿದ ತನ್ನ ಬಾಂಕಮಂ
ತನುರುಹದೇದ್ಗೆಯಿಂದೆ[4]ಸಿ[4] ನೋಡುತದೇಂ ಕಿಱಿಜೋಡೆ ಪೋದಳೋ ೧೬

ನಸು ನೆನೆದೊಯ್ಯನುಳ್ಳಲರೆ ಪೋ[5]ಳ್ದಿ[5]ಲೆ ಕಂದದೆ ಕೂಡೆ ಕೆಂಪಿನಿಂ
ರಸಮೊಸರ್ವಂತಿರೊಕ್ಕ ನಱುದಂಬುಲಕಂ ಕುರುಳಿಂ ಕ[6]ಳ[6]ಲ್ದು ಬಿ
ರ್ದೆಸೆವಲರ್ಗಂ ಮದಾಳಿ ಮೊರೆದೆರ್ದೆಱಗುತ್ತಿರೆ ಬೀದಿಗಳ್ ಜನ
ಕ್ಕಸತಿಯರೆರ್ದು ಪೋದುದನೆ ಪೇಳ್ವವೊಲಿರ್ದುವು ಸುಪ್ರಭಾತದೊಳ್ ೧೭

ಉಗುಬ್ದುವು ಪೀರ್ದ ಕಟ್ಟಲೆಯನೆಟ್ಟನೆಲಾಱದೆ ಕಾಱುವಂತೆ ಕಾ
ಡಿಗೆಗಳನಾಗಳೋಪವರ ಕೇಳಿಗಳಂ ಕೊರಲೆತ್ತಿ ನೋಡುವಂ
ತೊಗೆದುವು ನೋಡಿ ನಾಣ್ಚಿ ತಲೆಯಂ ತೆಗೆವಂತಿರೆ ಪಾತ್ರಮಧ್ಯದೊಳ್
ತೆಗೆದುಡುಗಿರ್ದುವೊಳ್ನುಡಿಗಳಂ ರತದೀಪಿಕೆಗಳ್ ನಿಶಾಂತದೊಳ್ ೧೮

ಆಗಳೊಂದು ಸುರತಾಲಯದೊಳ್—

ಕಡುನಲ್ಲಂ ನೆರ್ದಿದಪ್ಪೊಡೆಣ್ಣೆ ನವೆದತ್ತಿಲ್ಲಿನ್ನು ಮೋವೆತ್ತ ನೋ
ರ್ಮುಡಿಯಿಂ ಸೋರ್ದುದೊ ಪುಷ್ಪಮಾಲೆಯೆನುತುಂ ಮುಗ್ಧಾಕ್ಷಿ ಚಿಂತಾಂತರ

---

[1] ನ್ದು (ಕ ಗ ಫ) [2] ದು (ಕ ಫ) [3] ಪೊಂಗದ (ಗ) [4] ವಿ (ಗ ಫ) [5] ಳಿ (ಕ ಫ) [6] ನ (ಕ ಖ)

ಕ್ಕೆಡೆಯಾಗಿರ್ಪಿನಮೆರ್ದೆಱೆಂಕೆಯೆಲರಿಂದುದ್ಬುದ್ಧ ಪಾರಾವತಂ
ಸೂಡರಂ ಪೊಯ್ದುದು ಕೇಳಲಾಕೆಯಳಸಂ ತಾನಟ್ಟಿವಟ್ಟಂತೆವೋಲ್ ೧೯

ಮತ್ತೊಂದೆಡೆಯೊಳ್—

ಅವಚ್ಚಱಿಸಿ ಪೊಯ್ದ ನೇಹಂ
ತವೆಯಲೊಡಂ ಗುಣಮನುರುಪಿ [1]ಪಿರಿ[1]ದಾಗಿರೆ ಪೆ
ರ್ಚುವ ಸೊಡರ್ಗಳ ಪೆರ್ಚಂ ನಗು
ವವೊಲುಜ್ಜ್ವಳಿಸಿದುವು ವಿಮಳಮಣಿದೀಪಿಕೆಗಳ್ ೨೦

ಆಗಳ್ ಕುಮುದಕಾಮುಕನಗಲ್ಕೆಯೊಳ್ ಕುಮುದಿನಿಗೆ ಸೆಗೆದ ಬಾಷ್ಪ ಜಳಕಣಂಗಳಂತೆ [2]ಮು[2]ಗುಳ್ದು ಮುಗಿವೆಸಳ್ಗಳೊಳುಗುವ ತುಹಿನ ಕಳಿಕೆಗಳಿಂ ಕೆಸರ್ಮಸಗಿದ ಕುಮುದಕೇಸರದ [3]ರಜದೊಳ್[3]ದರ್ಸ ಚರಣಚಯುವಮಂ ಕೀಲಿಲಾಱದೆ ಪಲವೆಂಡಿಸೊಳ್ಬಂಡುಸೆಗೆದು ಪೊರಳ್ದು ಸರಳ್ದು ಮೊರೆವ ಮಱಿದುಂಬಿಗಳ ಗಱಿಯಂ ಗಿಱ್ಱನೆ ತೆಗೆದು ಸೆಗಪಿಯುಂ, ಜೊಕ್ಕಳತನದಿಂ ಮಿಕ್ಕಲರ್ಗೆ ಮೊಗಸದಿರುಳುಣ್ಣದೊಡಲ ಪಸಿವಿಂಗೆ ಪಾಯ್ದು ಬಿರ್ದಲರದ ಮುನ್ನ ಮಲ್ಲಿಗೆಯುರೆಬಿರಿವ ಬಿಸರುಹದೆಸಳ್ವೊರೆಯ ಸೆಸುದೆಱಪಿಸೊಳ್ ಮುಸುಂ[4]ಡ[4]ನಿಟ್ಟು ಬೀಸರವಾಗದೊಸಗೆಗಂಪನುಣ್ಗ ಬಾಕುಳಿ ದುಂಬಿಗಳ ಪೆಡದಲೆಯಂ ಪಿಡಿದು ವುಂದ್ಯೆಸಿ ಮುಂದೆ ಕವಿವ ಮಧುಕರ್ದಮದೊಳ ರ್ದಿಯುಂ, ಉರಿ ಕೊಂಡ ವಿರಹದುರಿಗಿರಲಾಱದೆ ಇರುಳೆಲ್ಲಮಱಿಸಿ ಮಲುಮಲಮಱುಗಿ ಕೊಳಗೊಳಂಗಳೊಳ್ ತೊಲಲ್ದು ಬಲಲ್ದು ಬೆಂಡಾಗಿ ಜಕ್ಕನೆ ಜಱಿವ ಜಕ್ಕವಕ್ಕಿಗಳ ಪಕ್ಕೆಯೊಳ್ ಪೊಡರ್ವ[5]ಪಕ್ಕ[5]ಕ್ಕೆ ಪಕ್ಕುಗೊಟ್ಟು ಸೆಗಪಿ ರಥಾಂಗಸಾಮಕ್ಕಿದುಚಿತ ಮೆಂಬಂತವುಂಕಿ ನೂಂಕಿ ತಂದೊಂದೊಂದಱೊಳೊಡಗೂಡಿ ಬೇಟದಚ್ಚಿಸೋಳಮರ್ಚಿ ಪೊಡಿ ಕಾಮಮನೋರಥಮಂ ತೀರ್ಚಿಯುಂ, ಬಿಸಲತೆಯ ಕುಸುಮದೊಳ್ ಕಣ್ಗೆಯ್ದ ಕಳಹಂಸತರುಣನಂ ತೆರೆಗೊನೆಯ ತುಂತುರ್ವನಿಯಂ ಮೊಗದೊಳೆ ತಳಿದು ತಳವೆಳ ಗಾಗಿಸಿಯುಂ, ಪುಳಿನತಳದೊಳುಪ್ಪವಡಿಸಿದ ರಾಜಮರಾಳನಂ ತೊಡೆ [6]ವಿಡಿ[6]ದು ಸೆಗಪಿ ಬಾಲಕಿಯರ್ಗೆ ನಡೆಗಲಿಸಲ್ ನಡೆಯೆಂದು ನಡೆಯಿಸುವಂತೆ ಬಲಿವಿಡಿದು ನಡೆದು ಸೌಭಾಗ್ಯಭವನಾಂ[7]ಗಣಂಗ[7]ಳೊಳಪುಗಿಸಿಯುಂ, ಕೊನೆಗೊಂಬಿನ ಕೆಲದೆಲೆಗಳೊಳ್ ತಲೆಗರೆದು ಮೊರೆವ ಮಧುಕರನಿಕುರುಂಬದ ಗಾನದಿಂ ಬೇಸೆ ಮಸೆಗಿ ಸರಳ್ದ ಪವೆನಿಸಿ ಭವನಭಿತ್ತಿಗಳಂ ಪತ್ತಿ ಪೊರಪ್ಪು ಪಿತ್ತಿಲ ಪೂಗಿಡುಗಳಂ ಪೊಸಕುಸುಮವುಂ ಬೆಸಲೆ ಯಾಗಿಸಿಯುಂ, ಕೇಳೀನಿಳಯದ ಕೆಲದೊಳ್ ನಟ್ಟ ಕನಕಯಷ್ಟಿಗಳ ಮೇಗಣಡ್ಡವಣೆ ಗಳೊಳ್ ಕಣ್ಮುಚ್ಚಿ ಬೆಚ್ಚಿದಂತೆರ್ದು[8]ತೀರ್ದು[8]ಗೊಂಡು ಕೆಲಕ್ಕೊಱಗುವ ಕುಕ್ಕುಟಂ ಗಳ ಕೋಡೆಱೆಂಕೆಯ ಕಡೆಯಂ ಪತ್ತಿ ಪೊತ್ತೆತ್ತಿಯುಂ, ಬಳ್ಳಿಮಾಡಂಗಳಳ್ಳಿಗಳೊಳ್ ಬಳ್ಳಿವರಿದ ಬಳ್ಳಿವಂದರದ ಬಳ್ಳಿಗಳೊಳ್ ನಿಮಿರ್ವ ನಿಡುಗುಡಿಗಳಳ್ಳಿಱಿಯೆ ಪಾರ್ಶ್ವ ಪ್ರರೂಢಬಾಳರಸಾಳಸರಳ ಶಾಖಾಶಯನದಿನೆರ್ದು ಕರೆವ ಪರಭೃತಂಗಳ ಪಂಚಮದ

---

[1] ಬಱಿ (ಘ)   [2] ಮ (ಕ ಘ)   [3] ಳ್ದ (ಕ)   [4] ಬ (ಖ ಘ)   [5] ಕೋಳಾಹಳ (ಕ ಗ)
[6] ವೊಡೆ (ಖ)   [7] ತರಾಳದೊ (ಕ)   [8] ಬಿದಿರ್ದು (ಕ)

ಸುಣ್ಣಾರಮನುಯ್ದು ಬಂಚದಿಂಚರದಂಚೆಯೊಳ್ ಪಳಂಚಿಯುಂ, ಸೂಳೆಗೇರಿಯ ಮುಂದಣ ಮತ್ತವಾರಣದ ಮೇಲೆ ಮೆಲ್ಲನೆ ಮರುಳ್ದು ಮಱೆದೊಱಗಿ[1]ದೆಡ್ಡ[1] ಮಿಂಡಿಯರ ಮೇಲುದಂ ಸೆಳೆದು ಕುಸಿದು ಕೆಲಕ್ಕೆ ಎಟಿದು ಜಕ್ಕುಗೊಂಡು ತ[2]ಕ್ಕೆ[2]ಗೆ ತೋರವಾದ[3]ಪೇರುರದ[3] ಮೊಲೆಗಳೊಳಪೊಕ್ಕು ಮುಂಡಾಡಿಯುಂ, ಸುರತಶ್ರಮಸುಷುಪ್ತಿಯಿಂ ಕಣ್ದೆಱೆಯಲಾಱದ ಪಾರಾವತಂಗಳ್ಗೆ ಸುಖಪ್ರಬೋಧಮಂ ಕಣ್ದೆಱೆಯಿಸುತ್ತುಮರೆದೆಱೆದ ಗವಾಕ್ಷವಿವರದಿಂ ಸುರತಸೌಧಂಗಳೊಳಪೊಕ್ಕು ನಿಧುವನಪ್ರಥನದಿಂ ತಾಱುಂತಟ್ಟುಂ ಬರ್ದ ಕಾಮುಕಜನಕ್ಕೆ ಮುಡಿದಲರ ತೊಡೆದನುಲೇಪನದ ಸೊವಡು ಸವೆದುದನಱಿಯದಂತಿರೋಗರಗಂಪನೋಲಗಿಸಿಯುಂ, ಮದನ ಮೋಹನಮೂರ್ಛಾಸುಪ್ತಸೀಮಂತಿನೀವದನಮದಿರಾಮೋದಮಿಶ್ರನಿಶ್ವಾಸಶ್ವಸನನಸೋಂಕಿನಿಂ ಸೊರ್ಕಿ ತೂಗಿ ತೊನೆದಪುವೆನಿಸಿಯುಂ, ಉರಿಯೊಳುರುಳ್ದು ಪುರಿದಂತಿರಾದ ಪದಂಗಳ ಪಿಂಗದ ಕಾಯ್ಪಿಂಗೆ ಕೊಕ್ಕರಿಸಿ ಕಂ[4]ಪಿಸಿ[4]ದಪುವೆನಿಸಿಯುಂ, ಸಂದುವಪದದೊಳ್ ನಿಂದಿರಲಳವಲ್ಲದೆ ತಡದಡಿಸಿದಪುವೆನಿಸಿಯುಂ, ದುರ್ಜನರಂತೆ ದಗ್ಧಗುಣಂಗಳುಂ, ಗಣಿಕಾಜನಂಗಳಂತೆ ವಿಗತಸ್ನೇಹಂಗಳುಂ, ವಿಪನ್ನಪಾರ್ಥಿವರಂತೆ ಅಪಚಿತಪ್ರಭಂಗಳುಂ, ಕಾಳಾಂತ[5]ವರ್ತಿ[5]ಗಳಂತೆ ಮಳಿನ ಮುಖಂಗಳುಂ, ದಾನಿಯ ಧನಂಗಳಂತೆ ಪಾತ್ರಮಾತ್ರಶೇಷಂಗಳುಮಾದ ಸೊಡರ್ಗುಡಿಗಳನ[6]ಳ್ಕಾ[6]ಡಿಯುಂ, ಸಹಜಲಜ್ಜಾರಸನಿಮಗ್ನೆಯರಪ್ಪ ಮುಗ್ಧೆಯರಂ ಬಱಿದೆ ನಾಣ್ಚಿಸ[7]ದಿರೆಂ[7]ದು ಬಾಯಂ ಮುಚ್ಚುವಂತೆ ಸುರತವಿಚಿತ್ರ ವಯಸ್ಯವಚನ[8]ಶತ[8]ಮಂ ಪರಿವಿಡಿಗೆಯ್ವ ಪುರುಳಿಯರಗಿಳಿಯ ಚಂಚುಪುಟಮಂ ಪಳಂಚಿಯುಂ, ಎಸಳ್ ನಸುಗಂದೆ ಕಂಪು ಕಡುನಾಱಿ ಕೇಸರಂ ಕೆದಱಿ ಪೋಗೆ ಪಾಂಗಱಿದು ಮುಗ್ಧಮಧುಕರನಿಕರಕಳರವದಿಂ ಕಳೆಯಲಾಱದಳ[9]ಲುರುಳಿವಡೆದಂತಿರ್ದ[9]ಸಹಕಾರದ ಕುಸುಮಂಗಳನಾಶ್ವಾಸಿಸುವಂತೆ ಮೆಲ್ಲನೆಳವಿಯುಂ, ನಿತಂಬಭರಮನೆತ್ತಿಂಬಂತೆ ವಾಮಕರತಳಮಂ ಶಯ್ಯಾತಳದೊಳೂಱಿ ಬಲಗೈಯಂ ಬಟ[10]ಲ್ವಿದ[10]ಯೊಳ್ ತೊಡರ್ಚಿ ಬಿಡುಮುಡಿಯಂ ಕೊಂಕಿದ ಕೊರಲಿಂ ಪೌಂಕಿ ಪೋಱವಾಱ ಪೊಱಗ[11]ಮೋ[11]ಱಂಡಲಮಾಗಿ ಕೊಂಡು ಜೋಲ್ವ [12]ಕ[12]ಚಭರಮನುರದೆಗೊಂಡು ನೆಗಪಲ್ ಪೋಪ ನಲ್ಲರಳಿಪಂ ತೋಱ ತುಡುಕಿ ತೆಗೆದಪಾಂಗಕ್ಕೆ [13]ಪಂಗಾಗಿ[13] ಸಡಗರದಿನೇಟ್ವ ಸೌಭಾಗ್ಯವತಿಯರಟಿದಳಕದಿನಲ್ಲುಗುವ ಬಿರಿಮುಗುಳ ಪರಿಮಳಮನೆಡೆಸೂಱೆಗೊಳ್ವ ನಿಱ ದುಂಬಿಗಳ ಗಱಿಯ ಗಾಳಿಯನುಱೆ ಸೆಱೆವಿಡಿದುಂ ಸೋಂಕಿನ ಸೊಕದ ಸೀತ್ಕಾರಮೆ ವೇದನಾಸೀತ್ಕಾರಮೆಂಬ ಸಂದೆಗಮನೀವ[14]ಪುರ[14] ಸೌಂದರಿಯರ ಪಂದೆಮೊಗದ ಮುದ್ದುಗೆಯ್ಯಕ್ಕೆ ಮುಗುಳ್ನಗೆನಗು[15]ತ ಮುಗುಳೊ[15]ತ್ತಿಸೊಳ್ ಪತ್ತಿದ ತುದಿಗೂದಲಸೂದಿಯೂದಿ ಬಿಡಿಸುವ ಕಾದಲರ ಸುಯ್ಯೆಲರ್ಗೆ ಸಹಾಯನಾಗಿಯುಂ, ಅಳಿಮುಳಿಸಂ ಬಿದಿರ್ಚಿಯುಮಪ್ಪಿದಪ್ಪುಗಳನಮರ್ಚಿಯುಂ,

---

[1] ದ್ದರಗಿಡ್ಡಿ (ಕ) [2] ಕ್ಕಿ (ಕ ಘ) [3] ವಾರನಾರಿಯರ (ಕ ಘ) [4] ಪೆಸೆ (ಗ) [5] ವರ್ತಿ (ಕ) [6] ಲ್ಲಾ (ಖ) [7] ಲ್ವೇಡೆಂ (ಕ) [8] ಸ್ವರ (ಘ) [9] ಲುಱಲರಿಯದಂತಿರ್ದ (ಘ) [10] ಲ್ದಿಡಗೈ (ಕ ಖ) [11] ಮಾ (ಕ ಘ) [12] ಕು (ಖ ಘ) [13] ಪಕ್ಕಾಗಿಸಿ (ಘ) [14] ಸುರ (ಕ) ಅರ (ಗ) [15] ತು ಮುಗುರೊ (ಖ ಘ)

ಪಾಸಿಸೊಳ್ ಪೊರಳ್ಚಿಯುಂ, ಪೋದ ಸವಿಯಂ ಮಗುಟ್ಚಿಯುಮಿಲ್ಲದಳವನೊಡರಿಸಿಯುಂ, ಕೂಟದ ತೋಟಿಯೊಳ್ ತೊಡರಿಸಿಯುಂ, ಅಗಲ್ದ ಮನಮಂ ಮಣಿಯಿಸಿಯುಂ, ತಣ್ಪಿನೊಳ್ ತಣಿಯಿಸಿಯುಮಿಂತು ಸುಪ್ರಭಾತಸಮೀರಣಂ ತೀಡುತ್ತಿರೆ–

ಸ್ಫುರಿತಂ ತಾಮ್ರಾಧರೋಷ್ಠಂ, ಸುಖದರದಳಿತಂ ದೀರ್ಘನೇತ್ರೋತ್ಪಳಂ ನಿ
ಸ್ಸರದಲ್ಪಶ್ವಾಸರಮ್ಯಂ, ಸ್ಮಿತವದನವನೇಜಂ, ನಿವರ್ತಶ್ಲಥಂ ಭಂ
ಗುರಭಾಗೋದ್ಬದ್ಧಕೇಶಂ ಶ್ರಮಜಳಲುಳಿತಂ ರೋಮಭೇದಂ ಕರಂ ಸುಂ
ದರಮಾದತ್ತಾ ಕುಮಾರಂ, ಪರವಶನಿರೆ, ನಿದ್ರಾಂಗನಾಸಂಗದಿಂದಂ ೨೧

ನೆರವಾಯ್ತು ಕೆತ್ತುವಂತಃ
ಕರಣಂ ಪ್ರಸ್ಪಂದಸುಭಗದಕ್ಷಿಣಭುಜಕಂ
ದಿರೆ, ವಾಮಪಾರ್ಶ್ವಶಯನದೊ
ಳರಸಂ ಕಾಣ್ಬಂತೆ ಯುವತಿನವದರ್ಶನಮಂ ೨೨

ಪಿರಿದುಂ ಕಣ್ಣಿಂ ಮುನ್ನಂ
ನೆರೆದುದು ತವಕದೊಳೆ ಚಿತ್ತವೆನೆ ಕನಸಿನೊಳಾ
ದರಿಸಿ ಪದಿನಾಱುಬರಿಸ[1]ದ
ಹರೆಯದ ಕನ್ನಿಕೆಯನವನಿಪಾಲಂ ಕಂಡಂ ೨೩

ಆ ತರುಣಿ ತರಳಲೋಚನೆ
ಯಾತನ ಕಣ್ಬುರಿಗೆ ನಾಣ್ಚಿದಂತಿರೆ ನಿದ್ರಾ
ದೂತಿ ತರೆ ಬಂದು ಮನಮಂ
ಚೇತೋಭವಮಾಯೆಯಂತಿರಂದೊಳಪೊಕ್ಕಳ್ ೨೪

ಮತ್ತೆ ನಿಜಭಾವಮಲ್ಲದೆ
ಮತ್ತಿನ ಭಾವಂಗಳುದಯಮಿಲ್ಲದ ಪದದೊಳ್
ಮತ್ತಗಜಗಮನೆ ರಮಣನ
ಚಿತ್ತಮನೊತ್ತರಿಸಿ ಬಂದು ಪುಗುತರ್ಪಾಗಳ್ ೨೫

ಉನ್ನತನಿತಂಬಭರದಿಂ
ಮುನ್ನುಂಡಲತಗೆಯ ರಾಗಮಂ ಕಾಱುವವೋಲ್
ಮುನ್ನಂ ಸೊಗಯಿಸಿದುವು ಮಿಗೆ
ಕನ್ನೆಯ ಕನದರುಣಚರಣಕೋಕನದಂಗಳ್ ೨೬

ನೆ[2]ರವುಳ್ಳೊಳುಸಡೆಯೊಳ್ ಮ
ಚ್ಚರವುಳ್ಳೊಡೆ ಬರ್ಪುದೆಂದು ಬಾಲಮರಾಳೋ
ತ್ಕರಮಂ ಬಯಲ್ಗೆ ಕರೆವಂ
ತಿರೆ ತರುಣಿಯ ಚರಣರಣಿತನೂಪುರಮೆಸೆಗುಂ ೨೭

[1] ವರುಷ (ಕ ಫ) [2] . . . ಡೆ (ಖ) ರೆಯುಳ್ಳೊಡೆ (ಫ)

ಮೃಗಲೋಚನೆಯೊಳ್ಬೊಡೆಗಳ
ನಗಲದೆ ನೋಡಿದರ ನಯನರುಚಿಗಳ್ ಸುಣ್ಣಂ
ಜಗುಳ್ದು ಕೆಡೆದಿರ್ದುವೆನೆ ಕಾ
ಲುಗುರ್ಗಳ ಕಿಱುವೆಳಗು ಕೆದಱಿ ಕರಮೆಸೆದಿರ್ಕುಂ ೧೮

ಕ್ರೀಡನಶೀಲಂ ಮದನಂ
ಮಾಡಿಸಿದಂ ನಿಜನಿಕೇತನೋಪಾಂತಿಕದೊಳ್
ಕ್ರೀಡಾದ್ರಿಯನೆನೆ ಚೆಲ್ವಂ
ನೀಡಿದುದಾ ಘನನಿತಂಬೆಯಲಘುನಿತಂಬಂ ೧೯

ಸುದತಿಯ ತನುರುಚಿಜಳದೊಳ್
ವದನಾಂಬುಜರೇಣುವುದಿರ್ದು ವಳಿವೀಚಿವಿಘಾ
ತದೆ[1]ನೊ[1]ರೆಗಟ್ಟಿತ್ತೆನೆ ಪೊಳೆ
ದುದು ಕಾಂಚನಕಾಂಚಿ ಜಘನಪುಳಿನಸ್ಥಳದೊಳ್ ೨೦

ಸ್ತನದುನ್ನತಿಯಂ ಜಘನದ
ತನಿವೆರ್ಚಂ ನೋಡಿ ನೋಡಿ ಬಡವಾಯ್ತೆನೆ ಕಾ
ಮಿನಿಯ ನಡುವೆಸೆದುದಲ್ಪಂ
ಘನಮೆಸಿಸಿದ ನೆರೆಯ ಸಿರಿಗೆ ಸೈರಿಸಲಾಱಂ ೨೧

ಶೈವಾಳಜಾಳವಲ್ಲರಿ
ಪೀವರಕುಚಕೋಕಮಿಥುನಮೊಲೆದೊಂದೊಂದ
ಕೇರ್ವಲ್ಲಿ ಜಗುಳ್ದುದೆನೆ ರೋ
ಮಾವಳಿ ರಂಜಿಸಿದುದಾ ಸರೋಜಾನನೆಯಾ ೨೩

ಸ್ತನದ ನಿತಂಬದ ಬಿಣ್ಪಂ
ವನಜಭವಂ ತೂಗಿ ನೋಡೆ ನಡುವಂ ಪಿಡಿದಾ
ತನ ಬೆರಲ ಪಜ್ಜೆ ಪತ್ತಿದು
ವೆನೆ ವಳಿಗಳ್ ಕಣ್ಗೆವಂದುವಾ ಕೋಮಳೆಯಾ ೨೨

ಚಿತ್ರಭವಚಕ್ರವರ್ತಿಗೆ
ತತ್ತರುಣಿ[2]ಮಚಕ್ರ[2]ವೊಗೆಯೆ ದಿಗ್ವಿಜಯಕ್ಕೆಂ
ದೆತ್ತಿದಮಳ್ಗೂಡಾರದ
ಬಿತ್ತರಮಂ ಗೆಲ್ದುವವಳ ವೃತ್ತಕುಚಂಗಳ್ ೨೪

---

1 ತೆ (ಘ) 2 ಮ ಛತ್ರ (ಗ) ಯ . . . (ಘ)

ಮದನ[1]ನವಳಂಗದೊಳ್[1] ಮೂ
ಣದೆ ತಿರಿತರುತುರುಳೆ ನಾಭಿಕೂಪದೊಳವ[2]ನ
ಭ್ಯು[2]ದಯಕ್ಕೆವದನವಿಧು ನೀ
ಡಿದ ಬಿಸಲತೆಯಂತೆ ಹಾರಲತೆ ಸೊಗಯಿಸುಗುಂ ೩೫

ಬೆಳ್[3]ದಿಂಗಳ ಕುಡಿವೆಳಗಿಂ
ನಳಿತೋಳಂ ಮಾಡೆ ಧಾತ್ರನೊಸರ್ವಮರ್ದಿನೊಳ
ಗ್ಗಳಿಸಿದ ಲಾವಣ್ಯರಸಂ
ಗಳೆ ಪನಿತಪುವೆನಿಸಿ ವನಿತೆಯುಗುರ್ವೆಳಗೆಸೆಗುಂ ೩೬

ಅಲಮರ್ುಡಿಯೆತ್ತಿದ ಪಟ್ಟಯಿಗೆ
ಮಲಗಿದ ಕಿವಿ[4]ವಾಲೆಯೋಲೆ ಗಾಲಿಗಳೆನಲಾ
ನಲಿನಾಕ್ಷಿಯ ಮುದ್ದುಮೊಗಂ
ಗೆಲೆವಂದುದು ಕುಸುಮಶರನ ಪೂವಿನ ರಥಮಂ[4] ೩೭

ಕಂದರ್ಪಂ ಪೊಳೆವಸುಕೆಯ
ಕೆಂದಳಿರಿಂ ಸಮೆದು ತನ್ನ ಕೈಪೊಡೆಯಂ ಪೂ
ಣ್ಕೆಂದುಗೆ ಕೈಯೆಡೆಯಂ ಕೊ
ಟ್ಟಂದದಿನಾ ಚಂದ್ರಮುಖಿಯ ಬಾಯ್ದೆಱೆಯೆಸೆಗುಂ ೩೮

ಪವಳದ ಬಟ್ಟಂ ನುಣ್ಪಿಡು
ವವೊಲಾನನಲಕ್ಷ್ಮಿ ಮುತ್ತುಗಳ ಬೆಳಗಿಂದಾ
ಯುವತಿಯ ಬಾಯ್ದೆಱೆಯೊಳ್ ಮಿಂ
ಚುವ ಬೆಳಗಿಂ ದಶನಮಣಿಗಳೇಂ ತುಳ್ಕಿದುವೋ ೩೯

ಸ್ಮರನ ಬಿನದಕ್ಕೆ ಲೋಚನ
ಕರಿಗಳ್ ಕೈಯಿಕ್ಕಲೆಂದು ನಿಲೆ ಸಂಪಗೆಯೊ
ಳ್ಬಿರಿಮುಗುಳ ತೊಳಪ ತಳೆಯೆನೆ
ಕರಮೆಸೆದುದು ಕಮಳಮುಖಿಯ ನಾಸಾಮುಕುಳಂ ೪೦

ಒಂದೊಂದಱ ಸೌಂದರ್ಯಮ
ನೊಂದೊಂದೀಕ್ಷಿಸಲೆ ಬಯಸಿ ನಾಸಿಕೆಯಡ್ಡಂ
ಬಂದಿರೆ ಪೊಱವಳಸಿಂದಂ
ಬಂದಪುವೆನೆ ಸಿಮಿರ್ದುವವಳ ನಿಡಿಯಲರ್ಗಣ್ಗಳ್ ೪೧

---

1 ನೇವಳಂಗಳೊಳ್ (ಘ) 2 ನಂ ಹೃ (ಘ) 3 ಉ (ಗ) 4 ಕಿವಿಯೋಲೆ ಗಾಲಿ ನಳಿನಾಕ್ಷಿಮೊಗಂ | ಗೆಲೆವಂದುದು ಕುಸುಮಾಸ್ತ್ರನ ವಿಲಸಿತಮೆನಿಸಿರ್ದ ಪುಷ್ಪರಥದುನ್ನತಿಯಂ (ಗ) .... ಜಲಜಾಕ್ಷಿಯ .... (ಘ)

ತರುಣಿಯ ಮುಖಚಂದ್ರಮನೊಳ್
ಹರಿಣನುಮಂ ಬರೆಯಲೆಂದು ಭಾವಿಸಿ ಬಿದಿ ಸುಂ
ದರತೆಗೆ ಮರುಳ್ದು ಬ[1]ಱು[1]ಗೊಂ
ಬೆರಡನೆ ಬರೆದಂತಿರಸಿಯ ಪುರ್ವುಗಳೆಸೆಗುಂ ೪೨

ಇಂಬಾದುದಪಳ ಧವಳಚ
ಳಾಂಬಕ ವಿಷಮಾಂಬಕಂ ಕರಂ ಕೊಂಕಿದ ಪು
ರ್ವಿಂಬ ಜಡೆಯಲ್ಲಿ ತೊಳಗೆ ತು
ಱುಂಬಿದ ಪೆಱೆಯಂತೆ ಪೆಱೆನೊಸಲ್ ಬಾಲಕಿಯಾ ೪೩

ಕೆಳೆಗೊಳಲೆಂದನುನಯದಿಂ
ದೆಳವೆಱೆಯೊಡನಾಡುತಿರ್ಪ ಮಱಿಗುತ್ತಲೆಗ
ಳ್ಗೊಳಗಾದ ಚೆಲ್ವನೊಲಿಸಿದು
ವಳಿಕುಳಕುಂತಳೆಯ ನೊಸಲೊಳಲೆವಳಕಂಗಳ್ ೪೪

ತಳರದೆ ನಡೆ ನೋಡಲೊಡಂ
ಬಳೆಯಿಸಿ ಮೋಹನಮನಸಿತಸರ್ಪನ ಮದಮಂ
ಗಳೆಯಿಸಿದ ಲತಾಂಗಿಯ ಮುಡಿ
ಯೆಳಲತೆಯೊಳ್[2]ಸೋಗೆ[2]ಪಾಯ್ದವೊಲ್ ಸೊಗಯಿಸುಗುಂ ೪೫

ಕರುವಿಟ್ಟಂ ಕಾಮದೇವಂ, ರತಿಯತಿಶಯದಿಂ ಬಣ್ಣವಿಟ್ಟಳ್, ಬಸಂತಂ
ಬರೆದಂ [3]ಸರ್ವಾಂಗಮಂ[3], ಕಣ್ದೆಱೆದನೊಸೆದು ಶೀತಾಂಶು, ಚೈತ್ರಾನಿಳಂ ತೀ
ವಿರೆ ಜೀವಂಬೊಯ್ದನಂತಲ್ಲದೊಡೆ ಸೊಗಯಿಪೀ ರೂಪಮೀ ಬಣ್ಣಮೀ ಮೆ
ಯ್ಸಿರಿಯೀ ಕಣ್ಬೆಲ್ಲಮೀ ಭಾವಕವೊಗೆಯದೆನಲ್ಕಾಂತೆ ಕಣ್ಗೆಡ್ಡಮಾದಳ್ ೪೬

ಮನಮಂ ಸೋಲಿಸಲಂಗಜಂ ಬಯಸಿ ಕಾಂತಾರೂಪದೊಳ್ತಳ್ತ ಮೋ
ಹನಮೋ, [4]ಸುವ್ರತಿಯಾಗಿ[4] ಪೆತ್ತನೊ ವಸಂತಂ ಪೆಣ್ಣರೂಪಂ, ಗಿರೀ
ಶನನಾರಾಧಿಸಿ ಮೇಣ್ ವರಂಬಡೆದನೋ ಪೆಣ್ಗಾಡಿಯಂ ಚಂದ್ರ[5]ಮಂ,
ನನೆಯುಂಬಂ ತವೆ[5]ನೋಂತು ಪೆಣ್ಬರಿಜ[6]ನೆಂ[6]ಬಂತಾಕೆ ಕಣ್ಗೊಪ್ಪಿದಳ್ ೪೭

ಬೆಳತಿಗೆಗಣ್ಗೆ ನೋಂತ ಲತೆಯೋ, ಲಲಿತಾಂಗಿಯೊ; ಮುದ್ದುಗೆ[7]ಯ್ತು[7]ಮೊ
[8]ಲ್ದೆ[8]ಳಸಿದ ಪೊನ್ನ ಪುತ್ತಳಿಯೊ, ಕಾಂತೆ[9]ಯೊ[9]; ಪೂಮುಡಿ ಬಿಟ್ಟು ಬೆನ್ನನ
ಪ್ಪಳಿಸುವ ಸೈಪಿನಬ್ಜನಿಯೊ ಕಾಮಿನಿಯೋ, ಮೊಲೆ[10]ವೊ[10]ತ್ತ ಭಾಗ್ಯಮಂ
ತಳೆದೆಳಮಿಂಚೊ ಕೋಮಳೆಯೊ, ಪೇಡನೆ ಬಾಳಕಿಯಾದವೊಪ್ಪಿದಳ್ ೪೮

---

[1] ಱು (ಘ) [2] ಸೊಗಸೆ (ಘ) [3] ಸರ್ವಸ್ವಮಂ (ಕ) ಸರ್ವಸ್ವದಿಂ (ಗ) [4] ಪೇಟನಲೊಲ್ದು (ಕ) ಸುಭ್ರುವಿಯಾಗಿ (ಗ ಘ) [5] ನೇಂ ನನೆಯೆಂಬಾಂತುವೊ (ಕ ಖ) [6] ವೆಂ (ಗ) [7] ಯ್ದು (ಗ) [8] ಳ್ಬ (ಘ) [9] ಯ (ಗ) [10] ವೆ (ಗ ಘ)

ಆ ಕೋಮಳೆ[1]ವಿಕ[1]ಸಿತಕಮಳಲೋಚನೆಯಾಗಿಯುಂ ಚಂದ್ರಾನನೆಯುಂ, ಕರ್ಣವಿಶ್ರಾಂತವಿಶಾಲಾಪಾಂಗೆಯಾಗಿಯುಮತನುವಿಜಯಪತಾಕೆಯುಂ, ಅಳಿಕಳಭಕುಳಕಾಂತಕುಂತಳೆಯಾಗಿಯುಂ ಚಂಪಕಮುಕುಳಕಮನೀಯನಾಸಿಕೆಯುಂ, [2]ಮ[2]ಲೆವಲಾವಣ್ಯರಸರಾಶಿಯಾಗಿಯುಂ ನಿರವಧಿಮಾಧುರ್ಯನಿಧಿಯುಂ, ಸಮ[3]ದಾಳಿ[3]ಸುಭಗಭ್ರೂಲತೆಯಾಗಿಯುಮುತ್ತುಂಗಪಯೋಧರೆಯುಮೆನಿಸಿದಳಂತುಮಲ್ಲದೆಯುಂ ; ವನಲಕ್ಷ್ಮಿಯಂತೆ ಮೃದುಲತಾಳಂಕಾರೆಯುಂ, ನಾಕವನ[4]ಲೇಖೆ[4]ಯಂತಿರವಗಾಢಸರೋಮರಾಜಿಸುಂದರಮಧ್ಯೆಯುಂ, ಶೈಲಸುತೆಯಂತೆ ಸುವಿಕಾಶ[5]ಕೇಶ[5] ಹಸ್ತಚುಂಬಿತನಿತಂಬೆಯುಂ, ಸೌಂದರ್ಯಶ್ರೀಯಂತೆ ಸುಲಲಿತಗುಣಬಾಹುಲತೆಯುಂ, ಉದಧಿವೇಲೆಯಂತಿರಧರಪ್ರವಾಳವಿಳಸಿತೆಯುಂ, ಸಿರಿಯಂತೆ ಸುರಭಿಸರೋಜವಾಸೆಯುಂ, ಸರಸ್ವತಿಯಂತೆ ಕಳಹಂಸಯಾನೆಯುಂ, ಪುಣ್ಯಲಕ್ಷ್ಮಿಯಂತಿರದೃಷ್ಟಪೂರ್ವೆಯುಂ, ವಿಭಾತವೇಳೆಯಂತೆ ಶುಭಸ್ವಪ್ನದರ್ಶಿತಫಲೆಯುಂ, ಪುಷ್ಪಚಾಪಂಗೆ ಚಾಪಾಗಮಾಶ್ರಯಭೂಮಿಯುಂ, ಸ್ಮರಸಾಧಕಂಗೆ ಶೃಂಗಾರನಿಧಾನದೀಪವರ್ತಿಕೆಯುಂ, ಮಕರಧ್ವಜಸಿದ್ಧಂಗೆ ವಶೀಕರಣಮಂತ್ರಸಿದ್ಧಿಯುಂ, ಮದನಮಾತಂಗಕ್ಕೆ ಮದಲಕ್ಷ್ಮಿಯುಂ, ಮಾರಮಾಂತ್ರಿಕನ ಮಾರಣಯಂತ್ರಲೇಖೆಯುಂ, ಮಧುಮಿತ್ರವಿಧಾತ್ರನ ಭುವನವಿಲೋಚನ[6]ಸೃ[6]ಷ್ಟಿಯುಂ, ಚಿತ್ರಭಿತ್ತಿಗೆ ಚಿತ್ರಲೇಖೆಯುಂ, ಮನಕ್ಕೆ ಮೋಹನಶಕ್ತಿಯುಂ, ಲೋಚನಲೋಹಕ್ಕಯಸ್ಕಾಂತಪುತ್ರಿಕೆಯುಂ, ಇಂದ್ರಿಯಮೃಗಕ್ಕೆ ಮರುಮರೀಚಿಕೆಯುಂ, ಸೊಕ್ಕಿನಿಕ್ಕೆದಾಣಮುಂ, ಪೊಸದೇಸೆಯ[7]ಬಿಕ್ಕ[7]ಲುಂ, ಕೌತುಕದ ಕಣಿಯುಂ, ಕಾಮನ ಚಿಂತಾಮಣಿಯುಂ, ಯೌವನದ ಜೊತ್ತುಂ, ಬೆಡಂಗಿನ ಬಿತ್ತುಂ, ಚೆಲ್ವಿನ ಚಿ[8]ತ್ತ[8]ಮುಂ, ವಿಳಾಸದ ವಿತ್ತಮುಂ, ಕಂತುಕೀರ್ತಿಕುಸುಮದ ಕಂಪುಂ, ಸುರತಸುಖದಿಂಪುಂ, ರಾಗಲತೆಯ ಕುಡಿಯುಂ, ಕಾಂತಿಯಂಕುರದ [9]ಮು[9]ಡಿಯುಮೆನಿಸಿದ[10]ಸರ್ವೈ[10]ಶ್ವರ್ಯರೂಪಾತಿಶಯಮಂ ಮನಮೆ ಕಣ್ಣಾಗೆ ಕಂದರ್ಪದೇವಕುಮಾರನತಿಕೌತುಕದಿಂ ಪೀಡುಂ ಭಾವಿಸಿ ನೋಡುತ್ತಿರ್ಪುದುಂ—

ಸುದತೀಸಸ್ಮೇರವಕ್ತ್ರೇಂದುವನಿದೆ ಮಱೆಗೊಂಡೆಚ್ಚಪಂ ಕಾಮನಂತ
ಲ್ಲದೊಡೇಕೀ ಭ್ರೂಲತಾಚಾಪದ ತನಿಮಿಡುಕೇಕೀ ಚಳತ್ಪಕ್ಷ್ಮಮಾಳಾ
ಮದಭೃಂಗಶ್ರೇಣಿಮೌರ್ವೀಸ್ಫುರಣೆ ಮುಸುಱಿ ಮೇಲೇಕೆ ಪಾಯ್ದಪ್ಪುವೀ ಸ
ಮ್ಮದ ಸಾಹಂಕಾರ ಸಾರೋತ್ಪಳ[11]ಚಳದಳ[11]ದೀರ್ಘಾಕ್ಷಿಬಾಣಪ್ರ[12]ಪಾತಂ[12] ೪೯

ಎಂಬಿನಮಾತನನಾ ದಳಿ
ತಾಂಬುಜಮುಖಿ ಸೋಲ್ತು ಭಾವಮಂ ಬೀಱುವ ನೇ
ತ್ರಾಂಬುಜದಿಂ [13]ಮೋದಿ[13]ದಳೇ
ನೆಂಬೆನೊ ಬಿನದಮನಪೂರ್ವಮಂ ಪದ್ಮಜನಾ ೫೦

---

[1] ವಿಳ (ಗ) [2] ಅ (ಖ) [3] ರಾಳ (ಕ ಖ) ವಾಳ (ಗ) [4] ಲತೆ (ಕ ಗ) [5] ಗ ಪ್ರತಿಯಲ್ಲಿಲ್ಲ [6] ದೃ (ಗ) [7] ಪೊಕ್ಕ (ಕ) ಪೊಚ್ಚ (ಘ) [8] ತ್ರ (ಘ) [9] ವಿ (ಕ) ಕು (ಘ) [10] ಘನ್ನೈ (ಗ) ಗರ್ವೈ (ಘ) [11] ದಳಚಳ (ಕ ಘ) [12] ಸಾರಂ (ಕ ಘ) [13] ನೋಡಿ (ಗ)

ಆಪ್ರಸ್ತಾವದೊಳ್

ತನಗೆ ಸೊಬಗಿಂದಮಾತಂ
ಮನದೊಳ್ ಮಚ್ಚರಿಪನೆಂಬ[1]ಸೂಳ್ವ[1]ಗೆ ಬಗೆಯೊಳ್
ನನೆಕೊನೆವೋದಂತಿರೆ ನಿಡು
ನನೆಗಣೆಗಳನಾಯ್ದು ಕೊಂಡು ಮನಸಿಜನೆಚ್ಚಂ ೫೧

ಮಱೆದಿರೆಯುಮಿಂದ್ರಿಯಂಗಳ್
ಗುಱಿಯಾದುದು ನೃಪನ ಚಿತ್ತಮಲರ್ಗಣೆಗೇಂ ಮೆ
ಯ್ಯಱಿದಖಿಳಕರಣಮುಂ ಕ
ಣ್ದೆಱೆದವರಂ ಕೊಂಡು ಕೂಗದಿರ್ಪನೆ ಮದನಂ ೫೨

ನಿಡುಸುಯ್ ಸುಯ್ಯೊಳ್ ಹೃದಯದ
ನಡುಕಂ ಮಿಡುಕಿನೊಳಪೂರ್ವಘರ್ಮಜಳಂಗಳ್
ಬಿಡುಬಿಮರ್ವನಿಗಳೊಳಾ[2]ತೂಂ
ಕಡಿ[2]ನೊಳ್ ಪರವಶತೆ ಬೆರಸಿತರಸನೊಳಾಗಳ್ ೫೩

ಅಂತುಮಲ್ಲದೆಯುಂ

ಸನೆಗೋಲ್ ಸಟ್ಟುಕೊನರ್ತವೋಲ್ಪುಳಕಮುಣ್ಮಿತ್ತಲ್ಲಿ ರಕ್ತಾಂಬುಗಳ್
ಪನಿವಂ[3]ತೆ[3]ರ್ದುವು ಘರ್ಮವಾರಿ,ದಿಟದಿಂ ಹೃದ್ಗೇಹಮಂ ತನ್ನಿತಂ
ಬನಿ ಪೊಕ್ಕಂತಿರೆ ಕಂಪನಕ್ಕೆ ತನು ಕೈಗೊಟ್ಟತ್ತು,ಧೀರತ್ವಮಂ
ಮನದಿಂ ಸುಯ್ ಪೊಱಗಣ್ಗೆ ಪೊತ್ತಡಕುವಂತಿರ್ದತ್ತು ಭೂಪಾಳನಾ ೫೪

ಕನಸಿನೊಳಗಾ ಕುಮಾರಂ
ವನಿತೆ[4]ಗೆ[4] ಬಸವಾಗಿ ಬಹುವಿಕಾರಮನಾಂತಂ
ಮನಮನೆ ನೆಲೆ[5]ವನೆಮಾಡಿ
ರ್ಪ[5]ನಂಗನಂ ಕಟಿಯಲಾರ್ಗಮೇಂ ಬಂದಪುದೇ ೫೫

ಬನದೊಳ್ ಪುಟ್ಟಿಯುಮನಲಂ
ಮನದೊಳ್ ಪುಟ್ಟಿಯುಮನಂಗನು[6]ರುಪುವ[6]ನಾತಂ
ಬನಮನಿವಂ ಮನಮನೆನ
ಲ್ಕನಲಂಗಂ ಮನಸಿಜಂಗಮಾವುದೊ ಭೇದಂ ೫೬

ಅಂತುಮಲ್ಲದೆಯುಂ,

ಬಗೆಯೊಳಪೊಕ್ಕ ಕೋಮಳೆಯನೀಕ್ಷಿಸುವಂತೆ ಬಱಲ್ದ ಕಣ್ಮಲರ್
ಮುಗಿದಿರೆ,ಚುಂಬನಕ್ಕೆಳಸುವಂತಧರಂ ತನಿಗೆತ್ತೆ,ಪೂವಿನಂ

[1] ಪುಳ್ವ (ಕ) ಹಳಿವ (ಗ) [2] ತುರ್ಂ ಕುಡಿ (ಕ ಫ) [3] ತಿ (ಗ) [4] ಯ (ಕ) [5] ಮಾಡಿಪೀರ್ಯ (ಗ) [6] ಂಪಿದ (ಕ ಫ)

ಬುಗಳುಗಿವಂತೆ ಪಾಯ್ದೆರ್ದೆ ಕರಂ [1]ಮಿಸುಗು[1]ತ್ತಿರೆ ಸುಯ್ಗಳುಣ್ಮೆ ಮು
ಚ್ಚಿಗೆ ನೆಱೆದಂತೆ ಮೆಯ್ಮಱೆದು ನಿದ್ರೆಯೊಳೊಪ್ಪಿದನಾ ಕುಮಾರಕಂ ೫೭

ಆಗಳಾಕೆಯ ಕಣ್ಬೆಳಗೆಂಬ ಕಾಮಪಾಶದಿಂ ಕಟ್ಟಿ [2]ತೆಗೆ[2]ದಂತೆಯುಂ, ಮದನ ದಹನಂ ಪತ್ತೆ ನಿತ್ತರಿಸಲಾಱದೆ ಲಲನೆಯ ಲಾವಣ್ಯರಸದ ಬಯಲ್ವೊನಲೊಳೋಲಾಡಿ ಬಿಟ್ಟಂತೆಯುಂ, ಕುಸುಮಶರನ ಕೂರ್ಗಣೆಗೆ ತನ್ನನೆ ಗುಱಿಯೊಡ್ಡಿದುದರ್ಕೆ ಬೆಗಡುಗೊಂಡಂತೆಯುಂ, ಬಿಟ್ಟುಪೋಗಿ ಬಗಿದು ಪುಗುವಂತೆಯುಂ, ಸೋಲ್ತು ತನ್ನನೊಪ್ಪಿಸುವಂತೆಯುಮಪ್ಪಿಕೊಳ್ವಂತೆಯುಮೆಳಸಿ ಬಳಸಿ[3]ಪ[3]ರಿದು ಪತ್ತಿ ಜಬಲ್ದು ಬೆಂಡಾಗಿ ನಾಭಿಕೂಪದೊಳ್ ಬಿರ್ದಂತೆಯುಂ, ಬಟ್ಟಮೊಲೆವೆಟ್ಟದಿನಿಟಿಯಲಱಿಯದಂತೆಯುಂ, ಮುಖಚಂದ್ರಮರೀಚಿಯೊಳ್ ಮುಳುಗಿದಂತೆಯುಂ, ಕೇಶಪಾಶದೊಳ್ತೊಡರ್ದಂತೆಯುಮೆಂತುಮತ್ಯಾಸಕ್ತಿಯಿಂ ತಳರಲೊಲ್ಲದ ತಳೋದರಿಯವಯವಮರೀಚಿವಜ್ರಲೇಪದೊಳ್ ತೊಡರ್ದ ಚಪಳಚಿತ್ತಮಂ ತೆಗೆಯಲಾಱದಚ್ಚುಮುಂತುಚ್ಚುಮುಮಲ್ಲದಿಚ್ಚೆಯೆಚ್ಚುಱಿಸೆಯೆಚ್ಚುಱಲುಂ ಮಱೆದಂತೆ ನಿದ್ರಾಮುದ್ರಿತ ವಿಲೋಚನನುಮಾಗಿ ಕಂದರ್ಪದೇವನಿರ್ಪುದುಮನ್ನೆಗಂ; ದುರ್ವಾರದರ್ಪನಪ್ಪ ದರ್ಪಕನ ಭುಜವಿಜಯಪ್ರಕಟಪಟುಪಟಹರಟನಾಟೋಪಮನಭಿನಯಿಸುವಂತೆ

ಚಂಡಾಳೀಚಂಡಗೀತಧ್ವನಿಯನೊ[4]ದೆ[4]ದು ಪಾರಾವತಾರಾವಮಂ ಬೆಂ
ಕೊಂಡೋಕಃಕೀರಕೋಳಾಹಳಮನಲೆದು ಸೆಜ್ಜಾರದಿಂದೇಳ್ವ ಮಾದ್ಯ
ಚ್ಛುಂಡಾಳೋಚ್ಛೃಂಖಳಾಶಿಂಜಿತವನೆಡೆಗೆ ಪೊಯ್ದುಣ್ಮಿ ಪೊಣ್ಮುತ್ತದಂತಾ
ಜಾಂಡಂ, ಪ್ರಾತಸ್ತ್ಯಶಂಖಸ್ವನಸಹಚರಸಂಚಾರ್ಯತೂರ್ಯಪ್ರಣಾದಂ ೫೮

ಆ ನಿನದದಿನೆಚ್ಚುತ್ತನೆ
ಭೂನಾಥಂ ಮೂಣದೆರ್ದೆಯನುರ್ಚುವ ಮದನಾ
ಸ್ತ್ರಾನೀಕದಿನೆಚ್ಚುತ್ತಂ
ತಾನೆನೆ ಮೈ ಮುಱಿದು ನಿದ್ರೆಯಿಂದೆಚ್ಚುತ್ತಂ ೫೯

ಅರಸಂ ಸರಸಿಜಮುಖಿಗಾಂ
ನೆರೆದಿರೆಯುಂ ಸೋಲ್ತನೆಂದು ಪುರುಡಿಸಿ ಪೋಪಂ
ತಿರೆ ನಿದ್ರೆ ಪೋದುದವನೀ
ಶ್ವರನುಂ ಸಂಭ್ರಮದಿನೆರ್ದು ತಳವೆಳಗಾದಂ ೬೦

ಆ ಸಮಯದೊಳ್

ಅಳಿನೀಜ್ಯಾಮೃದುಮಂಜ ಶಿಂಜಿತಸಮಂ, ಸಣ್ಣಿಂಚರಂ, ಬಂಚರ
ದ್ದಳಿಯೊಳ್ತಳ್ತೊಡಸುಣ್ಮೆ ಸುಣ್ಣರದೆ ಮಿಂಚಂ [5]ಸೀಟ್ದ[5]ಪೋಲ್ವೊಣ್ಮೆ ಕಾ
ಕಳಿಯೊಳ್ಕೂಡಿದ ಸೀಯಸಪ್ಪ ರಸಗೇಯಂ ಚಿತ್ರಮುಂ ತಾಗೆ ಪೂ
ಗಳ ಬಾಣಂಗಳೆ ತಾಗಿದಂತಿರಗಿದಂ ಶೃಂಗಾರಕಾರಾಗೃಹಂ ೬೧

[1] ಮುಸುಕು (ಕ ಗ) [2] ಗ ಪ್ರತಿಯಲಿಲ್ಲ [3] ಪಿ (ಫ) [4] ನೆ (ಕ ಫ) ಗೆ (ಗ) [5] ನೀಳ್ದ (ಗ)

ಅಂತು ಶಯ್ಯಾತಳದಿನೆರ್ದು ನೀಳ್ದ ಬಿಳಿಯ ನಳಿನದೆಸಳೊಳ್ ಮುಸುಱಿ ಮುತ್ತಿದ ಮತ್ತಮಧುಕರಕುಳಮಂ ಕೆಲಕ್ಕೆ ತೊಲಗಿಸುವಂತೆ ತಳ್ತ ತುಱುಗೆವೆಗಣ್ಗಳಂ ತೆಗೆದು, ನೆಯ್ದಿಲೊಳ್ ನಿಂದ ತುಷಾರಕ[1]ಳೆಗಳಂ ಕೆಂದಳಿರಿಂ ತೊಡೆವಂತೆ ಕೆಂದಳದಿಂ [2]ಕಣ್ಬನಿಗಳ[2]ನಗಲೆ ನೂಂಕಿ, ಕೊಲಲೆಂದು ಕೊರ್ವಿದ ಕಠಿನಕುಚಕುಂಭಮುರಮನುರ್ಚಿ ಬೆಂಗೆ ಬಳೆವಂತಿರೆ ಕಂಡು ಮೇಲೆವರಿದಪ್ಪಳೆಂಬ ತಪ್ಪಿಂಗೆ ಮುಂದೆ ನಿಂದಂತಿರ್ದ ಕೋಮಳೆಯ ರೂಪಂ ಕುಮುದದಳದೀರ್ಘದಾಮದಿಂ [3]ಮೋದು[3]ವಂತೆಯುಂ, ಪಲ ಪೂವಲಿ ಕಟಿದು ಕಂದಿ ನಾಱಿದುವೆಂದು ನವಕುಸುಮೋಪಹಾರಮಂ ಕೆದಱು ವಂತೆಯುಂ ಸೊಡರ್ಗುಡಿಗಳಿಂ ನಿಮಿರ್ದ ಕಾಡಿಗೆ[4]ವು[4]ಡಿಗಳ ಸುಣ್ಣಪ್ಪಿನಿಂ ನಸುಮಾಸಿ ದುವೆಂದು ಸೌಧಭಿತ್ತಿಗಳಂ ಸೊದೆವಳಿವಂತೆಯುಂ, ಕಣ್ಬೆಳಗು ಬಳಸೆ ವಿಲೋಚನಂ ವಿ[5]ಸ್ಫಾ[5]ರಿತವಿಲೋಚನನಾಗಿ ಕಾಮಮಾಯೆಯಿಂ ಮೆಯ್ಮಱಿದು ಮೋಹಗ್ರಹದ ಸೋಂಕಿನಿಂ ಮರುಳ್ಗೊಂಡು ನೋಲದ ನೊ[6]ರ್ಕು ತಿಳಿ[6]ಯದೆ ಕಳವಳಿಸಿನೋಡಿ—

ತಳರದೆ ತನ್ನ ಕಣ್ಣ ಮೊದಲೊಳ್ ಸುಟದಾಕೆಯ[7]ರೂಪಂ ತಳತಳ
ತ್ತ[7]ಳಿಸಿದೊಡಾಕೆಗೆತ್ತು ರಸಭಾವದ ಚಿತ್ರಮ[8]ನಾಕೆಗೆತ್ತು ಪು
ತ್ರಟಿಗಳನಾಕೆಗೆತ್ತೆಲೆಗೆ ಚಾಯೆಸುತುಂ ನಿಡುದೋಳನೆತ್ತಿ ಕೋ
ಮಳಕರಕಂಜದಿಂದೆಳವಿ ನೋಡಿದನಾ ರತಿರಾಗದೋಹಳಂ ೬೨

ಅಲ್ಲಿಂಬಳಿಯಿಂ,

ಅಂಗಂಗಳೊ[9]ಳು[9]ಟಿದಳೊ, ಕರ
ಣಂಗಳ್ ತಮ್ಮೊಳಗೆ ಪಚ್ಚುಗೊಂಡುವೊ, ಚಿತ್ತಂ
ನುಂಗಿದುದೊ, ಪೇಟನಲ್ಕಾ
ಗಂಗನೆಯಂ ಕಾಣದರಸನಿದು ಕನಸೆಂದಂ ೬೩

[10]ಅಂತು[10] ಕನಸೆಂದಱಿದಾ ನಿವಾಸಮಣಿಭಿತ್ತಿಭಾಗದೊಳ್

ಬರೆ[11]ಪದ[11] ಜೀವಚಿತ್ರಮುಮನೀಕ್ಷಿಸಿ [12]ನಾಣ್ಚಿ[12]ಮುಖಾಂಬುಜಾತಮಂ
ತಿರಿಪಿದನಾತ್ಮಜಿಂಬತತಿಗಂ ತಲೆಗುತ್ತಿ ಬೆಗಟ್ಟಿ ಕಣ್ಗಳಂ
ಬರೆ ತೆಗೆದಂ, ನೃಪಂ ತನಗೆ ತಾಂ ಗಡ ಲಜ್ಜಿಸಿ ಘರ್ಮವಾರಿಯಂ
ಸುರಿದನದಂತೆ ದಲ್ ಮತಿವಿಮೋಹಮೆ ಮಾನಿಗೆ ಲಜ್ಜೆಯಲ್ಲ[13]ಮೇ[13] ೬೪

ಬೆದಱಿದ ಮನಮುಂ ಸಂತೈ
ಸಿದನೊಯ್ಯನೆ, ವಿಕಳಮಾದ ಸಕಳೇಂದ್ರಿಯಮಂ
ಪದುಳಿಸಿದಂ ಪಾಡಟಿದ
ಳ್ಕಿದ ತನ್ನನೆ ತಾನೆ ಪೊಸತುಮಾಳ್ಪವೊಲರಸಂ ೬೫

[1] ಕಣಿಕೆ (ಗ) [2] ಕಣ್ಣನೀರ್ಗಳ (ಗ) [3] ನೋಡು (ಕ ಘ) [4] ಗು (ಖ) [5] ಸ್ಫು (ಖ) [6] ರ್ಕಳಿ (ಘ) [7] ಕಣ್ ತಳತ್ತಳಿ (ಖ) ಕೂಪ ಕಂಡಳದ್ದ (ಘ) [8] ಚಿತ್ರದ ಪೆಂಡಿರ (ಗ ಘ) [9] ಳಿ (ಗ) [10] ಎಂದು (ಘ) [11] ದಸ (ಕ ಖ) [12] ಕಾಣ್ಬ (ಗ) [13] ದೇ (ಕ ಘ)

ಅಂತು ಸಂತೈಸಿಯುಂ ಸಂತಮಿರದೆ ಮುನ್ನಮೆಂದುಮನುಭವಿಸಿಯಱಿಯದ ಸುಂದರಿಯ ಸೌಂದರ್ಯದ [1]ಸಲುಗೆ ಸಂದುವೋ[1]ದಂತೆಯುಂ ಲಾವಣ್ಯಾವತಿಯ ಲಾವಣ್ಯಾರಸದ ನವಾಸ್ವಾದನಂ ನಾಲಗೆಯಂ ಪತ್ತಿದಂತೆಯುಂ ಧೃತಿಯೆಂಬ ಪೊಡರ್ಪು ಪಱಿದು ಪೋದುದೆನ್ನನಿನ್ನಾರ್ಪಿಡಿವರೆಂದು ಪೊಡರ್ಪುಗೆಯ್ವಂತೆಯುಂ ಪಿಡಿಯೆ ಪಿಡಿಯೆ ಮುಂದುರುಳಿ ಪಿಱಿಱಿ ಪರಿವ ಮನಮಂ ಸಿಲಿಸಲಾಱದೆ—

ಸುಯ್ಯುತ್ತುಂ ಮತ್ತೆ ಶಯ್ಯಾತಳದೊಳಸವಸಂ ಮೆಯ್ಯನೀಡಾಡಿ[2]ಧೈರ್ಯ[2]
ಕ್ಕುಯ್ಯುತ್ತುಂ ಚಿತ್ತಮಂ ವಿಸ್ಮಯಮಯರಸದಿಂ [3]ನಾಂದು[3]ತುಂ ಸಜ್ಜೆಗೊಟ್ಟಂ
ಗಯ್ಯಂ ಗಲ್ಲಕ್ಕೆ ಪೇಱಿಂತಿರೆ ಬೞಿದೆ ಬೞಲ್ದನ್ನರಾರೆಂದು ತನ್ನಂ
ಬಯ್ಯುತ್ತುಂ ಕಾಮಸುಚ್ಛೃಂಖಳತೆಗೆ ತಲೆಯಂ ತೂಗಿದಂ ರಾಜಪುತ್ರಂ ೬೬

ಅಂತು ತೂಗಿ ತನ್ನೊಳಿಂತೆಂದಂ—

ಇದು ಕನಸಾಗಿಯುಂ ಕನಸಿನಂದಮುಮಲ್ತಿದು ಕಣ್ಗೆ ಕಾಂತೆಯ
ಲ್ಲದೆ ಪೆಱತಾವುದುಂ ಪೊಳೆಯದೆನ್ನಯ ಚಿತ್ತದೊಳಿನ್ನು ಮಾಕೆಯ
ಲ್ಲದೆ ಪೆಱತಾವುದುಂ ಪುಗದು [4]ಮಾಣ್ದೆ[4]ರ್ದೆಯಂ ಗುಱಿಮಾಡಿ ಲೇಸನ
ಲ್ಲದೆ ಪೆಱತಾವುದಂ ಬವಸೆಗಾಣವು ಕಾಮನ ಹಸ್ತಶಾಖೆಗಳ್ ೬೭

ಅದಲ್ಲದೆಯುಂ,

ಕಡೆಗಣ್ಣಿಂ ಸೋಲಮಂ ಸೂಸುವ ಸತಿಯಸಿತಸ್ನಿಗ್ಧದೃಗ್ದಾಮದಿಂ ಪೊ
ಯ್ವಡೆದೆನ್ನೀ ಚಿತ್ತಮಿನ್ನುಂ ಬಿದಱಿದಪುದು[5]ನಿ[5]ಟ್ಟಾಲಿಗೊಂಡಪ್ಪುವಿನ್ನುಂ
ನಿಡುಸುಯ್ ಸಯ್ತಾಱವಿನ್ನುಂ ಬೆಮರ್ವನಿ ಬೆಱಗಾದಂತೆ ಮೈಕಂಪಮಂ ಮುಂ
ದಿಡೆಯುಂ ರೋಮಾಂಚಮಿನ್ನುಂ ಕೆಡೆಯದು ಕನಸೆಂದೆಂತಿದಂ ನಂಬಲಕ್ಕುಂ ೬೮

ಎಂದು ಸತ್ಯಸ್ವಪ್ನ[6]+[6]ಮಂ ಸಕಳಶಾಸ್ತ್ರಕೋವಿದರಿಂ ಕೇಳ್ದು ಕೈಕೊಂಡುಮಱಿವುದುಂಟಪ್ಪುದಱಿಂದಿದು ಸತ್ಯಮಂ ಸೆಱೆವಿಡಿದುದಾಗಲೆವೇೞ್ಕುಮೆಂದು ಸತ್ಯ ರತ್ನಾಕರನಾ ಕರುಮಾಡದಿಂ ಪೊಱಮಡದೆ ತನ್ನೊಳ್ ಬಗೆದು ಭಾವಿಸುತ್ತಿರ್ಪನ್ನೆಗಂ

ದಾನೇಭಂ ಪುಂಗವಂ ಕೇಸರಿ ಸಿರಿ ಸುಮನೋಮಾಲೆ ಚಂದ್ರಂ[7]ದಿ[7]ನೇಂದ್ರಂ
ಮೀನಂ ಕುಂಭಂ ಕೊಳಂ ಪಾಲ್ಗಡಲಿಭರಿಪುಪೀಠಂ ಸುರೋದ್ಯದ್ವಿಮಾನಂ
ಶ್ರೀನಾಗಾವಾಸ[8]ಮಚ್ಛಸ್ಮ[8]ಣಿಚಯಮನಲಜ್ವಾಲೆಯೆಂದಿಂತಿವೆಲ್ಲಂ
ಮಾನಾಲಂಕಾರನೊಳ್ಮಾಡುಗೆ ಜಿನಜನನೀಷೋಡಶಸ್ವಪ್ನದೊಳ್ಪಂ ೬೯

ಪರಮಾರ್ಹಂತ್ಯಪ್ರಭಾವಂ ಕುಡುಗೆ ಗಡಣದಿಂ ಕೀರ್ತಿಕಾಮಂಗೆ ನಿಚ್ಚಂ
ಸಿರಿಯಂ ಶ್ವೇತಾತಪತ್ರಂ ಸುಭಗವಿಭವಮಂ ಚಾಮರಂ ಬೋಧಮಂ ದಿ
ವ್ಯರವಂ ಸಂಪ್ರೀತಿಯಂ ಪೂಮಱೆ ಶುಭಮನಶೋಕದ್ರುಮಂ ಪೆರ್ಮೆಯಂ ಕೇ
ಸರಿಪೀಠಂ ಕಾಂತಿಯಂ ಭಾವಳಯಮಭಿಮತೋತ್ಸಾಹಮಂ ದೇವತೂರ್ಯಂ ೭೦

---

[1] ವಿಗೆ ಸಿಂದುವೋ (ಕ) ವಿಯೆ ಸೀಧುವಾ (ಖ) [2] ರಯ್ಯ (ಕ) [3] ನಾನು (ಖ) [4] ನನ್ನೆ (ಖ) [5] ನಿ (ಕ ಘ) [6] ಂಗಳು (ಕ ಖ) [7] ಜ (ಖ) [8] ಮಜ್ಜಮ್ಮ (ಘ)

ಜಿನನಂ ಪೂಜಿಸಿದಕ್ಕಿ ಮಾಲೆ ಸೊಡರ್ಗಳ್ ಧೂಪಂ ಫಲಂ ದರ್ಪಣಂ
ನನೆ ಗಂಧಂ ದಧಿ ದರ್ಭೆ ಪೂರ್ಣಕಲಶಂ ತುಂಗಧ್ವಜಂ ತೋರಣಂ
ತೆನೆ ಜಾಗಂ ಮಣಿವಿಷ್ಟರಂ ಚಮರಜಂ ಛತ್ರಾಳಿ ಘಂಟಾಘನ
ಧ್ವನಿ ಮುಕ್ತಾಫಲಮಂಡಪಂ ಕುಡುಗೆ ಕಂದರ್ಪಂಗೆ ದೀರ್ಘಾಯುವಂ ೭೧

ವಿಜಿತಾಘಧ್ವಾಂತಜಾತಂ ಮುಕುಳಿತಕುಮುದಾರಂಭಮುದ್ಬುದ್ಧಭವ್ಯ
ವ್ರಜಮಸ್ತನ್ಯಸ್ತದುಶ್ಶಾಸನಶಶಿ ವಿ[1]ರ[1]ಳೋದಸ್ತದುಸ್ತೀರ್ಥತಾರಾ
ವ್ರಜಮುದ್ಯದ್ಧರ್ಮರಾಗಾಭ್ಯುದಯಬಹಳಸಾಂಧ್ಯೋದಯಂ ಸೂ[2]ರವೃ[2]ಂದಾಂ
ಬುಜಬೋಧಶ್ರೀಮನೋಜ್ಞಂ ಜಿನಪತಿಸಮಯಂ ಸಂತತಂ ಸುಪ್ರಭಾತಂ ೭೨

ಅರವಿಂದಶ್ರೀಯ ಸೊಡ್ಗಂದಿನಸತಿಭರದಿಂ ಬರ್ಪುದಂ ಕಂಡು ಚಂಚ
ತ್ಕರದಿಂದಂ ಸೋವುತುಂ ತೀವಿದ ತಿಮಿರಪಿಶಾಚಂಗಳಂ ವ್ಯೋಮಗೇಹೋ
ದರಮಂ ಕೈಗೆಯ್ಯುತುಂ ಸಂಪತಿತದಶದಿಶಾಭಿತ್ತಿಭಾಗಂಗಳಂ ಬಿ
ತ್ತರಿಸುತ್ತಿರ್ದಪ್ಪನೆಂಬಂತರುಣನರುಣನಗ್ರೇಸರಂ ಕಣ್ಗೆ ವಂದಂ

ಪರೆಯೆ ಕುರುಳ್ಗಳಂತೆ ತಿಮಿರಂ ಮುಗಿಯುತ್ತಿರೆ ನೆಯ್ದಿಲ[3]ಕ್ಷಿ[3]ಯಂ
ತಿರೆ ಜಿಮರಂತಿರಾಜುತಿರೆ ತಾರಗೆ ತೀರೆ ವಿಭಾತಕಾಂತಿ ಕಾಂತನೊಳ್
ನೆರೆದು ಸುಖಾಂತದೊಳ್ ಕರಗುತಿರ್ಪ ಮನೋಹರಿಯಾದ್ರ್ರಕುಂಕುಮಾಂ
ಬರಮೆ ಬುಲ್ಪವೊಲ್ಬಳೆದುದೈಂದ್ರಿ[4]ಯ ಸಾಂಧ್ಯ[4]ಮಯೂಖಪಲ್ಲವಂ

ಎಳದಳಿರಂತೆ ಪೆರ್ಮರದ ಕೊಂಬುಗಳೊಳ್ ನವಧಾತುನಿರ್ಝರಂ
ಗಳ ಪೊಸಲಂತೆ ಶೈಲಶಿಖರಂಗಳೊಳುಜ್ಜ್ವಲಮಪ್ಪ ಮಾಣಿಕಂ
ಗಳ ರುಚಿ ಪರ್ವಿದಂತೆ ಸುರಕೂಟಕನತ್ಕಳಶಂಗಳೊಳ್ ತಳ
ತ್ತಳಿಸಿದುದೀಪದುನ್ನಿಮಿತಮಂಡಳ ಚಂಡಕರಾಂಶುಜಾಳಕಂ ೭೫

ಜಳಧಿಜಳೋರ್ಮಿಚಾಮರಚಯಂಗೆ ದಿಶಾಧಿಪದಿಗ್ಗಜೇಂದ್ರಸಂ
ಕುಳಪರಿವಾರಭಾಗಿಗೆ ನಭೋಮಣಿಮಂಡಪಮಂಡನಂಗೆ ಕ
ಣ್ಗೊಳಿಸೆ ಜಗನ್ಮಹಾಪ್ರಭುಗಭೀಕ್ಷಿಸಲೆತ್ತಿದ ಸುಪ್ರಭಾತಮಂ
ಗಳ ಮಣಿದರ್ಪಣಕ್ಕೆ ದೊರೆಯಾಯ್ತುದಯಾದ್ರಿಯೊಳರ್ಕಮಂಡಳಂ ೭೬

ಅಂತುಮಲ್ಲದೆಯುಂ—

ಅನುರಾಗಂ ನೀರಜಶ್ರೀಗಳವಡೆ ಬೆಳಗಿಂ ಬಳ್ಕಿ ಸಂಪನ್ನತಾರಾ
[5]ರಿ[5]ನಿಕಾಯಂ ಮಂಡಳಾಗ್ರದ್ಯುತಿಗೆ ತೆಗೆಯೆ ಲೋಕಕ್ಕೆ ದೃಗ್ಲೋಕನಾನಂ
ದನಮಂ ಮುಂದಿಟ್ಟು ಚಂಚತ್ಕನಕಕಲಶಮಂ ತೀವಿ ಸರ್ವಾಶೆಯುಂ ಭೂ
[6]ವಿ[6]ನುತಂ ನಿಂದಂತೆ[7]ಜಾತಾಭ್ಯುದಯನೆಸೆದಸಂ[7]ಪದ್ಮಿನೀಜೀವಿತೇಶಂ ೭೭

---

[1] ದ (ಗ) [2] ರಿ (ಘ) [3] ಕ್ಷ್ಮಿ (ಕ ಘ) [4] ದಿಶೋದ್ಯ (ಗ) [5] ತಿ (ಕ ಗ) [6] ವಿ (ಗ)
[7] ರಾಜಾ. . . (ಕ) ರಾಜ್ಯಾಭ್ಯುದಯದಿನೆಸೆದಂ (ಖ)

ಇದೆ ಹೇಪಾಘೋಷದಿಂ ವಾಹಳಿಗೆ ಕರೆವಪ್ಪೊಲ್ ಕಟ್ಟಿ ಬಂದಶ್ವವಿಮೀ ಯಿ ದುರ್ಗದೆ ಪರ್ವಿಂ ಪಣ್ಣಿ ಬಂದೋಜೆಗೆ ನಿಱಿಸಿದ ಕಟ್ಟಾನೆ ಸೇವಾರಸೋತ್ಸೇ ಕದಿಸೀಗಳ್ ದೇವ ಬಂದಿರ್ದಪುದು ಸಕಳರಾಜಸ್ವಕಂ ಮಂತ್ರಿವರ್ಗಂ ಪದನಂ ಪಾರ್ದಿರ್ಪು[1]ದಿನ್ನು ಪ್ಪವಡಿಸು[1] ಜನತಾನೇತ್ರನೀರೇಜಭಾಸ್ಕರಾ

ಎಂದು ಮೃದುಮಧುರಗಂಭೀರಧ್ವನಿಯಿಸ್ಸೋದುವ ಪ್ರಭಾತಪುಣ್ಯ ಪಾಠಕಮಾಗ ಧನಿವಹಕ್ಕೆ ಕನಲ್ದೊನಲ್ದು ಕಮನೀಯಭಿತ್ತಿಭಾಗಂಗಳಂ ಕುಂಕುಮರಸದಿಂ ಕಾಲ್ಪ ಗೊಳ್ಪಂತೆ ಗವಾಕ್ಷವಿವರದಿಂ ಪೊಕ್ಕು ಪಸರಿಸುವೆಳವಿಸಿಲನಳುರ್ದುಕೊಳ್ಪ ಕಾಮ ಕಾಳಾನಳಜ್ವಾ[2]ಳೆಗೆತ್ತ[2]ಳ್ಕಿದಂತಿರಳ್ಕಿ ಧೈರ್ಯಮನವಲಂಬಿಸಿ ಬಿಸುಸುಯ್ದು ಶಯ್ಯಾತಳ ದಿಂದೆಂತಾನುಮೆರ್ದು ನಿಜಹೃತ್ಕವಾಟಪುಟಮಂ ತೆಱೆದ ತರುಣಿಯು ತೆಱನನಱಿದು ತೋಱುವಂತೆ ಮಣಿಕಂಕಣ[3]ಝುಣತ್ಕಾ[3]ರಕ್ಕೆ ಸಜ್ಜೆವ[4]ಳ[4]ನುಬ್ಬುಗದಿಂ ಕನಕಕವಾಟ ಪುಟಮಂ ತೆಱೆಯೆ ಪೊಱಮಟ್ಟು ಕರುಮಾಡದ ನೆಲೆಯಿನವತರಿಸಿಯಾ ಕನ್ನೆಯ ಮುಖ ಮುಕುರಮಂ ಪೋಲ್ತೀ ಕನ್ನಡಿಯುಮೆನ್ನನೊಳಗುಮಾಡುವುದಾವ ಕೌತುಕ ಮೆಂಬಂತೆ ಮಂಗಳಮಣಿದರ್ಪಣಮನೀಕ್ಷಿಸುತ್ತುಮವಳೋಕಿಸಿ ಮೋಹರಸದೊಳ್ ಮುಳುಂಗಿದ ತನ್ನನೆನ್ನನೆಂದೀಕ್ಷಿಸುವಂತಿರಾಜ್ಯಾವೇಕ್ಷಣಂಗೆಯ್ದನಂತರಂ ರೋಮ ಕೂಪವಿವರವಿನಿ[5]ಸ್ಸೃತ[5]ಮನೋಭವಾನಳಧೂಮದಾಮಾವೃತನಾದಂತೆ ಶುಚಿಸುರಭಿ ಸೋಷ್ಣಸಲಿಲಸ್ನಾನಸಂಸಕ್ತಸೂಕ್ಷ್ಮಧೂಮಲೇಖಾಳಂಕೃತಶರೀ[6]ರಂ[6] ಜಾಹ್ನವೀಫೇನ ಪಿಂಡಪಾಂಡುರಿತಜಟಾಜೂಟಧೂರ್ಜಟಿಯಂತೆ ಸದಯಪ್ರಕ್ಷಾಳನಪರಿಲಘುದುಕೂಲ ವಸನ ವೇಷ್ಟಿತಮಸ್ತಕಂ ಪಾದಪದ್ಮರಾಗಪಟಳಪಾಟಳಿತಮಣಿಪಾದುಕಾಪದವಿನ್ಯಾಸ ರಣಿತಮಣಿಕುಟ್ಟಿಮಂ, ಜಗಮಂ ಬಗೆದ ಬೇಗದೊಳೆ ಗೆಲ್ವವಿಷಮ ಶರನನದಟಲೆದ ಗೆಲ್ಲಂ ನಿನ್ನೊಳಲ್ಲದೆ ನಲ್ಲದೆಂದು ನೊಲ್ಲಿಸಲ್ ಪೋಪಂತೆ ರಾಜಾಲಯಾಲಂಕಾರಭೂತಶೀತಳ ಜಿನಾಲಯಕ್ಕೆ ಪೋಗಿ ತ್ರಿಃಪ್ರದಕ್ಷಿಣಂಗೆಯ್ದು ದೂರದ್ವಾರದೇಶಪರಿಕ್ಷಾಳಿತಕರಚರಣ ಕಮಳಂ, ತದಾಲಯಮಂ ಪೊಕ್ಕು ಮಣಿಮಂಟಪದ ಮಧ್ಯಸ್ಥಿತಚಂದ್ರಕಾಂತಜಿನ ಬಿಂಬಕ್ಕೆ ವಿನಮಿತೋತ್ತಮಾಂಗನಭಿಮುಖನಾಗಿ ಕೈಗಳಂ ಮುಗಿದು—

ಶ್ರೀಯುಂ ಕೂರಿಸಲಾಜ್ಞೆಯುಂ ಪಸರಿಸಲ್ ಸತ್ಕೀರ್ತಿಯುಂ ಕೊರ್ವಿಸಲ್
ಕಾಯಕ್ಲೇಶಮನ[7]ಟ್ಟಿ[7]ಸಲ್ ದುರಿತಮಂ ನಿರ್ಮೂಲಿಸಲ್ ನಿಂದ ನಿ
ಟ್ಟಾಯಂ ನಿಟ್ಟಿಸಲೊಳ್ಪನಪ್ಪಿ ತಣಿಸಲ್ಬೇಟ್ಪಂಗೆ ಬೇಟ್ಪೀಸುಖೋ
ಪಾಯಂ ತ್ವಚ್ಚರಣಪ್ರಣಾಮಮಱಿದೆಂ ಶ್ರೀಮಜ್ಜಿನಾಧೀಶ್ವರಾ ೭೯

ಕಡ್ಡುಕೆಯ್ದುಟ್ಟದನಿಕ್ಕಿಯುಂ ಸುಭಟನ್ನೈ ಸಂಸಾರಕಾಂತಾರಮಂ
ಕಡಿದುಂ ಶ್ರಾಂತಿವಿಹೀನನ್ನೈ ಸುವಿದಿತಂ ಜೀವಾದಿತತ್ತ್ವಂಗ[8]ಳಂ[8]
ನುಡಿದುಂ ಮೌನಸಮೇತನ್ನೈ ವಿಮಳಸಶ್ರೀದೋರ್ಲತಾಪಾಶದೊಳ್
ತೊಡರ್ದುಂ ಮುಕ್ತನೆಯೇಂ ಕರಂ ಪಿರಿಯೆಯೋ[9] ಶ್ರೀಮಜ್ಜಿನಾಧೀಶ್ವರಾ ೮೦

---

[1] ಸಾರ್ದಪ್ಪು (ಕ ಘ) [2] ಳೆಗಳ್ಗಿತ (ಕ ಗ) [3] ಝುಂಕಾ (ಗ ಘ) [4] ನಿಯ (ಗ) [5] ವಿನಿರ್ಗತ (ಗ ಘ) [6] ರ (ಕ ಗ) [7] ಗ್ಗಿ (ಕ ಘ) [8] ಳೊಳ್ (ಗ) [9] ಯುನ್ನೈ (ಕ) ಯುನೋ (ಗ) ಯವೇ (ಘ)

ಬನಮಂ ಸಾರ್ದ ನರಂಗೆ ಪಾವನಫಲಂ, ಪ್ರೀತ್ಯುಲ್ಲಸಂಶೋಭಿತಾ
ಸನಮಂ ಸಾರ್ದ ನರಂಗೆ ಶೀತಳಬಲಂ, ಸಾರಸ್ವತಾವಾಸದ
ಟ್ಟನರಂ ಸಾರ್ದ ನರಂಗೆ ಸದ್ಗುಣಗಣಂ ನಿನ್ನಂಘ್ರಿಯಂ ನಂಬಿ ಸಾ
ರ್ದ ನರಂಗುತ್ತಮಸೌಖ್ಯಮಾವ ಗುಣಮಂ ಶ್ರೀಮಜ್ಜಿನಾಧೀಶ್ವರಾ

ಕುಳಿರ್ವೇಳ್ವಿಂ ಕುಳಿರ್ವಾಲಿನೀರ್ದಳಿಪೆದಿಂ ನೀಹಾರದಿಂ ಹಾರದಿಂ
ತಳಿರಿಂ ತಣ್ಣೆಲರಿಂದತಂಗದಘಜಾಳಜ್ವಾಲಸಂತಾಪಮಂ
ಕಳೆಗುಂ ಸಂಸ್ಮೃತಿಮಾತ್ರದಿಂದೆ ಮಸುಬಂಗೆಬಂತಹೇ ನೊಂದುಶೀ
ತಳಮೋ ಪದ್ಮನಾಭ ನಿನ್ನ ಚರಣಂ ಶ್ರೀಮಜ್ಜಿನಾಧೀಶ್ವರಾ

ನುಡಿ ಕೈಗನ್ನಡಿ, ವಿಶ್ವದರ್ಶನಪರಂಗಾರ್ಚಾರಮಾಚಾರ್ಯಕಂ
ನಡೆಗೆಟ್ಟೀ ಭುವನಕ್ಕೆ ಶಾಂತಿಕರನಿಚಾಕಾರಂ ಶಿಲಾಶಾಸನಂ,
ನೊಡರಜ್ಞಾನತಮಕ್ಕೆ ನಿನ್ನ ಮತಮೊಂದಂದೆಂತು ಪೇಳ್ ನಿನ್ನ ಕೇ
ಸಡಿಗಾಂ ಕೂರ್ತೆನದೆಂತು ಮಾಣ್ದಪೆನಗಂ ಶ್ರೀಮಜ್ಜಿನಾಧೀಶ್ವರಾ

ಮನಮಂ ಜಾನಿಸಲೀಯದಿರ್ಪುದು ನಿನಾ ಸ್ವಾತ್ಮದೊಳ್ ಮಪ್ಪಿಲೋ
ಚನಪ್ಯಂಗದ್ವಯಮೊಂದನೆಂದನೆ ದಂ ವೈರಾಗ್ಯದಿಂ ನೀನೆ ಕಾ
ಮನನೇಂ ಗೆಲ್ದೆಯೊ ನಿನ್ನ ಸಾತಿಶಯರೂಪಾಕಾರಮಂ ಕಂಡು ಕಾ
ಮನೆ ಕಣ್ಗೋಲ್ತಸೊಪೆ ಸೇವಿದಂ 'ಗಡೆನಗಂ' ಶ್ರೀಮಜ್ಜಿನಾಧೀಶ್ವರಾ

ಭಯದಿಂ ನಿನ್ನಯ ನಾಮ[10]ಮಂ[10]ದತ[11]ಗಿದಂ[11]ಪಂಚೇಷು, ನೀನಿರ್ದ ಸಂ
ಶ್ರಯಮಂ ಸಾರ್ಗುಮೆ ಯುಷ್ಮದಂಘ್ರಿನತನೆಂದಾರ್ದೆನ್ನ ನೊಟ್ಟೈಸ ಸ್ವ
ಸ್ತ್ರಯನಂ ತೋಳ್ಪುವೆಮುಳ್ಳೊಡೆನ್ನ ಮನದೊಳ್ಳೀಂ ನಿಟ್ಟೆಯಿಂದಿರ್ಪುದಂ
ದಯೆಗೆಯ್ ಕೈಗಳನೊತ್ತಿ ಬೇ[12]ಡಿದೆ[12]ನಿದಂ ಶ್ರೀಮಜ್ಜಿನಾಧೀಶ್ವರಾ

ತೆಗೆದೈ ಮೋಕ್ಷದ ಬಟ್ಟೆಯಂ ಬೆಳಗಿದೈ ತ್ರೈಲೋಕ್ಯದೊಳ್ ಧರ್ಮಮಂ
ಬಗೆದೈ ನಿನ್ನನದೊಂದುಗುಂದದಱಿದೈ ಸರ್ವಾರ್ಥಸಂದೋಹಮಂ
ನೆಗಡ್ದ[13]ಲೋಕದ ನೀಂ ಕೃತಾರ್ಥನಿಗಿನ್ನುಂ ಕೃತ್ಯಮೊಂದುಂಟು ಕೈ
ಮುಗಿದೆನ್ನಿಷ್ಟಮನೀವ ಶಿಷ್ಟಕರಣಂ ಶ್ರೀಮಜ್ಜಿನಾಧೀಶ್ವರಾ

ಎಂದು ವಸ್ತುಸ್ತವ ರೂಪಸ್ತವ ಗುಣಸ್ತವಂಗಳಂ ಮಾಡಿ—

---

[1] ಧಾರ (ಖ) [2] ಶ (ಗ) [3] ಳಲಿಂ (ಕ) [4] ಮಂಗಜ ಸಂತಾಪದ ಪೆಚ್ಚರ್ನಿಂ ಕಳೆಯ[illegible] ಸತ್ತು (ಕ) [5] ಜಂಗೆಂದೆಂದಪೇನೆಂಬ (ಕ) ಜಗೆಂಬಂದದೆಂಬಂತೆ (ಗ) [6] ತಿಗೆ (ಕ) ತಪೆ [illegible] [7] ಕಂಡಿರ (ಗ) [8] ದೇಂ (ಗ) [9] ನಗರಿ ನಿಂ (ಕ ಖ ಘ) [10] ಮೊಂ (ಕ ಘ) [11] [illegible] (ಕ ಖ) [12] ದುವೆ (ಗ) [13] ಗೆದ್ದ (ಕ ಗ ಘ)

ಬಕುಳಾಮೋದವಿಮಿಶ್ರಶೀಧುಜಳದಿಂ, ಚಾಂಪೇಯ[1]ಸಿಂಗಾ[1]ಬ್ಜಕೇಸ
ಮಳಧಾರಾವಳಿಯಿಂ, ಸ್ವಧಾ[2]ಕ್ತ[2] ಮಧುರಾಮೋದಸ್ಫುರತ್ಕ್ಷೀರದಿಂ
ಕುಳದಿಂ ನೀರದಿ ಕುಂದಕಾಂತದಧಿಯಿಂದಾಸಾರದಿಂ, ಸಾರ್ದು ಶ್ರೀ
ತಳೆದಿರ್ಪ ಬಾಲ್ಯೆಗೆ ಮಜ್ಜನಂಬುಗಿಸಿದಂ ಸೌಂದರ್ಯಸಂಕ್ರಂದನಂ ೮೬

ಪೊಸನೀರಿಂ ಪೊಸಗಂಪಿನಿಂ ಪೊಸತು ಬೆಳ್ಪಾದಕ್ಕಿಯುಂ ದೀವನಂ
ಪೊಸಪೂವಿಂ ಪೊಸತುಯ್ಯಲಿಂ ಪೊಸಪೆಸಿಪ್ಪ ದಾವುದೀಪಂಗಳಿಂ
ಪೊಸಧೂಪಂಗಳ ಧೂಮದಿಂ ಪೊಸರಸಕ್ಕಿಂ[5]ಬಾದ[5] ಪಣ್ಣಿಂದಮಾ
ಬೆಸನಿಂ ಕಣ್ಣಾಪಿನಮೊಲ್ದು ನೋಡಿ ನಲಿದಂ ವಾಗ್ವಲ್ಲಕೀವೈಣಿಕಂ ೮೭

ಮದನಾಗ್ನಿಜ್ವಾಲೆಯುಂ ನಂದಿಸಿದಪೆನೆ ಬೆಸನ್ನಾನಗಂಧಾಂಬುವಿಂ ಪಾಂ
ದದುಪಾನಂಗಾಸ್ತ್ರಪಾತಕ್ಕಗಿದು ಕವಚಮಂ [6]ತೊಟ್ಟು ಪೊಲಬ್ರನಿ[6] ತಳ್ತೀ
ಪದದಿನ್ನಾ[7]ಮೋದಗಂಧದ್ರವಮನಿಡುವವೋಲ್ ರಕ್ಕೆಯುಂ ಪೌಳಿಯೊಳ್ತೀ
ಪದನಾಗಳ್ ಸಿದ್ಧತೀರ್ಥಾಕೃತಮನನುದಿನಂ [7]ಕಾವ್ಯ[7]ಕರ್ಣಾವತಂಸಂ ೮೮

ಇದು ವಿದಿತಪ್ರಬಂಧವನವಿಹಾರಪರಿಣತ ಪರಮಜಿನಚರಣರಮ್ಯ [8]ಹೈಮಾಚಲಶೀಲಟ್ಟ
ನಖಮಯೂಖಮಂದಾಕಿನೀಮಜ್ಜನಾಸಕ್ತ ಸಂತತೋತ್ಕಂಠಿತದಾನಾಮೋದ
ಮುದಿತಬುಧಮಧುಕರಪ್ರಕರ ಕವಿರಾಜಕುಂಜರ ನೇಮಿಚಂದ್ರ
ವಿರಚಿತಮಪ್ಪ ಲೀಲಾವತಿಯೊಳ್ ನಾಯಿಕಾಸ್ವಪ್ನದರ್ಶನಂ
ತೃತೀಯಾಶ್ವಾಸಂ

[1] ದಿಂಪಾ (ಗ) [2] ಕ್ತ (ಕ ಫ) ಚ್ಚ (ಗ) [3] ಕಂ (ಕ ಫ) [4] ಮಿಂ (ಗ) [5] ಫಳ್ಳ (ಕ ಫ)
[6] ಮಾ ಶ್ರೀ . . . (ಖ) . . . ಮಗ್ನಾ (ಗ ಫ) [7] ವಾಕ್ಯ (ಗ) [8] ಹಮ್ಮಾ (ಕ ಗ ಫ)

## ಚತುರ್ಥಾಶ್ವಾಸಂ

ಶ್ರೀಯುಂ ಸರಸತಿಯುಂ ಜಯ
ಜಾಯೆಯುಸುರದೊಳ್ ಮುಖಾಬ್ಜದೊಳ್ ಭುಜದೊಳ್[1]ತಾ
ಳ್ದಾ[1]ಯುವಮನಕ್ಕೆ ಬಿದಿ ಪೊ
ಯ್ದಾಯುವ್ರೊಲಿರೆ ತಳ್ತಸೊಳಗೆ ಮಾನವಮದನಂ ೧

ಪೆಱತು ನುಡಿ ಪೆಱತು ಭಾವನೆ
ಪೆಱತೆಸಕಂ ಪುಗದು ತರುಣಿ ತೀವಿದ ಮನದೊಳ್
ಪೆಱತೇಂ ತನ್ನ ಮನಂ[2]ದೇಂ[2]
ಮಱದಸೊ ಪರವಶತೆಯಿಂದೆ ವಿತ್ತರಣಮುಗ್ಧಂ ೨

ಮದನಂ ಕಾರುಣ್ಯದಿಂದಂ ಬೆಸಸಿದ ತೆಱದಿಂದ್ರಿಯಂ ಪೇೞ ಪೇೞ್ದಂ ದದೆ[3]ಹಾಹ[3]ಕ್ಕಳ್ಕಿ ಮೋಹಂ ನಡೆಪಿದಳವಿಯುಂ ಸ್ವಪ್ನ ಸೂಚ್ಯಂ ದಿಟಂ ತೋ ಱದ ಪಾಂಗಿಂ ಮೆ[4]ಚ್ಚು ಗೆಯ್ದಿ[4]ಚ್ಛೆ ಯೆ ರಣರಣಕಂಮಾಡಿದಂತಾಡಿದಂ ಮಾ ಣದೆ ನಾನಾನಾಟಕಂ ತನ್ನೊಳೆ ನಲಿವಿಸೆಗಂ ರೂಪಕಂದರ್ಪದೇವಂ ೩

ಪರತಂತ್ರನೆನಿಸಿದನಗಿ
ನ್ನರಸೇವ್ರಮೊ ಹಾಸ ಮೆಂಬವೊಲ್ ರಾಜ್ಯದೊಳಂ
ಭರಮಂ ಬಿಸುಟಿರೆ ಬೇಱೊಂ
ದರಸುತನಂ ಪೊಸತು ನೆಗಟ್ಟುದರಸಂಗಾಗಳ್ ೪

ಗುರು ಕಾಮಂ, ಮಂತ್ರಿವರ್ಗಂ ಕರಣಸಮುದಯಂ ಸೇನೆ ಸಂಕಲ್ಪಜಾಳಂ ಪರಿಚಾರಂ ಚಿಂತೆ, ದೂತಂ ಮನಮನುಚರನಾಶಾನುಬಂಧಂ, ಸಹಾಯಂ ಪರಿತಾಪಂ ಕಾಪು ಸುತ್ತುಂ ತಳರದ ತರುಣೀರೂಪು ಕಣ್ಗಳ್ ಪ್ರತೀಹಾ ರ[5]ರ[5] ತಂಡಂ ಸುಯ್ಯೆ ಸಲ್ಕೇನಲೆದುದೊ ನಿಜಸಾಮ್ರಾಜ್ಯಮಂ ರಾಗರಾಜ್ಯಂ ೫

ಅಂತುಮಲ್ಲದೆಯುಂ,
ಧೃತಿ ದುಃಖೋದ್ರೇಕಮಂ ಚಾತ್ತುರಿ ತರಳತೆಯಂ ಪ್ರಾಭವಂ ದೈನ್ಯಮಂ ಸ ನ್ಮತಿಮಿಥ್ಯಾಮೋಹಮಂ [6]ಮಾನಿತೆಯ[6] ತನುವಿಕಾರೋರ್ಮಿಯಂ ತನ್ನ ಗಂಭೀ ರತೆ ಗಾಢೌತ್ಸುಕ್ಯಮಂ ಮಿಕ್ಕಱಿವು ವಿಸಯಮುಂ ಮಾನಗರ್ವಂ ವಿವೇಕ ಚ್ಯುತಿಯಂ ಸೌಭಾಗ್ಯದರ್ಪಂ ನಿಜವಿಕಳತೆಯುಂ ನೀತಿ ನ್ಯಾಣ್ಯಾದ ಕೇಡಂ ೬

---

[1] ತಳ್ತಾ (ಕ ಖ) [2] ನೆಱೆ (ಕ) [3] ಹೋಹ (ಗ ಘ) [4] ಚ್ಚಿ ಕೈವಿ (ಕ ಘ)
[5] ರೆ (ಖ ಗ) [6] ನೂತನಮು (ಕ ಗ ಘ)

ಜವರಂಗೆಯ್ದು ಜವಪೊಲವ
ಯವದಿಂ ಪೊಱಪೊಣ್ಮಲೀಯದಿರೆ[1]ಕೃತ್ರಿಮ[1]ಸೌ
ಷ್ಠವದಿಂ ಸಲಿಲಮುಮಂ ಬಾ
ಡವಸುಮನೊಳಕೊಂಡ ಕಡಲಸರಸಂ ಪೋಲ್ತಂ ೭

ಅಂತು ಬಲಿದೊಡ್ಡಿದವನೀ
ಕಾಂತನ ದೃಢತುಂಗಧೃತಿಧರಾಧರಮುಂ ತ
ತ್ಕಾಂತಾಸ್ಫುರದಪ್ರತಿಹತ
ಚಿಂತಾಶನಿಯುರ್ಚೆ ನುಚ್ಚುನೂಱಾಯ್ತಾಗಳ್ ೮

ಮಗುೞ್ದಂ ಮಗುೞ್ದಂ ಕನಸಿಂ
ಮಗುೞ್ದಂ ವಧುವೆಂದು ನೆಲೆಯನೇಱುವನೊಳಗಂ
ಪುಗುವಂ ಪವಡಿಸಿ ಕಣ್ಣಂ
ಮುಗಿವಂ ಮುಸುಕಿಡುವನಸಿಯಳಂ ಭಾವಿಸುವಂ ೯

ಭಾವಿಸೆ ತನ್ನಯ [2]ನಯನೇಂ[2]
ದೀವರದೊಳ್ ಸುೞಿಯೆ ಕನ್ನೆ ತಾನದು ಕನಸೆಂ
ದೋವುವನೊಯ್ಯನೆ ಕಿವಿಯಂ
ತೀ[3]ವುವ[3] ಕಳಕಳಕೆ ಕಿನಿಸಿ ಕಂಗನೆ ಕನಲ್ವಂ ೧೦

ಪುಸಿನಿದ್ದೆಗೆಯ್ವ ನೆಮಿಯಂ
ನಸುದೆಱೆಯಲ್ ಕಣ್ಣನಿನಿಸು ಮಿಡುಕುವ [4]ನೆರ್ದೆಯಂ[4]
ಕುಸುಮಶರಂ ಮಸೆಕದಿನಿಸೆ
ಬಿಸುಸುಯ್ಯುತ್ತೆರ್ದು ಸುತ್ತಿ ಸುೞಿಯುತ್ತಿರ್ಪಂ ೧೧

ಪ್ರಿಯಮಿನಿಸಿಲ್ಲದೊರ್ಮೆ ನೆಗಡ್ದೋಲಗಸಾಲೆಯೊಳೊರ್ಮೆ ಚಿತ್ರಶಾ
ಲೆಯೊಳಿನಿಸೊರ್ಮೆ ಮಂತಣದ ಸಾಲೆಯೊಳಂದಿರದೊರ್ಮೆ [5]ಚಂದ್ರ[5]ಶಾ
ಲೆಯೊಳಿಸೊರ್ಮೆ ಸಂದ [6]ಸುತಸಾರದ[6] ಶಾಲೆಯೊಳೊರ್ಮೆ ನಾಟ್ಯಶಾ
ಲೆಯೊಳಿಸೊರ್ಮೆ ಕೇಳಿಗೃಹಶಾಲೆಯೊಳೊರ್ಮೆ ವಿನೋದಶಾಲೆಯೊಳ್ ೧೨

ಜನದದಿನೊರ್ಮೆ ಜೇಣೆಯಿನದೊರ್ಮೆ ಸುಗೀತದಿನೊರ್ಮೆ ವಾದ್ಯವಾ
ದನದಿನದೊರ್ಮೆ ನೃತ್ತದಿನದೊರ್ಮೆ ಕಥೋಕ್ತಿಯಿನೊರ್ಮೆ ಕಾವ್ಯಬಂ
ಧನದಿನದೊರ್ಮೆ ನಾಟಕದಿನೊರ್ಮೆ ಪುರಾಣದಿನೊರ್ಮೆ ಜೂದಿನೊಂ
[7]ದು ನೆ[7]ವದಿನೊರ್ಮೆ ಕುಬ್ಜ ಖಗಯುದ್ಧದಿನೊರ್ಮೆ ನಿಯುದ್ಧಕೇಳಿಯೊಳ್ ೧೩

---

1 ಕೃತ್ರಿಂ (ಗ) 2 ಮನದಿಂ (ಗ) 3 ವಿದ (ಕ ಘ) 4 ಮನಮಂ (ಕ ಘ) ನವನಂ (ಗ)
5 ಭದ್ರ (ಗ) 6 ಸುತಕಾರದ (ಗ) ಶ್ರುತಸಾರದ (ಘ) 7 ದನ (ಗ ಘ)

ಕೊಳಗಳೊಳೊರ್ಮೆ ಕೋಡುವೆಳವಾವಿನ ಜೊಂಪದೊಳೊರ್ಮೆ ಜಾದಿಯೊ
ಳ್ತಿಳಿಗಳೊಳೊರ್ಮೆ ತಣ್ಬೆಲೊಳೊರ್ಮೆ ತಮೋಳದ ಸಾಲೊಳೊರ್ಮೆ ಶೀ
ತಳಕದಳೀಗೃಹಾವಳಿಯೊಳೊರ್ಮೆ ಕುಳಿರ್ಕೊಳುತಿರ್ಪ ಕೇತಕೀ
[1]ತಳದೊಳ್[1] ದೊರ್ಮೆ ಪೊಚ್ಚುಗಳೆವಂ ಕವಿತಾಕಳಿಕಾಮ್ರಕೋಕಿಳಂ ೧೪

ನೋಡದ ಚಿತ್ರಮಾಡದೆಡೆ ಕೇಳದ ಬೇಟದ ಮಾತು ಮೆಯ್ವನೀ
ಡಾಡದ ತಣ್ಬುಟಿಲ್ ಬಗೆಗೆ ಜಾರದ ಕಲ್ಪನೆ ಕಾಡದಿಚ್ಚೆಯೋ
ಲಾಡದ ಪೂಗೊಳಂ ಪುಗದ ಸಂಡಸಮಿಲ್ಲೆನೆ ಕಾಮದೇವನೊ
ಲ್ದಾಡಿಪ ಜಂತ್ರಮಾತನೆನಲಾಡಿದನಾ ರತಿರಾಗದೋಹಳಂ ೧೫

ಅಂತು ಕುಸುಮಶರನ [2]ಕೂ[2]ರ್ಗಣೆಗಳ್ ತಾಗದ ತಾಣಮುಮನಂಗ ಸಂತಾಪವಾಗದೆಡೆಯುಮನಱಸುವಂತೆ ಮಱುಗಿ ಮನಸ್ವೇದುವರಿಯೆ ಸುಟಿದಾಡುತ್ತುಂ ಕೇಳೀವನದ ಕೆಲದೊಳ್ ಶಶಿಕಾಂತದಿಂ ಕಡೆದು ಮಾಡಿದುದಱಿಂ ಕಾಮನ ಕರುಮಾಡದಂತೆ ಕರಮೆಸೆಯೆ ಬೆಳ್ಮುಗಿಲ ಬೆಳ್ಳಿವೆಟ್ಟಮಂ ಪುಗುವ ಪೀಯೂಷಮಯೂಖನೊಪ್ಪಮನಪ್ಪುಕೆಯ್ದು—

[3]ಪ್ಲು[3]ತಲೀಲಾಮೃಗಜಾಳಮಂ ಶುಕಪಿಕವ್ಯಾಹಾರಸಂಪಾದಿತ
ಪ್ರತಿನಾದೋದಯಮಂ ವಿನೋದವನಿತಾನೇತ್ರಪ್ರಭಾಕೌಮುದೀ
ಸ್ರುತವಾರ್ನಿರ್ಝರಪೂರಮಂ ಮದಮಯೂರೀಲಾಸಿಕಾರಂಗಮಂ
ಕೃತಕಾದ್ರೀಂದ್ರದ ಶೀತಕೋಶ [4]ಗುಹೆಯಂ[4] ಪೊಕ್ಕಂ ಮಹೀವಲ್ಲಭಂ ೧೬

ಅಂತು ಪೊಕ್ಕು ಕಿಱುದಂತರದೊಳಿಂದೂಪಳದ ಪೆತ್ತ್ರ ಪಲವೆಳಗುಗಳ್ ಪೊಱಗೆ ಪೊಣ್ಮುವ ಪೊಸವೆಳಗಂ ಪೊತ್ತು ಸೂಂಕೆ ಜರಿದು ಜಿದ್ದು ಬಲಿದಂತಿರಿರ್ದ ಮೌಕ್ತಿಕಶಿಲಾತಳಮಂ ಸಿತಂಬತಳಕ್ಕೆ ಪಕ್ಕುಮಾಡದದಱ ಮುಂದೆ ಮಂದಯಿಸಿ ಪಚ್ಚೆಯ ಪಾಸಱೆಯಂತಿರ್ದ ಪಸಲೆಯನಲಂಕರಿಸಿ ಪೂರ್ವಪರಿಚಯಕ್ಕೆ ಪರಿತಂದು ಕರತಳದೊಳ್ ತೀವಿದ ಮರಕತಮುದ್ರಿಕೆಯ ಪಸುರ್ವೆಳಗುಗಳನಾ ಪಸುರ್ವುಲ್ಲೆಗೆತ್ತು ಮುಸು[5]ಂಡಿ[5]ನೊಳಾರಯ್ವ ದೀ[6]ವ[6]ದ ಪುಲ್ಲೆಯ ಕೊಣಸುಗಳ್ಗೆ ಪುಲ್ಲೆಸಳಂ ಸೆಱದು ನೀಡುತುಂ ದ್ವಾರದೇಶದೊಳ್ ನಿಱಿಸಿದ ಪಿಂಛಾತಪತ್ರಕ್ಕೆ ಮುತ್ತಿನ ಸತ್ತಿಗೆಯ ಚೆಲ್ವನೊಳಗುಮಾಡಿಯುಂ, ಸುಣ್ಣಸಲೆಗೆ ಪನಿಪುಲ್ಲ ಪಸಲೆಯ ಪೊಸಸಿರಿಯನಾಗುಮಾಡಿಯುಂ, ಚಾಮರದಿಂ ಬೀಸುವ [7]ಜೀಸು[7]ಗಾಳಿಯ ತಣ್ಪಿನಿಂ ತೊಯ್ದುಂ ನ[8]ಸೆಲತ[8]ಗಳ ಮೇಳದ ಮನ್ನಣೆಯ ಕನ್ನೆಯರ ಲತಾಂಗಂಗಳೊಳ್ ಲಾವಣ್ಯರಸವಿಸರದ ಬಿಂದುಗಳ್ ತಲೆದೋಱಿದುವೆಂಬ ಕೌತುಕಮಂ ಕೊನರಿಸಿಯುಮಾ ವಿಳಾಸಿನಿಯರ ವಿಲೋಚನಚಂದ್ರಿಕೆಯ ಕೋಟಿಂ ಚಂದ್ರಕಾಂತದ ಕಲ್ಗಳೊಸರ್ತುವೆಂಬ ಸಂದೆಗಮಂ [9]ಮಾಡಿ[9]ಯುಂ ಮಾಣದೆ ಪಳಿಕಿನ ಶಿಲೆಯೊಳಪ್ಪಳಿಸಿ ಬೀಳ್ವ ಕೃತಕನಿರ್ಝರಜಲಧಾರೆ

---

[1] ದಳದಲ (ಕ ಗ ಘ) [2] ಮಾ (ಘ) [3] ಪ್ರ (ಕ) [4] ಗೃಹಮಂ (ಖ) [5] ಬಿ (ಖಘ)
[6] ಹ (ಕ) [7] ನಸು (ಗ) [8] ಗೆಳತಿ (ಕ ಘ) [9] ಮುಂದಿಡೆ (ಖ)

ಗಳೋರಂತೆ ತೊಱೆ ತುಱುಗುವ ತುಂತುರ್ವನಿಗಳ್ಗೆ ಮೆಯ್ಯನೊಡ್ಡಿ ಮು[1]ತ್ತಿಂ ಮಾನಸನಾದಂತೆ[1] ಮುತ್ತಿನ ಸಿಲೆಯುಂ ಮಲಂಗಿರ್ದ ಭೂಲೋಕಕಂದರ್ಪದೇವನತಿ ದೂರಾಂತರದೊಳ್—

ನೋಡಿ ಕಂಡು ಮಕರಂದನೆಂದನ
ಲ್ಕಾಡಿದಂತೆ ಮತಿ ವಕ್ತ್ರಪಂಕಜಂ
ಬಾಡಿದಂತೆನಗೆ ತೋಱುದಪ್ಪುದ
ಲ್ಲಾಡಿತೆಂತೊ ಹೃದಯಂ ಮ[2]ದೀ[2]ಶನಾ ೧೭

ಬಗೆಯುಂ ಕಣ್ಣುಂ ಕರಂ ಕೆಯ್ಮ[3]ಱಿದುವು ಮೊಗರಾಗಂ ಮೊಗಂಗೊಟ್ಟುದಿಲ್ಲೀ
ಮೊಗದಂದಕ್ಕೆಂದಿನಂತಲ್ಲದು ನೃಪನ ತೆಱಂ ಸೌಸ್ಥ್ಯಮಂ ಮೆಯ್ಗಳಿಂ ಮೆ
ಯ್ದೆಗೆದತ್ತಾಳಾಪಮುಂ ಮೇಳದ ವಧುವರೊಳಂ ಕೇಳಲಾಯ್ತಿಲ್ಲ ಸುಯ್ ಕೈ
ಮಿಗೆ ಪೊಣ್ಮುತ್ತಿರ್ಪುದಂ ಪೇಳ್ದಪುವು ಪೊಡರ್ವ ಹೃತ್ಕಂಠನಾಸಾಪುಟಂಗಳ್ ೧೮

ಅದಲ್ಲದೆಯುಂ—

ತಾಂಬೂಲೀದಳಕೆಂದು ಕ
ರಾಂಬುಜಮಂ ಬೇಱದೊಂದು ದೆಸೆಗುಯ್ದಪನೊ
ತ್ತಂಬದೆ ನುಡಿಯಿಪರಂತಿರೆ
ತಾಂ ಬಱಿದತ್ತೊಂದು ದೆಸೆಗೆ ಕಿವಿಯೊಡ್ಡಿದಪಂ ೧೯

ಕಱು[3]ಕೆ ತವೆ ಮಱುಗಿ ಮೊಗವಂ
[4]ತು[4]ಱುಕುವ ಮೃಗಶಿಶುಗೆ ಕರದ ತಂಬುಲದೆಲೆಯಂ
ಮಱೆದಿತ್ತಪನದುಮಲ್ಲದೆ
ಬಱಿಗಯ್ಯಂ ನೀಡುತಿರ್ದಪಂ ನೃಪತಿಲಕಂ ೨೦

ಕಡುನೊಂದುದೆನ್ನ ಚಿತ್ತಂ
ನಡೆ ನೋಡೆಂದೆನಗೆ ತೆಱೆದು ತೋಱುವ ತೆಱದಿಂ
ದಡಿಗಡಿಗಾಗುಳಿಸಿದಪಂ
ತೊಡರ್ದಲಸಿಕೆ ನೆಲಸಿ ನಿಂದ ಕಾರಣದಿಂದಂ ೨೧

ಕೋಗಿಲೆಯ ಗಿಳಿಯ ತುಂಬಿಯ
ಸೋಗೆಯ ಸೊಗಯಿಸುವ ಸಣ್ಣ ದನಿಗಳ್ ಕಿವಿಯಂ
ತಾಗಲೊಡಂ ಪೆಳ್ಚುಱದಪಂ
ಪೋಗಿದು ಕುಸುಮಾಸ್ತ್ರನಾಟವಾಗಲೆವೇಟ್ಟುಂ ೨೨

[1] ತ್ತಿನ ಮಾನಸನಂತೆ (ಕ ಘ) [2] ಹೀ (ಖ) [3] ಕೆಯ್ತ್ತಕೆ (ಘ) [4] ಮು (ಖ)

ಈರೂಪೀ ನವಯವ್ವನ
ಮೀ ರಸಿಕತೆಯೀ ಸ್ವಭಾವಮಧುರತೆ ಮೆಚ್ಚಿ
ದಿರ್ದೀ ರಾಜಪುತ್ರನಿರೆ ಮ
ತ್ತಾರೊಳ್ ಮೆಱೆವನೊ ಮನೋಜನಾತ್ಮೋದಯಮಂ ೨೩

ಆರಱಿವಂ ಮೆಱೆದಪರಿ
ನ್ನಾರಾರ್ ಸೌಭಾಗ್ಯಗರ್ವದಿಂ ಬೆಕ್ಕರಿಪರ್
ಮಾರಂ ಮುನಿದವರೆರ್ದೆಯೊಳ್
ಕೂರಂಬಂ ತೆಗೆಯದೇಕೆ ಕಡೆಗಣಿಸಿರ್ಪಂ ೨೪

ಪುರುಳಂ ಮರುಳಂ ಮಾಳ್ಪಂ
ಶರನಿಧಿಯಂ ಬೆಂಚೆಮಾಡುವಂ ಕೇಸರಿಯಂ
ನರಿ ಮಾಳ್ಪನಣಕಮಲ್ಲಿದು
ವರಸಲ್ಲ[1]ನೆ [1]ಕಾಮಿಜನಕೆ [2]ಕುಸುಮ[2]ಪತಾಕಂ ೨೫

ಫುಲ್ಲಶರಾಳಿಗೆ ಪೂವಿಂ
ಮೆಲ್ಲಿದುವಂ ಮನಮನಱಿಸಿ ಗುಱಿಮಾಳ್ಪಂತೇಂ
ಬಲ್ಲನೊ ಮನೋಜನಾತಂ
ಕಲ್ಲೆರ್ದೆಗಳನೆಚ್ಚು [3]ಮುಟ್ಟ[3]ಮಾಡಲ್ ಮರುಳೇ* ೨೬

ಎಂದು ನಿರೂಪಿಸಿ—

ಕುಸುಮಶರಹತಿಗೆ ಹೃದಯಂ
ಪಿಸುಬ್ಬವೋಲ್ ತೋಱದಪುದು ದುಸ್ಸಹ ತಾಪ
ಕ್ಕಸದಳಮೊಟ್ಟಿದ ಚಂದನ
ರಸಕರ್ದಮಮೊಣಗಿ ಬಿರಿದು [5]ಭೂಭುಜ[5]ನೆರ್ದೆಯೊಳ್ ೨೭

ಪೊಳೆವಿಂದೂಪಳರುಚಿಗಳ್
ಬಳಸಿ ನೃಪಾತ್ಮಜನಸಂಗಜನ್ಮನ ಬಿಸದಿಂ
ಬಿಳಪ ಶಶಿ ಕಾವುವೇಡ್ವೊಡೆ
ಬಳಸಿದ ಬೆಳ್ದಿಂಗಳಂತಿರೇಂ ತೊಳಗಿದುವೋ ೨೮

ಇನಿತೊಂದುದ್ದಾಮಸೌಭಾಗ್ಯದ ಗುಣದೊದವಿಂಗಾವಳೋ[6]ನೋಂತಳಾವ
ಳ್ಪನಿತಾನಿಷ್ಪಾದನಕ್ಕಾಜ್ಞವಡೆದಳೋ ಪದ್ಮಜಂಗಾವಳೋ ಪೇಡ
ನನೆವಿಲ್ಲಂ ಪೂಡುವಾಯಾಸಮ [7]ನುಡುಗಿ[7]ಸಿದಳತ್ಯಾಮನಿಂದಾರುಮಂ ರೂ
ಪಿನೊಳೆಂದುಂ ಮೆಚ್ಚದಿರ್ಪೀ ನೃಪಸುತನೆಸಕಕ್ಕಾವಳೋ ಕೇತುವಾದಳ್ ೨೯

[1] ವೆ (ಫ) [2] ಮಕರ (ಗ) [3] ನೊಟ್ಟೆ (ಗ) * ಈ ಪದ್ಯ ಫ ಪ್ರತಿಯಲ್ಲಿ 47 ನೆಯ ಪದ್ಯವಾದ ಮೇಲೆ ಬರುತ್ತದೆ [5] ದೀ ನೃಪ (ಫ) [6] ಹೇತುವಾದ (ಗ) [7] ನೊಡವಿ (ಗ)

ಸವಿಯಂ [1]ನೋಟ[1]ದೊಳಿತ್ತಳಕ್ಕುಮವಳಂ ಲಾವಣ್ಯಸರ್ವಸ್ವದಿಂ
ಸವೆದಂ ಪದ್ಮಜನಕ್ಕುಮಾಕೆ ಸೊಬಗಿಂಗುತ್ಪತ್ತಿಯಕ್ಕುಂ ಮನೋ
ಭವನಾಕಾಂತೆಗೆ ವೇಳೆಗೊಂಡು ಜಿನಸಂ ಪೂರ್ಣೇಂದ್ರ್ವಸಕ್ಕುಂ ಮರು
ಳ್ದವನಿಂತಲ್ಲದೊಡೇಕೆ ನೇದೆವಡು[2]ಗುಂ[2]ಶೃಂಗಾರಕಾರಾಗೃಹಂ ೩೦

ಮತ್ತಮಿದೆಂತಾದುದೆಂದು ಬಗೆದು ಭಾವಿಸಿ ನೋಡಿ—

ಅನುರಾಗಂ ತಲೆದೋಱುಗುಂ ಶ್ರವಣದಿಂದಾ ಲೋಕದಿಂ ಪೇಟ್ವನಾ
ವನುಮಿಲ್ಲೀತನ ಕಣ್ಗೆ ವರ್ಪ ವಧುವುಂ ಮುನ್ನಿಲ್ಲ ಮುನ್ನೇನಱೇ
ಲ್ವನೆಗಂ ತಳ್ವಿದ[3]ನಿಂ[3]ದು ನಜ್ಜೆ ವನೆಯೊಳ್ಪೋ ಕಂಡನಕ್ಕುಂ ವರಾಂ
ಗನೆಯಂ ಸ್ವಪ್ನದೊಳೆಂದನೇಂ ಸಚಿವಪುತ್ರಂ ನೀತಿನಿಷ್ಣಾತನೋ ೩೧

ಅಂತು ವಿಶದಪ್ರಜ್ಞಾಪ್ರದೀಪದಳಿತಮನಸ್ತಮಸ್ತೋಮನಾಗಿ ದವದಹನದಗ್ಧ ಧರಾಧರಕ್ಕೆ ಅಭಿನವಜಳಧರಮುಂ ತೀವ್ರತಪನ ತಾಪತಪ್ತತರುಣತರುತಿಳಕಕ್ಕೆ ತೆಂಕಣ ಗಾಳಿಯುಂ ಬರ್ಪಂತೆ ಬಂದು ವಿಜಯನ್ವವಚನಮುಂಚ್ಚರಿಸಿದ ಮಕರಂದನಂ ಗುಣಮಕರಂದಮಧುಕರಂ ಕೆಲಕ್ಕೆ ಕರೆದು ಕುಳ್ಳಿರಿಪುದುಮಾ ಮಂತ್ರಿಪುತ್ರನ ಕಣ್ಣಱಿದು ವಿಳಾಸಿನೀಜನಂ [4]ಕಾಮ[4] ಸಂಚಾರಚಟ್ಟಲದಿಂ ತೊಲಂಗೆಯುಂ ಪೇತ್ರಲತಾಧರರ್ ದೂರಾಂತರದೊಳ್ ತಿರ್ಯಗ್ವಳಿತವದನರಾಗಿ ಗುಜುಗುಜುಗೊಳುತ್ತಿರೆ ಯುವರಸನುಮಾತನ ಮೊಗಕ್ಕೆ ನಾಣ್ಚಿ ತಲೆಯಂ ಬಾಗಿ ಬಿನ್ನಸಿರೆಯುಂ ಕಿಱಿದು ಬೇಗಮಿರ್ದು—

ಅಳವಿಗಟಿದಳುರ್ವ ಮದನಾ
ನಳನಂ ನದಿಪಲ್ಕೆ [5]ಪಲವುಮ[5]ಮೃತದ ಪನಿಯಂ
ತಳಿವಂತೆ ದಂತರುಚಿಗಳ್
ತುಳುಂಕೆ ನೃಪಸುತನನಾರ್ಯಸುತನಿಂತೆಂದಂ ೩೨

ವರವಿದ್ಯ ರಾಜವಿದ್ಯಾ
ವಿರಿಂಚನೆನಿಸಿರ್ಪ ನಿನಗೆ ನೀತಿಯ ಮಾತಂ
ವಿರಚಿಸಿ ಪೇ[6]ಬ್ವುದು[6] ತುಂಬಿಗೆ
ಪರಿಮಳಮಂ ಕೊಂಡು ಕೊನೆದು ಪೇಟ್ವವೊಲಕ್ಕುಂ ೩೩

ನೀಂ ಸಹಜಬುದ್ಧಿಯ್ಯೆ ನಿ
ನ್ನಂ ಸಮಱುವೆನೆಂಬನಾವನವಿಳನೃಪಾಲೋ
ತ್ತಂಸ ಪಯೋರಸದಿಂಪಂ
ಹಂಸಂಗುಪದೇಶಿಪಾವ ಗಾಂಪನುಮೊಳನೇ ೩೪

---

[1] ನೇಹ (ಕ ಗ) [2] ವಂ (ಕ ಗ ಘ) [3] ನೆಂ (ಗ) [4] ನಾಮ (ಕ ಗ ಘ)
[5] ಪಯುಮನ (ಗ) [6] ಬ್ಬುದೆ (ಗ)

ಅದೊಡಮುಱಿಪಿದಪೆಂ ನಯ
ಪಾವಲೆಯಿಂ ನಿನಗೆ [1]ನಳಿನವಿಕಸನದೊಳ್ ಸೂ
ರ್ಯೋದಯದೊಳ್ ಸಹಾಯತ್ವಮ
ನೊದವಿಪ ತಕ್ಕೈಲರುಮಲ್ಲನೇಂ ಪುರುಷಗದೇ

ಅಯನಯಪರನೆನಿಸಿದ ನಿ
ನ್ನಯ ದೆಸೆಯುಮನಮುಮಮಾನುಷವ್ಯಸನಂಗಳ್
ನಿಯತಂ ಪೊರ್ದವು ವಿಜಿತೇಂ
ದ್ರಿಯನಂ ನಾಂಟುಗುಮೆ ಕಾಂತೆಯರ ಕಡೆಗಣ್ಗಳ್

ನನ್ನಿ ವಿನಯಂ ನಯಂ ಬಯ
ಮುನ್ನೆ ತಪ್ಪಿತಿ ಸತ್ವಮೆಂಬ ರಾಜಗುಣಂಗಳ್
ನಿನ್ನೊಳ್ ನೆಲಸಿದುವಿನ್ನುಂ
ಮುನ್ನಂ ನಿನ್ನನ್ನರೊಳರೆ ರಾಜಕುಮಾ[2]ರಾ

ಬ್ಬಯಸಲ್ ತಕ್ಕು[3]ದದ ಬ
[4]ರ್ದೆಯರೊಲವಿಂ ಬಯಸಿ ಬಂದೊಡಂ ಬಗೆಯದ ಬ
ಲ್ಪೆಯನುಳ್ಳ ಸುಭಗನ್ಪೆ ನೀಂ
ಬಯಸಲ್ ಮಾನಿನಿಯರೊಳರೆ ಮಾನವಮದನಾ

ಅನುರಕ್ತಂ ಪ್ರಕೃತಿ ಪ[5]ದಾ
ವನತಂ [6]ರಿಪುನೃಪಕುಲಂ ನಿಯೋಗಿನಿಕಾಯಂ
ವಿನಯನಯನಿಪುಣಮೆನೆ ನೀಂ
ಮುನಿಪ್ರೋಪನೆಡೆಯಿಲ್ಲ ಸತ್ವಗುಣಮಣಿಜಲಧೀ

ಅನುವಿಸಿ ಕವಿವೃತ್ತಿಗೆ ನೊ
ತನ ಸಿಂಧುರಮನಿಲಜವದ ವಾಜಿ ಪದಂಗಾ
ಸಿನ ಪೊಂಗಳಲ್ಲದೀಯದ
ನಿನಗೆಂತುಂ ಲೋಭಮುಂಟೆ ದಾನವಿನೋದಾ

ಸರಸ್ವಭಾವ[7]ಸಂದಿತ
ಮುರಾಗ್ರಹಗ್ರಾಹ ಸೂಕ್ತಿಮಣಿಮಯ ಕರ್ಣಾ
ಭರಣ ಭವದೀಯಬುದ್ಧಿಗೆ
ಬರಲೞಗುಮೆ ಮಾನಮುದ್ರ[8] ಮಾನಿತಸುಜನಾ

---

[1] ಕಮಲ (ಕ) [2] ರರ್ (ಕ ಖ) [3] ಕದ (ಗ ಖ) [4] ಜ್ಞ (ಖ) [5] ದಾ (ಕ ಗ
[6] ಪರ (ಕ) [7] ಪಂಡಿ (ಕ ಪ) [8] ಮೋಹನಮುಬ್ಧ (ಕ)

ಪಾಱಿಟಿಯುವ ಮನಮಂ ಪೊಱ
ಮಾಱುವ ಸಕಳೇಂದ್ರಿಯಂಗಳಂ ಪ್ರಕೃತಿಯ [1]ನಿ
ಟ್ಟೇ[1]ಱುವ ಮದಾಂಧಗಜಮಂ
ಪೊಱು ಬದುರ್ೞಂಕುವರುಮೋಳರೆ ಮಾನವಮದನಾ ೨೦೯

ಫುಲ್ಲಶರನೆಸಕಮುಂ ಹೃದ
ಯೋಲ್ಲಾಸನುಮಿಂದ್ರಿಯಂಗಳಿಚ್ಛೆಯ ಸವಿಯುಂ
ಸಲ್ಲದೊಡಂ[2]ತನ್ನಿಂದವು
ಬಲ್ಲಿದುವೆನಿಪೊಡಮ[2]ಸಾರಮಿಾ ಸಂಸಾರಂ ೨೧೦

ಬಸವಾಗದೆ [3]ತಾನೆಂತುಂ[3]
ಬಸದಾಗಿಸುವುದು [4]ಸಮಸ್ತ[4]ಪರಿಜನಮುಮನೊ
ವ್ವಿ[5]ಸುವಿಂದ್ರಿಯವಿಸರಮುಮಂ
ಬಸರುಹನಯನೆಯರುಮನಱಿವೊಡಿದೆ ಸಿದ್ಧಾಂತಂ ೨೧೧

ಉದಯಿಪ ನೇಸಱುಂ ಕಿಡದ ಕಟ್ಟಲೆ ಕತ್ತಲೆಗಿಂ ಕಱುತ್ತು ಕು
ತ್ತಿದ [6]ಕಲಿ[6]ವೇನೆಯಂತಕನ ಬಾರಿಗೆ ಬಾರದ ಸಾವು ಕಳ್ಳನು
ಣ್ಣಿದ ಕಡುಸೊರ್ಕು ಕಿಚ್ಚಿನುರಿ ಪತ್ತದೆ ಪೊತ್ತುವ ಬೇಗೆ ಪಾವು ತಿ
ನ್ನದ ತನಿನಂಜು ತಪ್ಪಿಯುಮೊಳಾವಳಪಿಂ ಪೞತುಂಟೆ ಲೋಕದೊಳ್ ೨೧೨

ಒದವಿದ ಸಂಪನೊಲ್ಲದೊಡೆ ನೀತಿಯನೊಲ್ಲದೊಡೋತ ಸೈಪನೊ
ಲ್ಲದೊಡೆ ಜನಕ್ಕೆ ಜವ್ವನಮನೊಲ್ಲದೊಡಾಯತಿಗಾದ ಪೆರ್ಚನೊ
ಲ್ಲದೊಡೆ ವಿವೇಕಸಂಪದವನೊಲ್ಲದೊಡೊಲ್ವರ ಪೇೞ್ದ ಮಾತನೊ
ಲ್ಲದೊಡೆ ಕುಲಕ್ರಮೋನ್ನತಿಯನೊಲ್ಲದೊಡೊಲ್ವುದು ಪೆರ್ಗೆ ಮಾನವಂ ೨೧೩

ಅವ[7]ಸಂತೋ[7]ದ್ಧತಕಾಮುಮುಕ್ತಮನಿಮಿತ್ತಾತ್ಯೂಢಸಮ್ಮೂರ್ಛಮ
ಶ್ರವಣಾಭಾವವಿ[8]ಬದ್ಧ[8]ಬಾಧಿರಮ[9]ಗೀಧು[9]ಸ್ತ್ವಾದಿತಕ್ಷೀಬಮ
ದ್ರವಿಗೋದ್ರೇಕವಿವರ್ಧಿತಾಂಧಿಮಮಪಂಕಕ್ಷೋಭಕಾಲುಷ್ಯಸಂ
ಭವಮೇನಲ್ಲ[10]ವೆ[10] ಮಾದ್ಯದಿಂದ್ರಿಯಗಜಕ್ರೀಡಾವನಂ ಯವ್ವನಂ ೨೧೪

ಅತನು ಗಡಾ ಘಟಂಗೆ ನನೆವಿಲ್ಲ ಡ ಪೂವೆ ಸ[11]ರಲ್ಗ[11]ಡಂ ಹಿಮ
ದ್ಯುತಿ ಗಡ ಬಂದ ಮಾವು ಗಡ ತಂಬೆಲರುಂ ಗಡ ತುಂಬಿಗಳ್ ಗಡಂ,
ಲತೆ ಗಡ ಸೈನಿಕಂ ಗಡಮುಮಂಗೆ ಗಡಕ್ಕಟ ಸೋಲ್ತು ತಾಂ ಗಡು
ವ[12]ತರುಮ[12]ನಿಕ್ಕುವಂ ಗಡ ಸ್ಮರಂ ಗಡ ಪೇೞೆಮ ಕೇಳ್ತಕ್ಕುದೇ ೨೧೫

[1] ವಿಟ್ಟೇ (ಕ ಫ) ವಿರ್ದೇ (ಗ) [2] ಕಂಮುವು ಮಿಗೆ ಬಲ್ಲಿದುವೆನಿಸಿದೊಡ (ಗ) [3] ತನ್ನಂ ತಾಂ (ಕ ಫ) [4] ಸುಮಿತ್ರ (ಕ ಗ ಫ) [5] ನೋಡಿ (ಫ) [6] ಕರಿ (ಕ) ತಲೆ (ಗ) [7] ತಂಸೋ (ಗ ಫ) [8] ಬು (ಜ) [9] ಪಿತ್ವಾ (ಜ) [10] ದೆ (ಜ) [11] ರಂಗ (ಕ) [12] ತತರ (ಕ ಫ)

ಅವಿವೇಕಂ ಮೃಗತೃಷ್ಣೆವೋಲೊಪ್ಪುಳಿವಿನಂ, ಗಾಂಭೀರ್ಯವಾರಾಶಿ ಬ
ತ್ತುವಿನಂ, ಧೈರ್ಯಧರಾಧರಂ ಜರಿವಿನಂ, ವಿದ್ಯಾವನಶ್ರೇಣಿ ಪೊ
ತ್ತುವಿನಂ, ತಪ್ತಶರೀರಸೂರ್ಯಮಣಿಯಿಂ ಜ್ವಾಲಾಕಳಾಪಂಗಳು
ಣ್ಮುವಿನಂ ಪೊಣ್ಮಿದುದೀ ಜಗತ್ರಯದೊಳಂ, ಕಾಮೋಗ್ರಘರ್ಮಾಗಮಂ ೫೬

ಅದನದಿರದೊದವಿ ಬೇಗಂ
ಬೆದಱಿಸುವೊಡೆ ದಮನಪಯೋಧರಾಗಮಮೆ ವಲಂ
ಬೆದಱುವುದದಱಿಂ ನಯಕೋ
ವಿದನೆನಿಪಂ ದಮನಮೇತನಾಗಲೆವೇೞ್ಕುಂ ೫೭

ಎಂದು ನುಡಿದ ಮಕರಂದನನುಪ್ರಾಸದಿಂ ಮನದೊಳವ[1]ರ[1]ಮಱಿದುದರ್ಕೆ ಮನದೊಳ್ [2]ಬೆರ್ಚಿ[2] ಬಸಮಲ್ಲದ ಬೇವಸದ ಬೆಣ್ಣು ಪೆಸುಗೆವೋಗೆ ಲಾಘವಮನಪ್ಪು ಕೆಯ್ದುಂತಿರೀಷದುಸ್ಮಿತವದನಾರವಿಂದನಾಗಿ—

ಮಂದಸ್ಮಿತಮಂ ಮೆಲ್ಲನೆ
ಮುಂದೆ ಪಸಾಯಮನೆ ಕುಡುವ ತೆಱದಿಂ ಕಡೆಗ
ಣ್ಣಿಂದಡರೆ ನೋಡಿ ನೃಪಸುತ
ನೆಂದನುಪಾಲಂಭನಿಭಗಭೀರೋಕ್ತಿಗಳಂ ೫೮

ಏನೆಂದಪ್ಪುದೊಕ್ತಿಯುಂ ಪರವಪ್ಪೈ ಪ್ರೋಸಾಲು ಮಾಕಾರವಿ
ಜ್ಞಾನಂ ನಿನ್ನೊಳೆ ನಿಂದುದಲ್ತೆ, ಪೆಱನಾವಂ ನಿನ್ನವೊಲ್ಕಾಣ್ಬನೆ
ನ್ನೀ ನಿವೇದಮಂ[3]ನೋ[3]ದಿನಿಷ್ಟದೊಳೆ ಮಾ[4]ತುಂ ಬಲ್ತೆ[4]ಯಂತಲ್ಲದಂ
ದ್ರಾನುದ್ಯಾನವಿಹಾರ[5]ಶಿ[5]ಸ್ನ[6]ನ[6]ದಂ ನೀನಿಂತಿರುತ್ತಾದಿಪ್ಪೈ ೫೯

ಎಂದುಸಿರದಿರೆ ನೃಪಂ ಮಕ
ರಂದಂ ನಗುತೆಂದನಿಂಗಿತಜ್ಞತೆಯೆನ್ನೊಳ್
ಕುಂದಿದುದೆ ದೇವ, ನೀನೇ
ನೆಂದೊಡಮಂತೆನಲೆವೇೞ್ಕುಮಾದೊಡಮೀಗಳ್ ೬೦

ಎನಗಱಿವುಂ ಬೇಱಲ್ಲತೊ
ನಿನಗೆ ಮನಂಮಾಡಿ ನಡಪಿದ್ದೈ ನೀನೆನ್ನಂ
ಮನಮಱಿವುದಱ[7]ಪೆ[7], ಮಱೆಂಪಿನಿ
ಮನಮಂ ಪೊಱಮಾಱಿ ಕಳೆವ ದೇವನುಮೊಳನೇ ೬೧

---

[1] ಱ (ಖ) [2] ಮೆಚ್ಚಿ (ಕ ಘ) [3] ತೋಂ (ಘ) [4] ತಂ ಬಲ್ಲಿ (ಕ ಘ) [5] ಕೆ (ಘ)
[6] ಯ (ಚ) [7] ದೆ (ಗ ಘ)

ಎನಗಿನಿಸೊಂ[1]ದುಮಂ[1] ಬಿಸಸದಿರ್ದೊಡಮಂಗಜತಾಪಮಂ ಪೞ
ಜ್ಜನೆ ಪಿಸುಣಾಡುತಿರ್ದಪುವಿವೊಯ್ಯನೆ ನಿನ್ನಯ ಮೆಯ್ಯೊಳಾಱುವೀ
ಪನಿಗಳುಮೆನ್ನುಮಂ ಸುಡುವ ಸುಯ್ಯೞುಮೀ ಬಿಸು[2]ಗ[2]ಯ್ಯ [3]ಪುಲ್ಗೞೊ
ಯ್ಯನೆ ಪೊಗೆ ತಂದು[3] ಸಾಱಿ ಮೊಗಮಂ ಕೆಲಕುಯ್ವ ಮೃಗೀಮೃಗಂಗಳುಂ ೬೨

ಆನಿದನಱಿಯಲೆ ನಿನಗಿ
ತ್ತೀನಳಿನಮು[4]ಮುರಿಗೆ[4] ತೋಱಿದಲರಂತಿರೆ ಪರಿ
ಮ್ಲಾನಮಿನಿತಾಯ್ತು ನೋಡಿದೆ
ನೇನೆಂದೆಲೆ ಬಯಲ ಬಯಲೊಳಡಗಲ್ ಬಗೆವೈ ೬೩

ಎಂಬುದುಂ ಬಗೆಯ ಬ್ರೈಕೆಗೆ ಸಾಲಗೆ ಪಿಸುಣನೆಂಬಂತೆ, ಕುಸುಮಮಂ ಮು[5]ಡಿ[5]ದೀಡಾಡಿ ಕೇಶದ ಕಂಪಱಿದು ಪೋಕೆಂಬಂತೆನ್ನಂ ಪಾಣ್ಬೆಯೆಂಬಳನೆನ್ನ ದೂತಿಗೆ ತೊೞ್ತುಮಾಡುವೆನೆಂಬರಸನಿಂತೆಂದಂ—

ಮದನಾಗ್ನಿಜ್ವಾಲೆಯೆನ್ನಂ ಸುಡುವನಿತುವರಂ ಬೇಡಬೇಡಲ್ಲಿ[6]ಗಾಂ[6] ಕೊರ್ವಿದ ಕಿರ್ಚುಂ ಗಾಳಿಯುಂ ಕೂಡಿದ ಮಸಕಮಿದೆಂಬಂತೆ, ಕಾಲಾಗ್ನಿಯುಂ ಕಾಣದ ಕಾಯ್ಪಂ ಕೊಂಡು ಚಂದ್ರದ್ಯುತಿಯುಮಲೆವ ತಣ್ಗಾಳಿಯುಂ ಸುಟ್ಟಪೆಂದೆಂಬುದನೆಂದಾಸ್ಯಾಬ್ಜ[7]ಮಂ ಸ[7]ಸ್ಮಿತಮನೋಱಗಿದಂ ಲಜ್ಜೆಯಿಂ ರಾಜಪುತ್ರಂ ೬೪

ಅಂತೊಱಗೆ ದರಸ್ಮಿತಮುಖಂ ಮಕರಂದನಿಂತೆಂದಂ—

ಮನದನ್ನನೆನಿಸುವೆನ್ನೊಳ
ಮಿನಿತುವರಂ ನಾಣ್ಚಲೇಕೆ, ಮಿಥ್ಯಾಮೋಹ
ಕ್ಕನಿವರಿದು ವಿಕಳನಪ್ಪುದೆ
ಕನಸಿನ ಛತ್ರಕ್ಕೆ ಗೋಣೆಯಾಂ[8]ತ್ತೈ[8] ನೃಪತೀ ೬೫

ನಗೆಗಣ್ ಮಿಂಚಿನ ಗೊಂಚಲಂ, ವಳಿ ತರಂಗಶ್ರೇಣಿಯಂ, ವೇಣಿ ಕಾ
ರ್ಮುಗಿಲಂ, ಭ್ರೂಲತೆ ಶಕ್ರಚಾಪಲತೆಯಂ, ಬಿಂಬಾಧರಂ ಸಂಜೆಯಂ
ಮಿಗೆ ಚಾಂಚಲ್ಯಮನಾಂತ ಕಾಂತೆಯರ ಸತ್ಯಸ್ನೇಹಮುಂ ಸ್ವಪ್ನದಂ
ತೆ ಗಡೆಂಬರ್ಬುಧರಂತದುಂ ಕನಸೆನಲ್ಕಾರ್ಮೆಚ್ಚುವರ್ನಚ್ಚುವರ್ ೬೬

ಎಂದಿವು ಮೊದಲಾಗಿ ಪಲವುಂ ಪ್ರಸನ್ನಪುರುಷಪ್ರಾಯಂಗಳುಂ ಸ್ಮರಶರಪರಿಶ್ರಮಶಮಕರಂಗಳುಮಪ್ಪ ಹಿತಮಿತಪ್ರಚುರವಚನಂಗಳಿಂದಮುಂ ಪುರಾಣಪುರುಷಚರಿತಕೃತಕೌತುಕಕಥಾಕಥನಂಗಳಿಂ[9]ದಮುಂ ಆ ಮಕರಂದನಾಮಹೀಪತಿಸುತನ ಮನಮನಾಱಿಸಿ, ಪರಕಾಯಪ್ರವೇಶಂಗೆಯ್ವಂತೆ ಮನಕ್ಕೆ ಮನಮನಾಂಕೆಗೊಟ್ಟು ಮದ

---

1 ದನೀಂ (ಕ ಗ ಘ) 2 ಸು (ಕ) 3 ನಾಂತ ಪುಲ್ಗೊನೆ ಪೋಗೆಂದು (ಕ) . . . ಪೊಗೆಗೆಂದು (ಗ) ಧಗೆಗೆಂದು (ಘ) 4 ಮಂತೆ (ಘ) 5 ರಿ (ಖ) 6 ನಾಂ (ಕ ಗ ಘ) 7 ಮಂದ (ಕ ಗ) 8 ಪರೆ (ಕ ಖ) 9 ದಮುಂನಮಾ (ಕ) ದೆಂದನಾ (ಘ)

ಕರಿಯ ಮೇಗಣ ಬದ್ಧಗಸಂತೆ ಮೆಯ್ವಳಿಗೆ ಸಂದಳಕೆಗೊಳಿಸುವನಂತೆ ತನ್ನಿಚ್ಛೆಗೆ ತಂದು ಮತಿಯುಂ ಮೊದಲ್ಗಿಡಲೀಯದೆ ಮದನವಿಕಾರಮನೊದವಲೀಯದೆ ಧೈರ್ಯಮಂ ದೂರಂಬೋಗಲೀಯದೆ ಮಜ್ಜನಭೋಜನತಾಂಬೂಲಭೂಷಣವಸನಕುಸುಮಾಂಗರಾಗದೊಳಂ ವಿರಾಗಮನಾಗಲೀಯದೆ ನೆಟ್ಟಲಂತೆ ಬಟಿಯನುಟಿಯದೆ ಸುಕೃತದಂತೆ ನೋಂಕಿ[1]ನಿಂ[1] ತೊಲಗದೆ, ಶರೀರದಂತೆ ಸುಖದುಃಖಭಾಗಿಯಾಗಿ ತಾನೆ ಪರಮರಹಸ್ಯಭೂಮಿಯುಂ ಪರಮಮಿತ್ರನುಮಪ್ಪುದಂ ತಪ್ಪಿಲ್ಲದೆ ತೋಱಿ ತೆಱಪುಗುಡದೊಳಪೊಕ್ಕಳವಡಿಸಿ ಕಾದು ಕೊಂಡಿರ್ಪುದುಮೊಂದು ದಿವಸಂ ವಿದಳಿತಕಮಳಕೋಶಪರಿಮಳಮಜ್ಜನಾಮೋದಿತಮುಗ್ಧಮಯೂಖಾಗ್ರನಪ್ಪ ದಿವಸಕರನುದಯಿಸುವ ಸಮಯದೊಳ್ ಸಮುಚಿ[2]ತಾ[2]ಸ್ಥಾನನಾಗಿ ಕಂದರ್ಪಲೀಲೆಯಿಂ ಕಂದರ್ಪದೇವನಿರ್ಪುದುಮಾ ಪ್ರಸ್ತಾವದೊಳ್—

ಅಳಿನೀ[3]ಲೀ[3]ಕಂಚುಕಂ ದಳ್ಳಿಸೆ ಮೊಲೆಯುಲೆಪಿಂ, ಕಯ್ಯ ನೋಂಕಿಂದೆ ಕೆಂಪಂ ತಳೆದೊಪ್ಪಂಬೆತ್ತ ಪೊಂಬೆತ್ತದ ಸೆಳೆಗೆ ತಳಿಮರ್ೂಡಿದಂತಾಗೆ ಪುರ್ವಿಂ ಸೆಳೆಯುತ್ತುಂ ಗಾಡಿಯಂ ನೋಡಿಯೆ ಮಿಡುಕಿದೊಡಂ ನೇತ್ರವೇತ್ರಾಗ್ರದಿಂದ ಪ್ಪಳಿಸುತ್ತುಂ, ಸುತ್ತಿದುರ್ವೀಶ್ವರರನೆಸೆದು ಬಂದಳ್ ಪ್ರತೀಹಾರಿಯೊರ್ಬಳ್ ೬೭

ಅಂತು ಬಂದು ಕುಚಭರದಿಂ ಕುಸಿದು ಬೀೞ್ವಂತೆ ದೂರಾಂತರದೊಳ್ ಬಾಗಿ ಬೀಗಿ [4]ಬಳೆ[4]ದೀ ಮೊಲೆಗಳೆನಗೆಡೆಗುಡದೆ ನೂಂಕಿ ಕಳೆದಪುವೆಂದು ಪುಯ್ಯಲ್ಚಿ ಮೆಯ್ಯನಿಕ್ಕುವಂತೆ ಮಣಿಹಾರಂ ಘಳಿಲನೆ ತಾಗಿ ಮಣಿಕುಟ್ಟಿಮದೊಳ್ ಕುಪ್ಪಳಿಸೆ, ಪಿಡಿವೂವನಿಕ್ಕಿ ಪೊಡೆವಡುವಂತಿರುಗುರ್ವೆಳಗು ಮುಂದೆ ಕೆದಱೆ, ಮಹೀತಳನಿಹಿತಕರತಳೆಯಾಗಿ ನವಿನಯದಿಂ ಮೆಲ್ಲನಿಂತೆಂದಳ್—

ಜನಪತಿ ಬಿನ್ನಪಂ, ಜಗದ ಮಾಯೆಗಿವಂ[5]ನೆ[5]ಲೆ, ಕೌತುಕಕ್ಕಿವಂ
ಜನಸಗೃಹಂ, ಚಮತ್ಕೃತಿಗಿವಂ ಕಣಿ, ವಿದ್ಯೆಗಿವಂ ವಿಧಾತ್ರನಂ
ಬಿನಮದೆ ಮಂತ್ರಸಿದ್ಧಿಗಮರೇಂದ್ರನನಳ್ಳಱುವಂತೆ ನೀಳ್ದಗು
ರ್ವಿನ ಗಡಿಯೆತ್ತಿ ಬಂದನವನೊರ್ವನಪೂರ್ವಗನಿಂದ್ರಜಾಲಿಗಂ ೬೮

[6]ಬಂ[6]ದು ದೇವ ದಾರವಟ್ಟದೊಳಿರ್ದಪನವನ ಪೆಸರ್ ಮಾಯಾಭುಜಂಗನೆಂದವಳ್ ಬಿನ್ನವಿಸೆ ವಸುಧಾವಲ್ಲಭನುಲ್ಲಸಿತಲೋಚನನಾಗಿ ಮಕರಂದನ ಮೊಗಮನವಲೋಕಿಪುದುಮಾತನರಸನ ಕಣ್ಣಱಿದು ಕುತೂಹಳಮುಳ್ಳೊಡೆ ಕಾಣಲಕ್ಕುಮಾಗಳೆ ಪುಗಿಸೆಂಬುದುಂ ಪೊಡೆವಟ್ಟು ಪೋಗಿ ಪಡಿಯಱತಿ ಪುಗಿಸಿದಾಗಳ್—

ತಿರಿಪುತ್ತುಂ ಕುಂಚಮಂ ನೆಟ್ಟಗುರ್ಕೆವೇಗಂ ಸೂಸುತುಂ, ಪಲ್ಲ ಮಿಂಚಂ
ಪರಪುತ್ತುಂ, ಭಾಳಬದ್ಧಾಕ್ಷತಮನೆಸಮರೆ ಪತ್ತೊತ್ತುತುಂ, ಯೋಗಪಟ್ಟೋ
[7]ದ[7]ರಮಂ ಸೃತ್ತಿಕ್ಕುತುಂ, ಕುಂಕುಮರಜನಿರಜೋರಂಜಿತಾಂಗಂ ಮದಪ್ರ
ಸ್ಫುರಿ[8]ತಾಕ್ಷಂ[8] ಬಂದು ಪೊಕ್ಕಂ ಸ್ವವಸಭೆಯನಹಂಕಾರಿ ಮಾಯಾಭುಜಂಗಂ ೬೯

[1] ಲಿಂ (ಖ) [2] ತ (ಘ) [3] ಲಂ (ಘ) [4] ಬಿಗಿ (ಕ ಗ ಘ) [5] ತ (ಖ) [6] ಎಂ (ಕ ಘ)
[7] ತ್ಕರ (ಗ) [8] ತಾಂಗಂ (ಗ) ತಾಂಕ್ಷಂ (ಖ)

ಪುೞಿದೊವಲೆಸೆದುದು ಜೋಗಿಗೆ
ಸಲೀಲಗತಿಯಿಂದೆ ಬರ್ಪ ಪದದೊಳ್ ವಿದ್ಯಾ
ಬಲದಿಂ ಹರಸುಟ್ಟುದುಮಂ
ಸುಲಿದುಟ್ಟಭಿಮಾನಮನಸೊಳಭಿನಯಿಸುವವೋಲ್ ೭೦

ಎಳಮಿಂಚನರೆದು ಸಣ್ಣಿಸಿ
ಬಟಿದಂತಿರೆ ತೊಳಪ ಮೆಯ್ಯೊಳಿರೆ ಸೋಲ್ಬರ ಕ
ಣ್ಬಟಿಯ [1]ಬೆಳಗಿಂ[1]ದ್ರ ಜಾಲಮ
ಸಿಳೆಗಿಂದ್ರನೆ ತೋಱಲೆಂದು ಬಂದವೊಲೆಸೆಗುಂ ೭೧

ಜೋಗಿಯ ಕೊರಲೊಳ್ ಕರಮಿಂ
ಜಾಗಿರ್ದುದು ಪೊಳೆವ ಪೊನ್ನ ಪಟ್ಟಿಗೆ ಸಿಱವಿ
ದ್ಯಾಗರ್ವದಿಂದೆ ವಿಳಾಸ
ಲ್ಪೋಗದ ಕುಡಿಮಿಂಚನಮರೆ ಮುಱಿದಿಕ್ಕಿದವೋಲ್ ೭೨

ತಳ್ಪೊಯ್ದು ಸಂಜೆಗೆಂಪಿನ
ತೆಳ್ಪಮರ್ದಿರೆ ಪೊರೆಯಸೆತ್ತಿ ಪೊಲಿಸಿದ ತೇಱದಿಂ
[2]ದೊ[2]ಳ್ಪಿನ ಪೊಸ[3]ಟೊಪ್ಪ[3]ರಮಿನ
ಕಳ್ವಂಗಾ ಜೋಗಿಗೆಸೆದುದಸದಳಮಾಗಲ್ ೭೩

ಆದಿತ್ಯನ ಮಂಡಲದೊಳ್
ತೇದರುಣನಸಮರೆ ಬೊಟ್ಟನಿಟ್ಟಂತೆ ಬೆಡಂ
ಗಾದುದು ಜೋಗಿಯ ನೊಸಲೊಳ್
ಮೂದೆರೆಗೊಂಡೊಪ್ಪುವರುಣಚಂದನಗಂಧಂ ೭೪

ಸಿಡಿಲಂ ಕಿಱುಕಿಱುದಾಗಿರೆ
ಕಡಿದು ತೊಡರ್ಚಿದವೊಲಾತನೆಡಗಾಲೊಳ್ ಪೊಂ
ದೊಡರಲೆದು ಘಣ್ಣು ಘಳಿಲೆಂ
ದೊಡನಲೆದುದು ಮಲೆವ ರಿಪುಚಮತ್ಕಾರಿಗಳಂ ೭೫

ಮುಂಚಿ ಮಿಱುಮಿಱುಸೆ ಮಿಂಚಿಪ
ಳಂಚುವ ಪೊಱಮಡುವ ಪೊಳೆವ ಪಲ್ಗಳ ಪಲವುಂ
ಗೊಂಚಲ್ವೆಳಗುಗಳಿಂದೆಳ
ಮಿಂಚಂ ಮುಕ್ಕುಳಿಸಿಯುಗುಳ್ವವೊಲ್ ಕರಮೆಸೆಗುಂ ೭೬

1 ನೆಟಲಿಂ (ಗ) 2 ಮು (ಖ) 3 ರಪ್ಪ (ಕ) ವುಪ್ಪ (ಗ) ಎಪ್ಪ (ಘ).

ಉಗುರಿಸಿ ಬೆಂಗೆ ಬಿಟ್ಟ ಪಿಣಿಲ್ತೊತ್ತಿದ ಬೈತಲೆ, ಸಣ್ಣ ಪುರ್ಬು, ಸು
ಣ್ಣೊಗೆದ ಕದಂಪು, ನೀಳ್ದಸಿಯ [1]ಕಣ್[1], ಸೆಳೆಯೊಳ್ನಡು, ಪೀವರಸ್ತನಂ
ಬಗೆವುಗೆ ಕಯ್ಯ ಸಿಪ್ಪು, ಸೆಳೆ ಮೆಟ್ಟಿದ ಪಾವುಗೆ, ತೊಟ್ಟ ಜೋಗವ
ಟ್ಟಿಗೆ, ತೆಗೆದುಟ್ಟ ಸೋಗೆ, ಕರಮೊಪ್ಪಿರೆ ಜೋಗಿಣಿ ಬರ್ಪಳೊಪ್ಪಿದಳ್ ೭೭

ಸಿಂದುರದ ಬೊಟ್ಟು ಸುಣ್ಣನೆ
ಮಿಂದರಿಸಿನವರುಣಕುಸುಮದಾಸಂ ಕಿವಿಯೊಳ್
ಕೆಂದಾವರೆ ಬೈತಲೆಯೊಳ್
ಕುಂದದ ಸೇಸಕ್ಕಿ ಸೊಗಯಿಕುಂ ಜೋಗಿಣಿಯಾ ೭೮

ಮುಡಿಯೊಳೆಲಿಕ್ಕಿದಸುಕೆಯ
ಕುಡಿದಳಿರಿಂದೆಸೆದಳಾಕೆ ಕೇಸುರಿಯಂ ಕೊಂ
ಡುಡಿದು ಮುಡಿದಂತೆ ವಿದ್ಯಾ
ವಿಡಂಬಮಂ ತೋಱಲೆಂದು ತತ್ಸಭೆಗಾಗಳ್ ೭೯

[2]ಅಲ್ಲಿಂ ಪೆಱಗೆ,[2]—

ಗರುಡನೆಱಂಕೆಯಂ ಮುಱಿದು, ಕೆಂಬಿಸಿಲಂ ತಿಱಿದಿಂದುಬಿಂಬಮಂ
ಬರೆತೆಗೆದಿಟ್ಟು, ಕಟ್ಟಿದವೊಲೊಪ್ಪಿರೆ ಸೀಗುರಿ ರಕ್ತಚಾಮರಂ,
ಸುರುಚಿರದರ್ಪಣಂ, ತುದಿಯೊ[3]ಳುತ್ಪಟ[3]ಚಿತ್ರಪಟಂ, ಬೆಡಂಗನಾ
ಳ್ದಿರೆ ಕಳಕಿಂಕಿಣೀಕ್ವಣಿತಮದ್ಭುತಮಾದುದು ಕೌತುಕಧ್ವಜಂ ೮೦

ಜಟಿಳಿತಕೇಶಂ ವೇಷ್ಟಿತ
ಪಟಚ್ಚದಂ ದೀರ್ಘದೇಹಿ [4]ಜಟ್ಟಿಗನೆಂಬೋಲ್[4]
ಕುಟಿಲಗತಿ ಬರುತುಮಿರ್ದಂ
ಭಟನೊರ್ಬಂ ಪೊತ್ತು ಬೆಮರುತುಂ ತದ್ಧ್ವಜಮಂ ೮೧

ಅಂತು ಬಂದ ಮಾಯಾಭುಜಂಗಂ ಜಿರುದಿನ ಗದೆಯಂ ದೂರದೊಳಿರಿಸಿ ವಿದ್ಯಾಧರಿಯೆಂಬ ಜೋಗಿಣಿವೆರಸು ರಂಗಮಂ ಪೊಕ್ಕು, ಕಟಿತಟನಿವೇಶಿತವಾಮಕರ ಕಂಜತಳಂ ಕುಂಚಿಕಾಚಾಳನಚತುರಮಪ್ಪ ಸವ್ಯೇತರಹಸ್ತಮಂ ಸಭೆಕ್ಕೆ ನೆಗಪಿ,

ಪಣಮಹಮುಹಿಂದಚ[5]ಳ[5]ಗ್ಗೇ ಮಹ[6]ಣಿಜ್ಜಾ ಕೋ[6]ದುಹಲ್ಲೀಣ
ಅಣ್ಣಾ ತಿಹುವಣಮಜ್ಝೇ ಸಂತೋ[7]ಸೋ[7]ವೋ ಸುಹಂ [8]ಸಜ್ಜೋ[8] ೮೨

ಎಂದು ಮಹೇಂದ್ರಸಂ ಸ್ತುತಿಸಿ ಮಹೀಪಾಳಮುಖಕಮಲದತ್ತದೃಷ್ಟಿಯಾಗಿ ದೇವ ನೀನಪ್ಪೊಡೆ ನಿಖಿಳಕಳಾಕೋವಿದನ್ಪೈ, ಕೃತಾವಳೋಕಿತ ಕುತೂಹಳನೆಯುದಱಿಂ

[1] ಕೈ (ಗ) [2] ಇದು ಕ ಗ ಪ್ರತಿಯಲ್ಲಿಲ್ಲ [3] ಳೊಟ್ಟರೆ (ಘ) [4] ಜೊಟ್ಟಂಗನ ಪೋಲ್ (ಕ ಗ) ತಾಂ ಜಟ್ಟಿಗನೊಲ್ (ಘ) [5] ಣ (ಘ) [6] ಳಂಜಾಳೋಯ (ಕ ಚ) [7] ಜೋ (ಕ ಘ) [8] ಸಂದೊ (ಕ ಘ)

ನೀನಱಿಯದ ವಿದ್ಯೆಯಿಲ್ಲ ನೀಂ ಕಾಣದ ಕೌತುಕಮಿಲ್ಲ ನಿನ್ನೋಲಗಮಂ ಪುಗದಿಂದ್ರ ಜಾಲಿಗನಿಲ್ಲಾದೊಡಂ ನಿನ್ನ ಚಿತ್ತಕ್ಕೆ ಚಮತ್ಕಾರಮಪ್ಪ ಚಮತ್ಕಾರಮಂ ತೋರ್ಪೆ ನೆನ್ನ ಪೆಮ್ಮಾತಂ ಪೇೞ್ವೊಡೆ,ಮಂತ್ರದೊಳಾಜ್ಞಾಸಿದ್ಧನೆಂ,ತಂತ್ರದೊಳ್ ಪ್ರಯೋಗ ಸಿದ್ಧನೆಂ, ಯುಕ್ತಿಲಾಘವಮೆಂಬೆರಡಱೊಳಂ ಬೆಱಗುಗಿಡದೆ ಪತ್ತಿದ ಬಗೆಯುಮಂ ಪರಿವ ಕಣ್ಣುಮಂ ಪೊಲಗಿಡದೆ ಪಿಡಿಯಲೆನ್ನ ಬಿರುದಿನ ಗಡೆವಿಡಿವನ ಕರ್ಪಂ ಪಿಡಿದನೆ ಬಲ್ಲ ನಂತುಮಲ್ಲದೆ—

ಉರಿವುವುದೋ ಪೊದಱ್ದುರಿಗಳಿಂ ಜ[1]ಳ[1]ಮಂ,ತಿಮಿರಂಗಳಿಂ ದಿವಾ
ಕರನನಡುರ್ತು ಬೆಂಕೊಳಿಪುದೋ ಮಣಿದರ್ಪಣಮಾಗೆ ಮಾಱ್ಪುದೋ
ಪರಿಣತಚಂದ್ರನಂ,ನಿನಗೆ ತಾರಗೆಯಂ [2]ತಳ[2]ದಿಂದೆ ಕೋದಳಂ
ಕರಿಪುದೊ ದೇವ ನಿನ್ನ ವನಿತಾಜನಪೀನಪಯೋಧರಂಗ[3]ಳಂ[3] ೮೩

ಜಳನಿಧಿಯನೆಡೆದು ತರ್ಪುದೊ,
ಕುಲಗಿರಿಯನುರುಳ್ಚಿ ತರ್ಪುದೋ, ನಭಕೆ ಮಹೀ
ತಳಮಂ [4]ನೆಗೆ[4]ಪುವುದೊ ನಭ
ಸ್ಥಳಮುಮನಿೞಿಪುವುದೊ ಮಹಿಗಿದರ್ಕೇವೇೞ್ಕುಂ ೮೪

ಮಿಗೆ ಗಱಪುವುದೇನೊಡ್ಡೋ
ಲಗದೊಳ್ ದಿವಿಜೇಂದ್ರನಿರ್ಪ ವಿಭವಮುಮಂ ಚೆ
ಲ್ವೊಗೆವಮರೀಲಾಸ್ಯಮುಮಂ
ಗಗನದೊಳಾಂ ತೋರ್ಪೆನರಸ ನೋಡುವುದಿನಿಸಂ ೮೫

ಎನೆ ಸಾಭಿಪ್ರಾಯನಾಗಿ ಮಕರಂದಂ ನರೇಂದ್ರನಿಚ್ಛೆಯನಱಿದಿಂದ್ರನೋಲಗ ಮನೆ ತೋರ್ಪುದೊಪ್ಪುಗುಮೆಂಬುದುಂ—

ಗಗನಕುಸುಮಮನೆ ಪಡೆವಂ
ತೊಗೆವುಗುರ್ಗಳ ಬಿಳಿಯ ಬೆಳಗು ಬಳೆದಪರ್ದಿರೆ ಕುಂ
ಚಿಗ್ಗೆಯನವಂ ಬೀಸಲೊಡಂ
ನೊಗಯಿಸಿದುದು ಘೋಂಕೆನಮರಪತಿಸಭೆ ನಭದೊಳ್ ೮೬

ಅಲ್ಲಿ ಶೈಶವದಶೆಯ ಪರಿಣಾಮದಶೆಯ ದೆಸೆಯುಮನಱಿಯದೇೞುಂಜವ್ವನ ಮನುಱಿ ನೆಱೆವಿಡಿದ ಸುರಕಾಂತೆಯರ ಸರಸಕಿಸಲಯಸ್ನಿಗ್ಧ [5]ಸುಕುಮಾರ[5] ಕರಚರಣಾರುಣಕಿರಣಜಲದಿಂ ಕಿಸುಸಂಜೆ ಪಸರಿಸಿದಂತೆಯುಮಾಕೆಗಳ ಲಾವಣ್ಯರಸಪ್ರವಾಹದಿಂ ಗಗನಗಂಗಾಪ್ರವಾಹಂ ಕವಿದಂತೆಯುಮಾಕೆಗಳ ಪುಷ್ಪಮಂಜರೀಮಂಜುಳ ಪುಂಜಾಯಮಾನಪದನಖನಿಕಾಯದಿಂ ತಾರಾಗಣಂ[6]ಗಳ್[6]ತೆಕ್ಕೆಗೊಂಡಿಱಿದಂತೆಯು

---

[1] ಗ (ಘ) [2] ತರ (ಖ) [3] ಳೊಳ್ (ಗ) [4] ನಿಱಿ (ಕ) [5] ಕುಸುಮಾಕರ (ಕ ಗ) [6] ಳ (ಕ)

ಮಾಕೆಗಳ ಚಕಿತಚಕೋರಚಪಳವಿಳೋಚನವಿಳಸಿತಂಗಳಿಂ ಸಮುದ್ಭಾವಮವಿದ್ಯುದ್ದಾಮಂಗಳ್ ದಿಂಡುಗೆಡೆದಂತೆಯುಂ, ಆಕೆಗಳುನ್ನತನಿತಂಬದಲಘುಜಘನಸ್ತನವಿತಾನದಿಂದಮಾಗಸದ ಮಹತ್ವಮೋಸರಿಸೆಯುಮನೇಕನಾಕಿನೀನಿಕರಮಕುಟತಟಪ್ರಾಂತಪದ್ಮರಾಗಮಣಿ ಪ್ರಭಾಪಟಲದಿಂ ದಿವಸಕರಮರೀಚಿಮಾಳೆ ಮಾಂಸಳಮಾಗೆಯುಮಿಂತಸದೃಶಸೌಂದರ್ಯಸಾರಶೃಂಗಾರಗೌರವ ಸಹಜಸಕಳೈಶ್ವರ್ಯಸಂಕರಸಂಕೇತಸ್ಥಾನಮೆನಿಸಿದಿಂದ್ರನಾಸ್ಥಾನಮಂ ನರೇಂದ್ರನಾಸ್ಥಾನಂ ಚಿತ್ರಿತಾಸ್ಥಾನದಂತೆ ವಿಸ್ಮಯ ಸ್ಮೇರಹೃದಯಮೆಮೆಮಿಡುಕದನಿಮಿಷದರ್ಶನದಿಂ ತಮಗನಿಮಿಷತ್ವಮಾದಂತಿರೆ ಮೆಯ್ಯಿಕ್ಕದೆ ಸಜ್ಜನಮಾಗಿಯುಮುದ್ಗ್ರೀವಮಾಗಿಯುಂ ನೋಡುತ್ತಿರ್ಪುದುಮಾಗಳರಸಂಗೆ [1]ಸುಟ್ಟಿ ತೋಱಿ ಮಕರಂದನಿಂತೆಂದಂ—

ಜನನಾಥ ನೋಡಿ[2]ವಂ[3] ಶ
ಕ್ರನ ಸಭೆಯುಂ ತೋಱುವೊಂದು ನೆವದೊಳ್ ನವ ನಂ
ದನವನಮಂ ತೋಱಿದವೊಲ್
ಕೊನರ್ತಪುದು ಕೌತುಕಕ್ಕೆ ಕೌತುಕಮಿಾಗಳ್ ೮೭

ಅದೆಂತೆನೆ—

ಒದವಿದ ಪಾದಪಪ್ರಕರದಂತದೆ ದೇವಸಮಾಜಮೊಪ್ಪಮಂ
ಕೆದಱಿ ಕವಲ್ತು ಪೂತ ಲತೆಯಂತದೆ ದಿವ್ಯವಿಳಾಸಿನೀಜನಂ
ಪುದಿದ ಸಹಸ್ರಲೋಚನದ ಕಾಂತಿಗಳಿಂದವೆ ಪೂತ ಪಾರಿಜಾ
ತದ ಮಹಿಜಾತದಂತಧಿಕಮಾ ಯೆಸೆದಿರ್ದನೆ ದೇವವಲ್ಲಭಂ ೮೮

ಬಿಸುಪಂ ಬಿಸುಟ್ಟು ಜಲಜಲ
ನೆಸೆದಿರೆ ಜಡೆಗೊಂಡು ನಿಮಿರ್ವ ಕೇಸುರಿ ಮೆಯ್ಯೊಳ್
ಪಸರಿಸೆ ಪೊಸದಳಿರಂ[3]ಪೊ
ತ್ತ[3]ಸುಕೆಯ ಸಸಿಯಂತೆ ತೋಱುತಿರ್ಪವನನಲಂ ೮೯

ಕಾಳಿಂದಿಯೊಳಗೆ ಪೊಳೆವೆಳ
ವಾಳೆಗಳೆನೆ ಪೊಳೆಯೆ ಹರಿಯ ಲೋಚನಜಾಳಂ
ನೀಳತನುರುಚಿಯೊಳೆಸೆವ ತ
ಮಾಳದ[4]ಮೊ[4]ಳೆಯಂತೆ ತೋಱುವಂ ಯಮರಾಜಂ ೯೦

ತೊಳಪ ಕುಡುದಾಡೆಗಳ್ ಪೊಳೆ
ವೆಳವೆಱೆಗಳನಣಲೊಳಡಸಿದಂತಿರೆ ತೀಕ್ಷ್ಣ
ತುಳಮೂರ್ತಿ ಕೇದಗೆಯ ಕೋ
ಲ್ಪೆಳೆಯಂತಿರೆ ನಿರುತಿ ನಿರುತಮೇನೆಸೆದಪನೋ ೯೧

[1] ಮು (ಘ) [2] ದಂ (ಖ) [3] ಪೋಲ್ತು (ಘ) [4] ಮಾ (ಘ)

ಮಿಗುವರುಣಮಣಿಯ ಮೆಯ್ದುಡು
ಗೆಗಳಿಂ ಸುಕುಮಾರಕಾಯದಿಂ ಸುಗ್ಗಿಯ ಸಂ
ಪಗೆಯ ಸಸಿಯಂತೆ ವರುಣಂ
ಬಗೆಗೊಂಡಪನೇಕಚಿತ್ರದಿಂ ನೋಡು ನೃಪಾ ೯೨

ಮಗಮಗಿಸುವ ಮಂದಾರದ
ಮುಗುಳ್ಗಳಿಸುಬ್ಬರಿಸಿ ಕವಿವ ನವಪರಿಮಳಮಂ
ತೆಗೆದು ಮೊ[1]ಗೆ[1]ದೊ[2]ಟ್ಟಿ[2]ಕೊಂಡೇಂ
ಸೊಗಯಿಸುವನೊ ಮಧುರಮೂರ್ತಿಯಿಂ ಪವಮಾನಂ ೯೩

ತೊಳತೊಳತೊಳಗುವ ಪೊಸಪೊಂ
ಗಳ ತೊಡವಂ ತೀವೆ ತೊಟ್ಟ ಮೆಯ್ಸಿರಿಯಿಂ ಕ
ಣ್ಗೊಳಿಸಿದಪನಮಳಕುಸುಮೋ
ಜ್ಜ್ವಳಕೋಮಳಕರ್ಣಿಕಾರದಂತೆ ಕುಬೇರಂ ೯೪

ಕೆಂದಳಿರೆನೆ ನಿಡುಗೆಂಜಡೆ
ಮಂದಾಕಿನಿಯಡರ್ದು ಪೂತ ಮಲ್ಲಿಗೆಯೆನೆ ತಾಂ
ಬಂದೆಳಮಾವಿನ ತೆಱದಿಂ
ದಿಂದುಧರಂ ಕುಸುಮಧವಳನೇಸೊಪ್ಪಿದ[3]ನೋ[3] ೯೫

ಅಂತುಮಲ್ಲದೆಯುಂ,

ಕುಳಗಿರಿಗಳಂತೆ ತುಂಗಾ
ನಳ ಯಮದನುಜಾಬ್ಧಿಪತಿಮರುದ್ಧನದೇಶರ್
ಬಳಸಿರೆ ಸಹಸ್ರನಯನಂ
ಚಳತಾರಕೆ ಮುಸುಱದಮರಗಿರಿಯವೊಲೆಸೆವಂ ೯೬

ಅಂತುಮಲ್ಲದೆ—

ದಳಿತೋದ್ಯತ್ಪುಂಡರೀಕಂ ಕೊಳಸಮಳಜಳನ್ಮೀನಮಂಭೋನಿಧಾನಂ
ವಿಳಸತ್ತಾರಾಪರೀತಂ ಗಗನಮೆಸೆವವೋಲ್ ಬಾಸಿಗಂಗಟ್ಟಿ ಭಿನ್ನೋ
ತ್ಪಳಮಂ [4]ಮೇಗೊಟ್ಟಿ[4]ಕೊಂಡಂತಿರೆ ತೊಳಗೆ ಸಹಸ್ರಾಕ್ಷಿಗಳ್ನಾಡೆಯುಂ ಕ
ಣ್ಗೊಳಿಸಲ್ಪಾರ್ದಿರ್ದಪಂ ನೋಡಮರಪರಿವೃಢಂ ವಿಶ್ವವಿದ್ಯಾವಿನೋ[5]ದಾ[5] ೯೭

ಜಿನಜನ್ಮಾಭಿಷವಾಭಿಷೇಕದೊಳೆ ಮೆಯ್ಯೊಳ್ಳಿಲ್ಕಿ [6]ಬಲ್ದೋ[6]ರ್ ಪಾ
ಲ್ಪನಿಗಳ್ ಪೋಗದೆ ಪತ್ತಿದಂತೆಸೆವಿನಂ ದೃಗ್ಜಾಳಕಂ ದೇವದೇ

[1] ಗ (ಗ) [2] ಡ್ಡಿ (ಫ) [3] ಪಂ (ಖ) [4] ಮೇಳೊಡ್ಡಿ (ಗ) [5] ದಂ (ಕ ಫ)
[6] ಬಿದಿರ್ದ್ವ (ಫ)

ವನ ಮುಂದಾಡಿದನಂದು ಮಾಣದೆ ಪಯಃಕುಂಭಂಗಳಂ ಪೊತ್ತು ಜೊ
ಮ್ಮನೆ ಜೋವೇಱುದ ತೋಳ್ಗಳಂ ನಿಮಿರ್ವವೋಲಿಂದ್ರಂ ಸುರಾದ್ರೀಂದ್ರದೊಳ್ ೯೮

ಅಲ್ಲಿಂಬಟಿಯಮಾ ಬಲವಿರೋಧಿಯಂ ಬಳಸಿದಬಳೆಯರಂ ತೋಱು—

ಊಡದೆ ಕೆಂಪು ಮೂಡಿದಡಿ ತಿರ್ದದೆ ಕೊಂಕಿದ ಪುರ್ಬು ಪೂಗಳಂ
ಸೂಡದೆ ಕಮ್ಮಿತಾದ ಮುಡಿ ಕಾಡಿಗೆಯೆಚ್ಚದೆ ಕರ್ಪನಾಳ್ದ ಕಣ್
ಕೂಡದೆ ತಂಬುಲಂ ತೊಳಪ ಬಾಯ್ದೆಱೆ ತುಱುಕುವ ರಾಗವೊರ್ಮೆಯುಂ
ಬಾಡದ ಬಣ್ಣಮಾಕೆಗಳೊಳೆಂದೊಡೆ ಬಣ್ಣಿಸಲಾರ್ಗೆ ಗೋಚರಂ ೯೯

ಹಿಮರುಚಿ ಲೋಕಮಂ ಬೆಳಪ ಬಿಂಕಮನಿಂದಱಿದೆಂ ಸಲೀಲಮಾ
ರಮಣಿಯರೊರ್ಮೆಯುಂ ಮುಕುರಮೆಂದು ನಿರೀಕ್ಷಿಸೆ ನೀಳ್ದ ಕಣ್ಗಳಿಂ
ನಿಮಿರ್ದು ಪೊದಟ್ದು ಪಜ್ಜಳಿಪ ಕಾಂತಿಗಳಾತನ ಬಿಂಬದಲ್ಲಿ ಸಂ
ಕ್ರಮಿಸಿದುವಲ್ಲದಂದಿನಿತು ದೀಧಿತಿಗಳ್ ಶಶಿಗೆಂತು ಸಾರ್ದುವೋ ೧೦೦

ಸುರತತೀಕ್ಷ್ಣರಸಂಗಮನೀಕೆಗಳ್
ಸುರತತೀವ್ರತೆಯಿಂ ಸಡೆ ಸೋ[1]ಡಲ್ಕೆ[1]
ಸರಲ ಮಾಡ್ಕೆಯು ಕಣ್ಗಳಿ [2]ಸಟ್ಟುವೀ[2]
ಸರಲಮಾನಸರಕ್ಷಿಗಳೆಂಜಿಸಂ ೧೦೧

ಅವಧರಿಸಿ ಸೋಡು ಸೃಪಸುತ
ಕವಲ್ತು ಕಣ್ಬೇಳಗು ಬಳಸಿ ಬಳ್ವಳ ಬಳೆದೊ
ತ್ತುವ ಕತದಿನೆಮೆಯ್ಯುಸಿಕ್ಕದೊ
ಡವರಿಯರೆಮೆಯಿಕ್ಕರೆಂಬುದಱಿಯ[3]ದೆ[3] ಲೋಕಂ ೧೦೨

ವಸಿತೆಯರೊಳ್ ಸಾರಂ ಯೌ
ವನಮಾ ಯೌವನಮೆ [4]ತ[4]ಮ್ಮೊಳೊಡವುಟ್ಟಿ ರಸಾ
ಯುನಸಿದ್ಧಿ ವಡೆದುದೆನಲಿಂ
ಮನೋಜಸುಖರಸರಸಾಯನಂ ಪೆಱತುಂಟೇ ೧೦೩

[5]ಇ[5]ಲ್ಲಿ ಯುವತೀರಸಾಯನ
ಮೊಲ್ಲದೆ ಸುರಸುಖಕೆ ಬಯಸಿ ಬಯಸಂ[6]ಗದ[6]ಮಾ
ತಿಲ್ಲೆನಿಸೆ ತೊಱೆದ ತಾಪಸ
ವಲ್ಲಭರಱಿವರೆ ಸುರಾಂಗನಾವಿಭ್ರಮಮಂ ೧೦೪

---

[1] ಡದ್ಕೆ (ಗ) [2] ನಟ್ಟೊಡೀ (ಕ ಗ ಫ) [3] ದು (ಕ ಫ) [4] ನಂ (ಕ ಫ) [5] ಅ (ಕ ಫ)
[6] ಪಡೆ (ಖ)

ಎಂದು ಮಕರಂದನರಸನ ವಿದ್ಯಾಮೋಹಮಹೇಂದ್ರಜಾಲದೊಳ್ ತೊಡರ್ದ ಮನಮಂ ಬಿಡಿಸಲುಂ ಮಱೆಯಿಸಲುಮೆಂದು ಮಹೇಂದ್ರಜಾಲದರ್ಶಿತಸುರಸದ ಸ್ಸುಂದರಿಯರ ರೂಪಾತಿಶಯಮಂ ನಿರೂಪಿಸಿ ಪೊಗೞುತಿರ್ಪುದುಮಾಗಳಲ್ಲಿ—

ದಸಿಗೆಯುದ್ದು ಮಱೆದೊಱಗಿದ
ಮನಸಿಶಯನನೆತ್ತುವಂತೆ ಭೋರ್ಗರೆದು ತಟಿ
ನ್ನಿಸದಮನೊಡನಡರ್ದು ಘನ
ಧ್ವನಿಯೆನಿಸಿ ಘನಾವನದ್ಧವಾದಿತನಿವಹಂ ೧೦೫

ಅಲ್ಲಿಂ ಬೞಿಯಿಂ—

ಕಿಸುಸಂಜೆ ತೊಲಗೆ ತೊಳಗುವ
ಶಶಿಲೇಖೆ ಮಯೂಖನಿಕರಮಂ ಕೆದಱುವವೋಲ್
ಕುಸುಮಾಂಜಳಿಯಂ [1]ತೆ[1]ಳ್ಪಿನ
ಪೊಸಜವನಿಕೆ ತೊಲಗೆ ಪೊಳೆದದೇಂ ಕೆದಱಿದಳೋ ೧೦೬

ಕೆದಱ ಕರರುಹದ ರುಚಿಯಂ
ಕೆದಱಿದಳೆನೆ ಬಿಳಿಯ ಕಣ್ಣ ಬಂಬಲ್ವೆಳಗಂ
ಕೆದಱ ನವಭಾವರಸಮಂ
ಕೆದಱಿದಳೆನೆ ಕುಣಿದು ರಂಭೆ ರಂಗಂಬೊಕ್ಕಳ್ ೧೦೭

ಆಂಗಿಕಮಾಸುರಕೈಶಿಕೆ
ಸಂಗಳಿಸಿದ ಭಂಗಿ ಭಾವಮೊಪ್ಪಿಸಿದೊಪ್ಪಂ
ಶೃಂಗಾರಮಿತ್ರ ನಯಮಮ
ರಾಂಗನೆಗಮರ್ದುದು ವಿಳಾಸಲಾಸ್ಯೋದಯದೊಳ್ ೧೦೮

ಅಂಗಮನಂಗನ ಜನಿಯಿಸು
ವಂಗಮಪಾಂಗಮೆ ದಲಂಗಜನ ಚತುರಂಗಂ
ಶೃಂಗಾರಯೋನಿಗದೆ ಸ
ಪ್ರಾಂಗಂ ಪ್ರತ್ಯಂಗಮಾಸುರೇಂದ್ರಾಂಗನೆಯಾ ೧೦೯

ಎಲರಲೆಪದಿನೊಲೆದಾಡುವ
ಜಲರುಹಮೆನೆ ಭಾವರಸಮನೊದವಿಸಿತಾಸ್ಯಂ
ಕೆಲಕೆ ನಸುಬಾಗುವಂಚಿತ
ವಲೆಗುಂ [2]ಮನಮೊಲೆವ ಲೋ[2]ಳಿತಂ ನಚ್ಚಣಿಯಾ ೧೧೦

---

[1] ವಾ (ಕ ಫ) [2] ಮಧುರ ಮೊಲೆವದೋ (ಕ ಫ)

ಆ ಚತುರಿಕೆಯಭಿನಯಿಸಿದ
ವಾಚಿಕಮಾಹಾರ್ಯಮಾಂಗಿಕಂ ಸಾತ್ವಿಕಮೆಂ
ಬೀ ಚತುರಂಗಮೆ ತಾನಾ
ಯ್ತಾ ಚತುರಂಗಂ ಮನೋಜರಾಜಂಗಾಗಳ್ ೧೧೧

[1]ದಳದ[1]ಳಿಸಿರೆ ಮುಕ್ಕುಳಿಸಿದ
ಬೆಳ್ದುದಿಂ[2]ಗಳನುಗುಟ್ಟಿ ನೆಯ್ದಿಲಲರ್ಗಳ ಸಿರಿ ತ
ಮ್ಮೊಳೆ ದಳ್ಳಿಸೆ ಬೆಳ್ವೆಳಗಮ
ರ್ದೆಳಸುವ ಸುಸ್ನಿಗ್ಧದೃಷ್ಟಿಗಳ್ ಸುರವಧುವಾ ೧೧೨

ನಸುಮುಚ್ಚುವ ಬಿಚ್ಚುವ ಪೊಳೆ
ವ ಸುಳಿವ ಬಳಸುವ ಬಟಲ್ವ ತೆರೆಮಸಗಿ ಮರ
ಲ್ದೆಸೆವ ರಸಭಾವದೃಷ್ಟಿಗ
ಳಸದಳಮೆನಿಸಿದುವು ನೃತ್ಯದೊಳ್ ನರ್ತಕಿಯಾ ೧೧೩

ಅತಿಶಯಶೃಂಗಾರರಸ
ಪ್ಲುತಚಳಶೈವಾಳಲತೆಗಳೆನೆ ಸತಿಗೆಸೆಗುಂ
ಚತುರೋತ್ಕ್ಷಿಪ್ತನಿಕುಂಚಿತ
ಪತಿತಸಮಭ್ರುಕುಟಿರೇಚಿತಭ್ರೂಲತೆಗಳ್ ೧೧೪

ಅತಿಲಲಿತಕರ್ಣಪತ್ರ
ದ್ಯುತಿಲೇಖಾಲಾಸ್ಯಲಲಿತಮೇನೆಸೆದುದೊ ಕಂ
ಪಿತಫುಲ್ಲಪೂರ್ಣಸಮಕುಂ
ಚಿತಕಾಂತಕ್ಷಾಮಗಂಡಮಂಡಳಮವಳಾ ೧೧೫

ಮುಕುಳಿಸಿತೆಲರೆಳಸಿದ ಚಂ
ಪಕಮುಕುಳದ ಚೆಲ್ವನೆಸೆವ ಲಸಿತಸ್ವಾಭಾ
ವಿಕನತಮಂದೋಚ್ಛ್ವಾಸ
ಪ್ರಕರ್ಷನಾಸಾವಿಳಾಸಮಾ ನರ್ತಕಿಯಾ ೧೧೬

ಕಂದಿದಪುದಿದಟಿ ಕೆಂಪೆಂ
ದೊಂದಿರೆ ಬೆಳ್ದಿಂಗಳಿಂದೆ ಬಾಸಣಿಸಿದವೊಲ್
ಸಂದ ನಿಜಾಧರಮೆಸೆದುದು
ಸುಂದರರದಶನಾಂಶುಧವಳಿತಂ ನರ್ತಕಿಯಾ ೧೧೭

---

[1] ಥಳಥ (ಘ) [2] ಳರ್ದಿಂ (ಖ)

ನಸು ನಳಿದು ನಿಮಿರೆ ತೋಳ್ಗಳ್
ಲಸಿತತ್ರಿಪತಾಕದಿಂ ಲತಾಕರಮೆಸೆಯಲ್
ಪೊಸದಳಿರಿಂ ಪೊತ್ತ್ರೆಳಲತೆ
ಮಿಸುಗುವ ಕುಡಿಯೆರಡನೆಬಲೆ ಜಿಟ್ಟವೊಲೆಸೆದಳ್ ೧೧೮

ತೊಳಗುವ ನಗೆಮೊಗಮಿದು ನಿ
ರ್ಮಳವಲ್ಲದು ಬರ್ದಿರೆಮ್ಮುಮಂ ಪೋಲ್ತೊಡೆಸು
ತ್ರೆಳೆಯಳ ಕನ್ನವುರದ ನವ
ನಳಿನಮನಲೆವಂತೆ ಕರಿಕರಂ ಕರಮೆಸೆಗುಂ ೧೧೯

ಗರ್ಭೇಶ್ವರಿಯ ಕುಚಂಗಳ್
ನಿರ್ಭರದಿಂದುರಮನೆಯ್ದೆ ಪರ್ಬಿರೆ ಸಮಸಂ
ದರ್ಭಾ[1]ಹಿತಕಂಪಿತವರ
ನಿರ್ಭುಗ್ನಾಭುಗ್ನವಕ್ಷಮೇಂ ವೃಥೆಯಾಯ್ತೋ ೧೨೦

ವೃತ್ತಸ್ತನದೊಡನೊಡನ
ತ್ಯುತ್ತಮವರೆಯಾಗೆ ಸ್ವಸುರನೇತ್ರಾಳಿ ಪರಾ
ವೃ[2]ತ್ತಾ[3] ರೋಚಿತಕಂಪನಿ
ವೃತ್ತೋನ್ನತಘನನಿತಂಬಮೆಸೆದುದು [4]ಸಟೆ[5]ಯಾ ೧೨೧

ಸತಿ ಜಘನದ ಭರದಿಂದೇ
ಕತಲದೊಳಿರಲಱಿಯದಗ್ರತಳಸಂಚಾರಾಂ
ಚಿತಕುಂಚಿತಸೊಬಗುದ್ಧ
ಟ್ಟಿತಮಂ ಪಡೆದಂತೆ ಪಾದಪಲ್ಲವಮೆಸೆಗುಂ ೧೨೨

ತಳೆಯೆ ಮೊಗಮೊಗೆಯೆ ನೇಲಿಮೊಲೆ
ಬಳೆಯೆ ಬಲಕ್ಕಲಘುಜಘನಮಮರ್ದಾಯತಮಂ
ಕೊಳುತುಮವಹಿತ್ಥಮಂ ಕೊಂ
ಡೆಳೆಯಳ್ ಸುರಸಭೆಯ ಮನಮನಿಬ್ಬಗಿಗೊಂಡಳ್ ೧೨೩

ತೀವಿ ಮೊಗರಸದೊಳೊದವಿದ
ಭಾವರಸಂ ಬಸಿಗುಮೆಂಬವೊಲ್ ಸಂಘಟಿತಮಂ
ಸಾವಗಿಸಿದ ಮೈಯ್ಯ್ಯಾಳ್ ಲೋ
ಭಾವತಿ ಸಮುಪಾದಚಾರಿಯುಂ ಕೈಕೊಂಡಳ್ ೧೨೪

---

[1] ಏತ ಪರಿಕಂಪಿತ (ಕ) ಹಿತ ಕಂಪಿತಕಂ (ಘ) [2] ತ್ತೋ (ಘ) [3] ಸತಿ (ಖ) [4] ನೆಳಕುಳ (ಕ ಗ ಘ) [5] ಮ (ಕ)

ಅಡಿದಳಿರ್ಗಳ್ ತಳಿರುಂ ಸಾ
ಲಿಡುವಂತಿರೆ ಕೆಂಪು ಕೆದಱೆ ಪದಪಲ್ಲವದೊಳ್
ತೊಡರ್ದಮರರ ಕಣ್ಬ[1]ಲೆ[1]ಯುಂ
ಬಿಡಿಸುವ ತೆಱದಿಂದೆ ಚಾಪಗತಿಯಂ ಮೆಱೆದಳ್ ೧೨೫

ಉಗುರ್ವೆಳಗು ಬಣ್ಣಿತೆಂದದ
ಸುಗುಬ್ಬಂತಿರೆ ತೋಱುವಂತೆ ತಳಿದೆಳೆಗೆಂಪಂ
ಬಗೆಗೊಳಿಸುವಡ್ಡಪುರಿಯುಂ
ಪುಗುಪತುಂ ಪುರಿಯುಂ ವಿಳಾಸವತಿ ಪೊಱಮಟ್ಟಳ್ ೧೨೬

ಮೆಱೆಯೆ ಕುಚಮಂಡಲಂ ನಸು
ದೆಱೆಯೆ ನಿಪ್ಪತ್ತ್ರೋರುಮಂಡಲಂ ರಸದಿಂ ನಿ
ಯ್ಮೆಱೆಯೆ ಸಭಾಮಂಡಲಮೋಂ
ಪೆಱೆದಳೊ ಮಂಡಲಮನಾಕೆ ಚಾರಿಗಳಿಂದಂ ೧೨೭

ಅರುಣಸರೋರುಹದಲರಂ
ಮುರಮುರಿದೀಡಾಡುವಂತೆ ನಿಟ್ಟಿಸಿ ನೋಡಲ್
ಕರಮುರಿದೆನೆ ಕರಮಿಪ್ಪ ಸಾ
ಸಿರಮೆನೆ [2]ರೇಚಿಸಿ[2]ದಳಾಕೆಯೆಡಕಂ ಬಲಕಂ ೧೨೮

ಜತಿ ತೊಡರೆ ರಣಿತನೂಪುರ
ರುತಿಗಳ ಬಱಿವಿಡಿದು ವಾದಕಂ ಬಾಜಿಸಿದಂ
ಧೃತದಾಪ್ರುಜ್ಜಮುದಾರಸ
ಮತಿಯುಂ ನೃತ್ತಾಂಗಮೆಂಬೊಲಾಗಿರೆ ವಾದ್ಯಂ ೧೨೯

ಕರಣದೊಳೊಂದುಂ ಭಾರತಿ
ಕರಣಮಿದಂ ಮೆಚ್ಚರೆಪುದಿಲ್ಲೆನೆ ಮೆಲ್ಪಿಂ
ಪರಿವಿಡಿಯಿಂ ಪರಿಶೋಭಿಸಿ
ಪರಿವಿಡಿಯಿಂದಂಗರಾಗಮಂ ಪೊಸಯಿಸಿದಳ್ ೧೩೦

ಒತ್ತ್ರಿದ ಶೃಂಗಾರದ ರಸ
ದೊತ್ತ್ರೆನೆ ಕವಿ[3]ತಂ[3]ದು ರಸದ ಕವಿತೆಯ ನೆಲೆಯುಂ
ಪೆತ್ತು ಜಡಿ[4]ಯುತ್ತೆ[4] ಶೋಭಿಸೆ
ನೃತ್ತಸ್ಥನಿ ಲಾಸ್ಯಲೇಪದಿಂ ಶೋಭಿಸಿದಳ್ ೧೩೧

---

[1] ಳ (ಕ) [2] ರಚಿಯಿಸಿ (ಕ ಗ ಘ) [3] ಕೈ (ಘ) [4] ಪೆತ್ತು (ಕ ಘ)

ಮತ್ತಮೇಕಪಾದಸ್ಥಾನಮಂ ಕೈಕೊಂಡಲ್ಲಿ

ಚರಣಾಗ್ರಂ ಜಾನುವಂ ಜಕ್ಕುಲಿಸಿ[1]ಡರೆ[1] ನಿತಂಬಕ್ಕೆ ಪ[2]ಕ್ಕಾಗಿ[2] ಮಧ್ಯಂ
ಮುರಿವನ್ನಂ ದಕ್ಷಿಣಕವ್ವಳಿಸಿದ ಕುಚದೊಳ್ ಕೈದಳಿರ್ಕೂಡೆ ವಾಮಂ
ಕರಕಂಜಂ ಕಾಂತಿ[3]ಯಂ ತಳ್ತಳುರ್ದು[3] ಮಿಳಿರೆ ವಕ್ತ್ರಾಂಬುಜಂ ಕೊಂಕಿ ಚೆಲ್ವಾ
ಗಿರೆ ಕಾಮೋತ್ಪತ್ತಿಯಂ ಕಾಮಿಸಿ ತರುಣಿ ತಪಂಗೆಯ್ವವೋಲ್ ಕಣ್ಗೆವಂದಳ್ ೧೩೨

ಅದಲ್ಲದೆಯುಂ –

ಬಲಗಾಲ್ ಸೈತೊಪ್ಪೆ ವಾಮಂ ಕೆಲಕೆ ತೊಲಗೆ ವಕ್ಷಸ್ಸ್ಥಿತಂ ಮುಟ್ಟಿ ಚೆಲ್ವಾ
ಗೆ ಲತಾಖ್ಯಂ ಕೈ ಕರಂ ಕಣ್ಗೊಳೆ ನೆಗೆಯೆ ಕುಚಂ ಕೊಂಕೆ ಮಧ್ಯಂ ದಳತ್ಕು
ಟ್ಮಲನೇತ್ರಂ ಬೀಱೆ ಬೆಳ್ಪಂ ಪ್ರಹಸಿತವದನಂ ಶೋಭೆಯಂ ಸೂಸೆ ಲೀಲಾ
ಲಲಿತಾಸ್ಯಕ್ರಾಂತದಿಂ ನಿಂದಮರನರಸಭಾಚಿತ್ತದೊಳ್ ಕಾಂತೆ ನಿಂದಳ್ ೧೩೩

ವಿವಿಧಾಲಂಕೃತಿ ಕೂಡೆ ಕೊಂಡ ಗಮಕಂ ಮಂದ್ರಾದಿಯುಂ ಮುಂದೆ ವ
ರ್ಣವಿಭಾಗಂ ಪವಣಾಗೆ ರಾಗರಮಣೀಯಚ್ಛಾಯೆಯುಂ ಕೂಡೆ ನೀ
ಡುವ ವೀಣಾ[4]ಕಲ[4]ಕೋಮಳಕ್ವಣಿತದೊಳ್ತಳ್ಪೊಯ್ದು ಕೈಗಣ್ಮೆ ಪೊ
ಣ್ಮುವ ಗೀತಕ್ಕೆ ಮೃಗಾಕ್ಷಿಯಾಡಿ ಮೆಱೆದಳ್ ಗೀತಾ[5]ಸುಗ[5]ಪ್ರಾಢಿಯಂ ೧೩೪

ಅಂತು–

ಅಚ್ಚರಿಯ[6] ಸಚ್ಚಸಂ[6] ಬಗೆ
ಗಚ್ಚರಿಯಂ ಪಡೆಯೆ ನೃಪಸಭಾಸದರ ಮನಂ
ಮೆಚ್ಚಿ ಮಱೆದೊಱಗೆ ಕಣ್ಗಳ್
ಬೆಚ್ಚಂತಿರೆ ಮುಗುಳ್ದುವಿಲ್ಲ ವಿಸ್ಮಯದಿಂದಂ ೧೩೫

ಇಂದ್ರಸೀತನೆ ಮತ್ತಮಿವರ್ ದಿಕ್ಪಾಳರೆ[7]ಬೋಳೆ[7]ಯರೀಕೆಯರ್
ಚಂದ್ರವಕ್ತ್ರೆಯರಗ್ಗದ ದೇವಸ್ತ್ರೀಯರೆ ನರ್ತಕಿಯೀಕೆ ದೇ
ವೇಂದ್ರನಂ ಸಲೆ ಮೆಚ್ಚಿಸುತಿರ್ಪ ರಂಭೆಯೆ ಪೋ ಪುಸಿಯಲ್ಲದೆಂ
ದಿಂದ್ರಜಾಲಮನೀಕ್ಷಿಸಿ ಚೋದ್ಯಂಬಟ್ಟುದು ಭೂಪಸಭಾಜನಂ ೧೩೬

ಅಂತು ಸಹಸ್ರಲೋಚನನುಮಂ ಬಸದಾಗಿಪ ರಂಭೆಯಾಟಮುಂ
ಕಂತುವನಾದೊಡಂ ಮರುಳಿಸಲ್ ನೆಱೆವಗ್ಗದ ದಿವ್ಯಕಾಮಿನೀ
ಸಂತತಿಯುಂ ಕುಮಾರನ ಮನಂಬುಗಲಾಱವೆ ಭಾವಿಪಂದು ಪೇ
ಟೇಂ ತೆಱಪಾಗಲಾರ್ಕುಮೆ ಘನಸ್ತನಿ ಪೊಕ್ಕಡೆಗೊಂಡ ಚಿತ್ತದೊಳ್ ೧೩೭

1 ಬರೆ (ಕ ಘ) 2 ಕ್ಕಗೆ (ಘ) 3 ಯಿಂದತ್ತಳಿದು (ಕ) 4 ಕ್ವಣ (ಘ) 5 ನವ (ಕ)
6 ನರ್ತನಂ (ಖ ಘ) 7 ಬಾಳಿ (ಕ ಘ)

ಅಂತು ನೋಡಿ ನರಪತಿ "ಸಚಿಂತನ[1]ಚಿತ್ತೋಹಿ ತರುಣೀಮಣಿ[1]ಮಂತ್ರೌಷಧೀನಾಂ ಪ್ರಭಾವಃ" ಎಂಬಿನಿತನೆ ನುಡಿದಾದರಸ್ಪಂದಮಂದ ಮುದ್ರಾಮನೋಹರಂಗಳಪ್ಪ ಕಣ್ಗಳಂ ಕೆಲಕ್ಕೆ ತೆಗೆಯೆ

ಅರಸನ ಮನಮೆಱಗದುದಂ
ನಿರುತಂ ಮಾಯಾಭುಜಂಗನಿಂಗಿತವಿದಿತಂ
ಪರಿಭಾವಿಸಿ ಬಱಿಕದನುಪ
ಹರಿಸಿದನಾಯಿಂದ್ರಜಾಲಮಂ ತತ್ಕ್ಷಣದೊಳ್ ೧೩೮

ಎಂತು ಸಭದಲ್ಲಿ ತೋಱಿದ
ನೆಂತು ಸಭಾಸದರ ಚಿತ್ತದೊಳ್ ಪುಗಿಸಿದನಂ
ದಂತಮರರ್ ಬೆರಸಮರೀ
ಸಂತತಿ ಚಿಂತಾವಶೇಷಮಾದತ್ತಾಗಳ್ ೧೩೯

ಬೆರಲಂ ಮಿಡಿದು ಕದಂಪಂ
ಕರತಳದಿಂದಾಂತು ವಿಸ್ಮಯಸ್ಮಿತನೇತ್ರಂ
ಬರುಹದಿನಾ ಮಾಯಾವಿಯ
ನರಸನ ಸಭೆ ನೋಡಿ ತಲೆಯನೇಂ ತೂಗಿದುದೋ ೧೪೦

ಮಕರಂದಂ ಜೋಗಿಗೆಂದಂ ಕುತುಕಕಳೆಗಳಂ ಕೇಳ್ವುದಂ ಕಂಡೆವೀ ಕೌತುಕಮಂ ನಿನ್ನಿಂದಮಿನ್ನೊಂದೆಮಗೆ ಸಮನಿಸಿತ್ತೀಕ್ಷಣಾಪೇಕ್ಷೆ ನೀಂ ವ್ಯಾಪಕನ್ನೆ ಮೂಲೋಕದೊಳ್ ಮೇಲೆನಿಸುವ ವನಿತಾರತ್ನಮಂ ರಾಜವಂಶಾಧಿಕಮಂ ನೀಂಕಂಡುದುಂಟಾದೊಡೆ ತಡೆದಿರವೇಂ ತೋಱು ಸಾಮರ್ಥ್ಯದಿಂದಂ ೧೪೧

ಎಂದ ಮಾತಿಂ ಮುನ್ನಮೆ ಮಾಯಾಭುಜಂಗಂ ಜೋಗಿಣಿಯ ಮೊಗಮಂ ನೋಡೆ—

ಆಕೆ ಮನಸಿಜನ ವಿಜಯಪ
ತಾಕೆಯನೆತ್ತುವವೊಲೆ[2]ತ್ತಿ ಚಿತ್ರ[2]ಮನತನು
ವ್ಯಾಕುಲೆಯಂ ತೋಱು [3]ದೊಡಂ[3]
ದಾ ಕನ್ನಿಕೆಯೆನೆ ಸಭೋವಿಭಾಗದೊ[4]ಳೊಗೆದಳ್[4] ೧೪೨

ಬಿಸುಸುಯ್ಯಿಂ ಸಸುಗಂದಿ ಬಾಡಿದಧರಂ, ಕಣ್ಣೀರ ಬಾಸಲ್ಗಳಿಂ
ಬಸಿವಾಸ್ಯಂ, ತಳಗಯ್ಯ ಪಜ್ಜೆ ಪಸರಂಗೊಂಡಿರ್ದ ಗಂಡಸ್ಥಳಂ
ಪೊಸಪೆಳ್ಪಂ ವಿಸುವಂಗಯಷ್ಟಿ, ನೊಸಲೊಳ್ ನೀಳ್ದಿರ್ದ ನೀಲಾಳಕಂ
ಪಿಸುಣಾದಿತ್ತನಮಾಸ್ತ್ರಸಸ್ತ್ರಹತಿಯಂ ತತ್ಕಾಮಿನೀರೂಪಕಂ ೧೪೩

1 ಚಿಂತ್ಯಾಹಿ ಮಣಿ (ಘ) 2 ತ್ತಿ ಚಿತ್ತ (ಖ) 3 ದಳಂ (ಖ) 4 ಳಾಗಗಳ್ (ಖ)

ಅದಲ್ಲದೆಯುಂ—

ಅಲರ್ವಸೆಯೊತ್ತೆ ಪತ್ತಿದೆಸಳಿಂದೆಸೆವಂಗದ ಗಂದೆ, ಗಂಧಶೀ
ತಲಜಲಬಿಂದುಗಳ್, ಕುಚದೊಳೊಟ್ಟಿದ ಚಂದನ[1]ದ್ರೊ[1]ದ್ದೆಗೆಯ್ದ ಶೀ
ತಲಿಕೆ[2]ಯೊಳದ್ದಿದೊಳ್ಳು[2]ಗುಲಮಂಬುಜನಾಳದ ಹಾರವಾಕೆಯು
ತ್ಪಲವಲಯಂಗಳೀಂ ನೆಱೆಯೆ ಪೇೞ್ವವೊ ತಚ್ಛಿಶಿರೋಪಚಾರಮಂ ೧೪೪

ಅಂತಾ ಕಾಂತೆಯ [3]ಕಂತು[3]ಸಂತಾಪ[4]ಕ್ಕೆ ಶಶಿಕಾಂತ[4]ಮುಂ ನವನಿಶಿತ ಕಾಮಕುಂತಮುಂ ಸಕಲತ್ರೈಲೋಕ್ಯಸಾರಮುಂ ಶಿಶಿರೋಪಚಾರಚಾರುಶೃಂಗಾರಮುಮಪ್ಪತಿಶಯರೂಪಮಂ ಸತ್ಯಸ್ವರೂಪಮಂ ನೋೞ್ಪಂತಾ ಸಭಾಜನಂ ವಿಸ್ಮಯರಸಭಾಜನಮಾಗಿ ನೋಡುತ್ತುಮಿರೆ—

ನೆಗೆದು ಮದನಾಗ್ನಿ ಸುಡುತಿರೆ
ಮಿಗೆ ಸಿಡಿಮಿಡಿವಂದು ಬೆಂದು ತನ್ನಯ ಮನದಿಂ
ದಗಿದು ಪೊಱಮಟ್ಟು ಗಗನ
ಕ್ಕೊಗೆದಂತಿರೆ ಕಂದಿ ಕುಂದಿದಾ[5]ಕೋಮಳೆ[5]ಯಂ ೧೪೫

ಅಂತು ಕಾಣಲೊಡನೆ ಝುಲ್ಲೆಂದ ಮೆಲ್ಲೆರ್ದೆಯುಂ, ಮೆಲ್ಲೆರ್ದೆಯೊಡನೆ ಸಮುಲ್ಲಸಿತವಾದ ಮೆಯ್ನವಿರುಂ, ಮೆಯ್ನವಿರಸವಿರತಂ ಮುಚ್ಚುಂಗಿಸಿದ ಘರ್ಮಜಲಕಳಿಕೆಗಳುಂ ಘರ್ಮಜಲಕಳಿಕೆಗಳುದಿರೆ ಕಂಪಿಸುವ ಕಾಯಮುಂ, ಸ್ಮರಶರಪ್ರಹಾರದಿಂ ಸುಚ್ಚುನೂಱಾದಂತೆಯುಂ, ಮಗುದ್ವಿಚ್ಚಿತ್ತಂತೆಯುಂ, ಮೋಹರಸಮೊಸರ್ತಂತೆಯುಂ ಭಯಂಬೆತ್ತಂತೆಯುಮಾಗೆ ಮತಿಮಱೆದ ಕುಮಾರನಂ ಕಂಡು, ಈಕೆಯೀತನ ಮನದಾಕೆಯೆಂದಱಿದು—

ಅ[6]ಲಿ[6] ಮಾಗೆಯಲ್ಲಿ ಮಲ್ಲಿಗೆ
ಯಲರಂ ಪಡೆವಂತೆ ಭೂಪನಿರೆ, ಕುರುಡಂ ಕ
ಣ್ಮಲರಂ ಪಡೆದವೊಲೆಸೆದಂ
ಪೊಲಗೆಟ್ಟಂ ಬಟ್ಟೆಗಂಡವೊಲ್ ಮಕರಂದಂ ೧೪೬

ಆಗಳ್ ಕಂದರ್ಪನ ಕಾಟದಿಂ ಪೂಸೆದ ಪೊವಿನಂತಿರ್ದ ತರುಣಿಯುಂ ಪರವಶೆಗೆತ್ತು ಪುರುಡಿಸಿ ಪರಿ[7]ಕು[7]ಪಿತನಾಗಿ ನೊಸಲಸಡರ್ದು [8]ಪೊಡರ್ದು[8] ಗಂಟಿಕ್ಕಿದ ಪುರ್ಬಂ ನಸುಗೆತ್ತುವಧರಮುಮೆಸೆಯೆ ಪೊಸಗೆಂಪು ಪಸರಿಸಿದ ಕಣ್ಗಳಿಂ ಬಲ್ಪಿಂ ಬರೆತ್ತೆಗೆದು ಮಾನವಮದನಂ ಪರಾವೃತ್ತವದನನಾಗೆ ಮಂದರಾಗಿಣಿಯಾದಂತಾ ಜೋಗಿಣಿಯುಂ

[1] ಮೊ (ಖ) [2] ಗಳೋಲಿಯೊರ್ದು (ಕ ಖ) [3] ಕಂಡು (ಗ) [4] ಕ್ಕೆ ಸಕ್ಕಶಕಾಂತ (ಕ ಗ) ಕ್ಲೇಶಕ್ಕೆಶಾಕಾರ (ಘ) [5] ಬಾಳಕಿ (ಕ ಖ) [6] ಳ (ಕ ಘ) [7] ಕಂ (ಕ)
[8] ಖ ಪ್ರತಿಯಲ್ಲಿಲ್ಲ

ಜೋಗಿಯುಂ ಧ್ವಜಧರನುಮಿಂದ್ರಜಾಲಂಬೆರಸು ಪದ್ಮಾವತಿಯ ಮಾಯೆಯಪ್ಪ ದಱಿಂದದೃಶ್ಯಮಪ್ಪುದುಂ—

ಬೆಱಗಾದಂ ಭೂಪತಿ ಮತಿ
ಮಱೆದಂ, ಮಕರಂದನಿಂತಿದೇನಕ್ಕುಮೆನು
ತ್ತ್ರುಱಿವು ತಱಿಸಲ್ಲದಟಿದಿರೆ
ನೆಱೆಯೆ ಸಭಾಸದರುಮೊಲ್ದು ಕೌತುಕಮುತ್ತ್ರರ್ ೧೪೭

ಅಲ್ಲಿಂ ಬೞಿಯಂ ದ್ವಿಗುಣಿತವಿರಹದುಃಖನುಂ ತಾಂಬೂಲದಾನಮಾತ್ರವಿಸರ್ಜಿತರಾಜಲೋಕನುಂ ವಿನಯವಚನವಿದಳಿತಭ್ರೂಲತಾವಿಸರ್ಜಿತ ಸಚಿವಸಾಮಂತಸೀಮಂತಿನೀಸಮಾಜನುಮಾಗಿ ಸಜ್ಜೆಗುಜ್ಜುಗಂಗೆಯ್ದು ಪೋಪುದಂ ಕಂಡು—

ಅವು ನೋಡಂಬೆಗಳಬ್ಬ ಪತ್ರತತಿಯೊಳ್ ಕ್ರುಳ್ಳಿರ್ದು ಕಣ್ಮುಚ್ಚಿದ
ಪ್ಪುವು, ಕಾಯ್ಪೇಱಿದ ಸೌಧಕೂಟತಟದಿಂ ಪಾರಾವತಂ ಪಾಱಿ ಪೋ
ಪುವು ಪಾಯ್ದಾ[1]ಡುವರು[1]ಯ್ಯಲಿಂದೊಗೆವ ಬಂಬಲ್ದುಂತುಱಂ ಪಾರ್ದು ಚಂ
ಚುವನುದ್ದಂ ತೆಱೆಯುತ್ತೆ ಸಾರ್ದಪುವು ತಾಪೋದ್ರೇಕದಿಂ ಕೇಕಿಗಳ್ ೧೪೮

ದೇವ ನಿರೀಕ್ಷಿಸು ನೀಂ ರಾ
ಜೀವಸಖಂ, ಸಜ್ರಳಜಳಧರಶ್ಯಾಮಾಭ್ರ
ಶ್ರೀವತ್ಸಾಂಕನ ಪೊರ್ಕುೞ
ಪೂವೆನೆ, ಕೆದಱಿದಪನಮಳಕರಕೇಸರಮಂ ೧೪೯

ಸಜ್ಜೆಗೆ ಬಿಜಯಂಗೆಯ್ವುದೆ
ಕಜ್ಜಮೆ, ಸೇವಕನ ತೆಱದೆ ಬಂದೋಲಗಿಪೀ
ಮಜ್ಜನಕಾಲಮನುದಿತಜ
ಗಜ್ಜನಮ[2]ನುಸರಿಸೆ[2]ವೇೞ್ಪುದುತ್ತಮಸತ್ತ್ವಾ ೧೫೦

ಎಂಬುದುಂ ಮಕರಂದನ ಮಾತಂ ಮಿಾಱಲಱಿಯದ್ಧರಿಕಮಳಕಾನನಕರಿಕಳಭಂ ಕರೇಣುಕಾಮುಕನಪ್ಪ ಕರಿಕಳಭಂ ಕೂರಂಕುಸವಸದಿಂ ಮಜ್ಜನಂಬುಗುವಂತೆ, ಮಜ್ಜನಂಬೊಕ್ಕುಮತಿಶೀತಳತೆಯನಪ್ಪುಕೆಯ್ದು ಮೆಂಬಂತೆ ಕರ್ಪೂರಪರಿಮಳರಜೋವಿಮಿಶ್ರ ಮಳಯಜದ್ರವದ ರಜಃಕೋಶಕುಸುಮಜಾತದಿಂ ಶೀತಳನಾಥಶೀತಳಪದನಳಿನಮನರ್ಚಿಸಿ ತದ್ದುಕೂಲಾಲಂಕೃತೋತ್ತಮಾಂಗನಿನಿಸಾನುಂ ಮನದ ಬೇಗೆಯಂ ನೀಗಿ, ಮುನ್ನಮಾವರಿಸಿದ ಮೋಹರಸಮನರಸಂ ಸ್ಮರಿಸದಂತಿರನಧಿಗತರಸಾಸ್ವಾದನಾಮೋದಿತಮಧುರಮನೋಹರಾಹಾರಮನಾರೋಗಿಸಿ, ಯಕ್ಷಕರ್ದಮಪರಿಮೃದಿತಪಾಣಿಪಲ್ಲವನಡಸಿದಾಪತ್ತ್ರಿನಲ್ಲಿಗೆ ನೀನಲ್ಲದೆಮಗೆಹಸ್ತಾವಳಂಬಮಿಲ್ಲೆಂಬಂತೆ ಮಕರಂದಪ್ರಸಾರಿತಪ್ರಕೋಷ್ಠನಿಷ್ಠಿತವಾಮಕರತಳನುಂ ಬಿಸುಸು[3]ಯ್ದು[3] ಬೆಂಕೆಯಿಂ ಕರಿಂಕುವರಿ,

[1] ವಗಮು (ಕ) [2] ನ್ನಿಸಲಿ (ಕ ಖ) [3] ಯ್ಲ (ಘ)

ಗುಮೆಂಬಂತಿರೆ 'ಕರ'ಕಮಲಾಂಗುಳೀದಳಸಮಾಕೃತತತ್ಕೃಶಿಖರನುಂ ರಾಗಾಂಧತೆಯಿಂ ಮುಂದುಗಾಣದೆ ಮಾರ್ಗಮಂ ಗುಣ್ಣೆಯಿಪಂತೆ ಸವಿನಯಪ್ರತೀಹಾರನಿವೇದಿತಮಾರ್ಗದತ್ತದೃಷ್ಟಿಯುಮಾಗಿ—

ಜಳಯಂತ್ರೋದಿತದುರ್ದಿನಕ್ಕೆ, ಘನಸಾರಾಂಭಶ್ಛಟಾಸೇಕಶೀತಳಚಂದ್ರೋಪಳಕುಟ್ಟಿಮಕ್ಕೆ, ಸಲಿಲಪ್ರಕ್ಷಾಳಿತಸ್ತಂಭಸಂಕುಳಸಂಶೋಭೆಗೆ, ಚಂದನದ್ರವದತ್ತಪುಷ್ಪೋಪಹಾರಕ್ಕೆ, ನಿರ್ಮಳವಿಶ್ರಾಮಗೃಹಕ್ಕೆ ಸದ್ಗುಣಗೃಹಂ ಶೃಂಗಾರಕಾರಾಗೃಹಂ ೧೫೫

ಇದು ವಿದಿತ[1][2]ಪ್ರಬಂಧವನವಿಹಾರಪಂಡಿತ ಪರಮಜಿನಚರಣರಮ್ಯ [3]ಹರ್ಮ್ಯಾಚಲೋಚ್ಛಲಿತ
ನಖಮಯೂಖಮಂಡಾನೀಮಜ್ಜನಾಸಕ್ತ ಸಂತತೋತ್ಸಿಕ್ತದಾನಾಮೋದಮುದಿತಬುಧ
ಮಧುಕರಪ್ರಕರ ಕವಿರಾಜಕುಂಜರ ನೇಮಿಚಂದ್ರ ವಿರಚಿತಮಪ್ಪ ಲೀಲಾವತಿಯೊಳ್
ಇಂದ್ರಜಾಲವರ್ಣನಂ ಚತುರ್ಥಾಶ್ವಾಸಂ

---

[1] ಗಂಕರ (ಕ ಗ ಫ) [2] ವಿವಿಧ (ಕ ಫ) [3] ಹರ್ಮ್ಯ (ಕ ಫ)

## ಪಂಚಮಾಶ್ವಾಸಂ

ಶ್ರೀರಮಣೀನಯನೋತ್ಸವ
ನಾರಾಯಣನಾಜಿವಿಜಯವಾರಣವಿಳಸ
ದ್ವಾರಿ ನಡೆದಂ ಕಳಾರ್ಣವ
ತೀರಂ ಪುರುಷಾರ್ಥಪುಳಿನತಳಕಳಹಂಸಂ ೧

ಅಂತು ನಡೆದೊಳಗಂ ಪೊಕ್ಕು ತನ್ಮಂದಿರಮಧ್ಯಸ್ಥಿತಕಾಂಚನಮಂಚದೊಳ್ ಚಂದ್ರಿಕಾಚ್ಛಧವಳದುಕೂಲಪ್ರಚ್ಛಾದಚ್ಛಾದಿತಹಂಸತೂಳತಲ್ಪದೊಳೊಯ್ಯನೆ ಮೆಯ್ಯನೀಡಾಡಿ ಕರ್ಪೂರ[2]ಸಾರ[2]ಪರಿಕಲಿತಪರಿಮಳಪೋಷಿತ ಕ್ರಮುಕಕಮನೀಯ ಕಲಶಪೂರಿತಫುಲ್ಲಕಪೋಲಫಲಕಂ ದಂತಾಗ್ರದಳಿತಮಕರಂದದೀಯಮಾನ ನಾಗವಲ್ಲೀಧವಳ ದಳಪೀ[3]ಟಿ[3]ಕಾವಿಳಸಿತವದನನೆನಿಸುಬೇಗಮಿರ್ದು ಮೆಲ್ಲನಿಂತೆಂದಂ—

ಬಗೆವುಗಲಿಂತು ತೋಱುಗುಮೆ ವಾಸವನೋಲಗದೊಳ್ಪನಿಂತು ತೋ
ಱುಗುಮೆ ಸುರಾಂಗನಾಸರಸಲಾಸ್ಯವಿಳಾಸಮನಾತನಿಂತು ತೋ
ಱುಗುಮೆ ಬಚಿಕ್ಕ[4]ವಳ್[4] ಬಯಸಿ ನೀಂ ಬೆಸಗೊಂಡವೊಲಾಗಳಂತಿರಾ
ಮೃಗಧರವಕ್ತ್ರೆಯಂ ಮೊಗಸಿ ಮನ್ಮೃದುಮಾನಸರಾಜಹಂಸಿಯಂ

ತೆಗೆದೆನ್ನಂ ಕನಸಿಂದೆ ಸುಂದರಿಯ ರೂಪಂ ತೋಱಿ ಬೆಳ್ಮಾಡಿ ಮ
ತ್ತೆ ಗಡೇಂ ತೋಱದನಿಂದ್ರಜಾಲದೊಳಿದಿನ್ನೇನಾಗಲೆಂದಿರ್ದುದೋ
ಬಗೆ[5]ದೇ[5]ಂ ಪೋಗ[6]ದೊ[6] ಪೇಟಗಲ್ಚಿದಪನೆನ್ನಂ ಧಾತ್ರನವ್ಯಾಜದಿಂ
ಮೃಗಮುಂ ನೋಯೆ ಬಬಲ್ಚುವಂತೆ ಮೃಗತೃಷ್ಣಾದರ್ಶನವ್ಯಾಜದಿಂ ೩

ಅಲ್ಲದೊಡೀಜಗತ್ರಯದೊಳಗ್ಗಳಮೊಪ್ಪುವ ರಾಜಪುತ್ರಿಯಂ
ಸಲ್ಲಲಿತಾಂಗಿಯಂ ಪಡೆದು ಕಂಡೊಡೆ ತೋಱುಮೆನಲ್ಕೆ ತೋಱಯುಂ
ನಿಲ್ಲದೆ [7]ತಾ[7]ನಿದಾರ ಮಗಳೀ ವಧುವೆಂಬಿನಿತರ್ಕೆ ಮಿಕ್ಕ ವಿ
ದ್ಯುಲ್ಲತೆವೋಲ[8]ವಳ್[8] ಬಿರಸು ಜೋಗಿಣಿಯಾಗಳೆ ಮಾಯಮಪ್ಪಳೀ ೪

ಎಂದು ಮತ್ತಮಿನಿಸಾನುಂ [9]ಭಾವಿಸಿ[9]—

ಆ ಸತಿ ಮು[10]ನ್ನ[10] ಕಂಡ ತೆಱನಲ್ಲದೆ ಬಂಬ[11]ಲ[11] ಬಾಡಿ ಕೊಂಡು ಮು
ನ್ನೇನಱ ಚಂದ್ರಲೇಖೆಯವೊಲಿರ್ದುದನನ್ನನೊಳಾತ್ತ ಚಿತ್ತಮಂ
ನೋಸಿದಳೆಂದೆ ಭಾವಿಸಿ ಮದೀಯ ಮನಂ ಬಿಸಿಲಿಂದೆ ಬೆಂದರಂ
ಕೇಸುರಿಯಿಂದೆ ಕಾಸಿದವೊಲಾದಪುದೀಗಳದೆಂತು ನೈರಿಪೆಂ ೫

---

[1] ದಳ (ಕ) [2] ವಾರಿ (ಕ ಘ) [3] ೪ (ಕ ಘ) [4] ಪೆಣ್ (ಘ) [5] ಗೇಂ (ಘ)
[6] ದೆ (ಕ ಘ) [7] ನೀ (ಕ ಘ) [8] ವಂ (ಕ) [9] ವಿಚಾರಿಸಿ (ಘ) [10] ನ್ನೆ (ಘ) [11] ೪ (ಘ)

ಪಡಿಯಿಟ್ಟು ತೋಱುವವೊಲಾ
ಗಡೆ ತೋಱುದರಲ್ತೆ ಮಾಯ್ದು ಮಾಯಾವಿಗಳೀಂ
ಪಡಿಯಾದರೆ ಕಾಮನ ಕೈ
ಪಿಡಿಯಂತೆಸೆವವಳ ನೋಲಲ್ಲೊಳಂ ಸುರವಧುವರ್ ೬

ಎನೆ ಸಚಿವಸುತನಿಂತೆಂದಂ—

ಸ್ತ್ರೀರತ್ನಂ ಭುವನತ್ರಯ
ಸಾರಮದಲ್ಲದೊಡೆ ನಿನ್ನ ನೋಲಿಸು[1]ವುದಿಳ್ದದೇ
ಶ್ರೀರಮಣಿಯಲ್ಲದಂಗನೆ
ನಾರಾಯಣನಂ ಮರುಳ್ಚಲೇನಾರ್ತಪಳೇ ೭

ತಾಂ ಗಡ ಮೆಚ್ಚನಾಂ ಪಡೆದ ಪೆಂಡಿರನೆಂದಭಿಮಾನಮೇಱಿ ಚೆ
ಲ್ವಿಂ ಗೆಡೆಗೊಂಡು ನಿನ್ನ ನವಯೌವನರೂಪವಿಳಾಸದರ್ಪಮಂ
ಭಂಗಮನೆಯ್ದಿ ಪೊಂದು ಬಗೆಯೊಳ್ ಬಳೆದಾಗ್ರಹದಿಂದೆ ಪೆತ್ತನಾ
ಅಂಗನೆಯಂ ಸರೋಜಭವನಲ್ಲದೊಡಾ ಕೃತಿಯಿಂತುಟಕ್ಕುಮೇ ೮

ಪುಸಿಯೆಂದು ಬಗೆಯೊಳಂ ಭಾ
ವಿಸದಿರು ಪುಸಿಯಾದೊಡದನೆ ವಿದ್ಯಾಧರಿ ತೋ
ಱುಸುಗುಮೆ ಪುಸಿಯಣಮಲ್ಲಿದು
ಪುಸಿಗೇಂ ಸಂವಾದಮುಂಟೆ ಸತ್ಯಸತಾಕಾ ೯

ಕಾರಣಮೇನಾನುಮನಿದು
ಕಾರಣಮೆಯ್ದುಸದೆ ಮಾಣದಲ್ಲದೊಡೆ ಚಮ
ತ್ಕಾರಿಗಳೊರ್ಮೆಯೆ ಮಾಯಾ
ಕಾರಮನಾತ್ಕರಿಪುದರ್ಕೆ ಕಾರಣಮೇನೋ ೧೦

ಎನೆ ಮತ್ತಮರಸನಿಂತೆಂದಂ—

ಇಂಪೇಱದೆ ನಿಲೆ ಹೃದಯದೊ
ಳಿಂಪೇಱದೆ ಪೋಕುಮೆಂದೆ ಪೇಡ್ವಂ ಕೇಳಾಂ
ಪೆಂ ಪಗಲೆ ಧೃತಿಯನೆರ್ದೆಯಿಂ
ಪೆಂಪಗಲೆ ಸುಧಾಂಶು ಮೂಡಿದಿರುಳಳವಟಿವೇಂ ೧೧

ನೆನೆದವಳಂ ಸತ್ತಪೆನಾ
ನೆನೆ ದಯೆಯಿಂ ತಂದು ಕುಡುವನಾವನೊ ಮುನಿವೆ
ನ್ನನೆ ಗೋಱಗೊಳಿಸಿದತನುವ
ನನೆಗೋಲ ಮೊಗಕ್ಕೆ ತಪ್ಪಿ ಪೋದೊಡೆ ಸಾಲ್ಗುಂ ೧೨

---

[1] ಸಲ್ವಭ್ರಿದೆ (ಕ)

ಆ ಗುರುನಿತಂಬಿಯಾ ಭೂ
ಭಾಗದೊಳಿರದೆತ್ತಲಿರ್ದಪಳ್, ಬಗೆಯೆ ನಿರು
ದ್ಯೋಗಿಗೆ ದೈವಸಹಾಯಮು
ಮೇಗಯ್ಯುದೊ ಪೋಪಮಱಸಿ ಮದ್ವಲ್ಲಭೆಯಂ ೧೩

ಎನಗಿಲ್ಲಿರ್ದೊಡೆ ಪೊೞು, ಪೋಗದುಸಮಾಸ್ತ್ರವ್ಯಾಧಿಯುಂ ಪಿಂಗದಾ
ವನಿತಾವಾರ್ತೆಯುಮಾಗದಾವ ದೆಸೆ ರಮ್ಯೋದ್ದೇಶಮುಂ ರಮ್ಯಸಂ
ಜನಮುಂ ರಮ್ಯನದೀನದಪ್ರಕರಮುಂ ರಮ್ಯಾದ್ರಿಯುಂ ರಮ್ಯದೇ
[1]ವನಿವಾಸಂಗಳುಮು[2]ಳ್ಳುದಾ[2]ದೆಸೆಗೆ ನುಂ ಪೋಪಂ ವಯಸ್ಯೋತ್ತಮಾ ೧೪

ಸುಖಮೀವುದೆ ರಾಜ್ಯಂ ಪ್ರಿಯ
ಸಖ, ರಾಜ್ಯಮೆ ದುಃಖಮಪ್ಪುದಪ್ಪೊಡೆ ರಾಜ್ಯಂ
ಸುಖಮಲ್ತು, ರಾಜ್ಯದಿಂದಂ
ಸುಖಮಿಲ್ಲದೊಡೇಕೆ ರಾಜ್ಯಮಾರಾಜ್ಯದೊಳೇಂ ೧೫

ಎಂದು ಮಕರಂದನನೊಡಂಬಡಿಸಿ ಬಡಗಮೊಗದೆ ಪಯಣಂ[3]ಬೋಗ[3]ಲ್ಕೊಗಸಿ[4]ಗ[4]ವೃರ್ದುಮನ್ನೆಗಂ ವಿಗತವಸುವಾಗಿ ಪಶ್ಚಿಮಗಿರಿಶಿಖರಕಾನನದೊ[5]ಳಿಡಿದು[5] ಭಾಸ್ಕರಂ ತಸ್ಕರನಂತಿರೆಸೆವರುಣಮಣಿವಿರಾಜಿತಮಪ್ಪ ವರುಣನಿಳಯಮುಮಂ ಪುಗುವುದು ಮುರ್ಧಮುಕುಳಿತಕಮಳಕಾನನೋತ್ಪತಿತದ್ವಿರೇಫಪಟಳ ಪಕ್ಷಾನಿಲದಳಿತಮಾದಂತಿರು ತ್ತಳಕುಳಮುಳ್ಳಲರೆ, ತಿಮಿರತಮಾಳಪಲ್ಲವವಕರ್ಣಪೂರಕಮನೀಯದಿಕ್ಕಾಮಿನೀ ಮುಖಕುಂಕುಮದಂತೆ ಕೆಂಕಮಾಗಿ ಪಡುವಣಸಂಜೆ ರಂಜಿಸೆ, ಚತುಃಪ್ರಹರ ಚರಮ ಕಹಳಾನಾದಪ್ರಹತಪಟಹಪಟುರವಾನುಗಮ್ಯಮಾನಸಾಂಧ್ಯಶಂಖಧ್ವನಿಯೊಡನೆ ಶಯ್ಯಾತಳದಿನಿಳಾತಳತಿಳಕನೆೞ್ದು, ನಿರ್ದಳಿತಸಂವಿದಿತಸಂತ[6]ತಮ[6]ಸೃಣದ ಶಾನಿಪೀತಗಂಧ ತೈಲಪರಿಣತ ಪರಿಮಳಜ್ವಾಳೋದ್ಗಾರಿ ಗುರುನಿತಂಬಿನೀ[7]ನೀರಾಜಿತ[7] ಮಂಗಳ ಪ್ರದೀಪದೀಪ್ತಿಪ್ರತಿಫಲಿತಮಣಿಮಯೂಖಿನೆಲ್ಲಂ ಪೊಱಮಟ್ಟು, ಪುಣ್ಯಪಾಠಕಪ್ರಕರಪಠ್ಯಮಾನನಾನಾನವದ್ಯಪದ್ಯಗದ್ಯಪದಾರ್ಥಾಕೀರ್ಣಕರ್ಣಾಂತಃಕರಣಂ ತತ್ಸಮಯ ಸಮುಪಗತಪ್ರಗಲ್ಭತರುಣಪ್ರಾಯಪರಿಜನಪರಿವೃತಂ[8]ತಮಿಸ್ರಾತ್ರಸ್ತ[8]ಶರಣಾಗತ ಸಹಸ್ರಕಿರಣಸಂಕುಚಿತಕಿರಣಾಯಮಾನಕರದೀಪಿಕಾಸಹಸ್ರಪರಿವೇಷ್ಟಿತನಭಿನವಾಂಕುರಿತಾ ಕರಾಳ ತರಣಿತೇಜಃಕಲ್ಪಕರತಳಚಾಲಿತಚಟ್ಟುರಿಕಾಚಟ್ಟುರಿತ ಮರೀಚಿಕವಚಿತಕಮನೀಯಕಾಯನತಿತ್ವರಿತಗತಿಯಿಂ ಬಂದತಿ ಬಹಳ ಕಾಳಾಗರು ಧೂಪಧೂಮಪಟಲನಿ[9]ಬಿತಬಿತ[9]ಪ್ರಭಾಸ್ವರಪ್ರದೀಪ್ತದೀಪಮಂಜರೀಮನೋಹರಮುಂ ದರದಳಿತಮಾಲತೀಮಲಯಜದ್ರವದತ್ತಪರಿಮಳಪಾನಮತ್ತಮಧುಕರನಿಕರ ಝಂಕಾರಮುಖರಿತಮುಮಪ್ಪ ಶೀತಲನಾಥಜಿನಾಲಯಮಂ ತ್ರಿ ಚತುರಜನಸಮೇತಂ

[1] ಶ (ಕ) [2] ಳ್ಳಡಾ (ಕ) [3] ಗೆಯು (ಪ) ವಾಗ(ಫ) [4] ಬ (ಕ) [5] ಳ್ಪಂದ (ಕ ಫ)
[6] ಮಸಮ (ಕ ಫ) [7] ನಿಬ್ಬರ್ಳಿಶ (ಕ) ನಿವರ್ಣಿತ (ಫ) [8] ಶಿವಿಸ್ತ್ರತಸ್ತ (ಕ) [9] ಚಿತಚಿತ (ಫ)

ಪೊಕ್ಕು ಪರಿಶುದ್ಧ ಪ್ರಬುದ್ಧ ಬಾಹ್ಯಾಂತರಂಗನಾಗಿ ಭಾಳಭೂಷಿತಕರಕಮಳಮುಕುಳಿತಂ ನವೀನಕರತಳ ನಖತಾರಕಿತಜಿನಪತಿಪಾದಪಲ್ಲವರಾಗಂ ರಮಣೀಯಸ್ತುತ್ಯ ನಿತ್ಯಶುಭಸಂಧ್ಯಾವಂದನಂಗೆಯ್ದು ಬಂದಾಸ್ಥಾನಮಂಡಪಮಧ್ಯಸ್ಥಿತಸಿಂಹಾಸನಾರೂಢಂ ಸಕಲಸುಕವಿ ಸಚಿವಸಾಮಂತವಿಳಾಸಿನೀಜನವಳಯಿತನಾಗಿ ಕಿಱಿದು ಬೇಗಮಿರ್ದೋಲಗಮಂ ವಿಸರ್ಜಿಸಿ ಮಕರಂದದ್ವಿತೀಯಂ ಕರುಮಾಡದ ನೆಲೆಯನೇಱಿ ಕುಸುಮದೆಸಳಿಂ ಪಾಸಿದಪಾಸಿನೊಳ್ ಪಟ್ಟಿರ್ದು ಭೂತಳತಳ್ಪದೊಳೊಱಗಿ[1]ಯೂರುಗಳನೊತ್ತುತ್ತುಂ[1]ತೂಂಕಡಿಸುತ್ತುಮಿರ್ದ ಸಚಿವಸುತನನುವಿಸಿ ಸವಿಸ್ತರಂ ಸ್ವಪ್ನವೃತ್ತಾಂತಮನುಸುಕ್ತ ಪುನರುಕ್ತ ಮನನುರಕ್ತಿಯಿಂ ನಟ್ಟಿರುಳಿಟವಿನಂ ಪೇೞ್ದು ಪೇೞ್ದು ಸುಖದಿಂ ಮೂರ್ಛೆವೋದಂತೆ ಕಣ್ಮುಚ್ಚಿ ಮನಂ ಮಱೆಯದುದಱಿನಿಸಿಸಾನುಂ ಬೇಗದಿಂ ಗಮ್ಮನೆಚ್ಚತ್ತು ನಿಜನಖನುಮನೆಚ್ಚಱಿಸಿ ಕರುಮಾಡದಿನಾರುಮಱಿಯದಂತಿರಿೞಿದು [2]ಮನುಜ ಮನೋಭವಂ[2] ಮನೋಹರಿಯೆಂಬ ಪೆಸರಾ—

ಬೇಗಪ್ಪ ಜಾವದೊಳ್ ಪೂ
ಗೋಳದಿಂ ಪೊಸಪೂವನಱಿಸಿ ಪೊಱಮಡುವಳಿವೋಲ್
ಚಳಮತಿ ಮಕರಂದನಮು
ನ್ಮಿಳಿತಂ ಪೊಱಮಟ್ಟನರಸನಾ ಪುರದಿಂದಂ ೧೬

ಅಂತು ಪೊಱಮಟ್ಟು ಪುರದಿಂ
ಸಂತತಮಾ ಕಾಂತೆಯಲ್ಲಿಗೆಡೆಯಾಡುವ ಚಿ
ತ್ತಂ ತು[3]ಳಿಪದಿ[3]ನೊಡಗೊಂಡು
ಯ್ವಂತಿರೆ ವಧುವಿರ್ಪ ದೆಸೆಗೆ ಪಯಣಂಬೋದಂ ೧೭



[4]ಬ[4]ಳಿಯಂಬು ಪೂವಿನಂಬೆನೆ
ತೊಳಗುವ ಪದವಿಲ್ಲೆ ನನೆಯ ಬಿಲ್ಲೆನೆ ಬೆನ್ನೊಳ್
ತಳೆದು ನಡೆತರ್ಪ ತನ್ನಯ
ಕೆಳೆಯಂ ಮಧುವೆನೆ ಮನೋಜನಂತಿರೆ ನಡೆದಂ ೧೮

ಆಸಮಯದೊಳ್ ಪ್ರಮದೋದ್ಯಾನದೊಳ್

ಅನಿಲಾಂದೋಳಿತಪಾದಪಾಗ್ರವಿ[5]ಗ[5]ಳತ್ಪುಷ್ಪೋತ್ಕರಂ ಸೇಸೆಯಾಗೆ ನವೋದ್ಭಿನ್ನ ಸರೋಜಮಂದಮಧುಗಂಧಭ್ರಾಂತಭೃಂಗಾಂಗನಾನಿನದಂ ಮಂಗಳಗೀತಮಾಗೆ ಪಿಕ[6]ಕೋಕಾ[6]ನೀಕನಾನಾವಿಧ ಧ್ವನಿಗಳ್ ವಾದ್ಯನಿನಾದಮಾಗೆ ನಡೆದಂ ಸಂಗೀತಗಂಗಾಧರಂ

[1] ಈ ಭಾಗ 'ಘ' ಪ್ರತಿಯಲ್ಲಿಲ್ಲ [2] ಮನುಜ ಮನೋಹರ (ಕ) ಮನೋಜ ಮನೋಹರಂ (ಖ) [3] ರಿದಿರ (ಕ) ರದಿರ (ಘ) [4] ಬಿ (ಕ ಘ) [5] ಚ (ಕ ಘ) [6] ನಾದಾ (ಕ ಘ)

ಅಂತು ನಿರ್ಗಮನಸಮಯನಿಸರ್ಗಶುಭಮಂಗಳಾಚಾರಂಗಳುಮನ್ಸಘನಪ್ರೋದಯ ಪ್ರಭಾಪಟಳ[1]ಜಾ[1]ಳಪಲ್ಲವ[2]ಭೂಷಣ ವಿಭೂಷಿತ[2]ಪೂರ್ಣಸುವರ್ಣ ಕುಂಭಮುಮ ನಿದಿರ್ಗೊಳುತ್ತುಂ ಶುಭಶಕುನಂಗಳುಮಂ ಕೈಕೊಳುತ್ತುಂ ಸಮಾವೇಲ್ಲಿತಾಸೂನ ಧಾನ್ಯಧನಕನಕಸಮೃದ್ಧಿವಲ್ಲಿಗಳಪ್ಪ ಪಲ್ಲಿಗಳುಮನಸವರತವಿವಿಧಜನಾಗಮಂಗಳಪ್ಪ ನೈಗಮಂಗಳುಮನಪಹಸಿತಕುಬೇರನಗರಿಗಳುಮಪ್ಪ ಶೋಭಾನಗರಿಗಳುಮಂ ನಿಸ್ಸೀಮ ಸಕಳಭೋಗಸಾಮ್ಯಸಮುದ್ಧಾಮಂಗಳಪ್ಪ ಗ್ರಾಮಂಗಳುಮಂ, ಸಮಸ್ತ ಸಮಯ ಸಂಪತ್ಸನಾಥಂಗಳಪ್ಪ ಪತ್ತನಂಗಳುಮಂ, ಪ್ರವಿಶತ್ಪ್ರಜಾಪೂರ[3]ನಿಜಿಡಿತ[3] ಗೋಪುರಂಗಳುಮಪ್ಪ ಪುರಂಗಳುಮಂ ಭೂಸುರಪುರವರ್ಯಂಗಳಪ್ಪ ಸರ್ವಸಮಸ್ಯಂಗಳುಮಂ ವಿಶದವೇಶವೇಶ್ಯವಾಟಂಗಳಪ್ಪ ಖೇಟಕಂಗಳುಮಂ ಕಥಕಕೌತೂಹಕಕುಹಕ ಹೇರಂಬ ಚಂಡಭೈರವಚಂಡಚಂಡಿಕಾರೂಪಕೋ[4]ಪ[4] ಜೀವಕಶಂಖಶೃಂಗಸಮುದ್ದ ಮರಡಮರು ಡಿಂಡಿಮಾರಾವಮುಖರಿತವೀಧೀವಿಡಂಬಂಗಳಪ್ಪ ಮಡಂಬಂಗಳುಮಂ ನೋಡುತ್ತುಂ ಕೌತುಕರಸದೊಳೋಲಾಡುತ್ತುಂ ಸಮುಚಿತಾಶ್ರಯಂಗಳಪ್ಪಾಶ್ರಮಂಗಳೊಳ್ ವಿಶ್ರಮಿಸುತ್ತುಂ ಮನೋಹರವನಪ್ರದೇಶಂಗಳೊಳ್ ಭ್ರಮಿಸುತ್ತುಂ ಬರ್ಪ ರೂಪ ಕಂದರ್ಪದೇವಂಗೆ ದೇಶಯಾತ್ರಾಸುಖೋತ್ಸವಮನವಟಯಿಸುವಂತೆ—

[5]ಸರ[5]ಸ್ರೋತೋರಮ್ಯಂ ಕ್ಷಿತಿ ತೊಳಗೆ ಸಸ್ಯಪ್ರಸರದಂ
ಕರಂ ಕಾಂತಂ ಕಾಲಂಗ[6]ಳೊಳ[6] ಸಲಿಲಾವರ್ತಶರದಂ
ಶರಾರೂಢ್ಯತ್ಕಾಮಿದ್ವಿಪಕಳಭಮಂದಾಗೆ ಸರದಂ
ಪರಾಗಶ್ರೀ ನೆಯ್ದಿಲ್ಗೊದವಿ ಬರೆ ಬಂದತ್ತು ಸರದಂ ೨೦

ನೀರದವಿಟಂಗೆ ವಿದ್ಯು
ನ್ನಾರಿಯ ವಿರಹಂ ಪೊಣರ್ಚೆ ಬಡವಾಗಿ ಕರಂ
ದೂರಿಸಿ ಬೆಳರ್ತ ತೆಱದಿಂ
ಶಾರದಜಳಧರದ ತುಱುಗಲೊಗೆದುವು ನಭದೊಳ್

ಗಗನಶಿಲಾತಳದೊಳ್ ಘನ
ಖಗಸಂಕುಳ[7]ವಜ್ಜ[7]ನಿಕ್ಕಿ ಪೋದುವೊ ಮಿಗೆ ಬಾಂ
ಜಗುನೆಗೆ ನೆಗೆದುವೊ [8]ನೊ[8]ರೆಯೆನೆ
ಬಗೆಗೊಂಡುವು ಬಾನೊಳೊಗೆದ ಬಿಳಿಯ ಮುಗಿಲ್ಗಳ್ ೨೧

ಜೀವನಮುಳ್ಳನಮಿತ್ತಖಿ
ಳಾವನಿಗಂ ಕೀರ್ತಿಶೇಷಮಾಯ್ತೆನೆ ತುಂಗಾ
ಬ್ದಾವಳಿ ಬೆಳರ್ತು ಬಾನಂ
ತೀವಿದುವು ಪರೋಪಕಾರಿ ಕೆಟ್ಟೊಡೆಯುಂಟೇ ೨೨

[1] ಭಾ (ಖ) [2] ವಿಭೂಷಿತ ಭೂಷಣ (ಕ ಘ) [3] ವಿಹಿತ (ಕ ಘ) [4] ಪ (ಘ)
[5] ಶರ (ಕ) [6] ಳಿನೆ (ಕ ಘ) [7] ಮೆಚ್ಚವಿ (ಖ) ಮೆಚ್ಚಲಿ (ಗ) [8] ನೆ (ಘ).

ಶರನಿಧಿಯನಡಕಿ [1]ತೀಡೊಡೆ[1]
ಸುರಿದಪುವೋ ಪೊತ್ತು ತಂದು ಮುತ್ತುಮನೆಂಬಂ
ತಿರೆ ಬಿಸಿಲೊಳೆಸೆವ ಪೊಸವೆ
ಳ್ಸರಿಯಂ ಸುರಿದುವು ಸಡಿಲ್ದ ಬಿಳಿಯ ಮುಗಿಲ್ಗಳ್ ೨೪

ತಿಳಿದುವು ನೀರ್ಗಳ್, ತಿಂಗಳ್
ತೊಳೆದಂತೆ ಪಳಚ್ಚನಾಯ್ತು, ಗಗನಂ ಮುಸುಕಂ
ಕಳೆದಂತೆ ಪೋಗೆ ಮೇಘಂ
ತೊಳಗಿದುವು ದಿಶಾಮುಖಂಗಳಂದಿನ ದಿವಸಂ ೨೫

ದೆಸೆಯಂ ಮುಸುಳಿಸಿದ ಮುಗಿ
ಲ್ಗೆಸಱಂ ತೊಳೆದೆತ್ತಿ ಕಳೆವವೊಲ್ ಕವಿದು ಪೊಸ
ಲ್ಮಸಗಿತು ಪೊಸವೆಳ್ದಿಂಗಳ್
ಜಸಮಂ ಪರ್ಬಿಸುವ ತೆಱದೆ ಕವಿಶೇಖರನಾ ೨೬

[2]ಪಸು[2]ವೋಡುವಿನಂ ಹರಣಂ
ಹಸರಿಸುವಿನಮೀಂಟಿದಂತೆ ಬೆಳ್ದಿಂಗಳುಮಂ
ಬಿಸಿಲುಮನೇನೆಸೆದಿರ್ದುವೊ
ಪೊಸನೆಯ್ದಿಲ ಪೂವುಮಲರ್ದ ತಾವರೆವೂವುಂ ೨೭

ಎಲರೆತ್ತೆ ಸುರಿದು ನೀರ್ಕಿ
ನ್ನೈಲದಂತಿರೆ ಪರೆದು ಪುದಿಯೆ ಕಿಂಜಲ್ಕಂಗಳ್
ಚಲರುಹದಲರ್ಗಳದೇಂ ಜಲ
ಜಲಿಸಿದುವೋ ಬಯಲೊಳಲರ್ದ ಜಲರುಹದಲರ್ವೊಲ್ ೨೮

ಎಲೆದುಱುಗಲಿಡಿದು ಪಚ್ಚೆಯ
ನೆಲಗಟ್ಟಂ ಕಟ್ಟಿದಂತೆ ಪಜ್ಜಳಿಸಿರೆ ಪೂ
ವಲಿಗೆದಱಿದಂತಿರೆಸೆದುವು
ಜಲಜಂಗಳ್ ಕೊಳಗಳೆಂಬ ಸಿರಿಯರಮನೆಯೊಳ್ ೨೯

ಅಂಬುಜಮುಖಿಯರ ತನುಲತೆ
[3]ಗಾಂಬಂತಿರೆ[3] ತೆರೆಯನಿಱಿಯೆ ಮೊಲೆ[4]ತಡಿತಡಿಗೊಂ
ಡಿಂ[4]ಬಾಗೆ ಪೊಳೆವ ಪಚ್ಚೆಯ
ಕೊಂಬುಗಳಂ ಪಿಡಿದು ಸಿಳ್ಕಿ ಸೆಯ್ದುಲನಾಯ್ದುರ್ ೩೦

---

1 ಶೃದದೆ (ಫ) 2 ಹಸೆ (ಫ) 3 ತುಂಬುತ್ತಿರೆ (ಕ ಖ) 4 ತೊರೆಗಡಿಗೊಂಡಿಂ (ಕ) ತೊಡೆ ತಡಿಗೊಂಬಿಂ (ಫ)

ಸಿಂಜಾನಸಮದಷಟ್ಪರ
ಣಂ ಜೇವೊಡೆಯೆನಿಸೆ ಪುಳಿನತಳದೊಳ್ ಸುಮನೋ
ಮಂಜರಿಯುಂ ಮುಸುಕಿದ ನವ
ಮಂಜುಲಲತೆ ಮದನಚಾಪಲತೆ[1]ಯನೆ[1]ಪೋಲ್ತಂ ೩೧

ನೆಗೆದಂಚೆಗಳೇೞ್ತಂದುವು
ಗಗನಾಗ್ರದಿನಿೞಿದ ಬೆಳ್ಮುಗಿಲ್ಗಳ ಮಱಿವಿಂ
ಡುಗಳೆನೆ ಬೆಳ್ದಾವರೆ[2]ಯೊ
ಳ್ಮುಗುಳೆ[2]ನೆ ಮಾನಸದ ಹಂಸಿಗಳ್ಪಿರಸಾಗಳ್ ೩೨

ಕಂದಂಗಳಂತಿರಂಚೆಗ
ಳಂದೇೞ್ತರೆ ತೋಱಿದ ಪೊಲೆಗಳಂತಿರೆ ನೞನೀ
ಕಂದಂಗಳಿಂದಮೊ[3]ಡನೊ[3]ಗೆ
ತಂದುವು ನವಕುಂದಧವಳಕೋರಕನಿಕರಂ ೩೩

ವನರುಹಕಂದದ ಕೊನರ್ಗಳ
ಕೊನರ್ತ ತನಿರಸಮನೀಂಟಿ ಗರ್ಗರರವದಿಂ
ದನಿಯೊಡೆಯೆ ಕರೆದುವೋಡುವ
ಘನಸಮಯಮನಾರ್ವ ತೆಱದೆ ಕಳಹಂಸಂಗಳ್ ೩೪

ಪಿಂದೆ ತಲೆದೆಗೆದ ಕದಿರ್ಗಳ್
ಸಂದಣಿಗೊಂಡರ್ಕಜಂಬದಿಂ ಪೊಱಪೊಣ್ಮು
ತ್ತೊಂದೊಂದನೊರಸಿ ಕಿಡಿಪಿಡು
ವಂದದೆ ಕಡುಪಿಂಗಲ ಪೊಳೆವುಪಡೆದುದು ಕಾಯ್ಪಂ ೩೫

ಅಳುರೆ ಶರದದ ಬಿಸಿಲ್ ಕೋ
ಮಳಿಕೆಯ[4]ನುಱಿದಿ[4]ಸಿಸು ಜಾ[5]ಡಿ ಕಂದಿರ್ದಳ[5]ಕುಂ
ದಳತಾಕುಮಾರಿ ಮುಗು[6]ಳ್ನೊ
ಳ್ಮಿ[6]ಳಿತೊಡೆ ಮೆಯ್ಯಾಯ್ದು ಬಡಬಡಾದಂತಾದಳ್ ೩೬

ಮುಸ್ಸುಂಗಿ ದಹನನಂ ತಪ
[7]ನನಂ ನೆಗೆದು[7]ಗುಱ್ಬಿಂತೆ ಜಸುಗದಿ[8]ರ್ನೆತ್ತರ್[8]ಕಾ
ಯ್ವನ್ನಂ ಸುಡುತಿರೆ ಪಥಿಕರ್
ಜೆನ್ನಂ ಕೊಂಡೋಡಿ ಮೞಿಯ ನೆೞಲಂ ಸಾರ್ದರ್ ೩೭

---

[1] ಯಂ (ಘ) [2] ಪೂವುಗಳೆನೆ (ಕ ಗ) ಲೋವುಗಳೆನೆ (ಘ) [3] ಡೆದೊ (ಕ ಘ)
[4] ನಿನಿಸಿ (ಕ ಘ) [5] ಡಿಕೊಂಡಿರ್ದಳೆ (ಕ) ಡಂಗೊಂಡಿದ್ದಳೆ (ಘ) [6] ಳ್ವಣ್ಮಿ (ಖ)
[7] ನಂ ನನೆಕೊಂಡು (ಕ) ನನ್ನೆಲಕು (ಖ) [8] ಗರ್ಳ್ ನೆಱಿ (ಕ ಖ)

ಅರಗಿಳಿಯ ಪಿಂಡು ಬಂದುಗೆ
ಯರಲಂದದ ಜೊಂಪದಿಂದೆ ಕಱಿನೆಯ ತೆನೆಯಂ
[1]ಬರೆ[1]ಕರ್ಚಿ ಪಾಱುತಿರ್ಪ್ಪ
ಶರದಂ ಪುಗೆ ಪಾಱಿ ಪೋಪ ಸುರಚಾಪದವೋಲ್ ೩೮

ಪೊಳೆವ ಬಿಸಿಲ್ಗೆ ಮೆಯ್ವೆಳಗು ಚಂದನಪಾಂಡುಪಯೋಧರಾಗ್ರದಿಂ
[2]ಬಳೆದಿಟ[2]ತರ್ಪ ಬೆಳ್ಳಿಗೆ ಪಾರವೆ[3]ಸಾ[3]ಲಿರೆ ಪೋಲ್ವೆಯಿಂ ಸಮು
ದ್ಘಳಿತಸರೋಜಗಂಧಿ ಕಳಹಂಸಮನೋಹರಯಾನೆ ಸಸ್ಯತೋ
ತ್ಪಳಧವಳಾಕ್ಷಿಯೆಂ ಸುರಿದಳೋ ಶರದಂಗನೆ ಕಣ್ಗೆ ಶೋಭೆಯಂ ೩೯

ತೊಳೆಪ ಬಿಸಿಲ್ ತಳತ್ತಳಿಸಿ ಕಾಯ್ಪು ಪೊದಟ್ಟಿರೆ ನೆಯ್ದಿಲಿಂ[4]ಪೋಲ್[4]
ತಳಿವ ಹಿಮಾಂಬು ಬೆಳ್ಳಿ ಜಳದ್ವಳವೀಜಿಕೆ ಪಾಱುತಿರ್ಪ ನೆ
[5]ಣ್ಣೆ[5]ಳಗಳೆಂಕೆಯಾಗೆ ನವಪಾಂಡುಪಯೋಧರೆ ದರ್ಶಿತಾತೆಯು
ತ್ಪಳಕುಲಭೂಷೆಯೆಂ ವಿರಹಿಯಂತೆ ಶರದ್ವಧು ಕಣ್ಗೆ ವಂದಳೋ ೪೦

ಅಂತು ಬಂದ ಶರತ್ಸಮಯದೊಳ್

ಕೆಸಱಿಂ ಕುಟಿಯಿಂ ನಾನಲಿ
ನಸಿದಾಗಿರೆ ಕೊಂಕಿ ಪೋದ ಬಟ್ಟೆಗಳೆಲ್ಲಂ
ಪಸಲೆಗಪಿದಂ[6]ದು[6] ಸೈತಿರೆ
ವಸುಧೇಶನುಮಾರ್ಯಸುತನುಮೊಯ್ಯನೆ ನಡೆದರ್ ೪೧

ಅಡಿಗೆ ಕಡುಮೆಲ್ಪನೊಪ್ಪಿಸು
[7]ವೆಡೆ ಕಣಿಕ್ಕೆಯ[7]ಡಿಯುಸೂಱೆ ನಸುಗೆಸಱಿಂ ಕೇ
ಸಡಿಯೆಸೆದುವು ಕತ್ತುರಿಯಂ
ತೊಡೆದಂತಿರೆ ನಡೆವ ಸುಕರಕವಿಶೇಖರನಾ ೪೨

ಅಂತು ನಡೆಯುತ್ತುಮ[8]ಲ್ದ[8] ಕಮಳಕುಮುದಕಾನನಂಗಳಿಂ ಕೆಂಪಡರ್ದ ಕಳಮಕೇದಾರಂಗಳಿಂ ತೀವಿ ತಿಳಿದು ತೆರೆಗಟ್ಟುವ ತಟಾಕಸರೋವರಂಗಳಿಂದೆಸೆವ ದೇಶಂಗಳಂ ನೋಡುತ್ತುಂ ಕುಱುಕುಱುಮೆಟ್ಟುತ್ತುಂ ಬರ್ಪ ರೂಪಕಂದರ್ಪದೇವನಂ ಮಕರಂದನಿಂತೆಂದಂ—

ಧವಳಾಬ್ಜಸಿತಚ್ಛತ್ರಂ
ನವೀನಕಳಹಂಸಧವಳಚಾಮರನಿದಿರ್ವ
ರ್ಪವೊಲೆಸೆವಂ ನಿನಗುತ್ಪಲ
ಧವಲಂ ಶರದವನಿಪಾಲಕಂ ಕವಿಧವಳಾ ೪೩

---

1 ಕರ (ಕ) 2 ದಿಟತರು (ಘ) 3 ಪೋ (ಘ) 4 ಮೊಳ್ (ಕ ಘ) 5 ಗ್ಗೆ (ಕ ಘ)
6 ತ್ರೆ (ಕ) 7 ವಡಿ ಕಣಿಕಯ್ಯ (ಕ) ವಡಿ ಕರ್ಣಿಕೆಯ (ಘ) 8 ವಲ್ಲದೆ (ಕ ಘ)

ತೋಱೆ ಪೊಸಬಾಸಿವೋಲ್ ಪಸು
ರೇಱಿದ ಪಸಲೇಱೆ ತೋರಮೊಲೆ ಜೆಳ್ಮಗಿಲಂ
ಪೇಱಿದ ಗಿರಿಯೆನೆ ಜವ್ವನ
ವೇಱಿದವೊಲ್ ಧರಣಿಕಾಂತೆಯೇಸೊಪ್ಪಿದಳೋ ೪೪

ಸರಸಿಜಡೆಲೆಯುಂ ರಜಮುಂ
ಸುರಧನುವೆನೆ ಪೊಳೆವ ಮಿಂಗಳೆಳಮಿಂಚನೆ ಪೋ
ಲ್ತಿರೆ ಪೋಲ್ತುವು ಪೆರ್ಗೆಱೆಗಳ್
ಶರದಂ ಪೊಯೆ ಪರಿದು ಬಿಟ್ಟ ಮುಗಿಲಸಧೀಶಾ ೪೫

ಪಸರಿಸಿದ ಬಯು[1]ಲ್ಮಡು[1] ಪಾ
ವಸೆಗೊಂಡಿರೆ ಗಡಣದಾಡುವೆಳವೆಂಡಿರ್ ಸು
ಣ್ಬಸಲೆಯೆ ಗೆತ್ತೆಯ್ತರೆ ಮಗು
ಳಿಸಿದಪ್ಪುವು ಪಾಱೆ ಪೊಳೆವ ಪಾಠೀನಂಗಳ್ ೪೬

ಮಡುಗಳೊಳೆ ನೀಳ್ದ ನೀರ್ಗ
ನ್ನಡಿಯೊಳ್ [2]ತೆನೆ[2]ನೊಗದ ಜೆಲ್ವನವಲೋಕಿಪವೋ
ಲಡಿದಡರೆ ಕೊಂಡ ಫಲದಿಂ
ಕಡುವಾಗಿದುವರಸ ಗಂಧಶಾಲಿವನಂಗಳ್ ೪೭

[3]ಕಾ[3]ಲ್ವಿಡಿದು ಕೆಳಗೆ ಪೊಸನೆ
ಯ್ದಿಲ್ಪೂಗಳ್ ಬಾಯುಸಾಂತವೋಲಿರೆ ಕಂ[4]ಪಂ
ಪಾಲ್ವನಿಗಳಸು[4]ಗುಬ್ಬುವವೆನೆ
ಜೆಲ್ವಿಂ ಬಾಗಿದುವು ಸೋಡಿ ಕಳಮವನಂಗಳ್ ೪೮

ವಿನತನವಗಂಧಶಾಲಿಯ
ತೆನೆಗಳನೊಳಕೊಂಡು ಮುಗಿದ ಕುಮುದಂಗಳ್ ಸೋ
ಡನುಕರಿಸಿದಪುವು ತೀವಿದ
ತನಿಗಂಪಂ ಪೀರ್ವ ತೆಱೆ[5]ನ[5]ನುನ್ನ ತನಿಳಯಾ ೪೯

ಹರಿತದಳಪಾಕ ಪರಿಪಿಂ
ಜರಕಣಿಶವಿಕಾಸಕಳಮವನಕವನಿಪ ಸೋ
ಡರಗಿಳಿಯ ಪಿಂಡು ಪಾಯ್ದುದು
ಮರುಳ್ದು ಸಮವರ್ಣರುಚಿಗೆ ಪಾಯ್ದೆಱಗುವವೋಲ್ ೫೦

[1] ಲ್ಮಡಿ (ಕ) [2] ನಗೆ (ಖ ಘ) [3] ಕೋ (ಘ) [4] ಪಿಂ ಪೋಲ್ವನಿ ತುಗಲು (ಕ) ಪಂ ಸಾಲ್ವನಿತುಗಲು (ಖ) [5] ದಿ (ಕ ಖ ಗ)

ಕೆಮ್ಮೆಸೆ[1]ವಿ[1]ಟ್ಟ ಗಿಳಿಗಳ್
ತಮ್ಮಂ ತುಡುಕದವೊಲಾಯುಧಂ[2]ಬೇ[2]ಱದವೋಲ್
ಕಮ್ಮಗಬವೆಗಳನಂಗನ
ಕಮ್ಮ[3]ಕ[3]ದಂತೆಸೆದುವೊಸೆದು ನೋಡಿವಸರಸಾ ೫೭

ಸಂಪಗೆವಣ್ಣಮಸುಗುಟ್ಟಳ
ಗೆಂಪೊಂದಿದ ಪಸುರನಾಳ್ದ ತುದಿನಡುಮೊದಲಿಂ
ಬಿಂಪುಳ್ಳೆಸಳ್ಗಳ ಮೆಯ್ಯಿಂ
ಕಂಪಂ ಕೆದಱದವುವರಸ ಕಬಮೆಯ [4]ಕೆಯ್ಗ[4]ಳ್ ೫೭

ಬಲ್ಗಿಳಿಗಳ್ ಬಬಲ್ದ ತೆನೆಗಳ್ ತೊನೆಯುತ್ತಿರೆ ಪಾಯ್ದು ಪಾಯ್ದು ಪಾ
ಲ್ಕೆಲ್ಗಳನಗ್ರತುಂಡದೊಳೆ ಖಂಡಿಸೆ ಗಲ್ಗಲನೊಕ್ಕ ಪಾಲ್[5] ತಂ
ದಲ್ಗ[5]ಳಿಸಾವಗಂ [6]ಮ[6]ಡಿಯ ನೀರ್ ಕಡುವೆಳ್ಪಿನೊಳೊಂದೆ ಪದ್ಮಜಂ
ಪಾಲ್ಗಳ [7]ಸೊ[7]ಯ್ದು ಪೊಯ್ದು ಬಳೆಬಿಪ್ಪವೊಲಿರ್ದುವು ನೆಲ್ಲಗರ್ದೆಗಳ್ ೫೩

ಎಂದು ಮಕರಂದನೋರಂದದಿಂ ಪೊಗಬ್ದು ಪಲತೆಱದಿಂ ಪೊಲನ ಸಿರಿಯನರ ಸಂಗೆ ಸಿರವಿಸುತ್ತುಂ ಬರೆವರೆ ಮುಂದೊಂದೆಡೆಯೊಳಿಡಿದು ಪಾಲ್ಗೊಳ್ವ ಪದನಾಗಿ [8]ಕಣ್ಮಲರ್ಗೆಕೋ[8]ದಾರಮಾದ ಕೇದಾರದೊಳ್—

ಅನಿಲಾಯತ್ತೋಚ್ಚಲಚ್ಛಾಳಿಯೊಳ [9]ಪಯಪದಿಂ[9] ಪಾಯ್ದು [10]ಕಾಲ್ ಚಾಚಿ[10] ತೂಗುಂ
ದೆನೆಯಂ[11]ತಳ್ಕೈ[11]ಸಿಕೀರ್ಕಿರೆನುತಡಿಗೆನಱೊಳ್ ಪಿಟ್ದಿ ಬ[12]ಲ್ಗಿಡ್ಡಿ[12]ಯಂ ಸಾ
ದೋರ್ನಲುತ್ತಚ್ಛಾಂಬು[13]ವೊಳ್[13] ಚುಂಬಿಸುವ ಕಣಿಶಮಂ ಕರ್ಚಿ ತುಂಡಾಗ್ರ[14]ಮಂ[14] ಸೂ
ತನಪಕ್ಷಪ್ರಾಂತದೊಳ್ ಮಾರ್ದೊಡೆದುದು ಧೃ[15]ತ[15]ಜಂಬಾಲಮಂ ಬಾಲಕೀರಂ ೫೪

ಅದಂ ನೋಡಿ ನಕ್ಕು ಅತಿತರಳಂಗೆ ಕೈಸಾರ್ದ ಕಜ್ಜಮುಂ ಕಿಡುವುದಾವ ಕೌತುಕಮೆಂದು ನುಡಿಯುತ್ತುಂ ನಡೆಯೆ ನಡುವೊಲಕ್ಕೆ ತೊಡವೆನಿಸಿ ಪರ್ಬಿ ಕೊಂಡಲುಗುವ [16]ಸುರ್ಬು[16] ಪುರ್ಬಿಕ್ಕುವಂತಿರ್ದ ಪೆರ್ಬಟ್ಟೆಯ ಪುರ್ಚಿನೊಳ್—

ಕೀರ್ಣಪರಾಗಪಿಂಜರಿತತೀರಜಳಂ ಪೊಳೆಯುತ್ತುಮಿರ್ಪ ಸೌ
ವರ್ಣಸುಪತ್ರದಂತೆಸೆಯೆ ತೀವಿದ ಕೈರವಕಂಜಸಂಕುಲಂ
ಪೂರ್ಣಪಯೋಜಪುಂಜಕುಮುದೋತ್ಕರದಂತಿರೆ ಧಾರಿಣೀ ಕನ
ತ್ಕರ್ಣದ ಚೆಲ್ವನಾಂತತಿಮನೋಹರಮಾದುದು ನೀರಜಾಕರಂ ೫೫

---

1 ಮೆ (ಕ) 2 ಬೀ (ಕ) 3 ಟ (ಗ) ತ (ಕ ಘ) 4 ತನೆಗ (ಕ ಗ ಘ)
5 ವಂಗಲ್ಗ (ಘ) 6 ಮು (ಕ) 7 ಪೊ (ಖ) 8 ಕಣ್ಮಣಿಗೇಕೋ (ಕ) ಕಣ್ಗೆ ಕೇ (ಘ)
9 ವಜಲದಿಂ (ಕ) ವಚರದಿಂ (ಗ) 10 ಕಾಲ್ಗೋಡೆ (ಕ ಗ) ಕೋಳ್ಗೊಂಡು (ಘ) 11 ತಕ್ಕೈಸ್ಯ
(ಕ ಘ) 12 ಲ್ಗದ್ದೆ (ಘ) 13 ವಂ (ಘ) 14 ದಿಂ(ಗ) 15 ಥ (ಕ) 16 ಪೆರ್ಬು
(ಕ) ಪೆರ್ಬುಲ್ಲಿಂ (ಘ)

ತುಂಬಿಯ ಬಣ್ಣಮುಂ ಕಱಿಯ ನೆಯ್ದಿಲ ಬಣ್ಣಮುಮುಂಚೆವಿಂಡ ತ
ಳ್ತಿಂ ಬೆಳರ್ವಣ್ಣಮುಂ ಬಿಳಿಯ ಕಂಜದ ಬಣ್ಣಮುಮೊಂದಳುಂಬಮುಂ
ತುಂಬಮುಮಾಗೆ[1] ತಿಂಬಿ[1]ದುದು ಕಟ್ಟಲೆಗಂ ಶಶಿಕಾಂತಿಗಳ್ಗಮಾ
ಅಂಬುಜಷಂಡವಿಾಜಗ[2]ದೊಳಿಲ್ಲದ ಕೂಟಮು[2]ನುಂಟುಮಾ[3]ಟ್ಪವೋಲ್[3] ೫೬

ಎನೆ ಕಮನೀಯಮಾದ ಕಮಳಾಕರಮುಮಂ ಕುಮಾರನ ಪಥಪರಿಶ್ರಮಪರಿ
ಮ್ಲಾನಮುಖಕಮಲಾಕರಮುಮಂ ಕಂಡು ಮಕರಂದಂ ಕಡೆಗಣಿಸಲಱಿಯದೆ—

ಗಿಳಿಗಳ್ ಬಿಟ್ಟುವು ಗಂಧಶಾಲಿವನಮಂ ಗೋಪೀಕಪೋಲಾಗ್ರದೊಳ್
[4]ಪೊ[4]ಳೆಯುತ್ತಿರ್ದುವು ಘರ್ಮವಾಃಕಣಿಕೆಗಳ್ ಪದ್ಮೋತ್ಕರಕ್ಕಂಚೆಗಳ್
[5]ತಳರು[5]ತ್ತಿರ್ದಪುವೊಪ್ಪಿ [6]ಚಿಬ್ಬ[6]ಸಲೆಯಿಂ ನೀರ್ದಾಣಮಂ ಸಾರ್ದು ಗೋ
ಕುಳಮಾ ಪೋದುದು ಕಾಯ್ದಪಂ ತಪನನುತ್ತೀವ್ರಂ ಲಲಾಟಂ ತಪಂ ೫೭

ಅದುಕಾರಣದಿಂ—

ಬಿಸಿಲಿಟಿವನ್ನೆಗಮಿರ್ದೀ
ಬಿಸರುಹವನದೊಳ್ ಬಟಲ್ಕೆಯುಂ ಕಳೆದು ಬಟಿ
ಕ್ಕ ಸಮಾಸ್ತ್ರರೂಪ ಪೋಪಂ
ರಸಿಕಂ ನವ[7]ಲ[7]ಲಿತವಸ್ತುವಂ ಬಿಸುಡುವುದೇ ೫೮

ಪ್ರಿಯಸಖನಿಂತೆನೆ ಸಲಿಲಾ
ಶಯಕ್ಕೆ ತದ್ರಾಜಹಂಸನೊಯ್ಯನೆ ಮುದಿತಾ
ಶಯನಾಗಳ್ ನಡೆದಂ ಬಗೆ
ಬಯಸಿದುದನೆ ಸುಡಿಯೆ ನೆಗಟಲೊಲ್ಲದರೊಳರೇ ೫೯

ಎಂದು[8] ನಡೆ[8]ದಾ ನಳಿನಾಕರ[9]ತೀರ[9]ದೊಳ್ ತಟತಟಂಗೊಂಡು ತುಱುಗಿ ಕವಲ್ತ ಕಿಱುಗೊಂಬುಗಳ ಪರ್ಬಿಂ ನುರ್ಬುಗೊಂಡು ಶೋಭೆಗೆ ಪಿರಿದಾದ ಜಾದಿಯ ಪೊದಱ ಪೊದಟ ಸುತ್ತಿಂ ಸೊಗಯಿಸಿ ನೀರ್ಗುಡಿಯಲ್ ಗಡಣದಿಂ ಬಂದು ಬಟಲ್ದು ಕುಳ್ಳಿರ್ದ ಪಾಮರಿಯರ [10]ಪೆ[10]ರ್ಮುಡಿಯಿನಲ್ಲೊಕ್ಕು ನನುಪಾಡಿದನೆಲ್ಲ ನಿಡುಪೊಡೆಗಳಿಂ ತುಱುಕಾರ್ತಿಯರ್ ತಿಱಿದುತಂದು ಪಾಱುತನಕ್ಕೆ ಪರಪೆ ಪರೆದು ಜೊರಗಿರ್ದ ಕಱಿಯ ನೆಯ್ದಿಲ್ಗಳಿಂ ಅವಂದಿರ್ ಬೀಸಿ ಜಿಸುಡೆ ಕಂದಿ ಕೆದಱಿರ್ದ ಕಮಲಪತ್ರಂಗಳಿಂ ಪಥಿಕರ್ ಪಾಸಿ ಪಟ್ಟಿರೆ ನಸುಮಾಸಿದ ಪೊಸದಳಿರ ಪಸೆಗಳಿಂ ಮನೋಹರಮಾದ ಮಾಧವೀಮಂಟಪದ ಮೊಗಸಾಲೆಯೊಳ್ ಕುಳ್ಳಿರ್ದು ತೆಂಗಾಳಿಗೆ ಮೆಯ್ಯನೊಡ್ಡಿ ಜಿಮರನಾಱಿಸುತ್ತುಮರಸನಿರ್ಪುದುಂ ಪದ್ಮಪತ್ರಪುಟಿಕೆಯಿಂ ಕುಳಿರ್ವ ತಿಳಿನೀರ್ಗಳುಮಂ ಕಮಳಮೃಣಾಳಂಗಳುಮಂ ಮಕರಂದಂ ತಂದು ನೀಡೆ ಬೇಡೆಂದು

[1] ತುಂಬಿ (ಘ) [2] ದ ಕೂಟಮುವೆಲ್ಲಮ (ಘ) [3] ಡುಗುಂ (ಘ) [4] ಬ (ಕ ಖ ಘ) [5] ತೊಳಗು (ಕ) [6] ಪೆಬ್ಬ (ಘ) [7] ವಿ (ಘ) [8] ನುಡಿ (ಘ) [9] ಕ ಖ ಘ ಪ್ರತಿಗಳಲ್ಲಿಲ್ಲ
[20] ಸೋ (ಘ)

ಮನೋಹರತೆಗೆ ಮನಸೋಲ್ದು[1] ವಿಸ್ಮಯ[2]ಮೆ ಮಾನಸಮದನಂ ತಾನೆ ಪೋಗಿ ಪೊಗೋಲ್ಸಂ ಪೊಕ್ಕು ರಮಣೀಯತಂಬ[3]ಫಲಕಮಂ ಪಳಿಕಿನ ಸೋಪಾನಕ್ಕೆ ಪಕ್ಕಮಾಡಿ ಸೀವರದ ಸೀರ್ಪನಿಗಳ್ ಪನಿತು ಶರೀರದೊಳ್ ಪುಳಕಮಂ ಪುಟ್ಟಿಸೆ ತೆರೆಗಳ್ ತೊಡೆಯನಪ್ಪಳಿಸೆ ನೀರೊಳಗೆ ಕಾಲಂ ನೀಡಿ—

ಅಗಲೆ ಮಿಗೆ ಸೂಂಕೆ ತನುತ್ರಂ
ಬುಗಿಲಂ ತಳೆದಲ್ಲಿ ಕುಳಿರ್ದ ನೀರ್ಗಳನಾಗಳ್
ಮೊಗೆಮೊಗೆದು ತೆಗೆದು ಭೂಪಂ
ಮೊಗಮಂ ತೊಳೆವುದುಮನಂತರಂ ಸಚಿವಸುತಂ ೬೦

ಜಲದೊಳೊಲೆದಲೆವ ತಾವರೆ
ಯೆಲೆಯೊಳ್ ತೆಗೆದಿಕ್ಕೆ ನಾಲ್ಕು ದೆಸೆಗಂ ನೀರ್ಗಂ
ಬಲಿಗೆದಱು ಬಟಿಕೆ ಜಲರುಹ
ದಲರ್ಗಳುಮಂ ಬಿಟ್ಟು ಕವಿಯೆ ಕಂಪಿಂಗಳಿಗಳ್ ೬೧

ಬಗಿದಗುದೊಂದದಂತೆ ತೆಗೆದಾಱಿಸಿದೋಗರದೊಳ್ ಪೊದಬ್ಬು ಕ
ಮ್ಮಗೆ ಕಸಿಗೊಂಡ ಗೆಣ್ಣ ಮೊಸರಂ ಸುರಿದೇಲೆಯ ಚೂರ್ಣವಿಕ್ಕಿ ಪೊ
ಯ್ಯೊಗುಮಿಗೆ ಬೇಳೆಗಿಯ್ದು ಮೆಳಸಂ ತಳೆದಲ್ಲದ ಜಲ್ಲಿಯುಂ ಪನ
ಣ್ಪಿಗೆ ಕಲಸಿರ್ದ ತಣ್ಣಲಸುಗೂಟನಿರಾಪತಿಗಿತ್ತನುತ್ತ್ರಯಿಂ ೬೨

ಪಿಸ್ತಲಿ[4] ಚೆ[5]ಲ್ಲಿಗಾಯ್ ಮೆಣಸು ನೂಗುಳಿವೇಳೆಯಿಲ್ಲವೇ[6]ಲೆ ಕ
ಮ್ಮಿತ್ತಪ್ಪ[7] ಸುಭದ್ರೆ ಮಾಮಿಡಿ ಕರಂಜಿಕೆ ಯಿಂಬಟೆ ನಿಂಬೆ ನೆಲ್ಲಿಗಾಯ್
ಕರ್ಪುರಗಂಪನೊಪ್ಪಿಸುತುಮಿರ್ಪವಿಮಾಡುಫಲಂಗಳಾದಿಯಾ
ದುಪ್ಪಿನ ಕಾಯ್ಗಳಂ ಮಗಮಗಿಪ್ಪನಿಕ್ಕಿದನಬ್ಜಪತ್ರದೊಳ್ ೬೩

ಅಂತಿಕ್ಕುವುದುಂ—

ಆರೋಗಿಸಿ ನೃಪಸುತಂ ಕ
ರ್ಪೂರದ ವೀಳೆಯಮನೊಸೆದು ಕೊಂಡನವಸದಿಂ
ಸಾರಮೃದುಪಲ್ಲವಪ್ರ
ಸ್ತಾರದೊಳಾ ಲತೆಯ ಮನೆಯೊಳೊಱಗಿದನಾಗಳ್ ೬೪

ಭುಕ್ತಾಭ್ಯವಹಾರಂ ಪತಿ
ಭಕ್ತಂ ಬಂದಾರ್ಯತನಯನವನಿಪನೆರಗಾ
ರಕ್ತಾಂಬುಜಸಂವಾಹನ
ಸಕ್ತಂ ಸುಖದಿಂದಮಿರ್ದನಿರ್ಪನ್ನೆವರಂ ೬೫

---

[1] ಪೊಲಿ (ಘ) [2] ಕಣ್ಣರು (ಖ) [3] ಯಲ್ಲ (ಘ) [4] ಬಿ (ಕ) [5] ಶ (ಕ ಘ)
[6] ಳ ಕಮ್ಮಿತ್ತ (ಕ) ಲೆ ಕಂಪೆಸ್ಪೆ (ಘ) [7] ಬಗೆ (ಕ ಗ ಘ)

ಮತ್ತಮೊರ್ವಳ್—

ಎಡಗಯ್ಯೊಳೊತ್ತಿ ಮುಡಿಯಂ
ಪಿಡಿ ತೆಕ್ಕನೆ ತೀವೆ ಕೊಯ್ದು ಜಾದಿಯ ಸಸೆಯಂ
ಮುಡಿಯುತ್ತೆ ನಿರೀಕ್ಷಿಸಿದಳ್
ಕಡೆಗಣ್ಣಿಂ ಕಳಮಗೋಪಿ [1]ಭೂಪಾಲಕನಂ[1]

ಆಗಳ್ ಮುನ್ನಂ ತನ್ನ ಮನಮಂ ನಟ್ಟ ಕನ್ನೆಯ ಕಣ್ಗಳ [2]ಕೆಳೆಗಳೆಂಬ ಮುಳಿ[3]ಸಂ[3] ಮುಱಿವಂತೆ ಬಿಳಿಯ ಕಣ್ಣ ಬೆಳಗಯ್ಯುಂತಿರ್ದ ಬೆಳ್ನೆಯ್ದಿಲ ಬೆಂಜೆಯಂ ಪೊಕ್ಕು ಪೂವಂ ಮು[4]ಱಿ[4]ದು—

ಎಯ್ದವೆ ಪಾಸಲುಂ ಪೊದೆಯಲುಂ ನಿಮಗೆಮ್ಮ ಪೊದಱ್ದು ನೀಳ್ದ ಕ
ರ್ಣೆಯ್ದಿಲ ಪೂಗಳ್ಕೇಕೆಲವೊ ಕೊಯ್ದಪೆ ನೆಯ್ದಿಲನೆಂದು ಪೂಟ್ವವೋಲ್
ನೆಯ್ದಿಲ ಮಾಲೆಯಿಂ ಕಳಮಗೋಪಿಯರೀಕ್ಷಿಸೆ ಮಾಣ್ದನಂತೆ [5]ಬೆ
ಳ್ನೆ[5]ಯ್ದಿಲನಾಯ್ದುಪುದಂ ಮಱೆದವಂದಿರನೀಕ್ಷಿಸಿದಂ ಕುಮಾರಕಂ ೭೨

ಅಂತೊಂದೆಡೆಗೆ ಬಂದು ನೆರೆದು ನೋಡುವ ಕಾಮನ ಕಾಪಿ[6]ನವರಂತಿ[6]ರ್ದ ಗೋಪಿಯರಂ ನೋಡಿ ಮನದೊಳ್ ಮೆಚ್ಚುತ್ತುಂ ಪೋಗೆವೋಗೆ ಪೂವೆಂಜೆಯಿಂ ಪೊಱಮಟ್ಟಿಂಚರಮನುಡುಗದೆ ಪರಿದು ಮುತ್ತುವ ಮತ್ತಮರಾಳಂಗಳುಮಂ, ನುಟಿದು ಸುತ್ತಿ ತಮ್ಮೊಳಗೆ ಮುಮ್ಮಟಿಗೊಂಡು ಲವಲವಿಸಿ ಕರೆವ ಲಾವುಗೆಗಳುಮಂ, ಕುಟುಕ ನುಗುಳ್ದು ಕಂಠಮಂ ತೂಗಿ ತೊನೆದು ನಡೆದು ನಲಿನಲಿದು ನೆರೆದು ಕೂಜಿಸುವ ಕಪೋತಂಗಳುಮಂ, ಪಾಯ್ದು ತೆನೆಯಂ ತುಡುಂಕದೆ ತಲೆಯನೊಱಗಿ ಕೊಂಡಾಡಿಸು ವರಗಿಳಿಗಳುಮಂ, ಎಳಸಿ ಬಳಸಿ ಬಲವಂದು ನಲಿ[7]ದುಱುವಾಱಿ[7] ಮೆಲ್ಲುಳಿಸಂ ಪರವುವ ಪುರುಳಿಗಳುಮಂ, ಮುಸಗಿ ಮುಸುಱಿ ಕುಣಿಕುಣಿದು ಕುಕಿಲ್ವ ಕುಕಿಲ್ಗಳುಮಂ, ಬಟ್ಟೆಯಂ ಬಿಟ್ಟು ಬಬಲ್ದ ನೆವದಿಂ ನವಶಾಡ್ವಲಪ್ರದೇಶದೊಳ್ ಕುಳ್ಳಿರ್ದು ಕೇಳ್ದು ಕೇಳ್ದು ಪರವಶರಪ್ಪ ಪಥಿಕರುಮಂ, ಕಂಡಿದೇನೆಂದು ಮಾನಸವಮದನಂ ಮಕರಂದನು ಮನುಮಾನಿಸುತ್ತುಂ ಬರೆ ಮುಂದೆ ಮಂದೈಸಿ ತಲೆಯುದ್ದಮಾಗಿ ತುಱುಗಿ ಬೆಳೆದೊಱಗಿ ರಾಜಿಸುವ ರಾಜಾನ್ನದ ಕುಸುಂಕುಱೊಳಗೆ—

ಕುಮುದದ ಕೇಸರರಜಮಂ
ತೆಮಳ್ದಿ ತಳ್ಕೈಸಿ ನೆಗೆವ ಸುಟ್ಟುರೆಯಿಂದಂ
ಸಮತಳಹತಿಯಿಂ ಕುಚಕುಂ
ಕುಮರಜ[8]ಮಡರ್ದಂಗದಲ್ಲಿ[8] ಪಲ್ಲವಿಸುವಿನಂ ೭೩

---

1 . . . ನಾ (ಕ) ಗೋಪಾಲಕನಾ (ಘ) 2 ಕ (ಕ) 3 ಸಿಂ (ಕ ಖ) 4 ಡಿ (ಕ ಘ) 5 ಬೆಳ್ನೆ (ಗ) 6 ನಂತಿ (ಕ ಘ) 7 ದಾರುವಾಂ (ಕ) 8 ಮಮರ್ದಂದಮಲ್ಲಿ (ಕ ಗ ಘ)

ಒಱಗಿದ ಕಟುಮೆಯ ಕಂಪಿಂ
ಗೆಱಗಿದ ಮಱದುಂಬಿ ಸಮರತೋತ್ಕಟರಸದಿಂ
ಪೆಱಸೊಸಲೊಳಲೆವ ಕುರುಳಂ
ಪೞವಱದೀಡಾಡುವಂದಮಂ ನೀಡುವಿಸಂ ೭೪

ಅನಿಲಹತಿಯಿಂದೆ ತುಂತು
ರ್ವನಿಗಳ್ ಪರಿನೀರ್ಗಳಿಂದಮೊಗೆದುದ್ಧತಮೋ
ಹನಹತಿಯಿಂ ಝುಲ್ಲೆನೆ ಮೇ
ಗೆ ಸೆಗೆದ ತೆಳ್ವದದ ಸೀವರಮು[1]ನಿ[1]ಟಿಸುವಿಸಂ ೭೫

ಕೃತಕೂಜತ್ಕಂಠ ನಾನಾವಿಧಕಲಮಣಿತಂ ಫುಲ್ಲಗಲ್ಲಪ್ರಹಾರೋ
[2]ದಿ[2]ತನಾದಂ ಗ್ರಂಥಿಸಂಘಟ್ಟಸ[3]ಪಟುರಣಿ[3]ತಂ ಪ್ರೋತ್ಫಣಾಹಸ್ತಸಂ[4]ತಾ
ಡಿ[4]ತಮುಸ್ರೋತ್ಸ್ಮುಕ್ತಘೋಷಂ ಸಮತಳಹತಸ್ಸೈತಂಬಬಿಂಬಾರವಂ ದಿ
ಕ್ತತಿಯಂ ತಳ್ಕೈಸೆ ವೇಗೋದ್ಧತರತಿ [5]ಮೆ[5]ಱೆದಳ್ಪೋಪಸೊಳ್ಪೋಪಿಯೊರ್ವಳ್ ೭೬

ಅದಂ ಕೆಳಗಿವಿಗೇಳುತ್ತುಂ ಮಕರಂದನ ಮೊಗಮಂ [6]ತ[6] ಮುಗುಳ್ನಗೆಸಗು
[7]ತ್ತುಮಿಾಕ್ಷಿಸಿ ವಿಕಿರ[7]ನಿಕರಮಂ ಸೆರಪುವಂದಮಲ್ಲದಿದು ಸೆರೆವಂದಮ[8]ಲ್ಲದೆಂ[8]ದು
ಸುಡಿಯುತ್ತುಂ ನಡೆಯೆನಡೆಯೆ

ಪಾವಸೆ [9]ಪರ್ಬುಗೊಂಡ[9] ಪುಳಿಸಂ ಜಘನಂ ಗಿಳಿ ತಿಂದ ತೊಂಡೆ ಕೆಂ
ಪಾವರಿಸಿರ್ದ [10]ಪು[10]ಣ್ಬುಟಿ ಪಯಃಪದಪದ್ಧತಿಗಳ್ [11]ನಖ[11]ಕ್ಷತಂ
ಪೂವಿಡಿದಿರ್ದ [12]ತೀರಕುಜಜಾಲ ಮಲಮುರ್ಡಿ[12]ಯಾಗೆ ಸೂಳೆವೋಲ್
ಶೈವಲಿನೀವಿಲಾಸಿನಿ ಕರಂ ಮೆಱೆದಳ್ ಶಫರೇಕ್ಷಣಂಗಳಂ ೭೭

ಆತೋಱೆಯ ತಡಿಯೊಳ್—
ಬೇಲಿಯಸೇಂ [13]ಕಿ[13]ತ್ರಸೊ [14]ಜಾ
ಜ್ವೇ[14]ಲಿಯೊಳಲರಂಬಸಂಬಿನಾಗರಕೆಸೆ ಬೆ
ಳ್ವೋಲಗಿಸೆ ಸನೆಯ ಜಾದಿಯ
ಸಾಲೇಂ ಸುತ್ತಿದುವೊ ಪುಷ್ಪವಾಟಾವಳಿಯಂ ೭೮

---

[1] ನ (ಖ) [2] ದ್ಧ (ಕ) [3] ಪಟುರಟಿ (ಕ) ಮಧುರಣಿ (ಘ) [4] ತ್ರಾಟಿ (ಕ ಘ) [5] ನೆ (ಕ) [6] ನೋಡಿ (ಖ) [7] ತ್ತುಂ ಈಕ್ಷಿಸುವ ವಿಟ (ಖ) [8] ಲ್ಲಿಂ (ಖ) [9] ಪುರ್ಬುಗಂದು (ಕ ಘ) [10] ಪ (ಘ) [11] ಕರ (ಘ) [12] ತೀರ . . . ಜಲಂಮುಡಿ (ಕ) ಪೀರ್ವ ನಿಡು ಜಂಬುದಳಂ . . . (ಗ) ಪೀರ್ವ ನಿಡು ಜುಂಜುಗಳಿರ್ಮುಡಿ (ಘ) [13] ಕೆ (ಕ ಘ) [14] ಪಾಳಾ (ಕ) ಬೆಳಾ (ಘ)

ಅಲ್ಲಿ ಪೊಕ್ಕಿರ್ದರುಂ ಜಿರಿಮುಗುಳ್ಗಳಂ ನನೆಗಳುಮಂ ತಿಱಿದು [1]ತುಱುಂಬಿ[1]—

ತಡಿ [2]ಕಣ[2]ಕಾಲುದ್ದಂ, ಕಿಱು
ದೊಡೆಯುದ್ದಂ ಪೋಗೆವೋಗೆ, ಪೆರ್ದೊಡೆಯುದ್ದಂ
ನಡುನೀರೆನೆ ಪಾಯ್ದರ್ ಕಾ
ಲಡಿಗಳ ಸುಣ್ಮಾಣಲನೞಿದು ಪರಿವಾ ನದಿಯಂ ೭೯

ಪಾಕ[3]ಕುಶಕಾಶ[3]ವಿಶದಂ
ಕಾಕಾಂದೋಳಾತ್ಮ[4]ಗುಪ್ತ್ಯ[4]ಲಾಬೂ ನಿಗ್ರ್ಗಂ
ಡೀ ಕೃಷ್ಣಲಾಮರೀ,ಬಿಂ
ಬಾಕೀರ್ಣಂ ತನ್ನದೀ [5]ತಟಂ[5] ಕಡುರಯ್ಯಂ ೮೦

ಆನದಿಯ ತೀರದೊಳ್ ಸುರ
ಧೇನೂಪಮಧೇನು [6]ತತ್ತ[6] ತೋಷಂ ವಿಹಿತಾ
ನೂನಮದವೃಷಘ[7]ಘೋ[7]ಷಂ
ತಾನಿರ್ಪುದು ವತ್ಸವಿಪುಲ[8]ಘೋ[8]ಷಂ ಘೋಷಂ ೮೧

ಕಱುವಂ ದೂರ್ದಿಸಿ ಮೆಲ್ಲನೊಕ್ಕು ತುಱುವಂ ತಾ[9]ಯ್ದಾ[9]ಡಿಸೊಳ್ಬಿಟ್ಟು ಮುಂ
ದುಱುವಾಯ್ತೆರ್ಪಳಗಂದಿಗಳ್ ತೊಱೆದು ತೋರಂಬೆತ್ತ ಬಳ್ಗೆಚ್ಚಲೊ
ಳ್ಪೊಱೆಯಂ ಪೆರ್ದೊಡೆಯಿಂದಿಱುಂಕಿ ಮೊಲೆಯಿಂ ಪಾಯ್ತರ್ಪ ಪಾಲಿಂದೆ ಪಾ
ಲ್ದೊಱೆಯಂತಾ ತೊಱೆಯುಪ್ಪುದೆಂದೊಡದನಿನ್ನೇನೆಂದು ಬಣ್ಣಿಪ್ಪುದೋ ೮೨

ತುಱು ನೀರ್ಗೆ ಕವಿ[10]ವ್ರೊ[10]ಡಂತಾ
ತೊಱೆ ಪರಿಯು[11]ಡುಗಿ[11]ರ್ಪುದಿನಿಸುಜೀಗಮ[12]ದೆ[12]ನಲಾ
ತುಱುಪಟ್ಟಿಯ ತುಱುಗಳನೇ
ತೆಱದೊಳಮಾಂತೆಱೆಯೆ ನೆಱೆವೆ ಪೊಗೞಲ್ ನೆಱೆಯೆಂ ೮೩

ಪಂಕಿಲಮಾಗಿ ಗೋಕುಲದ ಗೋಮಯದಿಂ ನಡೆಗೊಳ್ವ ಘಾತದಿಂ
ದಂ ಕದಡಾಗಿ ಮೆಲ್ಕಿಱುವ ಮೆಲ್ನೊರೆಯಿಂ ನೊರೆಯೇಱು ಮೂತ್ರದಿಂ
ದಂ ಕಡು [13]ಪ್ರೊ[13]ರಮೇಱು ಜಿಡೆ ಬಂದವೊಲಾ ತೊಱೆಯುಂದಕಾಲಕೂ
ಲಂಕಷಮುಪ್ಪುದುಂ ಕೆಳಗೆ ಪಾಯ್ವ ಪಶುವ್ರಜಮಿಸಾಸಿ ಬರ್ಪುದುಂ ೮೪

---

[1] ತುಂಬಿ (ಘ) [2] ವೊಬ (ಖ) [3] ಕೃಶಕಾಶ (ಕ) ಕೃತಸಾಶ (ಘ) [4] ಕುಪ್ಯ (ಘ) [5] ನಟಂ (ಗ) [6] ತತ (ಕ) ದತ್ತ (ಘ) [7] ಪೋ (ಕ ಖ) [8] ಪೋ (ಘ) [9] ಯೂ (ಕ) [10] ದೊ (ಕ ಘ) [11] ಡಿದ (ಕ) [12] ನೆ (ಕ ಘ) [13] ವೋ (ಕ)

ಕಂಡು [1]ಗೆ[1]ಡೆಗೊಂಡು ಗೋವರ
ತಂಡಂ ಬೊಬ್ಬಿಱಿಯೆ ಮುಗುಬ್ಬು ನೋಡಿ ಮಹೀಭೃ
ನ್ಮಂಡನನುಂ ಮಂತ್ರಿಯುಮಾ
ಪಿಂಡನೆ ಕಡೆಗಾಣದಂತು ಕೌತುಕಮುತ್ತರ್ ೮೫

ಅಂತಾ ವಿರಾಟನ ತುಱುವಿಂಗಂ ನಂದಗೋಪನ ಗೋವೃಂದಕ್ಕಂ ಪಾಲೊಳಂ ಶೀಲದೊಳಮಳವಿಯೊಳಂ ಬಳವಿಯೊಳಂ ಅಗ್ಗಳಮೆನಿಸಿ [2]ಕಾಱ್ಬುತ್ತುಱುಗಳಿಂ[2] ಸಮೆಱ ದಡವಿಯುದಿಯೆತ್ತಿದಂತೆಯುಂ ಸಯ್ಪೋಱಡುಗಳಿಂ ಲೋಱಬಿಸರದ ಕಾಡಂ ಕಾಲೆತ್ತಿದಂತೆಯುಂ ಕವಿದ ಕಿವಿಗಳಿಂ ಬಾ[3]ವ[3]ಲಿ ಪಿಂಡು ಪಕ್ಕಮಂ ಬಡಿವಂತೆಯುಂ ಬೀಸುವ ಬಾಲಂಗಳಿಂ ಮಿಸುಪ ಕಚ್ಚೆಯ ಕೆಚ್ಚಲುಣ್ಣೆಗೆ ಪಕ್ಕಿ[4]ಯ ಪಿಂಡು ಪಾಯ್ವಂತೆಯುಂ[4] ಬಣ್ಣವಣ್ಣಿಗೆಯ ಬಣ್ಣದಿಂ ಮುಗಿಲ ವರ್ಣವಾಗಿ ಬರ್ಪ ಗೋಕುಲಮಂ ಮನಂಗೊಂಡು ಮಾನವಮದನನುಂ ಮಕರಂದನುಮಾ ತುಱುಪಟ್ಟಿಯ ತುಱುನೆಲೆಯೊಳ್ ನಿಂದು ನೋಡುತ್ತುಮಿರೆ—

ತ್ವರಿತಂ ಗೋಪಂ ಸಕೋಪಂ ಪೆಱಗೆ ಪರಿಯೆ ಹೂಂಕಾರದಿಂದಳ್ಕೆ ಬೀಗು
ತ್ತಿರೆ ಬಾಯಿಂ ಬಟ್ಟೆ[5]ಯೊಳ್[5] ಸಾಲಿಡೆ ಪಸುನೊರೆಯಿಂ ನಾಂದ ಪುಲ್ ಮಿಳ್ಳಿಗೊಂ[6]ಡ[6]
ಬ್ಬರಿಸುತ್ತುಂ ತನ್ನ ಕಣ್ಣಕ್ಕರೆಯೆ ನಿಕಟದೊಳ್ ಕೇಳ್ದು ಗಾಳ್ಮೆಳೆಸುತ್ತುಂ
ಪರಿತಂದತ್ತೂರ್ಧ್ವದಿಂದಂಬರಿವಿಡೆ ಮೊಲೆವಾಲಂದು ಧೇನುಪ್ರತಾನಂ ೮೬

ಅಡೆಯಂ ಕೋ[7]ದೆ[7]ತ್ತುತುಂ, ಮಾರ್ದನಿಗೆ ಮಸಗುತುಂ, ದರ್ಪದಿಂ ಥಾಯೆ
ಯೊಳ್ಕೋ
ಡಿಡುತುಂ, ಮುಂ ಕಾದಿ ಪುಣ್ದಂತಿಣಿಗೆಱಗೆ ನೊ[8]ಟಂ[8] ಶೀರ್ಣ ಶೃಂಗಾಗ್ರದಿಂ ಮಾ
ರ್ದೊಡೆಯುತ್ತುಂ, ಪಾಯ್ದು ಪಿಂಡಂ ಕಲಕಿ ಕೆಲೆಯುತುಂ, ಬೆರ್ಚಿ ಬಳ್ಳೂಳಿಗಳ್
ಬೆಂ ಗುಡೆ ಗಂಡಂ ನೂಸುತುಂ ಬಂದುದು ಮದವಿದಳತ್ಪಿಂಗಳಾಕ್ಷಂ ಮಹೋಕ್ಷಂ ೮೭

ಎಡಪಿ ಪೆರಲ್ಗಳಂ ದೆಸೆಗೆ ಬೆರ್ಚುತೆ, ಗೋವನ ಗಾಳಿಗೆಯ್ದೆ ಪಿಂ
ಡಡಸುತೆ ಕಂದಮಂ ನೆಗಪಿ ನೋಡುತೆ ಪಕ್ಕಮನಗ್ರಪಾಲದಿಂ
ತೊಡೆಯುತೆ ಕರ್ಣಮಂ ತೆಱೆದು ತಿತ್ತಿರಿಗಾಳೆಯನಾಲಿಸುತ್ತೆ ಪಿಂ
ಡೊಡೆಯದೆ ಕೂಡಿ ಬರ್ಪ [9]ಪಲ[9]ವಾಕಳನೀಕ್ಷಿಸಿದಂ [10]ನರಾಧಿಪಂ[10] ೮೮

ಬರಲಾಱದೆ ಪೆರ್ಗೆಚ್ಚಲ
ಭರದಿಂದಂ ಪೆಱಗು ಕುಸಿಯೆ ಪೊಱೆಯುಂ ಕಳೆವಂ
ತಿರೆ ತೊಱೆದ ತೋರಮೊಲೆಗಳಿ
ನಿರಿವಿಡುತುಂ ಬಂದು[11]ವಂದು[11] ಪಯಗಳ್ ಪಲವುಂ ೮೯

---

[1] ಗ (ಗ) [2] ಕಾಲ್ಬುಱುಗಲಿಂ (ಕ) ಕೋಱ್ಬುಱುಗಲಿಂ (ಫ) [3] ದ (ಕ) [4] ಬಱಗು ವಂತೆಯುಂ (ಖ) [5] ಗಳ್ (ಕ) [6] ಡು (ಕ ಫ) [7] ಡೆ (ಗ ಫ) [8] ಣಂ (ಕ) [9] ಪಿರಿ (ಕ ಫ) [10] ಕುಮಾರಕಂ (ಫ) [11] ವಲ್ಲಿ (ಫ)

ಕಱು ಪೆಱಗುೞಿದಿರೆ ಹೂಂಗುಡು
ತೞುಚುತ್ತುಂ ಮಗುೞ್ದು ಮೂಸುತುಂ ಪೊಲಸಂ ಪಱಾ
ಸೋಱೆಯುತಿರೆ ಪಿಂತೆ ಕೆಚ್ಚಲ
ನಿಱುಂಕಿ ನಡೆತಂದುವೀಂದ ಪಯಗಳ್ ಪಲವುಂ ೯೦

ಪರವತ್ಸಂಗಳ ಬೞಿಯಂ
ಪರಿಗೊಳುತುಂ ತೋಱಿದ ಗೊಂತಮಂ ಪಿಡುತುಂ ಹೂಂ
ಕರಿಸುತ್ತುಂ ಪೋಪಗ್ಗದ
[1]ಪು[1]ರುಳಿಗಳಂ ಮಿಗೆ ಮರಲ್ದು ನೋಡಿದನಾಸಂ ೯೧

ಕಡುಗೊಬ್ಬಿದ ಕಡಸುಗಳಿಂ
ಕಡೆಯೊಳ್ ಬರುತಿರ್ಪ ಧೇನು ಬಡವಾಗಿರ್ದುಂ
ಪಿಡೆ ಕರಮೆಸೆದುದು ಚಾಗಿಯ
ಬಡತನಮುಂ ಬಿಳನ ಸಿರಿಯುಮಸಗ್ಗಳಮಲ್ತೇ ೯೨

ಪೊಸನಸೆಯ ಸೊವಡನಾಘ್ರಾ
ಣಿಸಿ ಮಣಿಕದ ಮಿಡುಕುಗಜ್ಜೆಯೊಳ್ ಮೊಗವೆತ್ತು
ತ್ತೆಸೆದುದು ವೃಷಮಮರರಸೇ
ಡಿಸುವವೊಲೇನುಂಟೆ ನಿಮಗಮೀ ಸುಖಮೆನುತುಂ ೯೩

ಪಿರಿದುಂ ಬಾಯ್ವಿಟ್ಟೆಣ್ಣೆ ಗಿಣ್ಣೋಳ್ ತಳರದಿ ವನದೊಳ್ ಮುದ್ದು ಗೋವೃಂದದೊಳ್
ಬಂ
ಘುರಪಾಂಸುಕ್ರೀಡೆ ವತ್ಸಂಗಳೊಳನವರತಸ್ತನ್ಯಪಾನಂ ಸುಧೇನೂ
ತ್ಕರದೊಳ್ ತಾನಾಗೆ ಗೋವ್ಯೂಹದ ಬೞಿವಟಿಯಂ ಮೆಚ್ಚಿ ಬರ್ಪಂದದಿಂದಂ
ಬರುತಿರ್ದರ್ ಮೊತ್ತದಿಂ ವಲ್ಲವರಳಿ[2]ಕ ಲಲತ್ಪ[2] ಲ್ಲವರ್ ಲೀಲೆಯಿಂದಂ ೯೪

ಅಂತು ಗೊಂದಣಿಸಿ ಬಂದು ಪಟ್ಟಿಗಳಂ ಪುಗುವ ಪುಷ್ಪಾಂಗಂಗಳಪ್ಪ ಗೋವೃಂದಂಗಳನಾನಂದದಿಂ ನಿಂದು ನೋಡುತ್ತಮಿರ್ದು—

ಕಟ್ಟಲೆ ಕವಿಯದ ಮುನ್ನಂ
ಮಾರ್ತಂಡನುಮಸ್ತಗಿರಿಗೆ ಸಾರದ ಮುನ್ನಂ
[3]ಸಾರ್ತಂ[3]ದರ್ ಗೋಧೂಳಿಯ
ಪೊಟ್ಟುಱೊಳಾ ಪಟ್ಟಿಗಾಗಿ ನೃಪಸಚಿವರ್ಕಳ್ ೯೫

ಯುದ್ಧರಸಲಂಪಟಪ್ರಪ
ಟೂದ್ಧತಿವಶವೃಷವಿಷಾಣವಿಷಮಿತಕಷಣೋ
ದ್ವಿದ್ಧತವಹದಗ್ಧಂ ಕಲು
ಷೋದ್ಧೂಮಂ ತದ್ಬಹಿಃಪ್ರದೇಶ[4]ದೊಳ್[4]ಸೆಗುಂ ೯೬

[1] ಮು (ಕ ಘ) [2] ಶಲಲತ್ಪ (ಕ) ಕಸಲತ್ಪ (ಗ) [3] ಎಯ್ತಂ (ಕ) [4] ದಿಸೆ (ಕ ಘ)

ವಿದ್ರುತಪಶುಪದಹತಿಪತಿ
ತಾದ್ರಿಪ್ರಭಗೋಮಯೋಚ್ಚಯಂ ಸಮದವೃಷೋ
ಪದ್ರವದರಿದ್ರಬಾಲವ
ಟದ್ರುಮಮೆಸೆದಿರ್ದುದದಱ ಬಾಹಿರದೇಶಂ ೯೭

ನಿರ್ಮಿಸಿದ ಗೋಕುಲಕ್ಕೆ ಚ
ತುರ್ಮುಖನೀಕ್ಷಿಸಲೆ ಬಂದನೆಂಬೀ ಭ್ರಮೆಯಂ
ನೂರ್ಮಡಿಸಿದುದಾಘೋಷಬ
ಹಿರ್ಮಹಿಯೊಳ್ ಸಟ್ಟ [1]ಗೊಲ್ಲ[1] ದೇವತೆ ಸತತಂ ೯೮

ನಱುನೆಯ್ಯಾಱದ ಸಿರಿಯಂ
ಮೆಱೆಯಲೆ ಪೊಂಗಳನೆ ಗೋಪಿಯರ್ ಕೆದಱಿದವೋಲ್
ತುಱುವೆಯ ನೆಗ್ಗಿಲ ಪೂಗಳ್
ತಱುಪಟ್ಟೆಯ ಪೊಱಗೆ ತುಱುಗಿ ಕರಮೆಸೆದಿರ್ಕುಂ ೯೯

ಕೆಲಕೊಱಗಿರ್ದ ಬಲ್ಸರಿಯಂ ಬಲಗೈ ಜಡಿದೊಪ್ಪೆ ತೂಗೆ ಸೀ
ಳ್ದಲೆದೆಡೆಗೈಯೊಳಾವರೆಯ [2]ಪಂದಳಿರ್ಗಳ್ನಡೆ ಗೇಡುಮಾ[2]ಡೆ ನೋಂ
ಕಿಲ ಕೊಱೆ ತೀವಿ ಕಟ್ಟೆ ಕೊರಲೊಳ್ ಮಸೆದ್ಯೆವದ ಪೊನ್ಸೊಳೊಪ್ಪಿದರ್
ಕೆಲಬಲದೂರ್ಗೆ ಪೋಗಿಯಳೆ ಮಾಱ ಮಗುೞ್ತರುತಿರ್ಪ ಗೋಪಿಯರ್ ೧೦೦

ಒಲೆದು ತಳಂಗಳಿಂ ಘಟಿಲೆನಲ್ಮುಡುಪಿಂ ಪೊಡೆ[3]ದೆ[3]ತ್ತಿ ಪೋಲ್ದಿದಂ
ಮೊಲೆಮುಗುಳ್ಗಳ್ತೆಱಂಬೊಳೆಯೆ ಬಾಯ್ದೆಱೆಯೊಳ್ ರಸನಾಗ್ರಪಲ್ಲವಂ
ಮಲೆದು ಮರಲ್ದು ಸುತ್ತಿ ಸುೞಿಕಲ್ದನಿ ಪೆರ್ಚಿರೆ ಬೆಚ್ಚದಾಗಿ ಸೂ
ೞಲಿಗೆಲೆಯುತ್ತುಮಿರ್ಪ ತರುಣೀಜನಮಂ ನೃಪನೊಲ್ದು ನೋಡಿದಂ ೧೦೧

ಅಂತು ನೋಡಿ—

ಆಕಳ್ಗಳಿಲ್ಲದೆಯುಮೆಸೆ
ವಾಕಳ್ಗಳ ನೊರ್ಕು ಸಿಲ್ಕಿ ನಿಂದುದನಿಂದಾ
ನೇಕಗಲ್ಪೆನೆನುತೆ ಮತ್ತಾ
ನೇಕಗವಾಶ್ರಯಮನುರ್ವಿಗಾಶ್ರಯನಾಗಳ್ ೧೦೨

ಅಂತು ಪೊಕ್ಕಂ; ಅದು ರಾಜಮಂದಿರದಂತೆ ಮಹಿಷೀಪದಾಧಿಷ್ಠಿತಮುಂ, ಸುಭಟಭುಜದಂತೆ ವಿಭಾಸಿಧೇನುಸ್ಥಾನಮುಂ, ಸ್ಮರನ ಸಿರಿಯಂತೆ ಸುರಭಿಶೋಭಿತಮುಂ, ದರಿದ್ರಕಾಮುಕನಿಕರದಂತೆ ಸುಪ್ರಕಟ[4]ತಾ[4]ರ್ಣಕೋಪಚಯಮುಂ, ಕತಕಫಲದಂತೆ

---

[1] ಗೋಲ (ಗ ಘ) [2] ಪಜ್ಡಳಿರ್ಗಳ್ನಡೆಗೆಯ್ದುಮಾ (ಕ) ಪಣ್ಣದಗಳ್ಗಡೆಗೆಯ್ದು ಮೂ (ಘ)
[3] ದೊ (ಕ ಘ) [4] ಕ (ಕ)

ವಿವಿಕ್ತಮಹಾವ್ರಜಮುಂ, ಚಂದ್ರೋದಯದಂತೆ ಹಿಮಧವಲಮಹೋದಧಿಸಮೃದ್ಧಿಯುಂ, ನಾಥವಂಶದಂತೆ ಸುಧಾಮೋದಿತಕ್ರಮಹಿತಮುಂ, ಚೈತ್ರೋತ್ರಮಾಸದಂತೆ ವೈಶಾಖಶಬ್ದಸಮಭಿಧೇಯಮುಂ, ದಶರಥಪ್ರಸೂತಿಯಂತೆ ಸದಾಸವನೀತಕಾಂತಮುಂ, ವಿಟವೃ[1]ತ್ತದಂ[1]ತೆ ಸರಾಗೋಪನತನಿತಂಬಿನೀಜನಮುಂ, ಸುಪ್ರಯುಕ್ತಪ್ರಮಾಣದಂತೆ ವಿಗಳಿತಾಸವಸ್ಥಿತಿಯುಂ, ವನವರೂಥದ್ವಿತಯದಂತೆ ಕರಿಪಾಕೀರ್ಣಮುಂ, ಕಾಲಕೃಷ್ಣನಾಭಿಕುಲತ್ರಿತಯದಂತೆ ವತ್ಸರಾಜವೃಷಭವಿಭೂಷಿತಮುಂ, ಮಾರ್ತಂಡಮಹಿಪಮುನಿತಸುಮಹೇಂದ್ರಚತುಷ್ಟಯದಂತೆ ಸುರಭಿರಾಜ್ಯ ಪರಿಮಳಪವಿತ್ರಮುಮೆನಿಸಿದುದಂತುಮಲ್ಲದೆಯುಂ—

ಮದಮಾತಂಗದವೋಲ್ ಪಶಾವಿಳಸಿತಂ ಸತ್ಕ್ಷತ್ರಿಯಪ್ರಾಜ್ಯರಾ
ಜ್ಯದವೋಲ್ ಸಂಗತಸಂಧಿನೀತಿ[2]ನಿರತಂ[2] ನೀಹಾರರುಕ್ಚಿತ್ರವೃ
ತ್ತದವೋಲ್ ರಾಜಿತರೋಹಿಣೀಪರಿಗತಂ ಶ್ರೀಮದ್ದಯಾಮೂಲಧ
ರ್ಮದವೋಲ್ ವಿಶ್ರುತಸುವ್ರತಾಚರಿತಮೇಂ ಚೆಲ್ವಾಯ್ತೊ ಗವ್ಯಾಶ್ರಯಂ ೧೦೩

ಆಪ್ರಸ್ತಾವದೊಳ್—

ಕಱುವಂ ಬಿಡು ಕಱೆ ತೊಳೆ ನೀ
ರೆಱೆ ಕಂದಲನೊಱಸಿ ತೊಳೆ ತಗುಳ್ದೆವಾವಂ
ತುಱುಸು ತಳೆಯಿಕ್ಕು ತಡೆಯದೆ
ಮುಱುವಂ ಸುರಿಯೆಂಬ ಸರಮೆ ತುಱುಗಾರ್ತಿಯ[3]ರಾ[3] ೧೦೪

ಆಗಳ್

ಅಡರ್ದು ಮೊಲೆಗೊಡಗಳಡಸಿರೆ
ಮಡಗಳ್ ಪೊಱಪಾಱ ಪೊಱೆಗೆ ಕೆಡೆದಿರೆ ಕಱೆಯಲ್
ಪಡೆಯದೆ ಗಡಿಗೆಯನೊರ್ವಳ್
ಬೆ[4]ಡಂಗಿ[4] ತುಱುಗಾರ್ತಿ ಪತಿಯ ಕೈಯೊಳ್ ಕೊಟ್ಟಳ್ ೧೦೫

ಪಿಡಿಗೆ ಕೆ[5]ಡು[5]ದೊಱೆದ ಮೊಲೆಯುಳ
ವಡದೊಡೆ ಮೊಸೆವಿಡಿದು ಪಾಲ[6]ನೇಱ[6]ಸಿ [7]ನೊ[7]ರೆಯುಂ
ತೊಡೆದು ತುಱುಗಾರ್ತಿ ಕಱೆದಳ್
ಗಡಿಗೆಯ ಪಾಲುರ್ವಿ ಘಮುಘಮೆಸುತಿರೆ ಪಯಮಂ ೧೦೬

ಇರಿದೊಂದೆರಡಿರಿಯಿಂ ತೀ
ವಿರೆ ಕಂದಲ್ ತನ್ನ ಬಿಳಿಯ ಕಣ್ಗಳ ಬೆಳಗಿಂ
ಸೊರೆವಾಲಿಂ ತೀವಿತೆಗೆ
ತ್ತಿರದೆಬ್ಬವಳಾತ್ಮಪತಿಯನೇಂ ಸಗಿಸಿದಳೋ ೧೦೭

---

[1] ತ್ರಿಯಂ (ಕ ಘ) [2] ಸಹಿತಂ (ಘ) [3] ರೊಳ್ (ಘ) [4] ವಗಿಂ (ಘ) [5] ರೆ (ಘ)
[6] ನಕ್ಕಿ (ಘ) (ಘ)

ಮಡದಿ ನಿತಂಬಮಂ ಮಡದಿನಾಂತು ಕೆಲಕ್ಕೆಱಗಿರ್ದ ಕಂದಲಂ
ತೊಡೆಯೊಳಿಱುಂಕೆ ಬಕ್ಕಿ ನಡು ಬಿಮ್ಮಿದಿ ಪದೆರ್ದೊಡೆ ದುಗ್ಧಧಾರೆಯೊ
ಳ್ಗುದುದಿನಾಡೆ ಕಣ್ಬೆಳಗು ಬಳ್ಳುಡಗಂ ಬಗೆದೊತ್ತೆ ಕೈಗಳಿಂ
ಸಿಡಿದು ಕುಚಾಗ್ರದೊಳ್ ತುಱುಗೆ ಬಾಲ್ವನಿಗಳ್ ಕರೆದಳ್ ಘಟೋಧ್ನಿಯಂ

ಓಹೋ ಹೊಗಬುದಿರೆಸಿಸಿದು
ವಾ ಹದದೊಳ್ ಬಲಧಿಘೋಷಮಂ ಧೇನುಪ್ರ
ಶ್ರೌಹಿದ್ರೋಣದುಘಾದ್ವೃತ
ದೋಹನಘನಧೀರನುಗ್ಧಧಾರಾಧ್ವನಿಗಳ್ ೧೦೮

ಅಂತು ಕೋಟಿಗೆಱಿಸಟ್ಟಾದ ಕುಱುಪ್ಟೆಯಂ ವಿಸ್ಮಯಂಬಟ್ಟು ನೋಡುತ್ತುಂ ನಡುವಿರುಳಾಗೆ ಮನೋನಯನಾನಂದನಮನೋಹರ ರೂಪಕನಪ್ಪ ಮಾನವನುದನ ನಾತ್ಮಮಿತ್ರಂ ಬೆರಸು ನಮಚಿತಪ್ರದೇಶದೊಳ್ ವಿಶ್ರಮಿಸಿ ಬೆಳಗಪ್ಪ ಜಾವದೊಳ್—

ಇನಿಸಂ ಪೊಕ್ಕೂರು ಮಿಕ್ಕೋಸರಿಸಿದ ಜರಣಂ ಕೋಟೆಯಂ ಬೀಱು ಕುಂಭ
ಕ್ಕೆ ನಿತಂಬಂ ಸುತ್ತಿ ನೇಣಂ ಕೆಗೆವ ಪೃಗುವ ಕೈಗಳ್ ಬೆಡಂಗಾಗೆ ತುಂಗ
ಸ್ತನಯುಗ್ಮಂ ತೂಗೆ ನೂತ್ಕಾರದಿನುಸಿರ್ದುತುಂ ಲೋಳವಾಯುರ್ಜೆಯೊರ್ವಳ್
ತೊನೆಯುತ್ತುಂ ಪಾಡಿ ಪಾಲಂ ಪೊಸೆದಳಸದಳಂ ಪೊಣ್ಮೆ ಘರ್ಮಾಂಬುಜಾಲಂ ೧೦೯

ಕಡೆಗೋಲ ಪೊಯ್ಲಿನಿಂದಂ
ಸಿಡಿದು ಶರೀರದೊಳೆ ತುಱುಗೆ ತಕ್ರಕಣಂಗಳ್
ಕಡೆದೇಬ್ಬೆಳಿಸೆದಳಾ ಪಾ
ಲ್ಗಡಲಿಂ ಪೊಱಮಟ್ಟ ಪೊಚ್ಚ ಪೊಸಸಿರಿಯಿರವಿಂ ೧೧೦

ಕಡೆವಾಕೆಯ ಮುತ್ತಿನ ಕ
ಪ್ಪಡಿಯಂತಿರೆ ತೊಳಗೆ ಘರ್ಮಜಲಬಿಂದುಗಳಂ
ಬಿಡುವ ಮೊಗಮೆಸೆದುದಾ ಪಾ
ಲ್ಗಡಲೊಳ್ ತಾಂ ಪುಟ್ಟಿದಮೃತಕರಬಿಂಬದವೋಲ್ ೧೧೧

ಅತಿಘನತಕ್ರಾಟಪರಾ
ಹತಿಗಂ ಪೊಸರೊಡೆಯುದೆಂದು ಬೇಸತ್ತಪೊಲು
ನ್ನತಕುಚೆ ಬಱಿಲ್ದು ನುಡಿಯ್ತು
ತ್ತ್ರಿತಿರಘನದನೆರ್ವ[1]ಳಿರಲೆ[2]ದು ಪೊಸರಂ ಪೊಸೆದಳ್ ೧೧೨

---

[1] ದರ್ಹವ (ಘ) [2] ಛುಲಿ (ಘ)

ಅನಿಮಿಷತೆ ಪೊರ್ದಿ ದಾನವ
ವಿನಿಯೋಗದೆ ಕಡೆದು ಪಲವು ಸಿರಿ[1]ವಡೆ[1]ದಾ ಸ್ತ್ರೀ
ಜನಮಲೆದುದು ಸಿರಿ[2]ಗೆಂದಂ[2]
ದನಿತಾಯಾಸಕ್ಕೆ ಸಂದ ಸುರದಾನವರಂ ೧೧೩

ಆಪ್ರಸ್ತಾವದೊಳ್—

ಕಾಯ್ಸತ್ತಿಂ ಕಟ್ಟಿಸೋವೋ ಬೊಬೊಬೊಬೊಬೊಬೊಬೋ ಕೂಗು ಕೂಕೂಗು ಕೂಸಾಯ್
ಸಾಯ್ತಾಯೆತ್ತೆತ್ತ ಪತ್ತೊತ್ತೊರಸಿ ಬೆರಸು [3]ಬಾ[3]ಯ್ತಾಡಿದೇಸೆಂದು ನಿಂದಾ
ರಯ್ಸುತ್ತೊತ್ತೆತ್ತುತ್ತ ಬಿಲ್ಲಂ ನಡೆದಿಡು ದಡಿಯಂ ಕೋಳ್ಕೊಳೆಟ್ಟುಯುದ್ದು ಬೈಯ್ಪೊ
ಯ್ಕೊಯ್ಸೀಳ್ಕೊಳ್ಕುತ್ತು ಕೊಲ್ಕೊಲ್ಕೆಡೆ ಕಡೆಕಡೆಯೆಂಬಬ್ಬರಂ ಪರ್ಜಿತೆತ್ತಂ ೧೧೪

ಆದಂ ಕೇಳ್ದು ಕಾಳೆಯುಂ ಸೂಳೈಸುವ ತಿತ್ತಿರಿಯುಸೊತ್ತುವ ಕೊಳಲನೂದುವ ಕೊಂಬಂ ಪಿಡಿವ ಗೋವರ ಕಳಕಳಕ್ಕೆ ಕೆ[4]ಳದು[4]ರ್ ಬಿಲ್ಲನೇಱಿಸಿ ಪಱಿವ ಬಿಲ್ಲಾಳ್ಗಳುಮಂ, ಸುರಗಿಗಿತ್ತು ಪಱಿವ[5]ಸಿರಗಲಿಗ[5]ಳುಮಂ, ಬಡಿಕೋಲಂ ಪಿಡಿದು ಪಱಿವ ಬದಗರುಮಂ, ಬಿಟ್ಟರನಾಂತು ಪಱಿವೊಟ್ಟಜಿಕಾಱರುಮಂ, ಇಟ್ಟಿಯನೆತ್ತಿ ಪಱಿವ ಜಟ್ಟಿಗ[6]ರು[6]ಮಂ, ಕೀಲ್ಗೊಂಡ ಬಾಳಂ ಬೀಸುತ್ತುಂ ಪಱಿವ ಗೋಸುಗಲಿಗಳುಮಂ, ಕಣ್ಣೋಱೆ ಮೊಗಮಂ ಸುತ್ತಿ ಕುಂಬಿಕ್ಕುತುಂ ಪಱಿವ ಕಡುಗಂದಿಗಲಿಗಳುಮಂ, ಬಿಟ್ಟ ಕಣ್ಣುಂ ಬಿಗಿದ ಮೊಗಮುಂ ಕರ್ಚಿದವುಂಡುಂ ಕಡಿತಲೆಯುಂ ಬೆರಸು ಮೊರೆಯುತ್ತುಂ ಪಱಿವ ಪೆಂಕುಳಿಗಲಿಗಳುಮಂ, [7]ನೆಣ[7]ಗೊರ್ಬಿ ನಿಂದುರ್ಬಿನಿಂ ಪರಿದಳ್ಳೆವೊಯ್ಯೆ ಪೆಱಗಾಲಪ್ಪ ಪೆರ್ಬಾಗಿಲ್ಗಲಿಗಳುಮಂ, ಸಟ್ಟಲಗಂ ಪಿಡಿದು[8]ಬಿ[8]ಟ್ಟ ತಲೆವೆರಸು ತೂಳಂ ಬಂದಂತೆ ಬೊಬ್ಬಿಱಿದು ಪಱಿವಬ್ಬರಗಲಿಗಳುಮಂ, ನೆರವಿಯನುರುಳೆವಾಯ್ದುಗುರ್ವಿಸಿ ಪಱಿವ ಕರ್ಬಸುಗಲಿಗಳುಮಂ, ಡಂಗೆಯಂಗೊಂಡು ಕೆಂಗಲ್ಮಸಗಿ ಪಱಿವ ಮರುಳ್ಗಲಿಗಳು ಮನೆತ್ತೆತ್ತವೆಂದೆತ್ತಲುಂ ತಳರದೆ ತಾಳುಗೆ ಪತ್ತಿ ಬತ್ತಿ [9]ಬಾ[9]ಯ್ತಾಡಿ ನಾಲಗೆಗಿತ್ತು ಕೊಳ್ವ ನಾಲಗೆಗಲಿಗಳುಮಂ, ತಾಱುಂ ತಟ್ಟುಂ ಪಱಿದು ತಾಗಿ ಮೂಗೊಡೆಯೆ ಬಾಗಿವಾಗಿ ಪಱಿವ ಬೆಗಡುಗಲಿಗಳುಮಂ, ತೂಂಕಡಿಂ ತಡದಡಿಸುತ್ತೆರ್ದು ತಡವರಿಸಿ ಕಡೆಗೋಲಂ ನೆಗಪಿ ಬತ್ತಲೆ ಪಱಿವ ತಲೆವಿಡಿಗಲಿಗಳುಮಂ, ಸಂಭ್ರಮದಿಂ ಸಜ್ಜನುರ್ಚಿ ಸುರಿಗೆಯಂ ಬಿಸುಟ್ಟು ಬಱಿಯೊಱೆಯಂ[10] ಕೀಲು[10]ತ್ತುಂ ಪಱಿವ ಕಿಱು[11]ಕುಳರು[11]ಮಂ, [12]ಸ[12]ಡಿಲ್ದ ಪಾಲಿ[13]ಗೆವಂದಱಂ[13] ಕರ್ಚಿ ಕೈಯಡ್ಡಾಯುಧಮನೀಡಾಡಿ ದಡಿಯುಂ ಕೊಂಡು ಪಱಿವ ದಡಿಗವೀರರುಮಂ, ಪಚ್ಚಡಮಂ [14]ದುಂ[14]ಡನಾಗಿ ದಂಡೆಯಂ ಸುತ್ತಿ

1 ವಂ (ಕ ಫ) 2 ಗಂಡಂ (ಕ) ಗಂದಂ (ಫ) 3 ಕ (ಫ) 4 ರಳ್ದು (ಕ ಫ) 5 ಸೆರಗರಿ (ಖ ಗ) 6 ಳು (ಕ) 7 ನಳೆ (ಕ) ಅಳ್ಕೆ (ಫ) 8 ಬ (ಕ) 9 ಪೊ (ಕ) 10 ತಿರುಹು (ಫ) 11 ವಲಿಗಳು (ಫ) 12 ಸಿ (ಕ) 13 ಗೆದಪದರಂ (ಫ) 14 ದಿಂ (ಕ ಫ)

ಸೂ[1]ಸ[1]ಗೆಯಸೆತ್ತಿ ಪರಿವ ತೆತ್ತಿಗವೀರರುಮಂ, ಬಂಕಿಯಂ ತೂಗಿ ತೇಂಕುತ್ತುಂ ಪರಿವ ಪೈರಿ[2]ವೀರರುಮಂ[2], ಮುದ್ಗರಮುಂ ತಿರಿಪಿ ಪರಿವ ಮುದ್ಗರಿಗಲಿಗಳುಮಂ, ಬಂದೆಸೆಯೊಳಬ್ಬರಮಾದೊಡೊಂದೆಸೆಗೆ ಪರಿವ ಬಂದವಂದಿಗರುಮಂ, ಅಬ್ಬರಕ್ಕೆ ಬಸಿಱುಬ್ಬರಿಸೆ ಬಿಱಿಯಂ ಕೊಂಡು ಬಿಱುವರಿವ ಬೀಱುಗರುಮಂ, [3]ವಟ್ಟೆಱೆ[3]ದು ನಾಂದು ಪೊಟ್ಟಂಬಿಸಿದಡ್ಡಳಮುಮಂ ದಂಡೆಯೊಳ್ಕೋದು ಕೈದುವಂ ಕಾಣದೊಸಕೆಯ ಸೆತ್ತಿ ಪರಿವರಿ[4]†[4]ಗಳುಮಂ, ಪೊಱಮಡುವ ಸಡಗರದಿಂ ಸೂರ್ತಾಗೆ ಸುಲಿದ ಸೊಸಲೊಳ್ ನೆಲಸೆಕಮನಿಕ್ಕಿ ಪೆಂಡಿರ್ ಪಿಡಿಯೆ ಪಿಡಿಯೆ ಪರಿವೊಱಂಟರುಮಂ, ಕೈಯ ಕೈದುವನೆಡೆದು ಕಳೆದುಕೊಂಡ ಪೆಂ[5]ಡತಿ[5]ಗೆ ಕನಲ್ದು ಕೊರಡಸೆತ್ತಿ ಪರಿವ ಕೊರಡಿಗರುಮಂ, ಪಾಱುಕ್ಕಿ ಪರಿವಲ್ಲಿ ಬಾಲಗಚ್ಚೆ ಕಾಲಂ ತೊಡರೆ ಕೆಡೆದೊಡೆದ ಮೊಣಕಾಲೊಳುಪ್ಪಂ ಪತ್ತಿಸಿ ಪರಿವ ಪಾಱುಗಳುಮಂ, ನಿದ್ದೆಗಣ್ಣೊಳೆರ್ದು ಗೂಗೆದಲೆಯಸುದ್ದಂ ನೆಗಪಿ ಪರಿವ ಕ[6]ದ್ದಲಿಗಳು[6]ಮಂ, ಗೂಂಟಮನೆಡಪಿ ಪಾಸಿ ಪರಪಿ ಬೀೞ್ದು ಬಸಿಱ ಪುಡಿಯಂ ತೊಡೆದು ಪರಿವ ತವಕಿಗರುಮಂ, ಎಡಪಿಯೊಡೆದುಂಗುಟದೊಳಂಜೆಯಂ ಕಟ್ಟಿಕೂಂಟುತ್ತುಂ ಪರಿವ ಕಿಱುವಂಟರುಮಂ, ತಲೆಕೆಳಗಾಗಿ ಕಟ್ಟಿದಲಗೊಱೆಯನುರ್ಚಿಬೀೞೆ ಪಿಂಮುಡಿಯುಂ ಪಱಿಯೆ ಪೆಱಗಂ ನೋಡುತ್ತುಂ ಪರಿವ ಪೆರ್ಬಂಟುಮಂ, ಬಱುಗಯ್ಯಿಂ ಪರಿವ ಪತಿಗೆ ಕೈದುವಂ ಕೊಂಡುಯ್ದು ಕುಡುವಯ್ದೆಯರುಮಂ, ಪಾದರಿಗಂಗಿದಿರ್ವರಿದು ಫಳಿಲನೆ ಪಾಯ್ದು ಪೆರ್ಮೊಲೆಯಿಂ ಪೊಯ್ದು ಬಿರಸಿ ಬಿೞ್ದು ಪೊರಳುತ್ತಿರ್ಪ ಪಾಣ್ಬೆಯರುಮಂ, ಫತಿಗಪಾಯಮುಮುಪಪತಿಗೆ[7]ಶುಭೋದಯ[7]ಮುಮಕ್ಕೆಂದು ಮನದೊಳೆ ಮನೆದೈವಕ್ಕೆ ಪರಸಿಕೊಳ್ವ ಪುಂಶ್ಚಲಿಯರುಮಂ, ಪಸುಗೂಸನಮುರ್ಚಿಕೊಂಡೊಳಗಣ್ಗಂ ಪೊರಗಣ್ಗಂ ಬರ್ಪ ಬಾಳಕಿಯರುಮುಮಂ, ಗುಬ್ಬಿಯಂತೆ ಬಾಯಂ ಬಿಡುವ ಗರ್ಭಿಣಿಯರುಮಂ, ಬಱುಗಣ್ಣ [8]ನೀರನೆ[8]ಕ್ಕುವ ಬಂಜೆಯರುಮಂ, ಬಸಿಱಂ ಪೊಸೆದು ಕೊಳ್ವ [9]ಬದ್ದೆ[9]ಯರುಮಂ, ಮುಸುಡಂ ಮೋದಿಕೊಳ್ವ ಮುದುಗಣ್ಗಳುಮಂ, ನೊಸಗೆ ಪಲ್ಲಂ ತಿಸುತ್ತೆ ನೆತ್ತಿಯಂ ಪೊಯ್ದು ಕೊಳ್ವತ್ತೆಯರುಮಂ, ಮುಮ್ಮಟಿಗೊಳ್ವ ಪೆರ್ಮಕ್ಕಳುಮಂ, ಗೋಟಂಡೆಗೊಳ್ವ ಗೋವರ್ಕಳುಮಂ, ಚೀಱಿಕೊಳ್ವ [10]ಕೊಡ[10]ಗೂಸುಗಳುಮಂ, ಬಿಗಡುಗೊಳ್ವ ಬಾಳಕರುಮಂ, ಭಯಂಗೊಳ್ವ ಬೆಳ್ಳರುಮಂ, [11]ಉ[11]ಬ್ಬರಿಸುವ ಕುರುಡರುಮಂ, ಪೆಳವಳಿಸುವ ಕಿವುಡರುಮಂ ಕಂಡು ಪೊಲ[12]ಗೇಱಿ[12]ಯನಾನೆ ಪೊಕ್ಕಂತೆಯುಂ, ಡೊಂಬರ ಬೀಡಿನೊ[13]ಳಬ್ಬರ[13]ಮಾದಂತೆಯುಂ, ಬೆಳ್ಳಿಲಿಯ ಬಿಲದೊಳ್ ನೀರ್ ಪೊಕ್ಕಂತೆಯುಂ, ತುಱುಪಟ್ಟಿಯೆಲ್ಲಂ [14]ಕಿಚ್ಚುಲೆ[14]ಯುಂ ಕಿಬಂದಲೆಯುಂ ಕಲ್ಲಿಯುಂ ಕ[15]ಪಿ[15]ಯುಮಾದ ಪುದಿದೇನೆಂದು ಸಂಭ್ರಮಿಸಿ—

---

[1] ಲಿ (ಕ ಘ) [2] ಗ (ಖ) [3] ವಟ್ಟೆಪಱ (ಕ ಘ) [4] ಮುರಿ (ಕ ಘ) [5] ಡಿರಿ (ಘ) [6] ದ್ದಡಿಗರು (ಕ) ದ್ದೆಗರು (ಘ) [7] ಸಚೋಪಾಯ (ಕ ಘ) [8] ನಿರಿವ (ಗ) [9] ಬಡ್ಡಿ (ಘ) [10] ರೆಱೆ (ಘ) [11] ಟಿ (ಕ) [12] ಗೇರಿ (ಕ ಘ) [13] ಳ್ಬವರ (ಕ) ಳುಬ್ಬರ (ಘ) [14] ಕೆಳತೆ (ಕ) [15] ಳ್ವೆ (ಘ)

ಪವಿಘೋಷಕ್ಕುಜ್ಜುಗಂ ಸಜ್ಜರದಿನಮುರನಾಗೇಂದ್ರನೆಬ್ಬಂತೆವೋಲ
ರ್ಣವಕಲ್ಲೋಲಾರವಕ್ಕುತ್ಫಣಿತಫಣಿಪತಿಸ್ಫೂತ್ಕೃತಕ್ವಾಗ್ರದಿಂ ಕೇ
ಶವನೇಟ್ವಂತಭ್ರನಾದಕ್ಕಾಚಳಮಣಿಶಿಲಾಪಟ್ಟದಿಂ ಸಿಂಹಮೇಟ್ವಂ
ತೆವೊಲೆಟ್ಟಂ ಗೋಪಕೋಳಾಹಳಕಲರ್ವಸೆಯಿಂ ಭಾರತೀ[1]ಚಿತ್ರಜೋರಂ[1] ೧೧೫

ತಾ[2]ಱಿ[2]ವಱಾದ ಕೇಶಮಸಗು[3]ರ್ಗೊ[3]ಸೆಯಿಂ ತೆಗೆದೊತ್ತಿ ಪಾಲೆ[4]ಯಂ[4]
ಮೀಱಿದ ಸುತ್ತಿಸೋಲಿಗೆ[5] ಸೋವೃತುಮಾ[5]ಯತಮಾಗೆ ತೊಟ್ಟು ಮು
ಯ್ಯೇಱಿರೆ ಕಟ್ಟಿ ಕೈವೊಣೆಯನಾಗಡೆ ಜೀವಿಗೆ ಜೀವಮೀವವೋ
ಲೇಱಿಸಿ ಬಿಲ್ಲನಾಜಿವಿಜಯಂ ಜಯವೊಯ್ದು ಸದಾತ್ತರಾಘವಂ ೧೧೬

ಇದು ವಿದಿತವಿವಿಧಪ್ರಬಂಧವನವಿಹಾರಪರಿಣತ ಪರಮಜಿನಚರಣರಮ್ಯ
[6]ಹೈಮಾ[6]ಚಲೋಚ್ಚಲಿತನಖಮಯೂಖಮಂದಾಕಿನೀಮಜ್ಜನಾಸಕ್ತ
ಸಂತತೋತ್ಸಿಕ್ತದಾನಾಮೋದಮುದಿತಬುಧಮಧುಕರಪ್ರಕರ
ಕವಿರಾಜಕುಂಜರ ನೇಮಿಚಂದ್ರವಿರಚಿತಮಪ್ಪ
ಲೀಲಾವತಿಯೊಳ್ ಶರದ್ವರ್ಣನಂ ಪಂಚಮಾಶ್ವಾಸಂ

1 ಜನ್ಮಗೇಹ (ಘ) 2 ಱು (ಕ ಗ ಘ) 3 ವೆರ್ಱ (ಕ ಗ ಘ) 4 ಯಿಂ (ಗ)
5 ನಾವೃತಿಯಾ (ಗ ಘ) 6 ಹರ್ಮ್ಯ (ಕ ಘ)

## ಷಷ್ಠಾಶ್ವಾಸಂ

ಶ್ರೀನಾಥನಂತು [1]ಜೇ[1]ವೊಡೆ
ದಾಸಿನದಂ ವೊಡೆಯೆ ಕೆಲಕೆ ಕೆಡೆದಳುರ್ದು[2]ವೊ[2]ಸ್ತೈ
ಶ್ವಾನರನುರಿಯುದಯತ್ರಟೋ
ದ್ಭಾಸಮೆನಿಸೆ ಮೂಡಸಂಜೆ ಮೂಡಿದುದಾಗಳ್ ೧

ಆ ಧನುವಧರಿತವಿಲಯಾಂ
ಭೋಧರರವಮು[3]ರ್ವಿ[3] ವರ್ಷಿಯಿರವಂ ವೇಳೋ
ರ್ವೀಧರಮಂ ಧೀಂಕಿಟ್ಟು ಪ
ಯೋಧಿಯೆ ಕವಿದಂತೆ ಕಟ್ಟಲೆ ಮಗುಳ್ದುಂ ೨

ಅದಿರೆ ನೆಲನುದಿರೆ ತಾರಗೆ
ಬೆದಱೆ ಸುರರ್ ಕೆದಱೆ ದನುಜರೊಡಱೆ ಫಣೀಂದ್ರಂ
ಮದಿಲಡರ್ವ ಫೇಕದಂತೆವೊ
ಲುದಯತಟಾಗ್ರದಿನುರುಳ್ದನಿಸನಂಬುಧಿಯೊಳ್ ೩

[4]ತು[4]ಷುಱುಲ್ಕೈರಾವತಂ ದರ್ಪಮನೆರ್ದೆಯೊಡೆಯಲ್ಪುಂಡರೀಕಂ [5]ಪ[5]ಣ್ಣಿಂಕಲ್
ಕುಮುದಂ ಕುಂಜಿಕ್ಕಲಾ ಅಂಜನನೆಳವುಗಿ[6]ಡ[6]ಲ್ವಾಮನಂ ಪುಷ್ಪದಂತಂ
ಶ್ರಿತೆಪೆಳಲ್ ತಶ್ವಾರ್ವಭೌಮಂ ಸುಗಿಯಲಗಿಯಲಾ ಸುಪ್ರತೀಕಂ ಸುರುಳ್ದಂ
ಸಮದಿಂದ್ರಂವಹ್ನಿಕಾಲಂ ದನುಜನುದಧಿಪಂ ವಾಯುಯಕ್ಷಂ ತ್ರಿಯಕ್ಷಂ ೪

ಆ ಧ್ವನಿ ಪೊಣ್ಮೆ [7]ವೊ[7]ಯ್ಲುಲುದಿರ್ದಂತೆವೊಲಿರ್ದುದು ತಾರಕಾಳಿ ತಾ
ರಾಧ್ವದೊಳಸ್ತಶೈಲಶಿಖರಾಗ್ರದೊಳಿರ್ದುದು ಚಂದ್ರಮಂಡಲಂ
ಸಾಧ್ವಸದಿಂದುರುಳ್ದು ದೆಸಲಿತ್ತಿದ ತಸ್ಯ ಪತಿಪ್ರತಾಪತಂ
ಗಧ್ವಜದಂತೆ ಮೂಡಿದುದು ಮೂಡಣ ದಿಕ್ಕಿನೊಳರ್ಕಮಂಡಲಂ ೫

ಅಂತು ಯುದ್ಧಸನ್ನದ್ಧನಾಗಿ ಧನುರ್ಗುಣಕ್ವಣಿತಕರಣಪ್ರಣ[8]ಯ[8]ಪಾಣಿಯುಪ್ಪ ಮಂತ್ರಿಪುತ್ರಂಬೆರಸು ರಾಕ್ಷಸರಣಕಳಕಳಕ್ಕೆ ಲಕ್ಷ್ಯಗಣಂ ಬೆರಸು ನಡೆವ ರಾಘವನಂತು ದಾತ್ತರಾಘವಂ ಗಾವಳಿಯ ಬಟೆಯನೆ ನಡೆಯೆ ನಡೆಯೆ—

---

[1] ಜಯ (ಕ) [2] ಡೊ (ಕ ಗ) [3] ರ್ವಿ (ಕ ಗ) [4] ಉ (ಕ ಘ) [5] ಕ (ಘ)
[6] ಯ (ಗ) [7] ಪಾ (ಘ) [8] ಯಿಪಾನೆ (ಕ ಗ ಘ)

ಮಿದುಳೞಿಂದವೊಕ್ಕ ಕರುಳಿಂದಮುಗುರ್ಬಿಪ ಬಿಕ್ಕಿನಿಂದವೊ
ಟ್ಟಿ[1]ದ ನೆಣದಿಂ ಪೊರಳ್ವ ಪೆಣದಿಂ ಬಿಡೆ ಬಿಕ್ಕುವ ಮಸ್ತಕೌಘದಿಂ
ಕೆದಱಿದ ಮಾಂಸದಿಂದೆ ಮಡುಗಟ್ಟಿದ ರಕ್ತದೆ ಕೆತ್ತುತಿರ್ಪ ಖಿಂ
ಡದೆ ಜವನುಂಡು ಕಾಱಿದವೊಲಿರ್ದುದು ಮಾರ್ಗಮದೆತ್ತ ನೋೞ್ಪೊಡಂ

[2]ಮಿಡಿ[2]ಯಿಂ ಬೆಂಬರಮೆಯ್ದೆ ಸೀಳ್ದ ಶಬಸಂಘಾತಂಗಳಂಗು[3]ಷ್ಟ[3]ದಿಂ
ತೊಡೆಯಂ ತಾಪಿಸಮೆಯ್ದೆ ಪೋೞ್ದ ಪೆಣಗಳ್ [4]ಬೆರ್ವಟ್ಟೆಯಂ ಮುಟ್ಟೆ ಮೆ
ಯ್ವಿಡೆ[4]ಭಾಳಾಗ್ರಮನೆಯ್ದೆ ಬಿಟ್ಟ ಕುಣಪವ್ರಾತಂಗಳಾ ಬಟ್ಟೆಯೊಳ್
ಮಡದಿಂ ಪೆರ್ಬೆರಿಗೆಯ್ದ[5]ಲಿರ್ದ[5]ಮೃತಕವ್ಯೂಹಂ ಕರಂ ಭೀಕರಂ ೭

ಕದಳಿಯ ಕಂಭಮಂ ಕಡಿದು ತಿಂದವೊಲದ್ದುತಮುರ್ಬಿದೂರುಗಳ್
ಬಿದಿರನಡುರ್ತು[6]ಮೇದು[6] ಬಿಸುಟಂತೆ ಭಯಂಕರಮಾದ ಕೈಗಳ
ಳ್ಕೆದುಳಿಗಗೆಡ್ಡೆಯಂ ಮಸಗಿ ಮೆ[7]ಲ್ದ[7]ವೊಲಾಸುರಮಾದ ಮಂಡೆಗಳ್
ಬಿದಱಿನೆ ನೋೞ್ಪರಂ ಪೊರಳುತಿರ್ದುದು ಪಾಮರವೃಂದಮೆತ್ತಲುಂ ೮

ಎರಡೆರಡು ಪೋೞ್ಗಳಾಗಿರೆ
ಕರಗಸದಿಂ ಪೋೞ್ದ ತೆಱದೆ ಬಿರ್ದಿರ್ದ ಭಟೋ
ತ್ಕರಮಂ ಕಾಣುತ್ತಮೆ ಸೂ
ಕರಸಮರಮಿದೆಂದು ಬಗೆದನಾ ರಣಧೀರಂ

ಪಂದಿ ಪೊಯೆ [8]ಪಱಿಯೆ ಕೈ ಕಾ
ಲೊಂ[8]ದೆಡೆಯೊಳ್ ಕೆಡೆದ ಬೇಂಟೆಕಾಱರ್ ಭರದಿಂ
ಕುಂದದೆ ಮೃಗಮಂ ಕೊಂದಪ
ರೆಂದದು ದಂಡಿಸಿದ ತೆಱದೆ ಪೊರಳುತ್ತಿರ್ದರ್ ೧೦

ಪಾಯ್ದು ಪೊಯೆ ಪಂದಿ ಬಾಳಿಂ
ಪೊಯ್ದಂತಿರೆ ಕಡಿದು ಕೆಡೆಯೆ ಮಿಡಿ ತೊಡೆ ನಡುಗಳ್
ಕಾಯ್ದು ಕೃತಾಂತಂ ಪಣೆದಂ
ಬೊಯ್ದಂತಿರೆ ಬೇಂಟೆಕಾಱರರೆ ಬಿರ್ದಿರ್ದರ್ ೧೧

ಮುಱಿಯೆ ನಡು ಕೊಱಿಯೆ ಕಾಲರೆ
ಮುಱಿಯೆ ಮೊಗಂ ಸು[9]ಱುಕಿಱುತ್ತೆ[9]ಪುಣ್ಗಳನಕ್ಕು
ತ್ತೊ[10]ಱೆವ ಪೆಱ[10]ವಾಯ ನೆತ್ತರ
ನೊಱಗಿರ್ದುವು ತಱಿಯ ನಾಯ್ಗಳೋರೊಂದೆಡೆಯೊಳ್ ೧೨

[1] ಡ್ಡ (ಗ) [2] ಮ (ಗ) [3] ಟ್ಟ (ಕ ಗ ಘ) [4] ಪೀರ್ವಟ್ಟೆಯಿಂಮುಟ್ಟೆಮೆಯ್ವಡಿ (ಗ) [5] ನೆರ್ದ (ಕ) ನೆರ್ದೆ (ಘ) [6] ವೆಂದು (ಘ) [7] ಯ್ದ (ಕ ಘ) [8] ಪಱೆದುಕೈಕಾಲ್ಗೊ (ಕ ಗ ಘ) [9] ಱುಕಿಡುತ್ತೆ (ಕ ಗ ಘ) [10] ಱೆಯಱಿತ (ಗ) ಱಿಯೊಱಿತ (ಘ)

ಪಿಡಿದುಗಿಯೆ ಕಿಬ್ಬು ಪಂದಿಯ
ಪೆಡದಲೆಯೊಳ್ ಸಿಲ್ಕಿ ಪಲ್ಗಳಿಡಮೊಗದೊಳ್ ಕ
ಪ್ಪಡದಂತೆ ಕೂಡಿ ಜೋಡಂ
ಪಡೆದುಱಿದುವು ವಿಶ್ವಕದ್ರುಗಳ್ ಕೆಲವೆಡೆಯೊಳ್ ೧೩

ಅಂತು ಜವನೊಕ್ಕಲಿಕ್ಕಿದಂತೆಯುಂ, ಮಾರಿ ಮಸಗಿ ಚಿಗುಳ್ದಿದುಱಿದಂತೆಯುಂ, ಕಿಱುದೊಡೆ ಕೊಯ್ಸೆವೋಗೆ, [1]ಕಡೆವಾಯ್[1] ಕಡಿವೋಗೆ, ಕೊರಲ್ ಬಳೆವೋಗೆ, ಮೋಱೆ ಮುಕ್ಕುವೋಗೆ, ಬಸವಟಿವ ಜವವಟಿವ ಬಾಯ್ವಿಡುವ ದೆಸೆಗಿಡುವ ಬಿಱು ತೋಡುವ ನೀರಂ ಬೇಡುವ ತಲ್ಲಣಿಸುವ ಮಲ್ಲಣಿಸುವ ಬಱಲ್ದು ಬೀೞ್ವ ತಡದಡಿ ಸುತ್ತೇಱ್ವ ಗೋವರ ಗೊಂದಣಮುಮಸಂಜದಿರಿಮಂಜದಿರಿಮೆಂದು ಮುಟ್ಟೆವಂದು ಬೀದಿವರಿದು ಕೆಂಗಲ್ಮಸಗಿ ಕೊಲ್ವ ಕೃತಾಂತನ ಕೋಣನಂತೆ ಕೆ[2]ಳರ್ದು[2]ಕೊಲುತ್ತ ಮಿರ್ಪ,

ಸೂಕರನಂ ಕಂಡಂ ಕಲಿ
ಮೂಕವರಾಹನನೆ ಕಾಣ್ಬವೋಲರ್ಜುನನು
ದ್ಧ್ರೀಕರನಂ ಕ್ರೋಧಾರುಣ
ಕೇಕರನಂ ಸಂಯುಗಾರ್ಜುನಂ ಕಟ್ಟಿದಿರೊಳ್ ೧೪

[3]ಅದು[3]ಕಮ್ಮೆಱರಡೆಯಂ ಕೊಱೆದಂತಿರ್ಪ ಪೆರ್ಬಾಯುಂ, ನಿಟ್ಟೆಲುವ ನಡ್ಡಗರ್ಚಿ ಪಂತಪ್ಪ ದಾಡೆಗಳುಂ, ಪಲವುಂ ಪೆಣಂಗಳನಡಸಿ ಕೊಂಡಿರ್ದಂತಪ್ಪಣಲ್ಗಳುಂ, ಪೊಡವಿಯುಂ [4]ಪೊಡೆದು ಕೊಲಲೆ[4]ತ್ತಿದ ಮಾರಿಯ ಮಿಟ್ಟುವಿನ ಕಯ್ಯ ತಳಂಗಳಂತಿರ್ದ ಕಿವಿಗಳುಂ, [5]ಕಱು[5]ಯ ಪಿರಿಯ ಪಾವಂ ಸುಣ್ಣನೆನುಂಗಿ ಪಾಯ್ಸುವಂತಿರ್ದ ಬಾಲಮುಂ, ಉರ್ಕಿನ ಕಣೆಯೊಳ್ ಸೂಜಿ[6]ಯ್ಗೆ[6] ನೆಗೆದಂತಿರ್ದ ಮೆಯ್ಯ ರೋಮ ಮುಮಗುರ್ವುವಡೆಯೆ ದಬ್ಬಣದಂತೆ ನಿಬ್ಬ[7]ಣ[7]ಮಾದ ಕೂದಲ್ಗಳೊಳ್ ಕೋದ ಪೆಣಂಗಳಿಂ ಪೋತ್ರಮೆಯ್ದದೆ ಪಡೆಯಂ ಪಿಡಿದು ಪೊಡೆಯೊಳ್ತೊಂಕುವಂತೆಯುಂ, ಮೊಱೆವ ಪೆಣಸನಡಿಸಿ ತಿಸೆ ಕ[8]ಡೆ[8]ವಾಯೊಳ್ ಸುಱುವ ಸೂರೆನೆತ್ತರಿಂದುಡಿಡು ಪೊಱ ಮಡುವ[9]ಕೋಡೆಲ್ವು[9]ಗಳಿಂ ತಿಱ್ಱಿಸೆ ತಿರಿವ[10]ಕೋರೆದಾ[10]ಡೆಗಳಿಂ [11]ಕೃತಾಂತನ ಕಗ್ಗಲ್ಲ ಗಾಣದಂತೆಯುಂ[11]ಕೈದುವೆರಸು ಮಾಸಸರಂ ಮೆಲ್ವಲ್ಲಿಬಾಯೊಳ್ ಸೋರ್ವ ಬಳ್ಳಿಗರುಳಿ ಸಲ್ಲೊಗುವಲಗಿಸುಡಿಗಳಿಂ ನಾಳಂಬೆರಸು ಸೆಯ್ದಿಲಂ ಮೇವ ಮದಕರಿಯಂತೆಯುಂ, ಕಿಚ್ಚಿನ ಗೂಂಟಮುಂ ಬಿಟ್ಟಿದಂತೆ ದಡಿಗವೆಣದ ಸಟ್ಟೆರ್ದೆಯೊಳೆ ಸಟ್ಟ[12]ಕಾಲಿಂ[12]ತಾಂ ತಿಂಬ ಜಗಮುಂ ತವೆ ತಿಂದಪುದೆಂದು ಕಾಲಂ ಮು[13]ಳಿ[13]ದು ಕೋಣನಂ ಕೋಳದೊಳಿಕ್ಕಿ ದಂತೆಯುಂ, ಗಂಟಲೊಳ್ ದೊಡ್ಡವೆಣಸಡ್ಡಂ ಸಿಲ್ಕೆ ಮೆಲ್ಕಂ ಮಗುಬ್ಬುವುದುಂ

---

[1] ಕಟಿವಂ (ಕ ಗ) ಶನಂ (ಘ) [2] ರಳ್ದು (ಘ) [3] ಅಂತು (ರ ಗ) [4] ಪೆ . . . ಕೆಲಕ್ಕೆ (ಗ) ಪೊಱದುರ್ಪೋಲಿ (ಘ) [5] ಕೇರೆ (ಘ) [6] ಯಾಗಿ (ಕ ಘ) [7] ರ (ಕ ಗ ಘ) [8] ಟ (ಘ) [9] ಪೊಳಲ್ಸು (ಘ) [10] ತೋರದೊ (ಕ ಘ) [11] ಖ ಪ್ರತಿಯಲ್ಲಿಲ್ಲ [12] ಕೋರಿಂ (ಘ) [13] ನಿ (ಗ)

ನೆತ್ತರುಂ ನೆಣಸುಂ ಕರುಳುಂ ಕಬ್ಬಸಮುಮೆಲ್ವುಮಡಗುಮೊಡಗಲಸಿ ಸುರಿದು ಪುಂಡೆ ಕುಪ್ಪಿಸಿ ಕುಪ್ಪೆಯಾಗಿ ಮಾಸಸರಂ [1]ತೆಗಿಸಿ[1] ರಕ್ಕಸರ ಪುಂಡೆ ರಾಸಿಗೆಯ್ದಂತೆಯುಂ ಮಾಸುರಮಾಗಿ ಕೇಸರಂಗೆಯ್ದು ಕಿವಿಗೆಯ್ದ[2]ರಣಧೀರ[2]ನ ಧನುರ್ಗುಣಧ್ವನಿಗೆ ಕಂಗನೆ ಕನಲ್ದು ಕಿಡಿಕಿ[3]ಡಿವೋ[3]ಗಿ ಕಿಡಿಯಂ ಕಾಱುವಂತೆ ದಾಡೆಗುಟ್ಟಿಪುಟ್ಟಿದ ಕೆಂಡದಿಂ ಮೊಗದ ಕೂಂದಲ್ ಕವ್ರಱುನಾಱೆ ಕೀಱೆ ಬರ್ಪರಬಲಪ್ರಳಯಕಾಲನ ಗಾಳಿಗೆಪ್ಪೈಯ್ದಿ ಬಾಯ್ಗುಟ್ಟಿ[4]ಬಿಜ್ಜನೆ[4] ಬಿಟ್ಟ ದಿಟ್ಟಿಯನಟ್ಟಿ ಮೂಗಂ ತೂಗಿ ಮೊಗಮನೆತ್ತಿ ಮೆಯ್ಯಂ ನಿಮಿರ್ದು ಅದಿರದಿದಿರೇಱುವೆಕ್ಕಲವಂದಿಯಂ ಕಂಡು[5]ಕಿಟಿ ಕಾ[5]ದ್ರವೇಯಸೌಪರ್ಣಂ.

ಭೂ ಕಂಪಂಗೊಳ್ಳೆ ನೆಗಪುಪಿಯಂ[6]ಪುತ್ತಿನಿಂ[6] ತೋಱಿಕೊಳ್ವಂ
ತಾಕೃಷ್ಟಂಗೆಯ್ದಿರದೆ ದೊಣೆಯಿಂ ನಾರಿಯೊಳ್ ಪೊಯ್ದು ಲೋಕ
ಪ್ರಾಕಾರಾಂಕಂ ಪಲಸಿನೆಲೆಯಂ ಪೋಲ್ವ ಶಾತಾಸ್ತ್ರಮಂ [7]ಕಾ[7]
ಯ್ದಾಕರ್ಣಾಂ[8]ತಂ ಮಲರೆ[8]ತೆಗೆದಾ ಕ್ರೋಡನಂ ಕೋಡದೆಚ್ಚಂ ೧೫

ಅಂತಿಸುವುದುಂ—

ನೊಸಲಂ ಕೋಲ್ ತಾಗೆ [9]ಕೋಲಂ ತಿರಿದುದು ಪೆಱಗಣ್ಮೆ ಜರ್ಗೆ[9] ಬಾಣಂವರಾಹಂ
ಮುಸಕಂಗುಂದಿತ್ತು ತನ್ನೇರ್ವೆಸನಸೆಸಕದಿಂ ತೀರ್ಚಿ ಬರ್ಪಂತೆ ಬಂದೆ[10]
ಯ್ದೆ [10]ಸರಲ್ತುತ್ತೂಕರಂ ಸುರ್ಕಿಡಿದುದು ಪೊಡವಟ್ಟಂತೆ ತತ್ಪಾದಪಂಕೇ
ಜಸಮೀಪಕ್ಕಾಗಿ ಕಾಂಡಂ ಕೆಡೆಪೆ ಕೆಡೆಯು[11]ತ್ತಂ[11] ಪಂದಿ ಬೆನ್ನಿತ್ತುದಾಗಳ್ ೧೬

ಅಂತು ಪೊಕ್ಕ [12]ಪಿಂದುಂ[12] ಪೊಱಮಟ್ಟ ಮುಂದುಂ ಪೆಡಂಗಾಲೊಳಡಂಗಿದ ಬಾಲಮುಂ, ಬಟ್ಟೆತ್ತಾದ ಬರಿಯುಮೊಳಪೊಕ್ಕೀರಳ್ಕೆಯುಂ, ಬಿಗಿದ [13]ಬಿನ್ನ ಬೀವ್ರಂ,[13] ತೆಗೆದ ಬಸಿಱುಂ, [14]ತಿರುಪಿದ[14] ಕಿವಿಯುಂ, ಜಂತ್ರದ ಪಂದಿಯ ಬಾಯಂತೆ ಬಿಟ್ಟಬಲ್ಪ ಬಾಯುಂಬೆರಸು ನಾಲ್ಕುಂ ತಳಮಂ ತೋಱುತ್ತುಂ [15]ಸರಳಿಸಿ[15] ಪಾಯ್ದು ಪೋಪ ಪೊಳ್ಳೆವಂದಿಯಂ ಕಂಡು ಮುಂದೆ [16]ಬಿದ್ದಿರ್ದ[16] ಬಾಣಮಂ ಬಾಗಿಕೊಂಡು ಮಣ್ಣಂ ತಿಮಿರ್ದು ಕಳೆದು ಕೆಳೆಯನಂ ಕೂಡಿಕೊಂಡು ರಕ್ಕಸನಂ ಬೆಂಗೊಳ್ಳ ಲಕ್ಷ್ಮಣನಂತದಂ ಬೆಂಗೊಂಡು ಬೞಿಯನುೞಿಯದೆ ಪರಿಯೆ ಕೆಯ್ವೊಲನುಮಂ [17]ಬೆಯ್ವೊ[17]ಲನುಮಂ ಕಱ್ಱುಂಬುಮನಿಱುಂಬುಮಂ ತಾಗುಮಂ ಬಾಗುಮಂ ಪಳ್ಳಮುಮಂ ಕೊಳ್ಳಮುಮಂ [18]ನೆಳ[18]ಱುಮಂ ಕಳಱುಮನೆಱುಗಲುಮಂ ಗಿಡುದುಱುಗಲುಮಂ ದರಿಯುಮಂ ಕುಮ್ಮರಿಯುಮಂ ಮೊರಡುಮಂ ಕೊರಡುಮಂ ಸುಳಿಯುಮಂ ಕುಳಿಯುಮಂ ಮೆಳೆಯುಮಂ

[1] ತೆಗಪಿ (ಕ ಗ ಘ) [2] ರಣಧುರ (ಗ) ಪರವೀರ (ಘ) [3] ಯಾಗಿ (ಕ) [4] ಬೆಳ್ಪಳನೆ (ಕ) ಬೆಳ್ಪನೆ (ಘ) [5] ಕಂಟಕ (ಕ) [6] ಕೊಕ್ಕಿನಿಂ (ಗ) [7] ಕ (ಗ) [8] ತಕ್ಕಲರೆ (ಗ) [9] ಖೀಳಿಂದುದು ಪೆಱಗಣ ತಟ್ಟುಚ್ಚಿರ್ಗೆ (ಘ) [10] ಯ್ದಿ (ಖ) [11] ತೇಂ (ಘ) [12] ಪಿಂದು (ಗ) [13] ಬೆಂಬಿವುಂ (ಗ) [14] ಕಱುಪದ (ಕ ಘ) ಕಱುಪಿದ (ಗ) ತಲ್ಲಣಿಸಿ (ಖ) [15] ಟ್ಟ (ಘ) [16] ಟ್ಟ (ಕ ಘ) [17] ಬೆಳ್ಳಿಲ (ಕ ಘ ಚ) [18] ನಳ (ಕ ಘ)

ನಾಸಲುಮಮಂ ಬಾಸಲುಮಮಂ [1]ಸಿ[1]ಡಿಂಬಮನಿಡಿಂಬಮಮಂ ಪರಲುಮಮಂ ಪುರಿಪರಲುಮಮಂ ಕಿಸುಗಾಡುಮಮಂ ಸೆಗ್ಗಿಲ್ಗಾಡುಮಮಂ ನಿಡುಪುಲ್ಲುಮಮಂ ಪೊಡೆಪುಲ್ಲುಮಮಂ ಮಣಲುಮಮಂ [2]ಮಣ್ಮಣಲುಮಮಂ[2] ತರಿವಣಲುಮಮಂ ಗುಗ್ಗರಿಗಲ್ಲುಮಮಂ ಗುಂಡುಗಲ್ಲುಮಮಂ ಮುಳ್ಮರಗಾಡುಮಮಂ ಪೆರ್ಮರಗಾಡುಮಮಂ ಬೆಟ್ಟಮಮಂ ಘಟ್ಟಮಮಂ ಬಿದಿರುಮಮಂ ಬಿದಿರುಮಮಂ ಬೆತ್ತಮುಮಮಂ ಮುತ್ತೆಮಮಂ ಬಳ್ಳಿಯುಮಮಂ ಕಳ್ಳಿಯುಮಮಂ ಕಳಿದು ಪೋಗಿ—

ಸಾಟೋಪಭೂಪಚಾಪ
ಜ್ಯಾಟಂಕಾರಕ್ಕೆ ಸುಗಿದು ಸಮದೇಭಕರೋ
ತ್ಕೋಟಿತಮಹೀಜಮಮಂ ವಿಂ
ಧ್ಯಾಟವಿಯಂ ಪೊಕ್ಕುದಾ ಮಹೋಗ್ರವರಾಹಂ ೧೭

ಅಂತು ಪೊಕ್ಕು ಸೂಜಿ ಸಲ್ಲದ ಪೆರ್ಮರಂಗಳೊಳಗೆ [3]ಮುದುಕಿ[3] ಮಾಯಮಾಗಿ ಪೋಪುದುಂ ನಿಂದು ಪರಿಭಾವಿಸಿ ಪಿರಿಯ ಮರದ ನೆಟ್ಟಲ್ಗೆ ಸಾರ್ದು ಬಿಲ್ಲನೂಱಿ ಕೊಪ್ಪಿನೊಳ್ ಕೈಯಂ ಸಾರ್ಚಿ ಸಟ್ಟದಿಟ್ಟಿಯಿಂ ಜಾನಿಸಿ ಬಿಲ್ಲುಂ ಬೆಱಗುಮಾಗಿ ತನ್ನ ಸುಚಿತಾವೇಗಕ್ಕಂ ಯುಥಾಯುಧೋದ್ವೇಗಕ್ಕಂ ಮನದೊಳೆ ನಕ್ಕು ಕುರುಳ ಸುರ್ಬಿಂ ಪುರ್ಬಿಂಗಿೞಿವ ಬೆಮರ [4]ಬ[4]ರಿವೊನಲಂ ಸುಟ್ಟುಂಬೆರಲಿಂ ತೊಡೆದೀಡಾಡುತ್ತುಂ ತನ್ನ ಬರವಂ ನೋಡುತ್ತುಂ ನಾಡೆಯುಂ ಬೞಲ್ದು ಜೋಲ್ದು ಜಾನಿಸುತಿರ್ದ ರೂಪ ಕಂದರ್ಪದೇವನಂ ಮಕರಂದನೆಯ್ದೆವಂದು ಕೆಲದೊಳ್ ನಿಂದು [5]ತಿ[5]ಱಿದು ತಂದ ತಳಿರಿಂ ಬೀಸಿ ಮುಗಳ್ನಗೆಯುಂ ಮೊಗಕ್ಕೆ ಸೂಸಿ ಮೆಲ್ಲನಿಂತೆಂದಂ—

ಇಂ ಧ್ಯಾನಿಸಲೇಂ ಕೃತನಯ
ಸಾಂಧ್ಯಮಸರುಣಾಶ್ಮರಶ್ಮಿ ಸೂತಪ್ರಾತ
ಸ್ಸಂಧ್ಯಮನವಲೋಕಿಪಮೀ
ವಿಂಧ್ಯಮನಿದಸುಱಿದು ಬಿಸದಮಾವುದುಮುಂಟೇ ೧೮

ನಡುವಗಲಾದುದು ನೀಂ ನೀ
ರಡಿಸಿದೆಯುದಕಾಶ್ರಯಂಗಳಂ ಕಾಣ್ಬನ್ನಂ
ನಡೆಪಮೆನುತ್ತಲ್ಲಿಂದಂ
ನಡೆದರ್ ಬಿಂಪೆಂಬ ಬಿಂಜಡವಿಯೊಳವರ್ಗಳ್ ೧೯

ಅಲ್ಲಿ ಮರವಾಯ್ದು ಕೊರ್ಬಿದ
ಪುಲ್ಲಿಂ ಪೆರ್ಮರನಸಡರ್ದು ಪರ್ಬಿದ ನಾನಾ
ವಲ್ಲಿಗಳಿಂ ಕಟ್ಟಲೆ ತನ
ಗಲ್ಲದೆ ಮಾರ್ಮಲೆವುದಿಂದುಗಂ ದಿನಪ[6]ತಿ[6]ಗಂ ೨೦

---

[1] ಸಿ (ಘ) [2] (ಕ ಘ) ಪ್ರತಿಗಳಲ್ಲಿಲ್ಲ [3] ಮದಕಿ (ಗ) ಮದಿಗಿ (ಕ ಘ) [4] ಪ (ಕ)
[5] ತ (ಘ) [6] ಪಂ (ಕ)

ಎಲವದ ಬೇಲ [1]ಚೆನ್ನ[1]ಗೆಯ ಪೊನ್ನೆಯ ಕಮ್ಮರದಾರ ಕೇರ ನೇ
[2]ಳ[2]ಲ ಸಿರಿತಾಳೆಯಿಂಗುಳದ ನೆಲ್ಲಿಯ [3]ನೀವ[3]ದ ಸೋ[4]ಲೆ[4]ಯಾಲದಿಂ
[5]ಚಿಲ[5]ಕರಿಜೀವಿಸಂಬಟೆಯ ತಾಱೆಯ ತಂಡಸಿನಾಸಿನಾಸೆಬೊ
ಬ್ಬುಲಿಯುರನೇಱಲಂಕೊಲೆಯ ಸೆಳ್ಳ ತಮಾಳದ ಪಾರಿವಾಳದಾ ೨೧

ತ[6]ದ[6]ಕಿನ ತಾಳ ಶೆಂಗಿನ ತಳಂ[7]ಕಿ[7]ನ ತುಂಬುರ ಚಿಲ್ಲ ಬೆಲ್ಲವ
ತ್ರದ ಬಿಳಿಯತ್ತಿಯಿಪ್ಪೆಯ ಮರಂಗಳ ಕೊಂಬುಗಳಂಬರಂಬರಂ
ಪುದಿದು ಪೊದಬ್ದು ಸುರ್ಬಡರೆ ಪರ್ಬಿರೆ ಕಾರಿರುಳೋಳಿ [8]ಕೊ[8]ಂಬುಗೊಂ
ಡುದೆನೆ ಕಱಂಗಿ ಕಬ್ಬಲಿಸುತಿರ್ದುದು ಕಾನನಪೆತ್ತ ಸೋಡ್ಪೊಡಂ ೨೨

ಅದಲ್ಲದೆಯುಂ—

ಫಣಿನೀ[9]ಮೀ[9]ಳ್ತ್ರಮೂಳದ್ಯುತಿಮಳಿನತೆಯಿಂ ನೀಳಶೈಳಾಂಬುದಶ್ಯಾ
ಮಳಸಂಕೀರ್ಣಾಂಶುವಿಂ ಲುಬ್ಧಕಬಳಶಬರೀಕೇಶಕೃಷ್ಣಪ್ರಭಾಸಂ
ಕುಳದಿಂ ಭಲ್ಲೂಕಕಾಳೋರಗಕುಳಕಳಿತೋನ್ಮೇಷಕಲ್ಮಾಷಮಾಷಾ
ವಿಳಕಾಂತಿವ್ರಾತದಿಂ ಸೂರ್ಮಡಿಸಿದುದು ವನಾಗಾರ[10]ಘೋರಾಂ[10]ಧಕಾರಂ ೨೩

[11]ಬಿಟ್ಟ[11] ಕೆಲದಿಂದಮೇ ಬೂ
ತಟ್ಟಿದುದೆನೆ ದಿನಕರಂಗೆ ತತ್ಕಾನನದೊಳ್
ಮುಟ್ಟಿದುದಜಗರಮುಖದಿಂ
ಪುಟ್ಟಿದ ವಿಷವಹ್ನಿ[12]ಯುಗುಬ್ಬ[12] ಕರ್ಬೊಗೆ ಮುಗಿಲಂ ೨೪

ತಲೆವಣಿಯ ಫಣಿಗಳುಂ ಸುಲಿ
ಮೊಲದಡಗಂ ಪೊತ್ತ ಬೇಡರುಂ ಮರಗಳ ಕ
ಟ್ಟಲೆ ತಲೆಮುಟ್ಟಿಡಿದಿರೆ ಮುಂ
ದಲೆಯೊಳ್ ಸೂಡರಿಟ್ಟು ನಡೆವ ತೆಱದಿಂ ನಡೆದರ್ ೨೫

ಪುದಿದಡವಿಯ ಕಟ್ಟಲೆ ಸೂ
ಲದೊಳಿಕ್ಕಿದೊ[13]ಡಿಟಿದು ಸೋರ್ವ[13] ತಿಂಗಳ ಪೆಣದಂ
ದದಿನಿ[14]ರ್ದುದುರ್ವಿ[14] ಕೆಳಗು
ರ್ಕಿದ ನೆಯ್ಯಿಂ ಜೇನ ಪುಟ್ಟಿ ಪೆರ್ಮರಗಾಡೊಳ್ ೨೬

---

[1] ಸಿ (ಫ) [2] ೦ (ಫ) [3] ನಿಂಬ (ಫ) [4] ವೆ (ಕ ಫ) [5] ಬೆಲ (ಗ) [6] ದಿ (ಫ) [7] ಗಿ (ಕ) [8] ಗೊಂ (ಕ) [9] ವಿಶ್ರ (ಫ) [10] ಮುಗ್ರಾಂ (ಫ) [11] ಒಟ್ಟಿ (ಕ ಫ) [12] ಯುಳುರ್ವ (ಕ) [13] ಳಿಡೆದು (ಡಿಳಿದು) ಸಾರ್ದ (ಕ) ಡಗಿದು ತಿಂದ (ಗ ಫ) [14] ದುರ್ಬಿಯ (ಫ)

ಎನಿತದು ಕಟ್ಟಲಿಸಿದೊಡಂ
ವನೇಚರರ್ ಸುಟಿವರಡರೆ ಪೊಳೆದಡ[1]ಗ[1]ದ ಮಿಂ
ಚಿನ ಗೊಂಚಲಂತೆ ಮಿಂಚುವ
ವನಚರಿಯರ ಬಿಳಿಯ ಕಣ್ಣ ಬೆಳಗಿಂ ಬನದೊಳ್ ೨೭

ನಳನಳಿಸಿ ನಯದೆ ಬರುತಿ
ರ್ಪ ಳವರಗಳ ಕೊಂಬುಗೊಂಡು ಮುಱಿಯದ ತೆಱದಿಂ
ತಳೆದೆತ್ತುವಂತೆ ಬಾನಂ
ತಳಿರಿಂ ಮೋದಿದುವು ಮುಗಿಲನಲ್ಲಿಯ ಮರಗಳ್ ೨೮

ಮುಗಿಲಂ ಮರಗಳ ತುದಿಗೋ
ಡುಗಳೊ[2]ಳೆ ದಳ್ಳಿ[2]ಱಿದೊಡುದಿರ್ದು ಕೆದಱಿದ ಕಿಱುದಾ
ರೆಗಳೆನಿಪುವು ಕಾನನದೊಳ
ಗೊಗುಮಿಗೆ ಪರೆದಿರ್ದ ಪಿರಿಯ ನೆಲ್ಲಿಯ ಕಾಯ್ಗಳ್ ೨೯

ಹರಿಜೃಂಭಾ[3]ಭಾತ್ಕೃ[3]ತಂ ಫೇರವಪಟುಪೃ[4]ಥುನಾದೂತ್ಕೃತಂ[4] ಚರತ್ಸೂ
ಕರಸೇನಾಸೂತ್ಕೃತಂ ಕೌಶಿಕಘಟಿತಪುಟೋಘೂತ್ಕೃತಂ ಚಂಡಶಾಖಾ
ಚರಚೀರೀಚಿಲ್ಲಿಭಿಲ್ಲೀಚಮರಮೃಗಚಮೂಚೀತ್ಕೃತಂ ಪೆರ್ಚಿನಿಚ್ಚಂ
ಪಿರಿದೊಂದಾ[5]ಕಂಪ[5]ಮಂ ಕಾಡೊಡೆಯನೆರ್ದೆಗಮಾಕಾಡು ಮಾಡುತ್ತುಮಿರ್ಕುಂ ೩೦

ಶರಭದ್ವೀಪಿದ್ವಿಪೇಹಾಮೃಗಮಹಿಷವೃಕಕ್ರೋಡಖಳ್ಗ[6]ಬು[6]ಭುಕ್ಸಂ
ಬರಗೋಳಾಂಗೂಳಗೌಧೇಯಕಕಳಕಳಿತಂ ಕೋಕಕೋಯಷ್ಟಿ ಘರ್ಮು
[7]ತ್ಕರಟವ್ಯಾಘ್ರಾ[7]ಟಕಂ ಕುರ್ಕುರಕುರರರ[8]ದವ್ಯೂಹ[8]ದಂಶಾಹಿ[9]ಕಾತಿ[9]
ತ್ತಿರಿಕೇಕೀಭಾಷ[10]ಕಾ[10]ದಂಬಕಬಕಕೃತಕೋಳಾಹಳಂ ತದ್ವನಾಂತಂ ೩೧

ಹರಿಜೃಂಭಾರವಭೀತಕುಂಭಿಕಳಭಂ ಶ್ಯೇನ[11]ಸ್ವನಾತಂ[11]ಕಿ
ತ್ತಿರಿಕಾರಕ್ಷವರೂಕ್ಷಗಂಧಗಹನಾಪಕ್ರಾಂತಭಲ್ಲೂಕಭೀ
ಕರದರ್ವೀಕರವಕ್ತ್ರಮುಕ್ತವಿಷವಹ್ನ್ಯುದ್ದಾಮಭೀಮಾವೃತೋ
ದರ ತಿರ್ಯಗ್ಬಿಲನಿರ್ಗತೋಂದುರದರಗ್ರಾಸಾರ್ಜಿಮಾರ್ಜಾರಕಂ ೩೨

ವಿಕಿರಾಕೀರ್ಣವರಾಹದಂತದಳಿತಂ ವ್ಯಾ[12]ಘ್ರಾಕರಂ[12] ವ್ಯಗ್ರಜಂ
ಬುಕಭಗ್ನದ್ವಿರದಾಂಘ್ರಿರುಗ್ಣವಿಗಳತ್ತ್ರಾರಾಗ್ರ ಕಾಳೇ[13]ರವಂ[13]
ವೃಕವೃಂದಾವೃತಸಿಂಹಸಂಹತಿ[14]ಕಿರತ್ಕಿನ್ನಾ[14]ಮಿಷಾಲಭ್ಯಲು
ಬ್ಧಕಕೌಳೇಯಕುಳಾಕುಳಕ್ವಣಿತಸಂತ್ರಸ್ತೈಣಿಕಂ ತದ್ವನಂ ೩೩

---

[1] ಸಿ (ಘ) [2] ಡಲ್ಕಿ (ಘ) [3] ಭಾಂಕೃ (ಘ) [4] ತನಾ ದೋತ್ಕಟಂ (ಕ) ತನಾ ಘೂತ್ಕೃತಂ (ಖ) [5] ಕಾರ (ಕ) [6] ಖು (ಖ) ಯಿ (ಘ) [7] ತರಟಾವ್ರಾಹಾ (ಗ) [8] ದಾತ್ಯೂಹ (ಕ ಗ ಘ) [9] ಭುಕ್ತಿ (ಕ ಗ ಘ) [10] ನಾ (ಖ) [11] ಶ್ವಮಂತಂ (ಖ) [12] ಘ್ರಾಂಗಕಂ (ಖ) [13] ವರಂ (ಖ ಘ) [14] ಕರಿಕೀರ್ಣಾ (ಕ)

ಗಿರಿಘಾತದ್ವಿಪದಂತ[1]ಭಗ್ನ[1]ವಿಶದಂ ಶಾರ್ದೂಲಸಂದಷ್ಟಶಂ
ಬರರಕ್ತಾಹಿತಲೋಹಿತಂ ರುರುಗಳ[2]ಗೃ[2]ದ್ಧಾಹಿತೋಜ್ಝಮರ್ಮಮು
ಮರ್ಮರಕಾಳಾಹಿಕಳೇವರಾಳಿಮನೇಕಶ್ವಾಪದಾನೀಕನಿ
ಷ್ಠ್ಯುರತುಂಡತ್ರುಟಿತಾವಕೀರ್ಣದರವೃತ್ತಾತ್ತಕಾನನಂ ಕಾನನಂ ೩೪

ಅಂತು ಭೀತಿಯ ವಿಭೂತಿಭವನಮುಮಪಾಯದುಪಾಯಾಸ್ಪದಮುಮೆನಿಸಿ ಪೊಲಗಿಟ್ಟು ಪೊಕ್ಕ ಭೂತಕೋಟಿಗಂ ಭಯಜ್ವರಮನಾಗಿಸುವ ಮನೋಹರತೆಗೆ ಬಂಜೆಯಾದ ಬಿಂಜದಡವಿಯೊಳಗೆ ಕಾಳಿಂದಿಯ ಮಡುವಿನೊಳ್ ಮುಳುಂಗಿ ಪೋಪಂತೆಯುಂ ತಮಿಸ್ರಗುಹೆಯಂ ಪೊಕ್ಕು ಪೋಪಂತೆಯುಂ ಕಾಡಿಗೆಯ ಬೆಟ್ಟಮಂ ಬಗಿದು ಪೋಪಂತೆಯುಮೆತ್ತಾನುಂ ಪಿರಿದಂತರಮಂ ಪಾಯ್ದು ಪೋಗಿ—

ಸುಡುವಡಗಿಂ ಕರಂ ಪೊಗೆವ ಪರ್ಬುವ [3]ಕರ್ಬೊಗೆ[3] ಪೆಕ್ಕಮಪ್ಪ ಪೆ
ರ್ಬ[4]ಡಿಕೆಯ[4] ಸಾತಮಾನೆಗಳ ಒಲ್ದಿಣಸಂ ಬಗುಳುತ್ತೆ ಮುತ್ತಿ ಕೀ
[5]ವಡುತೆ[5] ತಗುಳ್ದಿನಂ ತೆಗೆವ ನಾಯ್ಗಳಗುರ್ವಿಸುತಿರ್ಪ ತೋರ್ಪ ಪೇ
ರಡವಿಯ ಬೇಡವಳ್ಳಿಗಳನೀಕ್ಷಿಸುತುಂ ನಡೆದಂ ನರಾಧಿಪಂ ೩೫

ಉಗುಬಿಪ ಮೂಗಂ ಮುಚ್ಚಿ ಪ
ಮೊಗಮಂ ಮೂದಿರಿಕನಾಗಿಪುದ್ಗಾರಮನಾ
ವಗಮೊಗೆಯಿಪ ಬೇಡರ ಪ
ಳ್ಳಿಗಳಂ ಪತಿ ಪಾಯ್ದು ಪೋ[6]ಗೆ[6] ಕಿಱಿದಂತರ[7]ಮಂ[7] ೩೬

ತೊಡೆ ಮಗುಳ್ದುದು ತೋಳ್ ಸೆಡೆದುದು
ಪಿಡಪಲೆ ಸುರ್ಕಿದುದು ಕೈಗೆ ಕೆಂಪಿಡಿದುದು ಪಿಂ
ನಡು [8]ತಡೆ[8]ವಂತಾದುದು ಮೆ
ಲ್ಲಡಿ ಜಳಿತುದು ಪೋಪ ವಿಪುಳವಿದ್ಯಾಧರನಾ ೩೭

ಮೊನೆವರಲೊತ್ತೆ ಮೆಲ್ಲಡಿಗಳಂ ಬಿಸಿಲಟ್ಟೆ ಬೞಲ್ದ ಮೆಯ್ಯ ಬಿ
ಱನೆ ಬಿಱುಗಾಳಿ ಬೀಸುತಿರೆ ಮೆಲ್ಲುಟಿ ನಿಷ್ಠುರಮಾಗೆ ಗಂಟಲು
ಳ್ಳಿಸಿತುವರಂ ತೆರಳ್ದೂಣಗೆ ನಾಲಗೆ ನಿಬ್ಬರಮಾಗೆ ಕಣ್ಣೊಡರ್
ಕನಲದೆ ಸಂದೆವೊಯ್ದ ತೆಱನಾಗೆ ತೃಷಾತುರನಾದನಾ ನೃಪಂ ೩೮

ತೇಜಕ್ಕೆಸ್ಸೊಳ್ ಸೆಣಸುವ
ನೀ ಜನಪತಿಯೆಂದು ಕಾಯ್ದು ತೆಱ[9]ದ[9]ಳುರ್ದಂ ನೀ
ರೇಜಸಖಂ ಕಾಯ್ದ ಕದಿ
ಸೂರ್ಜಿಗ[10]ಳಿಂದೊ[10]ತ್ತಿ ನೆತ್ತಿಯಂ ಕುತ್ತುವವೋಲ್ ೩೯

---

[1] ಭಂಗ (ಕ ಖ) [2] ದ್ಧ್ರ (ಘ ಕ) [3] ಕೊರ್ಬಿಗೆ (ಖ) [4] ಡೆತದ (ಕ ಖ) [5] ಡಿಗೆ (ಕ)
[6] ಗಿ (ಕ ಘ) [7] ದೊಳ್ (ಕ ಘ) [8] ಕಡಿ (ಕ ಘ) [9] ನ (ಘ) [10] ಳಂತೊ (ಕ)

ಕಡುವಿಸಿಲಳುರ್ವಂತಿರೆ ಕೆಂ
ಪಡರ್ದುದು ಮೊಗಮಿರ್ಪು ಸಾರ್ವವೊಲ್ ಕೊರ[1]ಲೆಡೆಯುಂ[1]
ದೆಡೆಯುಡುಗದೆ ಬೆಮರ್ವನಿಗಳ್
ಜಿಡೆ ಬೞಬೞ ಒತ್ತಿದತ್ತು ಬಾಯ್ದೆಱೆ ನೃಪನಾ ೪೦

ಕುಸಿಯುತ್ತುಂ ಕುಂಟುತುಂ ಸುಣ್ಬಲೊಳಡಿಗಳಂ ಪಾಸಿ ಮೆಟ್ಟುತ್ತುಮೆಂಟುಂ
ದೆಸೆಯಂ ರಕ್ತಾಲಸಾಪಾಂಗದಿನೆಱವಿ ಜಲೋದ್ದೇಶಮಂ ಭಾವಿಸುತ್ತುಂ
ಬಿಸುಸುಯ್ಯುಂ ಸುಯ್ಯುತುಂ ಪೆ[2]ರ್ಮೆಳೆ[2]ಗಳ ನೆೞಲಂ ಪೊರ್ದುತುಂ ಕುಳ್ಳಿರುತ್ತುಂ
ವಸುಧೇಶಂ ಕ್ಲೇಶದಿಂದಂ ನಡೆದನಡವಿಯೊಳ್ ದುಃಖಮೇಂ ನೀಯಸುಂಟೇ ೪೧

ನೆವದಿಂ ನೀರ್ದಾಣಮಂ ಸೂಚಿಸುತ್ತೆಲೆಗೊಡೆಯುಂ ಸಾರ್ಚುತುಂ ಸ್ವೇದಬಿಂದು
ಪ್ಲವಮಂ ನೀಂಟುತ್ತೆ ಕುಳ್ಳಿರ್ದೆಡೆಯೊಳಡಸಿ ನೆಮರ್ಗುತುಂ ಮಾರ್ಗದೊಳ್ ಪ
ಲ್ಲವಮಂ ಪಾಸುತ್ತೆ ತನ್ನಾಸಜನಱಿಯದೆ ಸಂತೈಸುತುಂ ಕೈಗುಡುತ್ತಂ
ದವನೀಶಂಗಾಸೆಯಾದಂ ಪ್ರಿಯಸಚಿವಸುತಂ ಭೃತ್ಯನಿಂತಾಗವೇಡಾ ೪೨

ಅಂತಳವಿಗಳಿದ ಪಿಪಾಸೆಯುಂ ಪಸಿವುಮನಮುಯ್ಯಂಬಡೆದು ಮುನ್ನಂ ತನ್ನ ಮನಮನಳುರ್ದು ನೂಂಕಿ ಕಳೆದು ಕಾಮಾನಳನಳುರ್ದು ಕಳೆವಂತಳುರೆ ಬೞಲ್ದು ಬೞಲ್ದುಂ ಧೃತಿಯನವಳಂಬಿಸಿ ಬಿಸಿಲಂ ಬೆನ್ನೊಳಿಕ್ಕಿ ನೀರ್ನೆೞಲನಱಸಿ ಗುಗ್ಗರಿಗಲ್ಲವರಿವರಲ ತರಿಮೊರಡಿನ ನುಚ್ಚುವಣಲ ನೀರಱಿದು ಪರಿದು ದಿಂಟೆಯ ದರಿಯ ಕುೞಿಯ ಕುತ್ತುೞ ಕುೞಿವಳ್ಳಮಂ ಕಂಡದಱ ಬೞಿವಿಡಿದು ಬೆಳೆದ ಒಳ್ಳಿಯ ಪಸಿಯ ಪುಲ್ಲ ಪೂಲಿಯ ನಾಸಲನಱಿದು ನಡೆವಾಗಳೊಂದೆಡೆಯೊಳ್—

ಮಿಱುಗುವ ಬೆಳತಿಗೆಗಣ್ಬೊಣ
ದೊಱತೆಯ ಜಲದೊಳಗೆ ಪೊಳೆಯೆ ನೀಗುರ್ಡಿಪ್ಪುದುಮಂ
ಮಱದೆಳಮೀನ್ಗಳ್ಗೆತ್ತೇಂ
ಕಿಱುವೇಡಿತಿ ತುಡುಕಿ ಶಬರನಂ ನಗಿಸಿದಳೊ ೪೩

ಅದಂ ಕಂಡವನಿಪಾಳನಿಪ್ಪಳುಮೀ ಜಳಮುಂ ದೃಶ್ಯಮಲ್ಲದೆ ಪರಿಸ್ಪೃಶ್ಯಮಲ್ಲೆಂದಲ್ಲಿಂ ತಳರ್ದು ನಡೆಯೆ ಮತ್ತೊಂದೆಡೆಯೊಳ್—

ಮೊಗದೊಳ್ ಕಣ್ ಪೊಳೆಯುತ್ತಿರೆ
ಒಗರಗೆಯೊಳ್ ಪೊಳೆವ ಮೀನ್ಗಳಂ ಕಂಡರಸಂ
ಮೊಗೆವೊಡೆ ನೀರ್ನೆಱಿಯವೆನ್ನು
ತ್ತಗಲನಲ್ಲೆಂದೆ ಕರುಣಮಾಱಿಸೆ ತೃಷೆಯುಂ ೪೪

[1] ಲಡಿಯುಂ (ಗ) [2] ರ್ಮರ (ಕ)

ಮತ್ತೊಂದೆಡೆಯೊಳ್—

ಸುೞಿ[1]ಸುೞಿದು[1] ನೀರನಿರದಾ
ಡಿೞಿದಂಬೂಕೃತದಿಸುರ್ಕಿ ಮುಗುಳ್ಗಳ ಸೊರೆಯಂ
ಪಱಿದಿಕ್ಕಿದಂತೆ ತುಱುಗಿ
ದೊಱತೆಯನಿದು ಕರ[2]ಡಿ[3] ಕುಡಿವ ತೆಱನೆಂದಱಿದಂ
ಮತ್ತೊಂದೆಡೆಯೊಳ್, ೪೫

ಪುಲಿ ನೀರ್ಗುಣುತಿರೆ ಪಾಯ್ದು
ಕ್ಕಲವಂದಿ ತದೀಯ ವಿಪುಳಗಳವಿಗಳದಸೃ
ಗ್ಜಲದಿಂ ಬಗರಗೆ ತೀವಿದೊ
ಡೆ ಲವಲಿಕೆಯಿನೂಡಿ ಪೋದುದೆಂದಱಿದರಸಂ ೪೬

ಅಂತು ಪೋಪಿನಮೊಂದೆಡೆಯೊಳಿಡಿದ ಮಟಲೇಱಿಗೊಂಡು ಬಳಸಿ ತಳಿದ ತಿಳ್ಗೊಱತೆಯೊಳ್—

ಸಿಮಿರ್ದ ಕೊರಲ್ ಮರಲ್ಪು ಮಡಿದೂಱಿದ ಮುಂದಣ ಕಾಲ್ಗಳಿರ್ದ ಪ
ಕ್ಷಿಮತಸುಜ್ಯೋಲ್ಬುರಂ ಪೆಱಗಸ್ಪಿದ ಕೊಂಬುಗಳಾಲಿಸುತ್ತೆ ವಿ
ಕ್ರಮಿಸುವ ಕರ್ಣಮುಳ್ಗುಳ್ದ ಕಣ್ ಮಿಡು[4]ಕೋ[4]ಡುವ ಕಂಠನಾಳಮಂ
ದಮರ್ದಿರೆ ನೀರಸುಂಬಿರಲೆಯಂ ಬರಲೊಲ್ಲದೆ ನೋಡಿದಂ ನೃಪಂ ೪೭

ಅದಂ ಕೆಲಕಿಕ್ಕಿ ಪೋಗೆ ಮುಂದೊಂದು ಮಮ್ಮರದವೊಲ್ ಜಿಗಿದ ಬಗರಗೆಯೊಳ್—

ಕಡುಬಡವಾಗಿ ಮುಂಬಯಕೆಯಿಂ ಬಿಸಿಲಟ್ಟೆ ಕರಂ ಬಬಲ್ಪು ಮೆ
ಲ್ಗುಡುಕು ಗೊಳಲ್ಕಮೊಲ್ಲದಿರೆ ವೆಲ್ಲಗೆ ತಂದು ಪೊದಟ್ಟು ಪೀಲಿಯಂ
ಪಿಡಿದು ಮೊಗಕ್ಕೆ ನೀಡಿ ಕೊರಲಂ ತಳಿನೀರ್ಗಳನೆಂಟೆ ಕೊಂಡು ಬಾ
ಯ್ವಿಡುವ ಮಯೂರಿಗೇಂ ಮುಱಿದು ನೀಡುತುಮಿರ್ದುದೊ ನೋಗೆ ಬೇಗದಿಂ ೪೮

ಅದಂ ನೋಡುತ್ತುಂ ನಡೆಯೆ ಮತ್ತೊಂದೆಡೆಯೊಳ್—

ಕುಡಿದು ಜಳಲ್ಪಳಲ್ಗಿಸೆ ನಾಲಗೆಯಂ ಮಿಗೆ ನೀಡಿ ನೀರನೋ
ಗಡಿಸಿ ಮರಲ್ಪು ನಕ್ಕಿ ತುಟಿಯಂ ಕಡೆವಾಯ್ಗಳನಗ್ರಪಾದದಿಂ
ತೊಡೆದು ತಡುಂಬಿ ತಾ[5]ತೊಡಬಗೆತ್ತುವ[5] ಮಾಗುಳಿಸುತ್ತೆ ಬಿಟ್ಟು ಕ
ಣ್ಗೊಟ್ಟರ್ಗಳಿಸಿಕ್ಕೆಲಕ್ಕೆ[6]ಡೆಸಿ ಪೋಪ ತರಕ್ಷುವನುದ್ಭುಭುಕ್ಷು[7]ವಂ ೪೯

---

[1] ವ (ಖ) [2] ನಿಲ್ಲಿಂದೊಱೆ (ಖ) [3] ದೆ (ಘ) [4] ಕಾ (ಘ) [5] ದೊಡಲನೆತ್ತುತ (ಕ)
[6] ಲ (ಖ) [7] ನದ್ಭುತಕ್ಷು (ಖ) ನುದ್ವಚಕ್ಷು (ಘ)

ಅದಂ ಪಿಂತಿಕ್ಕಿಯಾಪಳ್ಳದೊಳೊಳಕ್ಕ ನೀರನೆಲ್ಲಿಯುಂ ಪಡೆಯದೆ ಪೋಱಮಟ್ಟಿ ಒಟ್ಟಿಗೊಂಡು ಪೋಗಿ ಪೊಗಲಾರದನಕೞದ ಪಿಪಾಸೆಯಿಂ ಬಸವೞಿವ ಮಾನಸ ಮದನನಂ ಮಕರಂದಂ ಮೆಲ್ಲನೆ ಮೆಯ್ಯ ನೞಲ್ದು ತಂದು ನೆಮ್ಮಗಿ ಕೊಂಡು ನಿಮಿರ್ಗನುಡಿಮೆಪ್ಪ ಕಾನನದೊಳಾ ನೀಯಮನಜಸುಪ್ರಪಾಯಮಾವುದೆಂದು ಕಿಂಕರ್ತವ್ಯತಾಮೂಢಂ ದಿಗವಳೋಕನಂಗೆಯ್ಯುತ್ತಿರೆ ತೊಟ್ಟನೆ ಕಟ್ಟಿದಿರೊಳ್—

ತಿಗ್ಮಾಂಶುದ್ಯೋತಿಗಡ್ಡಂ ಮಱೆವಡುಡುವಿದಂಘೋಜಮುಂ ಭ್ರಾಜಿಪೇಣೀ
ಸ್ರಗ್ಗ್ರಾಮಿಭ್ರಜಂ ಪೀಲಿಯು ಪೊಸದೞಿಯುಂ ಪೋಲೆ ಭೂಪಾಲಲೋಳ
ದೃಗ್ಮೀನಂ ತನ್ನ ಲಾವಣ್ಯದ ತಿಳಿಗೞಲೊಳ್[1]ಟಿ[1]ವಂದಾಡೆ ಬಂದಳ್
ದಿಗ್ಭೂಕೋಪಾಂತದೊಳ್ [2]ಪಜ್ಜಳಿ[2]ಸಿ ಪರಪುತಂ ಕಾಂತಿಯಂ ಕಾಂತೆಯೊರ್ಬಳ್ ೫೦

ಪದರಾಗಂ ಪಲ್ಲವಂ ಪೆರ್ಮೊಲೆಗೊಲೆ ನಳಿತೋಳ್ಕೊಂಬು ಕೇಶಂ ತಮಾಳಂ
ವದನಂ ಪದ್ಮಾಕರಂ ಪೆಯ್ ಲತೆ ತೊಡೆ ಕದಳೀಸ್ತಂಭಮಾಗಲ್ಕೆ ಮೆಯ್ವೆ
ರ್ಚಿದಮಾರ್ಗ ಶ್ರಾಂತಿಯಿಂದ ಬರಲಱಿಯದ ಭೂಲೋಕ ಕಂದರ್ಪದೇವಂ
ಗಿದಿರ್ವಪ್ಪ ದ್ಯಾನಲಕ್ಷ್ಮೀವಧುವಿವಳೆನೆ ತತ್ಕಾಂತೆ ಕಣ್ಗೆಡ್ಡಮಾದಳ್ ೫೧

ಆಕೆಯ ಲಾವಣ್ಯಾಮೃತ
ಸೇಕದೆ ತೃಷೆ ಮಱೆ ತರ್ಕುಮಲ್ಲದೊಡಂ[3]ತ
ದ್ವ್ಯಾ[3]ಕುಳಿತಚಿತ್ತನನವ
ಳೋಕಿಸುವನೆ ಸೋಲ್ತನಂತೆ ಮಾನವಮದನಂ ೫೨

ಅಲ್ಲಿಂ ಪೆಱಗೆ—

ತಳಿದೆಳಗೆಂಪಿಂ ಪಳಿಕಿನ
ಕಳಶಂ ಕಿಸುಗಲ್ಲ ಕಳಶದಂತಿರೆ ತಳೆದು
ತ್ಸಳದಳಧವಳವಿಳೋಚನೆ
ವಿಳಾಸದಿಂ ಮತ್ತಮೊರ್ವಳಂಗನೆ ಬಂದಳ್ ೫೩

ಒಳಗಗ್ಗಳಿಪ ಜಳದಿಂ
ಕಳಶಂ ಕಣ್ಗೆಸೆದುದಾಸ್ಯರುಚಿತಸ್ಕರನೀ
ಳಿಳನೆಂದು ಪಿಡಿದೊಡಾ ಕೋ
ಮಳೆ ಭಯದೆರ್ದೆ[4]ವೊ[4]ಯ್ವ ತುಹಿನಕರಬಿಂಬದವೋಲ್ ೫೪

ಆಕೆವೆರಸಾಕಾಂತೆಯೆಯ್ದೆವಂದು ತೃಷಾನಳತಪ್ತನಾಗಿರ್ದ ಚಂದ್ರೋದಯನ ಪೋಲೆ ನೋಡೆವಡೆಯುಂ [5]ನೂಸು[5]ವಂತೆಯುಂ, ಘನಸಾರಾಸಾರದಿಂ [6]ನವ[6]

---

[1] ಳು (ಕ ಫ) [2] ಪ್ರಜ್ವಲಿ (ಕ) [3] ತತ್ವಾ (ಖ) [4] ವಾ (ಕ ಫ) [5] ಸುಂ (ಕ)
[6] ಐದ (ಫ)

ಸಂಗೆಯ್ವಂತೆಯುಂ, ಚಂದನಚರ್ಚೆಯಂ ಚೆಲ್ಲುವಂತೆಯುಂ ಅತಿದೀರ್ಘಧವಳ ವಿಳೋಚನಂಗಳಿನಡರೆ ನೋಡಿ ನೀಡಿಲ್ಲದೆ ತೋರ್ಪ ಋಷ್ಯಾಶ್ರಮದ ಮುನಿಕುಮಾರಿಯರ ವಿವಿಧಮಹಾನುಭಾವಭಾಗನುದನ್ಯಾಂಗನಾಲಿಂಗಿತ ಕಂಠನಾದಂತೆ ತೋಱಿದಪನೀ ಕಳಶಜಳದಿನೀ ಕುಳರತ್ನಕಲಶನ ಬಚಲ್ಕೆಯಂ ಕಳೆದೆಮ್ಮ ವನವಿಹಾರವಿನೋದಮಂ ಸಫಲಂಮಾಡಿದೆಮಗಕೃತಾರ್ಥತಾಕಳಂಕಮಂ ತೊಳೆದು ಕಳೆವುದೆಂದು ಕೆಳದಿಯ ಕೈಯ ಕಳಶಮಂ ಕೊಂಡು ನೀಡೆ ಮಕರಂದಂ ತಳೆದುಕೊಂಡು—

ಕುಳಿರ್ವ ಜಳಕಳಶಮದು ಕರ
ತಳವಂ ಸೋಂಕುವುದುಮಾಲಿ[1]ಗೊಂಡು[1]ಶರೀರಂ
ಪುಳಕಿಸೆ[2]ನಾ[2]ಳದೊಳಾ ಕೋ
ಮಳೆ ತೀವಿದ ಕಮಳನಾಳಮಂ [3]ಕಳೆ[3]ವಾಗಳ್ ೫೫

[4]ನೆ[4]ಕ್ಕೆ ಕದಂಪು ಪತ್ತಿ[5]ಪೆ[5]ಡೆಗೊಂಡ ಕೊರಲ್ಪುಣೆ[6]ಜೆರ್ದ ಕೀ[6]ನಿವ[6]ಲಾ
ಪೊಕ್ಕುಡಗಿರ್ದ ಕಣ್ಕುರುಳೆಗೊಂಡರೆಬತ್ತಿದ ಬಾಯಾ ಬಲ್ಲ ಮೆ
ಯ್ಯುಕ್ಕುಟಿಸಿರ್ದ ಪೆರ್ಚಿಸಿಱಗುರ್ವಿಸೆ ಬಂದನದೊರ್ವ ಪಾರ್ವನ
ಲ್ಲೊಕ್ಕಿಟಿತರ್ಪ ಕೈಪಿಪೆಮುರಂ ತುದಿನಾಲಗೆಯಿಂದೆ ಸಕ್ಕುತುಂ ೫೬

ಆ ಪಾರ್ವನ ಬರವಂ ಕಂಡಂತನೀ ದ್ವಿಜಂ ಬಾಳದ್ವಿಜದಂತೆ ನೀರಡಸಿ ಬಾಯಂ ಬಿಡುತೆ ಬಂದಪ್ಪನೆಯ್ದೆ ಬಂದೆನ್ನ ಮೊಗಮಂ ದೀನದೃಷ್ಟಿಯಿಂ ನೋಡದನ್ನೆಗಂ ಕೃಪಣೋಕ್ತಿಗಳಂ ಕಿವಿಗೀಡಾಡದನ್ನೆಗಂ ನನ್ನೆಗೈದಾದೊಡಮಿಾತನ ತೃಷಾಗ್ನಿಯಂ ಮೞ್ಗಿಸಂಬುದುಮಾರ್ಯಪುತ್ರನಂತೆಗೆಯ್ವೆನೆಂದಿರ್ಪನ್ನೆಗಂ ಬೇಡವೆ ಬಿಸಗೊಳ್ವದಾ ಬ್ರಾಹ್ಮಣಂ ಬಂದು ಮುಂದೆ ಕುಕ್ಕುರಿಸಿ ಕುಳ್ಳಿರ್ದು ಕೊರಲಂ ನೀಡಿ ಸುರ್ಬುಗೊಂಡ ಗಡ್ಡಮುಮಂ ಮಿಾಸೆಯುಮನಗಲೆ ನೂಂಕಿ ಪೀಱುವ ತಲೆಯೇಱಂತಿರ್ಪ ಬಾಯೊಳದ್ದು ಗೈಯನಿಡುವುದುಂ ಮಕರಂದಂ—

ಎಱೆಯೆ ನಿಡಿಲ್ಪ ನೀವರದ ನೀರ್ಪನಿಗಳ್ಪೊಱ[7]ನೋಗುರ್[7]ಮೆಂಬಿನಂ
ತುಱುಗಿರೆ ಮಿಾಸೆಯೊಳ್ತಗುಳೆ ಕಣ್ಮಲರ್ಗಳ್ ಮಲರ್ದಳ್ಕೆ[8] ಪೊಯ್ಯೆ ಮೆ
ಯ್ಯೊಱಗೆ ಕೆಲಕ್ಕೆ ಕಂಟಣಸೆ ಮೆಯ್ನವಿರೊಯ್ಯನೆ ಕಂಠಕಂದಳಂ
ತೆಱೆದು ಮಿಡುಂಕೆ ಮೂಗಲರೆ ಪೀರ್ದನನುಂಗೊಳೆ ಪಾರ್ವನಂಬುವಂ ೫೭

ಅಂತು ಕಳಶದ ನೀರನೊಂದು [9]ಪನಿಯುಮನುಟಿಪದೆ[9] ತೆಗೆದು ತೇಗಿ ತಲೆಯಂ ತೂಗಿ ತಾಂಬೂಳಯಾಚನಾನಂತರಂ ಹೃಷ್ಟನುಂ ಸಂತುಷ್ಟನುಮಾಗಿ ಮಹೀಪತಿಯಂ ಪಲವು ಸೂಡ್ ಪರಸಿ ಮತ್ತಮಾ ವಿಪ್ರನಿಂತೆಂದಂ—

---

[1] ಗೊತ್ತಿ (ಫ) [2] ಪಾ (ಫ) [3] ತಗೆ (ಕ) [4] ಪೊ (ಖ) [5] ದೆ (ಕ) [6] ಣಿ (ಕ ಫ)
[7] ಸೀರು (ಕ ಫ) [8] ಯುಮನಗಲಿ ನೂಂಕಿ ಪಿಡಿತಲೆರ್ದಳ್ಕೆ (ಫ) [9] ಪನಿಯುಟಿಯದೆ (ಕ ಗ)

ಮುಂಚುವುದೆ[1]ರೆವಸನೀವಂ[1]
ಕಿಂಚಾನರ್ಘ್ಯಂ[2]ಯದವಸರೇ[2] ದತ್ತಮೆನಿಸು
ತ್ತುಂ ಚಲದಿನೀವುದಲ್ಲದೊ
ಡೇಂ ಚಾಗಮೆ [3]ದಾನಿ[3] ನೀನೆ ದಾನವಿನೋದಾ ೫೮

ಮೆಚ್ಚದೊಡೇನಿತರಜನಂ
ಮೆಚ್ಚದ ಪೆಣ್ ಮೆಚ್ಚೆ ಸೊಬಗನೆನಿಪು[4]ದರಿಗಣಂ
ಮೆಚ್ಚೆ ಕಲಿ[4]ಯೆನಿಪುದೆರೆವಂ
ಮೆಚ್ಚೆ ಮಹಾದಾನಿಯೆನಿಪುದೀವರ ದೇವಾ ೫೯

ಎಂದಾ ಪಾರ್ವಂ ಪೋಪುದುಮುಚಿತವಚನಂಗಳಂ ನುಡಿದು ನೃಪ[5]ತನೂಜಂ[5] ನಿಜೋದಾತ್ತವೃತ್ತಿದತ್ತವಿಸ್ಮಯಸ್ಮೇರಮುಖಿಯರಾಗಿರ್ದ ಮುನಿತನೂಜೆಯರಂ ನಿಜ ನಿವಾಸಕ್ಕೆ ವಿಸರ್ಜಿಸಿ ಬೞಿಯಮಲ್ಲಿಂ ತಳರ್ದಾ ಕುಮಾರಿಯರ ಬಂದ ಪಜ್ಜೆವಿಡಿದು ಪೋಗೆವೋಗೆ—

ಅವಗಾಹಂಗೈದು ಪೋದ[6]ದ್ವಿ[6]ಜಕರಿಗಳ ಕೈದುಂತುಱಿಂ ಕಾಯದಿಂದಂ
ಕವಿದೆತ್ತಂ ಪೊಕ್ಕು ನೀರೊಳ್ ಜಿರಸಿ ಬಸಿವ ನೀರ್ದಂದಲಿಂ ಗಲ್ಲವುಣ್ಗ[7]ಳ್
ಕವಿ[7]ವನ್ನಂ ತಿಂಬ ಪೆರ್ದುಂಬಿಗಳನಿರಿಸುತುಂ ಕೊಲ್ಲದೀಡಾಡಿದುತ್ಕೈ
ರವಕಂಜಪ್ರಾಯ ಪುಷ್ಪಪ್ರಕರದ ಪುದುವಿಂ ಮೆಲ್ಲಿತಾದತ್ತು ಮಾರ್ಗಂ ೬೦

ಆ ಮಾರ್ಗಂಬಿಡಿದು ಬಿಟ್ಟಿರ್ದ ಸರಸಸರಸಿಜಶಾಲೂರಶಕಲಶೈವಾಲಂಗಳೊಳಡಿಯಿಡುತ್ತುಮಿರ್ವರ್ ಕಿಱಿದಂತರಮಂ ನಡೆದು ಮುಂದೆ [8]ಮುಂದು[8]ಗೊಂಡು ಪೊಂಡಗಡಿನ ಕಡಾರಮಂ ಕಾದಿರ್ಪಂತೆ ಕಂಪಂ ಪೀರ್ದು ಕೆಂಗಱಿಯ ಪೊಱೆಯಂತಪ್ಪ ಪೂಗಳಂ ಸುಟಿದು ಬಿರಿದ [9]ಸುಟಿಯಂ[9] ಸುತ್ತಿ ನೇಲ್ದು ಜೋಲ್ದುಗೆವಣ್ಣಂ [10]ಮುಗುಳ್ಪ ಮಿಗೆ ಮಗಮಗಿಸುವೆಳವೂಗಳಿಂ[10] ಪರಿಮಳದ [11]ಬೀಡಲಂ[11]ಬಿಟ್ಟಂತಿರ್ದ ಪೊಂಗೇದಗೆಯ ಬಾಡ್ಸೇಲಿಯನೊಳಪೊಕ್ಕಂತೆ ಪೊಡೆ ತನಿಗಂಪನುಂಡು ಬಿಡೆಯುಂ ಪೊಱಮಡುವ ಮಱಿದುಂಬಿಗಳಿಂ ರತ್ನಗರ್ಭೆ ನೀಲದ ಪರಲನುಗುಳ್ವ ಚೆಲ್ವು ನೆಲಸೆ ಸೆಲಂ ಬಿಱಿಯೆ ಬೇರಿಂ ಪಣ್ತ ಬಕ್ಕೆವಲಸುಗಳುಂ, ಗಾಳಿಯ ಕೋಳಿಂ ಕಟಲ್ದು ಪಳಿಕಿನ ಪಾಸಱೆಯೊಳ್ ಘಟಿಲನೆ ಬಿಟ್ದು ಬಿಕ್ಕನೆ ಬಿರಿದು ತೋರಗಾಯ್ಗಳನೊಕ್ಕ ತಿರುಳಂ ನಕ್ಕಿ ನಾಲಗೆಯಂ ನಕ್ಕುವಂತೆ ತೋರ್ಪ ನಿಜಪ್ರತಿಬಿಂಬಕ್ಕೆ ಪುರ್ಬನಿಕ್ಕಿ

---

[1] ದೆವರವನೀವಂ (ಕ) ದೆ ಬೇಗಮನಮಂ (ಘ) [2] ಯದೇವ ಸಂ (ಗ) ಯದವಸರಂ (ಘ) [3] ಚಾಗಿ (ಕ ಘ) [4] ದು ಗಡಣಂ ಮೆಚ್ಚೆ ಕವಿ (ಕ ಗ ಘ) [5] ಮನೋಜಂ (ಗ) [6] ದ್ವಿ (ಘ) [7] ಳ್ಗವವ (ಕ ಘ) [8] ಮಡು (ಗ ಘ) [9] ಸೂಡೆಲೆಯಂ (ಕ ಗ) [10] ಮಗಳ್ದ . . ವಾವುಗಳಿಂ (ಗ ಘ) [11] ಬೀಟಲಂ (ಗ ಘ)

ಪಲ್ಲಂ ಕಿೞುವ ಪುಲ್ಲೋಡಗಂಗಳ ಮುದ್ದಿಂಗೆ ಮೆಚ್ಚಿದಂತೆಳನೀರಸವೞಿ ಬಾಯೊಳ್ ಬಸಿವ [1]ಬೆಳ್ದಿಂಗು[1]ಗಳುಂ, ವಿಪುಳಫಳಕುಚಭರಂಗಳೆಳನೀರ್ವಾಲ್ಗಳಂ ಬಾಲಸಸ್ಯಂ[2]ಗಳ ಸೂ[2]ಡುವ ಚೆಂದೆಂಗು[3]ಗಳುಂ,[3] ಎಡೆಲೆವಾಡ[4]ಗೊಯ್ಯುಗಳಿಂ[4]ಬಂದವುವೆಂಬ ಭಯ ಮಾದಂತೆ ಮಂದಾನಿಲಸಂ ಕೊರಲ್ಕುಗಿವಿಸಂ ಪೊೞಿಸಿ ಸರಸಶೀತಳಪರಿಮಳಮುಂ ಪಾವುಗಳಿರ್ದಲ್ಲಿಗೆ ಪಾವುಡಂಗಳುವುವ ಮಳಯಜತರುಗಳುಂ, ಶೀಕರಾಸಾರಸುರಭಿ ಮಾರುತನಿಂ ವನಕರಿಕಳಭಂಗಳುಮಂ ಶಬರಮನೋಮದಕರಿಗಳುಮನೊಡನೆ ಸೊರ್ಕಿಸುವ ಸಲ್ಲಕಿಗಳುಂ, ಮದಕರ್ದಮಮಂ ಬಿಡುವ ಮದಕರಿಗಳಂತೆ ಪಣೆ ಮಗುಡೆ ನಿರ್ಯಾಸಮನೊಕ್ಕಿ ಸೂಸುವ ಗುಗ್ಗುಳಂಗಳುಂ, ಕಣೆಕಾಲುದ್ದಮಾಗೆ ಪಗಿನ ಪರಲಂ ಪರಪುವ ಕರ್ಪೂರಂಗಳುಂ, ರಜಮುಮೆಸಳುಂ ಮೊಟಕಾಲ್ಪರಮಾಗೆ ಬಿರಿಮುಗುಳಂ ಸುರಿವ ಸುರಯಿಗಳುಂ, ಪೊಂನ ಸಿಪ್ಪಂ ಸೂಸುವಂತೆಸಳ್ನಿಕ್ಕುವ ಕೊಸಗುಗಳುಂ, ಚಿನ್ನ ಪೂಗಳಂ ಚೆಲ್ಲುವಂತರಲ ಸಂಕುಳಮಂ ಕೆದಱುವ ಸುರಹೊನ್ನೆಗಳುಂ, ಕೈವೊಯ್ಯುಸಗುವಂತೆ ತಳಿರ್ಗೊಂಬಂ ತಳಿರ್ಗೊಂಬು ತಾಗೆ ಪೂತು ತುಱುಗಿದ ಕಾಂಚಿವಾಳಂಗಳುಂ, ಪೊನ್ನ ಪುಡಿಯಂ ತಳಿವಂತೆ ಪರಾಗಮಂ ಸೂಸುವ ಸಂಪಗೆಗಳುಂ, ಪಣ್ಣ ಪಣಿಗೆಯ ಬಿಣ್ಪು ತಿಣ್ಣಮಾದಂತೆ ಕೆಲದ ಕುಜಂಗಳೊಳೆದೋಳ್ಗಳನಿಬಿಪುವ ಪೊಂಬಾಳೆಗಳುಂ, ಕೋಟೆ ವಾಟಿಸಿದ ಕತ್ತಲೆಯಂ ಸುತ್ತಿ ಮುತ್ತಿದ ಬೆಳ್ದಿಂಗಳ್ ಬೀಡುವಿಟ್ಟಂತೆ ಕತ್ತಲಿಸುವೆಲೆವಳ್ಳಿಯಂ ಬಳಸಿ ಕಳಿಯೆ ಪೂತ ಮಲ್ಲಿಗೆಗಳುಂ, ಮಲ್ಲಿಗೆಯ ಮುಗುಳಂ ರಾಸಿಗೆಯ್ದಂತೆ ಪೂವನೊಟ್ಟಿದಿಪ್ಪೆಗಳುಂ, ಇಪ್ಪೆಯ ಕಂಪಿಂಗೆ ಕುರುಳಿರ್ದು ಕರಮುಂಡು ನೀರಂ ಕಾಱುವಂತೆ ಸಾರಂ ಕಱೆವ ತಾಳ್ಗಳುಂ, ಕಿಸುಗಲ್ಲ ಪರಲ್ಗಳನುಗುಳ್ವಂತೆ ಬಿರಿದು[6]ಮುತ್ತಂ[6]ಬಿಡುವ ದಾಡಿಮಂಗಳುಂ, ಪೊಂಗೊಡಂಗಳಂ ಸಾರ್ಚಿದಂತೆ ಫಲಂಗಳಂ [7]ಮುಂ[7]ದೆಗೊಂಡ ಮಾದುಫಲಂಗಳುಂ, ಕಾಯ್ತುಕುಸಿವ ಕೌಂಗುಗಳುಂ, ಪಣ್ತು ಬಳ್ಕುವ ನಾರಂಗಂಗಳುಂ, ತಳಿರ್ತೊಱಗುವಶೋಕೆಗಳುಂ, ನನೆತೆಟಲ್ತ ಜಾದಿಗಳುಂ, ಮುಗುಳ್ತು ಮುಱಿವ ಮೊಲ್ಲೆಗಳುಂ, ಬಂದು ಬಟಲ್ತ ಬಾಳಚೂತಂಗಳುಂ, ತಳ್ತಡರ್ದ ಲತೆಗಳುಂ, ಕೈವಿಟ್ಟ ಸಿರೆಗಳುಂ, ಸೋರ್ವ ಸೋನೆಗಳುಂ, ಒಱೆದುಗುವ ಪನಿಗಳುಂ, ಎಟಲ್ತ ಪೊಂಬಾಳೆಗಳುಂ, ಬೀಟ್ತ ಬಾಳೆಗಳುಂ, ನೇಲ್ದ ಪಣ್ಣಳಂಗಳುಂ, ಅಲೆವ ಗೊನೆಗಳುಂ, ಮಲೆವ ಗೊಂಚಲ್ಗಳುಂ, [8]ಅಲರ್ದು[8]ಗುವ ಲರ್ಗಳುಂ, [9]ಅ[9]ಲುಗುವ ಸೆಳೆಗೊಂಬುಗಳುಂ, ಕೋಳ್ಪ ಬಂಡುಗಳುಂ, ಪನಿವ ತನಿರಸಂಗಳುಂ, ಎಟುಮುಂಡಮನಗುಬ್ಬು ನೋಡಿದೊಡಂ [10]ನೆಲೆದೋಱಿದ[10] ಕುಸುಮ ರಜಂಗಳುಂ, ತಾಳುದ್ದಮಂ ತೋಡಿ ನೋಡಿದೊಡಂ ಮಧುರಸದಿಂ ನೀರ್ಗಾಣ್ಬ ನೆಲನುಂ, ನ[11]ಡದಡ[11]ಕೆಯ ಸಸಿಗಳುಂ, ತಡಿವಿಡಿವ ನವಿಲ್ಗಳುಂ, ಮರದಿಂ ಮರಕ್ಕೆ ಲಂಘಿಸುವ ಕಪಿಗಣಂಗಳುಂ, ತಳಿರಿಂ ತಳಿರ್ಗೆ ತಳರ್ವ ಕೋಗಿಲೆಗಳುಂ, ಪೂವಿಂ ಪೂವಿಂಗೆ ಪಾಯ್ವ ತುಂಬಿಗಳುಂ, ಪಣ್ಣಿಂ ಪಣ್ಗೆ ಪಾ[12]ಱುವರ[12]ಗಿಳಿಗಳುಂ, ಕೊಂಬಿಂ

---

1 ಚೆಂದೆಂ (ಕ) 2 ಗಳ್ಗೂ (ಗ ಫ) 3 ಗಾಯ್ಗಳುಂ (ಕ) 4 ಗಾಯ್ಗಳುಂ (ಗ) 5 ಕರ (ಕ) 6 ಬಿತ್ತಂ (ಖ ಫ) 7 ಮಂ (ಕ) 8 ಮರಲ್ದು (ಗ) 9 ಮ (ಗ) 0 ನೆಲನೇಱಿ ತೋಱುವ (ಕ ಗ) 11 ಡೆವ (ಕ ಖ) 12 ಯ್ವ (ಕ ಫ)

ಕೊಂಬಿಂಗೆ ನಿಳ್ಕುವ[1]ಪುರುಳಿ[1]ಗಳುಮೆಸೆಯೆ, ಕಿಕ್ಕಿಱಿಗಿಱಿದೆಸೆವಲರ್ದುಱುಗಲುಂ ತಳಿರ ಕೆಂಪುಮಲರ ಬಿಳ್ಪುಮಲ್ಲದೆ ಬಿಸಿಲುಂ ಬೆಳ್ದಿಂಗಳುಂ ಮುಚ್ಚದ ಬನದೊಳಗೆ ಬರ್ಪಾಗಳ್—

ತೀಡಿತ್ತೊಂದೊಂದಱುಂ ತ[2]ಗ್ಗೆಱೆ[2]ದುಱುಗಲ ತಾಮುರ್ಟ್ಟಿಸೊಳ್ ಸಂದುಸಂದೋ
ಲಾಡುತ್ತುಂ ಕೂಡೆ ನೀರ್ವಕ್ಕಿಗಳುಲಿಪುಗಳಂ ಕರ್ಣದೊಳ್ತಂದು ತಂದೀ
ಡಾಡುತ್ತುಂ ತೀರದೊಳ್ ತಳ್ತೆಳಲತೆಗಳ ಪೂಗೊಂಚಲಂ ಸಿಂದು ಸಿಂದ
ಲ್ಲಾಡುತ್ತುಂ ನೀಲನೀರೇರುಹ ಸುರಭಿರ[3]ಸಂ[3] ಸಾರಸಂ ಮಾತರಿಶ್ವಂ ೬೧

ಅಂತು ಕಂದರ್ಪದೇವಂಗಿದಿರ್ವರ್ಪಂತೆ ಬಂದ ಮಂದಾನಿಳಂ ತಳ್ತಪ್ಪೆ [4]ತಣ್ಣನೆ ತಣಿದು[4] ರೂಪಕಂದರ್ಪದೇವಂ ಪೋಗೆವೋಗೆ—

ವನಲಕ್ಷ್ಮೀದೇವಿಯಂ ಪೆತ್ತಮೃತನಿಧಿಯೊ ವಿಂಧ್ಯಾದ್ರಿಚಂದ್ರೋಪಳಂ ಚಂ
ದ್ರನ ಪೆರ್ಚಿಂದುರ್ಕಿದಂಭೋ[5]ವಿಸರ[5]ಮೊ ವಿಪಿನಧ್ವಾಂತಮಾಕ್ಷೇಪದಿಂ ಕಾ
ಪಿನೊಳಿಟ್ಟಿಂದು ಪ್ರಭಾಪೂರಮೊ ಹರಿ ಗರುಡೋದ್ಭೀತಿಯಿಂ ಬಯ್ತ ಪೀಯೂ
ಷನಿಧಾನಶ್ರೀಯೊ ಪೇಡೆಂಬಿನಮುಮಳತರಂ ರಯ್ಯಮಾಯ್ತಬ್ಜಷಂಡಂ ೬೨

[6]ಅ[6]ದು ಶಂಬಶ್ರೇಣಿ [7]ಮೇ[7]ಣಲ್ಲದು ಕುಮುದಕುಳಂ ಪೊಕ್ಕ ಭೀತಾದ್ರಿ [8]ಮೇ[8]ಣ
ಲ್ಲದು ಬಿಂಬವ್ಯಾಜದಿಂ ತೋರ್ಪ ಚಳಮೆಱಗುವಂಭೋ[9]ಧರೋ[9]ನ್ಮಾಳೆ ಮೇಣ
ಲ್ಲದು ತೀರೋದ್ವೃತ್ತಮಾಳಂ ಪವಳದ ಕಣಿ ಮೇಣಲ್ಲದಬ್ಜಾತಕಿಂಜ
ಲ್ಕದ ಪುಂಜಂ ಬಿಂ[10]ಜ[10]ದೊಳ್ ಪರ್ಬುವ ಜಳನಿಧಿ ಮೇಣಲ್ಲದಂಭೋಜಷಂಡಂ ೬೩

ತಿಂತಿಣಿಯಾಗಿ ತಾವರೆಯುಮುತ್ಪಲಮುಂ ಪೆಣೆದೊಂದನೊಂದು ನಾ
ಳಂ ತಡಮಪ್ಪಿನಂ ತುಱುಗಿ ಪುಟ್ಟಿದುವೀ ಕೊಳದೊಳ್ ಪೊದಟ್ದಿವ
ರ್ಕಂತಲರ್ವಂದಮೆಂದು ಪಗಲರ್ಕನಿರುಳ್ವಿಧುಬಿಂಬಮಿಂಬುವಾ
ಬ್ಬಂತೆ ಮುಗುಳ್ಚುಗುಂ ಕುಮುದಕಾನನಮುಂ ಕಮಳಪ್ರತಾನಮುಂ ೬೪

ಕೂರ್ಪೊಗೆದದ್ರಿಕೂಟಮದನಳ್ಕಿಱಿಯುತ್ತಿರೆ [11]ಪಲ್ಲೆ[11]ವೋಗಿ ಮೈ
ದೋರ್ಪ ಕಳಂಕಮೆಂಬ ನೆವದಿಂದೆ ಸುಧಾಕರಬಿಂಬಮೊಕ್ಕು ಕೊಂ
ಡಿರ್ಪಮರ್ದಂದಮಾಯ್ತಿದು ಸರೋವರಮಲ್ಲದೊಡಿಂದುರಶ್ಮಿಗ
ಳ್ಗಿರ್ಪಣಮಿಲ್ಲದೇಕೆ ಬರೆ ತೋರ್ಪುದದೇಕೆ ಚಕೋರಚಕ್ರದೊಳ್ ೬೫

ಸ್ಮಿತನೀಲೋತ್ಪಲಪುಂಜದಿಂ ವಿಮಲತಾಸೌರಭ್ಯದಿಂ ದರ್ಪಣಾ
ಕೃತಿಯಿಂದೊಪ್ಪುವ ತತ್ಸರೋಜವನದೊಳ್ ಪೋ ಪುಟ್ಟಿದಂ ರೋಹಿಣೀ
ಪತಿಯಂತಲ್ಲದೊಡಾ ಮದಾಳಿಕಳಭಶ್ಯಾಮಾಂಕಮಾ ಸ್ವಚ್ಛದೀ
ಧಿತಿಯಾವೃತ್ತತೆ ಚಂದ್ರಮಂಗೆ ಪಿರಿದುಂ ಪೇಡೆತ್ತಣಿಂದಾದುದೋ ೬೬

1 ಕುಡಿ (ಕ) 2 ಣ್ಡಲಿ (ಕ) 3 ಸಾ (ಕ ಘ) 4 ಕ ಘ ಪ್ರತಿಗಳಲ್ಲಿಲ್ಲ 5 ಧರಸ (ಘ)
6 ಇ (ಕ ಘ) 7 ವಾ (ಕ) 8 ವಾ (ಕ) 9 ದಸು (ಕ) 10 ಬ (ಘ) 11 ತೂಂತು (ಕ)

ಬಾಳಾರ್ಕಾಮ್ಯುತಿ ಪತ್ರಿ ಪಲ್ಲವನಿಯುಃಪಾನಸ್ಥ ಮಗ್ನಾಂಗಃ
ಜ್ವಾಳಾಲಗ್ನ[1]ಪಟೋ[1]ಪಮಾನಪಟಲೀ[2]ಶ್ರಾ[3]ಮಾಂಗಕೋದ್ರಾವಧೂ
ವರ್ಗಂಗಂ ನೆರವಾಗೆ ಕುಂದಿದುದಿದಕ್ಕಾರ್ಯುಷ್ಮದೆಂಬಂತೆವೋಲ್
ವ್ಯಾಳೀಭಾವಕೆ ಕೇಬಸ್ವದಾ ಕೊಳದೊಳಂಭೋಜಾತಜಾಳಂಗಳಂ ೭೭

ಆ ನಳಿನಾಕರದೊಳ್ ಕಾ
ಡಾನೆಗಳಿರೆ ನೀಂಬುತುಂ ತವಿವಿನಂ
[4]ದೇ[4]ನನೆವುವೊ ನೆಲನಂ ಪೊ
ತ್ತಾನೆಗಳುಂ ನೀರಡುವಂತೆ ನೆಟ್ಟಿಗ್ಗಳ್ ೭೮

ಕರಿ ಮುಟುಗೆ ತತ್ಕರಾಗ್ರದ
ಸರವಿಂದದಮೆಗೆತ್ತು ನೆಳೆದು [5]ನೆಳ[5]ಪಟ್ಟತಿಕಾ
ತರ[5]ಕರಿ[5]ಕಳಭಮುಮುಟಿದಂ
ಬುರುಹಮುಮಂ ಮುಟ್ಟಲಣ್ಮದಾ ತಿಳಿಗೊಳದೊಳ್ ೭೯

ಅಮೃತಕರನಾತ್ಮಕರನಿಕ
ರಮುಮಂ ಪೊಜಗಟ್ಟಿ ತಂದು ಜಲದೊಳ್ ನೈರ್ಮ
ಲ್ಯಮನೊಂದಿಸಲಿಕ್ಕಿದವೋ
ಲಮರ್ದುವು ಬಿಸಲತೆಯ ತಂಜುಗಲಾ ತಿಳಿಗೊಳದೊಳ್ ೮೦

ಎಲರೆತ್ತಿಕೊಂಡವೊಲ್ ತೀ
ತಲತೆಯನಿನಿಸಿಸು ಬಿಸುವುನೆರೆದುದು ಬಿಸಿಲೊಳ್
ಕಲಸಿದ ನೀರ್ ಕೊಳರ್ವಕ್ಕಿಗ
ಳುಲಿದುವು ಪುಯ್ಯಲ್ಲು ನಂತಿರಾ ತಿಳಿಗೊಳದೊಳ್ ೮೧

ಪೊರ್ದಿದ ಮರದುಱುಗಲೆ ಮುಸು
ಱುರ್ದಂತಳ್ಕಿಂದಮಟ್ಟವನ್ನುಮುಮನರ್ಕಂ
ಪೀರ್ದಪನೆಂದದು ಮೆಯ್ಯಱೆ
ದಿರ್ದಂತೆವೊಲಿರ್ದುದಿಲ್ಲನಂತೆವೊಲೆಸೆಗುಂ ೮೨

ಬಸದ ನೆಟ್ಟಲ್ ಕರಮೆಸೆದುದು
ವೆಸಲಕ್ಷ್ಮಿಯೆ ಮೆಚ್ಚನಕ್ಕೆ ಪೊಕ್ಕಂತಿದೆ ಪೂ
ಬಿಸ ತಂಜುಗ[6]ಲುದಿರ್ದ[7]ವಾಕಯು
ಕೊನೆಮುಡಿಯುಂದುದಿರ್ದ ಪೂಗಳಿನ ಪೂಗೊಳದೊಳ್ ೮೩

---

[1] ಪಟೋ (ಕ ಫ) [2] ಶಾ (ಕ) [3] ತೇ (ಗ ಫ) [4] ನೀಳ್ (ಕ ಫ) [5] ಜಡ (ಗ ಫ) [6] ವನಮ (ಫ) [7] ಲಿರ್ದು (ಕ ಗ ಫ)

ಆಗಳ್ ಮಕರಂದನಿಂತೆಂದಂ—

ಅಟ್ಟಿ ಕೊಳುತ್ತುಮಿರ್ಪ ಕರಿಕುಂಭಮುಮಂಬುಜದಲ್ಲಿ ಮಾಲೆಗೊಂ
ಡಟ್ಟಳಿಯುಂ ತೆರಳ್ಚಿ ತೆರೆದೋಱುವ ಸೀಕರಮುಂ ವಿಳಾಸಮಂ
ತಾಳ್ದಿದುವೊಪ್ಪೆ ತೋರಮೊಲೆಗಳ್ ಜಲದೇವಿ ಕಟಾಕ್ಷ[1]ವೀಕ್ಷಣಂ[1]
ನೀಳ್ದಿರೆ ನೋಡುತುಂ ನಿನಗೆ ಮುತ್ತಿನ ಸೇಸೆಯನಿಕ್ಕುವಂದದಿಂ ೭೮

ಅದೆ ಕಳಹಂಸೆ ಸಾರ್ದಪುದು ಜಾಳಮೃಣಾಳ[2]ಮಿದೆಂ[2]ದು ತುಂಬಿ ಮಾ
ಣದೆ ಮುಸುಱುತ್ತುಮಿರ್ದಪುದು ಪದ್ಮಮಿದೆಂದು ಪುಳಿಂದಿ ನಿಂದು ನೋ
ಡಿದಪಳಿದಾವೆಯೆಂದು ಕೊಳದೊಳ್ ನಲಿದ[3]ರ್ದಿ[3]ಕೊಳುತ್ತುಮಿರ್ಪ ಪೋ
ತದ ರದನಾಗ್ರಮಂ ಪೊಳೆವ ಪುಷ್ಕರಮಂ ನಸುದೋರ್ಪ ಕುಂಭಮಂ ೭೯

*ನೆಬ್ಬಿಲೆಂದಚ್ಚಿಯೊಳೆ ಪಾಯ್ದ ತುಂಬಿಯೆಗೆತ್ತು
ಕಾಯ್ದು ನೀರ್ಗುಡಿವ ವನಚರಿ ಸುಪ[4]ಕ್ಷ್ಮ[4]ದಿಂ
ಪಾಯ್ದಪ್ಪಳಲೆವ ಚಿಕುರಮಂ ೮೦

ಎನೆ ಮನಮಿತ್ತು ಕೇಳುತ್ತುಂ—

ಎಯ್ದೆ ಪೋಪಿನ[5]ಮಳ[5]ವೆಯ್ದುದೆಂದಲರ್ಗಣ್ಣಿಂ
ದೆಯ್ದೆ ಪೀರ್ವಂತೆ ಬಗೆವರಸನ ನೋಟ
ಕ್ಕೆಯ್ದದಾಯ್ತೆಂದು ತಿಳಿಗೊಳಂ ೮೧

ರಾಗದೆ ರಭಸೋದ್ಧತಗ[6]ಡು[6]
ರಾಗದೆ ನೃಪಸಚಿವಪುತ್ರರೀಕ್ಷಿಸುತದಱಂ
ಪೂಗೊಳ[7]ಕಂ[7]ಬರಮಣಿಯೆನೆ
ಪೂಗೊಳನಂ ಪೊಗಬ್ಬುನಾವನೆನುತಂ ಪೊಕ್ಕರ್ ೮೨

ಪೊಕ್ಕಲರ್ವುಡಿಯಂ ನೂಂಕಿ ಕೆ
ಲಕ್ಕೆ ಪರಿಕ್ಷಾಳಿತಾಂಘ್ರಿಮುಖಕರಕಮಳರ್
ಮುಕ್ಕುಳಿಸಿಯುಗುೞ್ದು ನೀರಂ
ದಿಕ್ಕುಂಭಿಗಳೂಡುವಂತೆ ಮುದದಿಂ ಪೀರ್ದರ್ ೮೩

ಅಂತು ಪೀರ್ದು ಪಿಪಾಸಾನಲಂ ನಂದಿದಿಂಬೞಿಯುಮದಱ ಮನೋಹರತೆಯ ನಾನಂದದಿಂ ನಿಂದು ನೋೞ್ಪ ಮಾನವಮದನಂಗೆ ಮದನತಾಪತೃಷ್ಣೆ ನೂರ್ಮಡಿಸೆ ಬೞಲ್ಕೆ ನಾಲ್ಮಡಿಸೆ ಬೇಗಮಲ್ಲಿಂ ಪೊಱಮಟ್ಟು ಮಲ್ಲಿಕಾವನದೊಳಗಣಿಂ ನಡೆದಾ ಕೊಳಕ್ಕನತಿದೂರದೇಶದೊಳ್ ಪುದಿದ ತರುಷಂಡಕ್ಕೆ ಮಂಡನಮೆನಿಸಿ ಮಾವನಪ್ಪಿ

---

[1] ವಿಭ್ರಮಂ (ಗ) [2] ನಿಯೆಂ (ಕ) [3] ಟ್ಟ (ಫ) * ಫ ಪ್ರತಿಯಲ್ಲಿ ಸುವ್ವಿಸುವ್ವಾಲಿ ಎಂದಿದೆ [4] ಪಕ್ಷ (ಕ ಫ) [5] ವಾಳ (ಕ) ವಾರ (ಫ) [6] ತ (ಕ) ದ (ಖ) [7] ನಂ (ಕ)

ನಿಪ್ಪೊಸತಪ್ಪ ಮಲ್ಲಿಕಾಮಂಡಪದೊಳ್ ಮಕರಂದನುಡಿದು ತಂದು ಪಾಸಿದ ಪೊಸದೞಿರ ಪಸೆಯೊಳ್ ಬಿಸುಸುಯ್ಯುತ್ತುಂ ವಿಶ್ವವಿದ್ಯಾವಿನೋದಂ ವಿಶ್ರಮಿಸಿರ್ಪುದುಮನ್ನೆಗಮಾತಂ ಸುಪಕ್ವಸರಸಾಮೋದಿಮೃದುಮಧುರಫಲಂಗಳನಾಯ್ದು ತಂದು ಅರಸಂ[1]ಗಸುವಿಸಿ[1]ತಾಸುಂ ಮೆಲ್ದು ಮೆಲ್ದೞಿರೂೞರವಿಂದಮಂ ಮುಂಡಾಡಿಸುವಂತೆ ಪತಿಯ ಪದತಳಂಗಳನಾತ್ಮಕರತಳಂಗಳಿಂದೊತ್ತುತುಮಿರ್ಪನ್ನೆಗಂ—

ತೊಲಗೆ ಬಿಸಿಲ್ ನೆೞಲ್ಗೆ ತಲೆಯುಂ ಮರಗೋಡೆಲೆ ಕೂಡೆ ಕುತ್ತಿ ಕ
ಬ್ಬಲೆ ಕವಿ[2]ದಂದದಿ[2]ಂ ಕವಿಯೆ ಕೂಡೆ ನೆೞಲ್ಗಳಿನಾ ಕರಂಗಳಿಂ
ನೆಲರಡಿಯೆತ್ತಿ ಸುತ್ತುಡುಗಿವಂದ ಸರೋಜದ ಕೋಶದೇಶದಿಂ
ದಲಿ ಪೊಱಪಾಯೆ ಕಣ್ಗೊಳಿಸಿ ಬಂದುದು ಜೈಗಿಸ ಪೊೞ್ತು ಬೇಗದಿಂ ೮೪

ಅಡರೆ ನೆೞ[3]ಲಿೞಿವ ಬಿಸಿಲಿಂ[3]
ಬೆಡಂಗುವಡೆದತ್ತು ಗಡಣದಿಂ ತಿಮಿರದ ಮುಂ
ಗುಡಿ ಕವಿತರೆ ಭಯದಿಂ ಬೆಂ
ಗುಡುವಂತಿರೆ ತಿಮಿರಹರಣನಿೞಿವವಸರದೊಳ್ ೮೫

ಮತ್ತಮಿನಿಸೞುಂ—

ಮುನಿಹಸ್ತಾಂಬುಜದಿಂ[4]ದಮ[4]ರ್ಘ್ಯಜಳಜಾಳಂ ಬೀೞೆ ನೀಳಾಬ್ಜಕಾ
ನನದೊಳ್ ಪಾಯ್ದಳಿ ಬೀೞೆ ಜಾಱಿರ್ದೆಯೊಳ್ ರತ್ನತ್ರವಂ ಬೀೞೆ ಪ
ದ್ಮಿನಿ ಬೆಂಬೀೞೆ ಬೞಲ್ದು ಬೀೞ್ವ ಹತಕೋಕಾನೀಕದುರ್ವೆೞ್ದಕ
ಣ್ಣಸಿಗಳ್ ಭೋರೆನೆ ಬೀೞೆ ಬಿೞ್ದನಪರಾಂಭೋರಾಶಿಯೊಳ್ಭಾಸ್ಕರಂ ೮೬

ಆಗಳ್—

ಧೂಸರಮಾದುದು ಗಗನಂ
ಮಾಸಿದುದಮರೇಂದ್ರದಿಙ್ಮುಖಂ ಮೃತಮಾದಾ
ವಾಸರದ [5]ಡೆಸೆಗೆ ಚು[5]ರ್ಚಿದ
ಕೇಸುರಿಯೆನೆ ನೆಗೆದುದಪರಸಂಧ್ಯಾರಾಗಂ ೮೭

ಅಲ್ಲಿಂ ಬೞಿಯುಂ—

ಖರಕರನ ಸಹಸ್ರಕರೋ
ತ್ಕರದಾಂಕೆ ಕೆ[6]ೞ[6]ಲ್ದು ಕಿಡೆ ನಿರಾಲಂಬನಮಂ
ಬರತಳಮೆ ನೆಲಕೆ ಬಿೞ್ದಂ
ತಿರೆ ಪಸರಿಸಿ ಮಬ್ಬುರ್ಮುರ್ಬಿ ಪರ್ಬಿತ್ತಾಗಳ್ ೮೮

---

[1] ನಿರವಿಸಿಮೆಲಲಿತ್ತು (ಕ) ಗೆ ಮೆಲಲಿತ್ತು (ಘ) [2] ವಂತೆಯುಂ (ಕ) [3] ಲಳುರ್ವ ಬಿಸಿಲುಂ (ಖ ಘ) [4] ದನ (ಘ) [5] ಸೆದಗೆಗ (ಕ ಗ ಘ) [6] ನ (ಘ)

ಪ್ರಾಚೀಮುಖಮೃಗಮದಮು
ದೀರ್ಣಚಳದಳಕಂ ನಭಸ್ಥಳೀನಿಳಯವಿಭೂ
ಷೋಚಿತಮರೀಚಿ ಬರೆವರೆ
ಸೂಚೀನಿರ್ಭೇದ್ಯಮಾದುದಂದಿನ ತಿಮಿರಂ ೮೯

ಮತ್ತಮಿನಿಸಾನುಂ ಬೇಗದಿಂ—

ಆರಯ್ಯದೆ ಖರಕರನೊಳ್
ವಾರುಣಿ ವಸುವಿಭವಹೀನನೊಳ್ ನೆರೆಯೆ ದರ
ಸ್ಮೇರಾನನೆಯಾದೈಂದ್ರೀ
ನಾರಿಯ ಸಗೆಯಂತೆ ಸೆಗೆದುವಿಂದುಕರಂಗಳ್ ೯೦

ಮತ್ತಮಿನಿಸಱುಂ—

ನಿಜಕಿರಣಧಾತುನಿರ್ಝರ
ರಜೋನ್ವಿತಂ ನೀಲಲೋಹಿತಶ್ರೀನಿಳಯಂ
ರಜನಿಕರರಜತಗಿರಿ[1]ನಿಜ[1]
ರಜಮೊಗೆದುದು ಕಾಲದಶಮುಖೇಭೋತ್ಕ್ಷಿಪ್ತಂ ೯೧

ರವಿರುಚಿ ನೂಂಕೆ ಬಿದ್ದ ಪರಪಾರ್ಥಿಯೊಳಾಂಟದೆ ಮೂಡಿ ಮೂಡಣ
ರ್ಣವತಟದಲ್ಲಿ ತೇಂಕುತಿರೆ ತಾರಗೆಗಳ್ ಕವಿತಂದು [2]ತಕ್ಕೆ[2]ಗೊಂ
ಡವಿರಳರಶ್ಮಿರಜ್ಜುಗಳೊಳಾಟಿಸೆ ಮತ್ತೆ ನಭಕ್ಕೆ [3]ಸಂಧಿ[3]ಗೊ
ಳ್ವವೊಲೊಗೆತಂದನುದ್ಧತವಿಕೀರ್ಣಕರಪ್ರಕರಂ ಸುಧಾಕರಂ ೯೨

ಅಂತು ವಿರಹಿಜನಕ್ಕೆ ವಿಳಯಾನಳನಂತಿರೊಗೆತಂದ ಮೃಗಧರಮಯೂಖಮಾಲೆಯಂ ಮದನಾಗ್ನಿಜ್ವಾಲೆಗೆತ್ತು ನೋಡಲಂಜಿ ಕಣ್ಕೋರ್ಬೈಸಿದಂತೆ ಕಾಂತಾಚಿಂತಾಬ್ಧಿಮಗ್ನಚಿತ್ತನರಸಂ ನಿದ್ರಾ[4]ನಿಮೀಲಿತ[4]ನಯನನಪ್ಪುದುಂ ಮಕರಂದಂ ನೆಲಕಿಟಿಪಿದ ಮಕರಂದದಂತೆ ಕೆಲದ ಪಲ್ಲವಪ್ರಸರದೊಳ್ ಪಟ್ಟಿರ್ಪುದುಮಾಗಳಾ ಬಾಳಚೂತ[5]ದ ನೆಳ[5]ಗೊಂಜಿನ ತೊಳಪ ತಳಿರ ತೂಗುಂದೊಟ್ಟಿಲೊಳ್ ವಿನೋದವಶದಿಂ ವಸಿಯಿಸಿರ್ಪ ವಸಂತದೋಹಳೆಯೆಂಬ ಶಾರಿಕೆ ನಿಜಚಿತ್ತಪ್ರಿಯನಪ್ಪ ಚೂತಪ್ರಿಯನೆಂಬ ಶುಕಂ ಪೊಟ್ಟು ಪೋಗೆಯುಂ ಬಾರದಿರೆ—

ಗಿಡುಗಂ ಕೊಂದುದೊ ಬೇಡರಿಟ್ಟ ಬಲೆಯೊಳ್ ಮೇಣ್ ಬಿ[6]ದ್ದನೋ[6]ಪಕ್ಕವೇ
ನುಡಿದತ್ತೋ ಪಿಡಿದನ್ಯಶಾರಿಕೆ ರತವ್ಯಾಪಾರ[7]ದೊಳ್[7] ಪೊಯ್ದಳೋ
ತಡೆದಂ ಮತ್ಪ್ರಿಯನೆಂದು ನೊಂದು ತಳಿರ್ಗಳ್ ನಾಂಬನ್ನೆಗಂ ದುಃಖದಿಂ
ಗಡ ಕೀರಪ್ರಿಯಕಾಂತೆ ಸುಯ್ದು ಸುರಿದಳ್ ಭೋರೆಂದು ಬಾಷ್ಪಾಂಬುವಂ ೯೩

[1] ನೀ (ಕ ಗ ಫ) [2] ತೆಕ್ಕೆ (ಕ ಗ ಫ) [3] ಸೇದಿ (ಕ) [4] ನಿಹಿತ (ಗ) [5] ದೆಳ (ಗ)
[6] ಬ್ಬುದೋ (ಗ) [7] ದಿಂ (ಕ)

ಗೂಡಿನ ಸುತ್ತಲುಂ ಸುೞಿಗುವಮಾಲಿಸುಗುಂ ಸಲೆ ಬರ್ಪ ಬಟ್ಟೆಯಂ
ನೋಡುಗುಮೞ್ಗಮೇೞ್ಗೊಳಗಂ ಪುಗುಗುಂ ತಳಿರೊಳ್ [1]ಪೊರಳ್ಗುಮಿ
ಪೊರ್[1]ಡಿರೆ ಬಿಟ್ಟ ಚಂಚು ಬಿಸುಸುಯ್ದೆಳಮಾವಿನ ಪಲ್ಲವಂಗಳಂ
ಬಾಡಿಸುಗುಂ ಮನಂಮಱುಗಿ ಶಾರಿಕೆ ಬಾರದೊಡಾತ್ಮವಲ್ಲಭಂ ೯೪

ಅಂತು ಮಮ್ಮಲ ಮಱುಗುತಿರ್ಪನ್ನೆಗಂ—

ಕೊರಲೊಳ್ ಕಲ್ಹಾರಮಿಂಬಾಗಿರೆ ಕುಸುಮರಜೋ[2]ರಂ[2]ಜಿತಂ ಚಂಚು ಚೆಲ್ವಾ
ಗಿರೆ ಚಂಚತ್ಪಕ್ಷಜಾಳಂ ಮಳಯಜ[3]ರಸ[3]ದೊಳ್ ನಾಂದು[4]ಬೆಳ್ಪಿಂ[4]ಬೆಡಂಗಾ
ಗಿರೆ ಬೇಗಂ ಕೊಂಡು ದಾಳಿಂಬದ ಪೊಸಗುಟುಕಂ ಶಾರಿಕಾಕಾಂತೆಗಾಗಳ್
ಹರಣಂ ಬರ್ಪಂತೆ ಬಂದತ್ತುಪಗತಸಹಜಾಕಾರಮಾ ರಾಜಕೀರಂ ೯೫

ಪಿರಿದುಂ [5]ಪಚ್ಚೆಲೆದೊಂ[5]ಗಲಂ ಪುಡುಕಿ ಸುಯ್ಯುತ್ತಿರ್ಕುಮೋ ಮುಗ್ಧೆ ಮೈ
ಗರೆದಾನಿರ್ದನೆಗೆತ್ತಸಂಗಶಿಖಿಯಿಂ ಪಕ್ಷಾಳಿಗಳ್ ಪೊತ್ತೆ ಸೀ
ಕರಿವೋಗಿರ್ಕುಮೊ ಗೂಡಿನಿನ್ನೆಲಕೆ ಮೇಣ್ಬಿಟ್ಟಿರ್ಕುಮೋ ಬಟ್ಟೆಯಂ
ಭರದಿಂ ನೋಡುತುಮಿರ್ಕುಮೋ ಮಱುಗಿ ಮತ್ಪ್ರಾಣೇಶೆ ಮಿಕ್ಕಾಸೆಯಿಂ ೯೬

ಎನುತುಂ ಬಂದಾ ಶುಕಂ ಸೋಂಕಲೊಡನೆ—

ಶಾರಿಕೆ ಕನಲ್ದು ನೋಡಿ ಚ
ಕೋರಂ[6]ಗೆತ್ತಗಿದು[6] ಚಂಚುವಿಂ ನೂಂಕುವುದುಂ
ಕೀರಂ ಕಾಲ್ಪಿಡಿದೊಯ್ಯನೆ
[7]ಸಾರಿ[7] ಸರಂದೋಱಿ ಚಲ್ಲವಾಡಿತ್ತಾಗಳ್ ೯೭

ಅಱಿದು ಶುಕಪ್ರಿಯಕಾಮಿನಿ
ಗಱಿ ಗದಗದ ಸಡುಗೆ ಪಿಡಿ[8]ಗೆ[8] ಪೊಣ್ಮಿದ ಮುನಿಸಿಂ
ಪೆಱಗು[9]ಗು[9]ಡೆ ಕೀರಕಾಮುಕ
ನೆಱಗಿದನಿನಿಯಳ ಪದಕ್ಕೆ ಸಂಭ್ರಮದಿಂದಂ ೯೮

ಎಱಗಲೊಡನೆ—

ತನು [10]ತನಿಗೆತ್ತೆ[10]ಚಂಚು ಮಿಡುಕುತ್ತಿರೆ ಪೊತ್ತೆಳಗೊಂಬ[11]ನು[11]ಳ್ಳುಗುರ್
[12]ಸೊ[12]ನೆವಿಡೆ ತಾಗಿ ಸೂಗುರಿಸೆ ಕಂಠದ ತುಪ್ಪುಟಪಾಂಗಕಾಂತಿ ಕೆಂ
ಪಿನ ಪಸರಕ್ಕೆ ಪ[13]ಕ್ಕುಗು[18]ಡೆ ಪಕ್ಕದಿನೊತ್ತುತೆ ಮಿಾಱಿ ಪಾಯ್ವ ಕ
ಣ್ಬನಿಗಳೆ ನಾಗ[18]ಕೇಸರಿಗೆ ಸಾರಿಗೆ ಸಾರಿಗೆಯಾಯ್ತು ಕೋಪದಿಂ[18] ೯೯

---

[1] ಪೊರಳ್ದು ನೀಳ್ದೊ (ಗ ಫ) [2] ರಾ (ಫ) [8] ರಜ (ಗ) [4] ಬಿಣ್ಪಿಂ (ಕ ಗ) [5] ಪಚ್ಚಲೊರ್ದಂ (ಕ ಗ ಫ) [6] ಗೆತ್ತೊದೆದು (ಕ ಖ) ಗೆತ್ತೊಗೆದು (ಫ) [7] ಸಾರ (ಖ ಫ) [8] ದು (ಗ ಫ) [9] ಗೆ (ಫ) [10] ತನುಗಿತ್ತ (ಗ) ತನಗಿತ್ತ (ಫ) [11] ಸೆ (ಕ ಗ) [12] ಗೊ (ಗ) [13] ಕ್ಕೆಗೊ (ಫ) [13] ಕೇಸುರಿಗೆ ಸಾರಿಕೆ ಸಾರಿಕೆ (ಕ ಗ) ಕೇಶವಿಗೆ ಸಾರಿಕೆಯಾಯಿತು ಕೋಪದಿಂಪಿನಿಂ (ಫ)

ಪದಪಿನ್ನೀತರ್ಕೆ ಕಾಲ್ನೊಂದಪುದು ತೊಲಗಿದೇಂ [1]ಬಲ್ಮೆಯೇ ಬಂದು[1] ಸೌಭಾಗ್ಯದ ಕಂಪಂ ಬೀಱಲೇಕಾವಱಿಯವೆ ಪೊಸತೇ ನಿನ್ನ ನಾಯಾಟಪಂ ಸಾಲ್ವುದು[2]ಸಾ[2]ಲ್ಗಂತಿರ್ದುದಕ್ಕಂ ಶುಕಸತಿ [3]ಪಟಿಗುಂ[3] ಪೋಗು ನಿನ್ನಾಕೆ ಪೇಟ್ ನಿನ್ನದು ತಪ್ಪೇಂ ಸೂರುಗುಂಟಾಂ ಮುಳಿದೊಡೆ ಬಿಡು ನೀಂ ಬೇಡ ಮಿಥ್ಯಾ[4]ಪ್ರಮಾಣಂ[4] ೧೦೦

ಎಂದಿವು ಮೊದಲಾಗಿ ನೊಂದು ನುಡಿವ ಶಾರಿಕೆಯ ಈರ್ಷ್ಯಾಲಾಪಂಗಳನರಸನಾಲಿಸಿ ಮಕರಂದಸಂ ಮೆಲ್ಲನೆತ್ತಿ ಕಿವಿಯಿತ್ತು ಕೇಳುತ್ತುಮಿರ್ಪುದುಂ ಶುಕನಿಂತೆಂದಂ—

ಕಾರಣ[5]ಮಿಂ[5]ಪೆಱತುಳ್ಳೊಡೆ
ಶಾರಿಕೆ ನಿನ್ನಾಣೆಯೆನ್ನ [6]ನಾಲ್ಕ[6]ತಿಲಲಿತಾ
ಕಾರಿಗೆ ವಾಸವದತ್ತೆಗೆ
ಮಾರನಿಸುಲಾಗೆ ತರಲಱಿಯದೆ ತಣಿಸಂ ೧೦೧

ಶಿಶಿರೋಪಚಾರಮಾದೊಡೆ
ಕುಶೇಶಯಾಶಯದೊಳಾಯ್ದು ಕೊಯ್ದುಂ ಕೊರಲೊಳ್
ಶಶಿನುಣಿಪಿಯರಾ ಸುತ್ತಿದೊಡಾಂ
[7]ವಿಶದಸರೋರುಹ[7]ದ ಪೂವಸಡ[8]ಕು[8]ತ್ತಿರ್ದೆಂ ೧೦೨

ತರುಣಿ[9]ಪರಿಪ[9]ರಿದು ಕುಸುಮಾಂ
ಕುರಂಗಳಂ ತಿಱಿದು ಮುಱಿದು ತರುತಿರ್ದೆಂ ತ
[10]ಗ್ಗೆರಲಱೆಸಿಲ್ಲಱಿಯಂ ನಾಂ[10]
ಪರಿಚಂದನರಸದೊಳರ್ದಿ ಬೀಸುತ್ತಿರ್ದೆಂ ೧೦೩

ಎಂದು ಕಾಲಿ ಮೇಲೆ ಕವಿದು ಕೆಡೆದಂದದೊಳ್ ಕಡುಮುಳಿಸೆಂಬ ಕೆಸಱಿಂ ಮೆಲ್ನುಡಿಗಳೆಂಬ ತಿಳಿನೀರ್ಗಳಿಂ ತೊಳೆದು ಕಳೆದ ಕಾದಲನ ಪೆಡದಲೆಯ ತುಪ್ಪುಳಂ ವಸಂತದೋಹಳಿ ಚಂಚುಪುಟದಿಂ ಪಿಡಿದು ನೆಗಪುವುದುಮನಂತರಂ—

ಗಱಿಯೆಲ್ಲಂ ಪುಳಕಂಗಳಾಗೆ ಕಡುಪಿಂ ಪಾಯ್ದಪ್ಪಿ ನುಣ್ಪುವ್ವುಬಂ
ಪಱಿದೀಡಾಡಿ ಬಹುಪ್ರಕಾರದಕಸಂ ತೋಱುತ್ತೆ ತುಂಡಾಗ್ರದಿಂ
ದಿಱಿದೊಂದೊಂದಱ ಗಲ್ಲಮಂ ಪದಕೆ ಪತ್ತುತ್ತಿರ್ಪೆ ಬಾಯಿತ್ತು ಮೈ
ಮಱೆದೇಂ ಕಾಯ್ದು ಕಡಂಗಿ ಕೀರಮಿಥುನಂ ಕೂಡಿತ್ತೊ ಕಾದಲ್ತೆಯಿಂ ೧೦೪

---

[1] ಬಲ್ಮೆಯಂ ಬಂದು (ಕ) ಬಲ್ಸೆಯೆಂಬೊಂದು (ಘ) [2] ಪಾ (ಕ) [3] ಮುಳಿಗುಂ (ಕ)
[4] ಪ್ರಣಾಮಂ (ಕ ಘ) [5] ಮೊ (ಕ) [6] ನೊಲ್ದ (ಗ) [7] ಬಿಸದ ಸರೋವರ (ಘ)
[8] ರು (ಗ) [9] ಶರಿತ (ಘ) [10] ಗಱಿಯಂ ನಾಂ (ಗ) ಣ್ಣೆಲರಱಿದಂಸಿಲ್ನುಱಿಯಂ (ಗ)

ಅಂತು ಕೂಟ್ಟಿದಿಂಬುಟಿಯುವಾ ಕೊಳದ ಕುಮುದದ ಕೋಟಲಂಬಿನೊಳಟ್ಟು ತೋರ ದೆಱೆಯ ತುಱುಂಗಲೊಳ್ ತೆಱಂದಿಱಿದು ಪೊಱಮಟ್ಟು ತಳಾಱನಂತೆ ತೊಟಲ್ದು [1]ತೀರ ಬಜ್ಜಣಿಗೆಯೊಳ್ ತಂದ ತುಂತುರ್ವನಿಗಳಂ ತಳಿದು ಬೀಸುವೆಲರಿಂ ಸುರತಪರಿಶ್ರಮಂ ಪೋಗೆ ತದನಂತರಂ ವಸಂತದೋಹಳೆಯಿಂತೆಂದಳ್—

ವಾಸವದತ್ತೆಯಾರ ಮಗ[2]ಳೀಂ ಕಡು[2]ಜಲ್ಪೆಯಿ ಚಲ್ಲಕಾರ್ತಿಯೇ
ಲೇಸಱಿದಾಕೆ ಮೆಚ್ಚುವಳೆ ಮೆಚ್ಚಿದಳೀಗಳದಾವನಂ ಮನ
ಕ್ಕಾಸಱನಂಗಪಾತಕನನಾಯ್ತು ಗಡಾದರದಿಂ ವಿದಗ್ಧವಾ
ಣೀಸಬಿ ಕೇಳಲಟ್ಟಿಯೆನಗಾದುದು ಸಲ್ಲನೆ ಪೇಟಿದೆಲ್ಲಮಂ ೧೦೫

ಎಂದಾ ಮಹಾ[3]ಭ್ಯಾಗತನ ಭಾಗ್ಯ[3]ದೇವತೆಯಂತಾಗ್ರಹಮಂ ಬಿಸುಡದೆ ಬೆಸಗೊಂಡ ತನ್ನ ಮನಃಪ್ರಿಯೆಗೆ ಚೂತಪ್ರಿಯನೆಂಬ ಚತುರ ಶುಕಂ ಪೇಟಲ್ [4]ತೊಡಗಿತ್ತದೆಂತೆನೆ[4]—

ಕುಸುಮಾಕರದಾಕರಮೆನೆ
ಕುಸುಮಾಯುಧನೆಂದುಮಿರ್ಪ ನೆಲೆಯೆನೆ ಜಗದೊಳ್
ಕುಸುಮಸುಕುಮಾರಿಯರ ಸೌ
ಖ್ಯಸದನಮೆನೆ ಮಿಸುಪುದಸದಳಂ ಕುಸುಮಪುರಂ ೧೦೬

ಅದು ಪಿಜ್ಜಂ ಪೈಮೆಯಿಂ ಮಚ್ಚರಿಸಿ ಮಣಿಮಹೀಪಾದದಿಂದಿಕ್ಕಿ ಮೆಟ್ಟಿ
ದುರ್ದು ತಾನೆಂಬಂದದಿಂ ಭೋಗವತಿಯೆನಿಕಮಂ ನೀಳಗೇಹ ಪ್ರಭಾ ಪುಂ
ಜದ[5]ಪರ್ವಿಂ ಕೊ[5]ಯ್ದುದೆಂಬಂತಳಕೆಯಳಿಕಮಂ ಸೌಧಕೇತೂರ್ಧ್ವಹಸ್ತಾ
ಗ್ರದಿನಾಕಾಶಕ್ಕೆ [6]ಕಿಡ್ಪ[6]ತ್ತಿದುದಮರಪುರಶ್ರೀಯನೆಂಬಂತೆ ತೋರ್ಕುಂ ೧೦೭

ಸಿರಿಯಿಂ ಸೌಖ್ಯಂಗಳಿಂದುರ್ಕುವ ಸುರಪುರಮಂ ಲೀಲೆಯಿಂ ಗೆಲ್ದು, ಮಿಕ್ಕಾ
ಪುರ[7]ರಾಜಂ ಬೀ[7]ರಮಂ ಪಾಡಿಸುವವೊಲೆಸೆಗುಂ ರಮ್ಯಮಾಣಿಕ್ಯಗೇಹಾಂ
ತರದೊಳ್ ಸಂಗೀತನಾದಂ, ಪ್ರಮದವನದೊಳುದ್ಭೃಂಗನಾದಂ, ಗೃಹಾಬ್ಜಾ
ಕರದೊಳ್ ಭೃಂಗೀನಿನಾದಂ, ನೃಪತಿನಿಲಯದೊಳ್ ವಲ್ಲಕೀಸ್ನಿಗ್ಧನಾದಂ

ಯುವಭೃಂಗೋನ್ಮದಕಾರಿ ಕೈರವವನಂ, ಲಕ್ಷ್ಮೀ[8]ಮನೋರಂಜಿ[8] ಕಂ
ಜವನಂ, ಕುಟ್ಮಳಕಂಪಿ ಚಂಪಕವನಂ, ಸ್ನಿಗ್ಧದ್ರುಮಶ್ರೇಣೀತಿ ಚೂ
ತವನಂ, ಗಂಧನಿಕೇತಕೇತಕಿವನಂ, ಮಲ್ಲೀಲತಾಶಾಲಿ ಶಾ
ಲಿವನಂ, ತಳ್ತಿಱಿದೊಪ್ಪೆ ತನ್ನಗರಮಾಯ್ತು ವಿಲೋಪವಧೂಯರಾವಸಂ ೧೦೯

---

[1] ತಳಿಸೀರ (ಘ) [2] ಳಿಂತರ (ಘ) [3] ಭಾಗನ . . , (ಕ) ಭೋಗನ ಜಾಗದ (ಘ)
[4] ತಗುಳ್ದುದದೆಂತನೆ (ಕ) ತೊಡಗಿದನದೆಂತೆನೆ (ಘ) [5] ಪರ್ವಂ ಪೊ (ಘ) [6] ಕೇಳಿ (ಘ)
[7] ಮಂ ಗಂಭೀ (ಘ) [8] ವಶೋಕಂಜ (ಗ ಘ)

ಸುರ[1]ಯಿ[1]ಯ ಸೋನೆ, ಸಂಪಗೆಯ ಸೊಬ್ಪದ, ಮಲ್ಲಿಗೆವೂವಿನಜ್ಜ ಬಿ
ಳ್ಸರಿ, ಸುರಹೊನ್ನೆಯೊಂದವನಿ, ಮೊಲ್ಲೆಯ ಬಲ್ಮುಗುಳಾಲಿ, ಕೊಳ್ವ ಪಾ
ದರಿಯ[2]ರಲೆ[2]ಱು, ಕೇಸರದ ತಂದಲಗುಂದಲೆಯಾಗೆ ಸುತ್ತಲುಂ
[3]ಸ[3]ರಿಯೆ ಸಡಿಲ್ಚಿ [4]ಜೀಸುವುದು[4] ತೆಂಕಣ ಗಾಳಿ[5]ವನಾಭ್ರಲೇಖೆಯಂ[5] ೧೧೦

ಸುರಯಿಯ ಕೇಸರಂಬೊರೆದು ಕಾಂಚನಕಂಜಪರಾಗಪುಂಜದೊಳ್
ಬೆರಸಿ ತೆರಳ್ಚಿ ಸಂಪಗೆಯ ಪೂವುಡಿಯಂ ಪೊಸಪೊನ್ನ ಬಣ್ಣವಾ
ಗಿರೆ ಪರಿದಲ್ಲಿ, ಕಲ್ಲ ಮರದರ್ಬಿಯ ಬಣ್ಣವನೆತ್ತಿ ಸುತ್ತಿ ಸಿ
ದ್ಧರಸನ ಪೂರದಂತೆ ಪರಿಗುಂ. ಪರಿಕಾಲ್ವೊಸಲೆಲ್ಲಿ ನೋಡ್ವೊಡಂ ೧೧೧

ತುಱುಗಿರೆ ಪೊತ್ತು ಬಂದು ನನೆಯಂ ಬಿಮರ್ವಂತೆ ಬಱಲ್ದು ತುಂತುಱಿಂ
ಕಱಿವೆಳಮಾವುಗಳ್ ಫಲಭರಕ್ಕೆ ಬಱಲ್ದುವು ಪೆಂಪಿನಂ ನೆಲ
ಕ್ಕೊಱಗಿದ ತೆಂಗುಗಳ್, ಬಿರಯಿಯೆಂಬೆಣೆವಕ್ಕಿಗಳಂ ನಿರಂತರಂ
[6]ಮ[6]ಱುಗಿಸುವಂತು ಕಟ್ಟಲೆಯನೀವೆಲೆವಳ್ಳಿಗಳೆತ್ತ ನೋಡ್ವೊಡಂ ೧೧೨

ಬಿರಯಿಯ ಪಾಪದೃಷ್ಟಿಗಳೆ ತಾಗಿದುವೆಂದಗಿದಂತೆ ಜೂತವ
ಲ್ಲರಿ ಸೊನೆಯಿಂದೆ ತೂಪಿಱಿದು ಪಾಯ್ದುಱಿಯಿಂ ಸೊಡರ್ವಕ್ಕ[7]ನಿಟ್ಟು ಪಿ[7]
ಯ್ದಿರದೆಳಗೊಂಬು[8]ದೋ[8]ಳ ತಳಿದೀರ್ವಿಗೆಯಿಂದೆ ನಿವಾಳಿಸುತ್ತದೇಂ
ಪೊರೆವುದೊ ಸೋರ್ವ ಪಣ್ಣ ರಸದಿಂ ಸಹಕಾರ ಕುಮಾರಕರ್ಕಳಂ ೧೧೩

ಅವಧರಿಸಂಗಜನ್ಮ ತನಿಗರ್ಬಿನ [9]ಸೋ[9]ರ್ವರಸಪ್ರವಾಹದಿಂ
ದವೆ ನನೆವೊಯ್ದು ಕಾಯ್ತುಱುಗಿ ಪಣ್ತುದು ಮಾಮರನೆಂದು ಬಂದು ಬಿ
ನ್ನವಿಸೆ ವಸಂತಕಂ ಪದೆದು ಜಾಪು[10]ಪ[10]ಕಾರಿಯೆನುತ್ತೆ ಚಿತ್ರಸಂ
ಭವನಲರ್ವಿಲ್ಲನಂತಿರಿಸಿ ಕರ್ಬಿನ ಬಿಲ್ವಿಡಿವಂ ಬನಂಗಳೊಳ್ ೧೧೪

ಅಲ್ಲಿ ಲತೆವನೆಯಲ್ಲಿ, ಮಲ್ಲಿಕಾವನದಲ್ಲಿ,
ತಳಿರ ಕಾವಣದಲ್ಲಿ, ಕುಳ್ತಿರ್ವ ತಿಳಿಗೊಳದಲ್ಲಿ
ಸಂಪಗೆಯ ಜೊಂಪದೊಳ್ ಕಂಪಿಸುವ ಬಂಪದೊಳ್
ನನೆಗೊಂಚಲಂ [11]ಮುಱಿದು ವನದಲರ್ಗಳಂ ತಿಱಿದು[11]
ಮಧುವಿಂಗೆ ಬೊಬ್ಬಿಟ್ಟು ಮಧುರತೆಗೆ ಮುಂಬಿಟ್ಟು
ತನಿಗಂಪನಣ್ಪೆಕ್ಕಿ [12]ವನಜದರಲಂ ನೆಕ್ಕಿ[12]
ಕುಸುಮರಜಮಂ ತಳಿದು ಮುಸುರ್ವ ತುಂಬಿಗೆ ಮುಳಿದು

---

[1] ಗಿ (ಫ) [2] ರೆವೀ (ಖ ಗ) [3] ಸು (ಕ) [4] ಬಿಟ್ಬುದು (ಫ) [5] ನವಾಭ್ರಲೀಲೆಯಂ (ಕ) ನವಾಮ್ರ ಲೇಖೆಯಿಂ [6] ತು (ಗ) [7] ನುಂಟುಗೆ (ಕ) [8] ದಾ (ಕ ಫ) [9] ಪೂ (ಫ) [10] ಕ (ಫ) [11] ಮುಡಿದು ವನಜದರಲಂ ಪಿಡಿದು (ಕ ಗ) [12] ಕೊನೆಮುಡಿಗಳಂ ಪಿಕ್ಕಿ (ಕ)

ಕೆಂದಳಿರ್ಗೆ ಕಣ್ಣಿಟ್ಟು ಕರ್ಣಪೂರಮನಿಟ್ಟು
ಕುಂದಕುಟ್ಮಳಮೌಕ್ತಿಕಾಭರಣಮಂ ತೊಟ್ಟು
ಮಾಮಿಡಿಗಳಂ ತೆಗೆದು ಪಚ್ಚೆಸಾರಮನಿಕ್ಕಿ
ಪೂ[1]ಮು[1]ಡಿಗಳೊಳ್ ತಳಿರ ಲಂಬಣಮನೆಟ್ಟಲಿಕ್ಕಿ
ತೋರಮಲ್ಲಿಗೆ ಮುಗುಳ ಮೂಕುತಿಯನೊಸೆದಿಕ್ಕಿ
ಹಾರಮಂ ಸುರಯಿಯರಲಿಂ ಸಮೆದು ಮುಱದಿಕ್ಕಿ
ಸಿರಿಸದಲರ್ಗೇಸರಮನಲಿವ ಕುರುಳೊಳ್ಸೂಸಿ
ಸುರಿವ ಮಕರಂದಮಂ ಮುದ್ದುಮೊಗದೊಳ್ಸೂಸಿ
ಕೇದಗೆಯ ಕರ್ಣಪತ್ರಂ ಪೊಳೆಯೆ ಪಾ[2]ಲಿ[2]ಯೊಳ್
ಪಾದರಿಯ ಪಿಂಡುಗಂಕಣಮಮರೆ ಲೀಲೆಯೊಳ್
ಒಗೆಗೊಳಿಸೆ ಸಂಪಗೆಯ ನೂಪುರಂ ಚರಣಮಂ
ನಗುವಂತೆ ನನೆದೊಡವು ಮುತ್ತಿನಾಭರಣಮಂ
ನಸು [3]ಬಿರಿಯೆ[3] ಬಾಯ [4]ಕಂ[4]ಪಿಂ ಬಿರಿಸಿದೆಲರಿಂದೆ
ಪಸದನಂಗೊಂಡೆಸೆಯೆ ಮನಮೆಚ್ಚಿದಲರಿಂದೆ
ಕೈಯ ಕೆಂಪಂ ತಳಿರ್ಗೆ ಮೈಯ ಪಸುರಂ ಬಿದಿರ್ಗೆ
ಲಸನಗಂಧಮನಳಿಗೆ ಚಪಲತೆಯನರಗಿಳಿಗೆ
ಸೋಗೆಗಾಟಮನಿತ್ತು ಕೋಗಿಲೆಗೆ ಸರವಿತ್ತು
ರತಿಯ ಸೊಬಗಂ ಗೆಲ್ದು ಲತೆಯಸಂದದೆ [5]ಸೇಲ್ದು[5]
[6]ಕಾಣ್ಬ[6] ಜನಮೆನೆ ಮಿಸುಗೆ ಕಣ್ಬೆಳಗು ದೆಸೆದೆಸೆಗೆ
ನಗೆಮೊಗದ ಮಿಗೆ ನೆಗೆದ ನೆಲೆಮೊಲೆಯ [7]ಕಿಱು[7]ನೆಲೆಯ
[8]ಪೆಱೆನೊಸಲ ಪದಗೊರಲ ನಸುನಗೆಯ ಪೊಸಬಗೆಯ
ಗುರುಕಟಿಯ ಸವಿದುಟಿಯ ಬಿಡುಮುಡಿಯ ಪೊಳೆವಡಿಯ
ಸುಳಿಗುರುಳ ನಳಿತೋಳ ಚಳತರಳಲೋಚನದ
ಮೃಗಮದದ ಮಗಮಗಿಪ ನಸುಸುಯ್ಯ ಮೇಲ್ಮಯ್ಯ
ಛವಿಮುಗುಳ್ವ ಪದಪುಗುಳ್ವ ನುಣ್ಬೊಗರ ಸೆಳ್ಳುಗುರ
ಕಳರವದ ನಲೆತವದ ಮುದಮೊಸೆವ ಮದವೆಸೆವ[8]
ನಡುನಲಿವ ನಡೆನೆಳೆವ ಕುಱುನಡೆಯ ಕಣ್ಗಡೆಯ
ನಳಿತೋಳ ಕಡುಮೇಳಮಾವಳಿಪ ಸಂಚಳಿಪ
ಪುರವರದ ಕಾಂತೆಯರ್ ತರಳಾಳಕಾಂತೆಯರ್
ಲಲಿತಸುಖಮೂರ್ತಿಯರ್ ಪೊಸದೇಸೆಕಾರ್ತಿಯರ್

---

[1] ವಿ (ಕ ಘ) [2] ಳಿ (ಘ) [3] ದ (ಖ) [4] ಕೆಂ (ಕ) [5] ಪೋಲ್ದು (ಘ)
[6] ಕಣ್ಗೆ (ಘ) [7] ಬಲು (ಕ) [8] ನೆಱೆವಸಲಪದಗೊರಲ ಮೃದುವೆರಲ . . . ಮಗಮಗಿಪ ನಳನಳಿಪ ನಸುಸುಯ್ಯ ಮೆಲುಪದದ ಕಳರವದ ನಳನಳಿಪ ಮೆಲುಮಯ್ಯ ಛವಿಯುಗುಳ್ದ ಕದಪುಗಳ ಪದಪುಗುಳ್ವ ನುಣ್ಬೊಗರ ಮೆಲ್ಮಯ್ಯಕತ್ತವಿಯ ಸವಿಮುಗುಳ್ವ (ಕ)

ಸ್ಫೊಬಗಿನಿಂ ಮದನಂಗೆ ಪೂಜೆಯಂ ಮಾಡುವರ್
ವಿಬುಧವಿದ್ಯಾಧರನ ಗೀತಮಮಂ ಪಾಡುವರ್ ೧೧೫

ಅಂತು ಮಧುಕರಪಕ್ಷಪಾತ ದರದಳಿತಮಧುರಮಾಧವೀಮಂಜುಮಂಜರಿಯಿಂ ದಿವಿಜೋದ್ಯಾನಮಂ ನಸುನಗುವಂತಿರ್ದ ರಮ್ಯೋದ್ಯಾನದೊಳಗೆ—

ಎಱ[1]ಗುವ[1] ಕೈಗರಗಂಗಳೊ
[2]ಳೆಱೆಯು[2]ತ್ತೆಳನೀರ್ಗಳಂ ಕುಜಾ[3]ಳಿ[3]ಗೆ ಜಗಮಂ
ಮೆಱುಗಿಸಿ ಮನೋಜನಱಿಕೆ
ಟ್ಟೞಪಟ್ಟಿಗೆವಾರ್ವರಂತೆ ತೆಂಗಿನ ಮರಗಳ್ ೧೧೬

ತೊಳಗುವ ವನಲಕ್ಷ್ಮಿಯ ಪೊಂ
ಗಳ ಮಂಗಳಕಳಶಮೆನಿಪ ರಸಸ್ವಾದುಫಲಂ
ಗಳ ಮಗಮಗಿಸುವ ಕಂಪಿಂ
ಗೆಳಮಾವಿನ ಬಾಯ್ಗಳೊಱೆ[4]ತಪೊಲ್ ಸೊನೆ ಸುರಿಗುಂ[4] ೧೧೭

ಬಳೆಯೆ ರಸಮೊಳಗೆ ಪೊನ್ನಾ
ಯ್ತೆಳವಚ್ಚೆಯೆನಲ್ಕೆ ಕೊರ್ಬ ಪೋಳಿಪಮರ್ದಿನ ಪೊಂ
ಗಳಸಂಗಳಂತೆ ತೊಳತೊಳ
ತೊಳಗಿದುವತಿಮಧುರಸ್ವಾದುಫಲದ ಫಲಂಗಳ್ ೧೧೮

ನೀಂ ಬಯಸಿ ಬೇಡೆ ಪವಳಂ
ಕೆಂಬರಲಂ ಕಾಱುವಂತಿರಾಂ ಬಾಯ್ಬಾಯೊಳ್
ಚುಂಬಿಸುತಿ[5]ರ್ಕುಂ ರಸ[5]ದಾ
ಳಿಂಬದ ಬಿಬ್ಬಗಳಿವೆಲ್ಲಿಯವು ತರಳಾಕ್ಷೀ ೧೧೯

ಎನಿತಲರ್ಗಳನಿತೆ ಫಲಮಂ
ಜನಿಯಿಸುವೊಡೆ ಪೊಱಗೆ ಬಱಿದೆ ಪೂವಿನ ಪೊಱೆಯೇ
ಕೆಸುತನ್ಯಕುಜಮನಳಿರವ
ದೆ ನಗುವವೊಲ್ ಪಣ್ತು ಬಕ್ಕೆವಲಸುಗಳೆಸೆಗುಂ ೧೨೦

---

[1] ಎಱಿವುವು (ಕ ಫ) [2] ಳೊಱಿಗು (ಕ ಫ) [3] ತಿ (ಫ) [4] ವವೋಲ್ ಸೊಗಯಿಸುಗುಂ (ಗ ಫ) [5] ರ್ಕುಮರಸ (ಗ)

ಪೇಱು[1]ಬಱಲ್ದಿ ಪರ್ಿರವಿಂ[1]
ಪೇಱಿದ ಪಣ್ಗೊನೆಯನಿಟಿಪಲೊಡನೆ ನಿಮಿತ್ತಂ
ಬೇಱುಂಟೆ ಫಲಕೆ ಮೈವರ್ದ
ಲಾಱಿದ ಕಡು[2]ಸೋಂಬತ[2]ನಕೆ ಪೊಂಬಾಡೆಗಳೊಳ್ ೧೨೧

ಆಳವಾಳ ಜಳಬಿಂಬಿತಂಗಳಿಂ
ಬಾಡೆ [3]ಬೀಡ್ಗೊ[3]ನೆಗಳಿಂ ವಿರಾಜಿಕುಂ
ಲೀಳೆಯಿಂ [4]ಪನಸ[4]ಜಾತ[5]ಮತ್ಸಖಂ[5]
ಕೇಳ ಬೇರ್ವಿಡಿದು ಪಣ್ತುದೆಂಬಿನಿಂ ೧೨೨

ಬೀಗಿ ಬಿಗಿಯಪ್ಪಿ ರತಿಯಂ
ರಾಗದಿನಾ ಬನದೊಳತನು ಬಲಮುಟಿದು ಕರಂ
ಬಾಗಿಟ್ಟ ಬಿಲ್ಲಳೆನೆ ನಸು
ಬಾಗಿರ್ದುವು ರಸದ ಭರದಿನಸಿತೇಕ್ಷುವನಂ ೧೨೩

ಪಿರಿದಾಗಿ ಪತ್ತೆ ಕೆಂದಳ
ದರಿಸಿನವಿರಿಸಿದಳೊ [6]ಪರಿದು [6]ಪೊದೆಯಂ ರತಿ ತ
ನ್ನರಸನಲಗುಗಳನೆಂಬಂ
ತಿರೆ ಮಗಮಗಿಸುವುವು ಪೊಂಗಿ ಪೊಂಗೇದಗೆಗಳ್ ೧೨೪

ಎಲೆವಳ್ಳಿ ಪಸುರ್ಪಿಂ ಕ
ಟ್ಟಲಿಸುವುದೇಂ ಪಿರಿದೆ ಬನದೊಳಾಪುರ[7]ದೊಳ್[7] ಬೆ
ಳ್ಳೆಲೆ ಮೆಲ್ವರ ಬಾಯಂ ಕ
ಟ್ಟಲಿಸುವುದೆನೆ ಪೊಳೆವ ಪಲ್ಲ ಕಡು[8]ಗರ್ಪಿಂ[8]ದಂ ೧೨೫

ಅಳಿದಳಿತ ಕಮಳಮೃದುಕು
ಟ್ಮಳಮಧು ಮದಕೀರ ಕಳಭ ಖಂಡಿತಫಳಕೋ
ಕಿಳ ಕಬಳಿತಕಳಿಕಾರಸ
ಕಳುಷಿತ ಶತಪತ್ರಷಂಡಮಂಡಿತಮಹಿ[9]ಮಂ[9] ೧೨೬

ಮದಷಟ್ಪದಪವಿರುತಿಗೀತಂ
ಮದಕೋಕಿಲನಿನದವಾದಿತಂ ಮದಶಿಖಿನಂ
ಮದಲಲಿತಲಾಸ್ಯಮೆಸೆದುದು
ಮದನನ ಸಂಗೀತಭವನಮೆನೆ ಪುರದ ವನಂ ೧೨೭

[1] ಬಱಲ್ದಡಿವಿಡಿದೇಂ (ಕ ಘ) ಬಱಲ್ದಪರ್ೞಳಿವಿಂ (ಗ) [2] ಸೊಬಗು (ಘ) [3] ಬಿಣ್ಗೊನೆ (ಕ) ಬಿಣ್ಗೊಡೆ (ಗ) [4] ಪವನ (ಘ) [5] ಮುತ್ತು (ಗ) [6] ಪಿಡಿದು (ಕ ಗ) [7] ದಾ [8] ಗಂಪಿಂ (ಘ) [9] ತಂ (ಗ)

ಗಿಳಿಯ ಮದಶಿಖಿಯ ಕೊಂಚೆಯ
ಕೋಳರ್ವಕ್ಕಿಯ ಕುಕಿಲ್ವ ಬಕದ ಕಳಹಂಸೆಯ ತ
ತ್ತಿಳಿಯ ಪರಭೃತದ ಪುಳಿಳಿಯ
ಕಳಕಳಮಂಗಜನ ಬಳದ ಕಳಕಳಮೆನಿಕುಂ ೧೨೮

ಆ ಬನಕ್ಕೆಪೋಪ ಬರ್ಪ ಬಟ್ಟೆಯೊಳ್—

ಪುಲಕಂ ಕೈಯಿಂಗೆ ಮಾಣ್ಬುದೆಂಬ ಬಗೆಯಿಂ ರೂಪಂ ಕರಂ ಮೆಚ್ಚಿಯುಂ
ತಲೆಯಂ [1]ತೂಗದೆ ಸಾಂದ್ರಘರ್ಮಜಲ ವಿಕಸತ್ಸ್ವಾತುರರ್ ಚಿತ್ರ[1] ಭೂ
ತಲದೊಳ್ ನಾಂಟಿದ ಬೆಂಟಿನೇಂ ಬಗೆಗೆ ನೀರ್ವೋಯ್ವಂತೆ ಶೃಂಗಾರ ಶೀ
ತಲಕೋಯಂಗಳನಾಂತು ಪಾಂಗೆತಳದೊಳ್ ಪೊಯ್ವರ್ ಪ್ರಸಾದಾಂತೆಯರ್ ೧೨೯

ಮತ್ತಮಾ ಬನ[2]ಮುಂ[2] ಬಳಸಿ ಬೆಳೆದು—

ಅರಗಿಳಿವಿಂಡು ಪತ್ತೆಲೆಯ ಪಂದರದೊಳ್ ಲೊಗೆದೊಪ್ಪೆ ತಟ್ಟೆಯಂ
ತಿರೆ ತನಿಗರ್ಬುಗಳ್ ರತಿಯ ಕಾಮನ ರಮ್ಯವಿವಾಹಗೇಹದೊಳ್
ವಿರಚಿಸಿ ಪತ್ತೆಯೊಳ್ಗಲಿಯುಂ ಮಧುಕೋಳ್ಗೆ ಪೊನ್ನ ನೀರ್ಗ[3]ಳಂ
[4]ಸ[4]ರಿಯಿಸಿದಂತೆ ಕೆಂಪುವಡೆದೇಂ ಪಸು[5]ಗೊಂಡವೊ[6] ಗಂಧಶಾಲಿಗಳ್[6] ೧೩೦

ಬಾಸಣಿಸ[7]ಕೆಂ[7]ಪು ದೆಸೆಯುಂ
ಬೀಸುವ ಬನದೆಲರಿನೊಲೆವ ಶಾಲಿವನಂಗಳ್
ಸೂಸುವ ಮಣಲಿಂ ಮಾಣಿಕ
ವಾಸಜೆಗಳುಮಲ್ಲಿ ಬಳೆವ್ವವೆನೆ ಕರಮೆಸೆಗುಂ ೧೩೧

ಇಡಿದಾಂತು ಫಲದಿನೊಱಗುವ
ಕಡು[8]ಗೆಂ[8]ಪಂ ತಳೆದು ತೋಱ [9]ನೀಳದ[9] ತೆನೆಯುಂ
[10]ಪಿಡಿ[10]ದೆಸೆವುವು ಬೋದಿಗೆಯುಂ
ಗವಿಗೆಯು[11]ನಾಂತಾಂತ[11]ಕಂಭಮೆನೆ ಕುಮುದಂಗಳ್ ೧೩೨

ಸುರಕುಜದ ಪಣ್ಣಿನಿತಾ
ದರಿಸೆ ಸುರರ್ ತಮ್ಮ ನವ[12]ಯ[12] ಶಾಲಿಯ ತೆನೆಯುಂ
ಸುರಲೋಕಕ್ಕಾಡಕುವವೋ
ಲರಗಿಳಿಗಳ್ ಕರ್ಚಿ ಸಾರ್ದೆ ನೆಗೆವ್ವವು ನಿಚ್ಚಂ ೧೩೩

[1] ತೂಗದ ಸಾಂಘಜಾಲ ವಿಲಸತ್ಸ್ವಾತುರೊಚ್ಚಿತ್ರ (ಗ) [2] ಶ್ಯಂ (ಫ) [3] ದೊಳ್ (ಕ) [4] ಧ (ಖ) [5] ರೋಡವು (ಕ) [6] ಯುಂ (ಫ) [7] ಕಂ (ಫ) [8] ಗಂ (ಗ) [9] ಪವಳ (ಫ) [10] ಬಿಡ (ಕ ಫ) [11] ನಿರಂತರ (ಕ ಫ) [12] ಯಿ (ಗ)

ಅಂತು ಸೊಗಯಿಸೆ—

ವನಶ್ರೀ ನೀಳ್ಮೊಳ್ ನೆಗೆದ ನಂದನಮುಂ ಪಿಡುತ್ತುಲಸ್ಥ ನೆ
ಲ್ಲನೆ ನಡೆಗೊಳ್ವ ತ್ವಾ[1]ರಗೆ[1]ಗಳುಚ್ಛಳಿಸುವ ಮಣಿ[2]ಪ್ರಕಾಶಮುಂ[2]
ಶ್ರೇಣಿಗಳ ಪಂಕ್ತಿ ತೋರಣದೆರೆ[3]ಯುಂ[3] ಮುಗಿಲಟ್ಟಳೆಯೊಳ್ ತುಂಗಕೇ
ತನತತಿ[4]ಜ್ವೈ[4]ತ್ರಮುಂ ಪುದಿದು ಪೊತ್ತಿರೆ ತಾಂ ಕಪಿರಾಜಪುಲ್ಲಿಸಾ ೧೩೪

ಇದು ವಿದಿತವಿವಿಧಪ್ರಬಂಧವನವಿಹಾರಪರಿಣತಪರಮಜಿನಚರಣಾರಮ್ಯ [5]ಹೈಮಾ[5]ಚಲಶೀರ್ಷ್ಟಲಿತ
ಪವಿಮಯೂಖಮಂದಾಕಿನೀಮಜ್ಜನಾಸಕ್ತ ಸಂತತಶ್ರೀಕೃತದಾನಾಮೋದಮುದಿತ
ಬುಧಮಧುಕರಪ್ರಕರ ಕವಿರಾಜಕುಂಜರ ನೇಮಿಚಂದ್ರ ವಿರಚಿತಮಪ್ಪ
ಲೀಲಾವತಿಯೊಳ್ ವನವಿಹಾರ ವರ್ಣನಂ ಷಷ್ಠಾಶ್ವಾಸಂ
ಸಂಪೂರ್ಣಂ

[1] ವರೆ (ಖ) [2] ಪ್ರವಾಳಮುಂ (ಕ) ಪ್ರಭಾವಮುಂ (ಗ ಘ) [3] ಯುಂ (ಗ)
[4] ಢ್ಯ (ಕ ಗ ಘ) [5] ಹರ್ಮ್ಯಾ (ಕ ಘ)

## ಸಪ್ತಮಾಶ್ವಾಸಂ

ಶ್ರೀರಮಣೀಪ್ರಿಯಸಂ ಗಂ
ಭೀರತೆಯಿಂ ಪೋಲ್ತು ಪಾರ್ಥಿಯಂ ಪೋಲ್ತುದಱಿಂ
ಧಾರಿಣಿಯುಂ ಕಾವುದತಿ
ಸ್ಫಾರಂ ತತ್ಪುರದ ಗಿರಿವಿಶಾಳಂ ಸಾಳಂ ೧

ಕಾವುದಿದು ತನ್ನ ಪಡೆದ ಧ
ರಾವಳಯಮನೆಂದು ಪುರದ ಕೋಂಟೆಗೆ ಧಾತ್ರಂ
ಜೀವಂಬೊಯ್ದಂತಿರೆ ಪರಿ
ಖಾವಾರಿ ತರಂಗಬಿಂಬ[1]ತರಳಿತ[1]ಮೆಸೆಗುಂ ೨

ಕೋಟೆಯ ಕೊಸೆದೆಸೆ ಸೆಗೆದಿಱ
[2]ವಾಟಿಸೆ[2]ಕುದುರೆಗಳನವಱ ಕಾಲ್ ಸಡುಮುಗಿಲೊಳ್
[3]ನಾಟುತಿರೆ[3] ದಿನಕರಂ ಬರ
ಲಾಟಿಸುವಂ ದಕ್ಷಿಣೋತ್ತರಾಯಣಯುಗದೊಳ್ ೩

ಮುಗಿಲಂ ಮು[4]ಟ್ಟಿದ[4]ಪೊಂಗೋಂ
ಟೆಗೆ ತರದಿಂ ತೆನೆಯ ತುಱುಗಲೆಡೆದೆಱಪುಗ[5]ಳಿಂ[5]
ಸೊಗಯಿಸಿದು[6]ವು[6] ನಡೆಗೆಟ್ಟಿರೆ
ಭಗಣಂ ಸಲೆ ಬಟ್ಟೆಗೊಟ್ಟವೊಲ್ ಸುರರಾಜಂ ೪

ಕೊನೆ ನಿಮಿರ್ದಟ್ಟಳೆಗಳ ಕೇ
ತನರಕ್ತಪಟಾಳಿ ಕವಿಯೆ ಮೊಗದೊಳ್ ಮೊಗಸು
ತ್ತಿನನ ಪಸುರ್ಗುದುರೆ ಕೋಂಟೆಯ
ತೆನೆಯೊಳ್ ಗಿಳಿವಿಂಡು ಕವಿ[7]ವ[7]ವೊಲ್ ಕಱಮೆಸೆಗುಂ ೫

ಬಿಸಿಲಂ ಪೊಂಗಳಸಂಗಳಚ್ಚವೆಳಗಿಂ ತಳ್ಕೈಸುತುಂ ತಬ್ಬಿ ಚುಂ
ಬಿಸುತುಂ ವ್ಯೋಮಮ[8]ನುಚ್ಚ[8]ಕೇತುಚಯದಿಂ ನೀಲಾಭ್ರಮಂ ಮೇಲೆ ನಿ
ರ್ಮಿಸುತುಂ [9]ಧೂಪಜಧೂಮ[9]ದಿಂದ ಪಟಹಪ್ರಧ್ವಾನದಿಂ ಕೂಡೆ ಘೂ
ರ್ಣಿಸುತುಂ ದೇವಕುಳಂ ಕುಳಾದ್ರಿಕುಳದಂತಲ್ಲಿರ್ಪುವವ್ಯಾಕುಳಂ ೬

---

[1] ಚುಂಬಿತ (ಗ) [2] ದಾಟಲಿ (ಕ) ವಾಟದೆ (ಘ) [3] ನಾಟದಿರೆ (ಕ ಘ)
[4] ಟ್ಟುವ (ಘ) [5] ಳೀಂ (ಕ ಘ) [6] ವೊ (ಕ ಘ) [7] ದ (ಕ) [8] ನಚ್ಚ (ಖ)
[9] ದೂವಟಕೂಟ (ಗ)

ಜಯವೊಡೆದಿಕ್ಷು ಚಾಪಮೆನೆ [1]ಜ[1]ರ್ಬುವ ಪುರ್ಬು ಪಟ್ಟಂಜೆ ಲೋಚನಾ
ಸಿಯ ಪೊಳಪೇೞೆ ಪೀವರಕುಚಂ ಕರಿಕುಂಭದ ಚೆಲ್ವನೆಯ್ದೆ ಕೈ-
ಗೆಯೆ ಜಗಮಂ ಗೆಲಲ್ ಸಮಱಿದಂಗಜನೊಡ್ಡಣದಂತೆ ಸೂಳೆಗೇ
ರಿಯ ಮಣಿಮತ್ತವಾರಣದೊಳಿರ್ಪುದು ವಾರವಿಳಾಸಿನೀಜನಂ ೭

ಮದನನೃಪಂಗೆ ಬೀಸುವಲರ್ಚಾಮರಮಂಗಜಚಕ್ರವರ್ತಿಗೆ
ತ್ತಿದ ವಿಪುಳಾತಪತ್ರಮತನುಕ್ಷಿತಿಪಾಲನ ರಾಜ್ಯಲಕ್ಷ್ಮಿಯೇ
ಱಿದ ಮೃದುಪೀಠಮಾದ ನಗೆಗಣ್ಗಳ ವೃತ್ತಕುಚದ್ವಯಂಗಳ
ಗ್ಗದ ವದನಾಂಬುಜಂಗಳ ಬೆಡಂಗಿಯರಲ್ಲಿಯ ಸೂಳೆಗೇರಿಯೊಳ್ ೮

ಅಂಗಳದೊಳ್ ಪೊದದ್ದ ಸಯೆ ಕೌಮುದಿ ಮುಗ್ಧೆಯರಿಂದುಕಾಂತಗೇ
ಹಂಗಳ ನೋಡಿ ಪೊಕ್ಕವಱ ಬೆಳ್ವೆಳಗಂ ಬೞಿಸಂದು ಬಂದ ಬೆ
ಳ್ದಿಂಗಳೆ ಗೆತ್ತು ನೀಳನಿಳಯಂಗಳ ಕಚ್ಚುಲೆಯತ್ತ ಸಾರ್ದೊಡಾ
ಲಿಂಗಿಪರಲ್ಲಿ ಮೆಯ್ಯಱಿದ ವಲ್ಲಭರಾಱಿಸಲಂಗಜಾಗ್ನಿಯಂ ೯

ನಡೆ ನೋೞ್ಪರ ಕಡೆಗಣ್ಣಿಂ
ಕಡುನಲ್ಲರ ಮನಮುಮೊಡನೆ ಪೊತ್ತುವು ಪುರದೊಳ್
ಮಡದಿಯರ ಮೊಲೆಯನಲ್ಲದೊ
ಡುಡಿಯದೆ ಬಳ್ಬಳಿಕೆ ವಡೆದ ಬಡನಡು ಭರದಿಂ ೧೦

ಎಳಸೋರ್ಕಂ ಸೂಸೆ ಕೆಯ್ತಂ [2]ಮುಗುಳಸು[3]ಗುಟೆ ಮಂದಸ್ಮಿತಂ ಮೋದೆ ಕಂಪಿಂ
ದಳಿಯಂ ವಕ್ತ್ರಾಬ್ಜಮಿಂಪಂ ಕಱೆಯೆ ಕಳರವಂ ಬೀಱೆ ಸೌಭಾಗ್ಯಮಂ ಭ್ರೂ
ಚಳಿತಂ ಕಂದರ್ಪಚಾಪಕ್ಕತನುನೃಪನ ತೋಳ್ಗೀಯೆ ಕೂರ್ವಾಳ ಬಂಬ
ಲ್ವೆಳಪಂ ನೇತ್ರತ್ರಿಭಾಗಂ ಸುಟಿವುದು[3]ಪೊಬಲೊಳ್[3] ವಾರನಾರೀಕದಂಬಂ

ಮೃಗಮದಮೆಯ್ದೆ ಕಣ್ಣ ಬೆಳಗಿಂ ಮಲಯೋದ್ಭವದಂತೆ ತೋಱೆ ತುಂ
ಬಿಗಳಿದಱಚ್ಚ [4]ಗರ್ಪು[4]ಗಳಸುಂಡೆಳಗರ್ಪನೆ ಪೋಲ್ತುಪೆಂಬವೋಲ್
ನೆಗೆಯೆ ತೆರಳ್ದ ಕಂಪಿನೆಲರೊಳ್ ನ[5]ಱು[5]ಸುಯ್ಗಳ ಗಾಳಿ ತೋಟ್ಟಿಯಂ
ತೆಗೆ[6]ದು ಮಗುಚ್ಚೆ[6]ಕತ್ತುರಿ ಮಗುಟ್ಟುವರಲ್ಲಿಯ ಘಟ್ಟಿವಳ್ತಿಯರ್ ೧೨

ತನಿಗಂಪ[7]ನೆ[7]ತ್ತಿ ಪುಗಲರಿ
ದೆನಿಸುವ ಸುರಿದರಲ ಬಂಡು ಕಣೆಕಾಲುದ್ದಂ
[8]ಜೆನಕೆನಿಸುವ ಪೆಂಪಿನ ಪೂ
ಏಸ ಸಂತೆ ಕರಂ ಮನೋಹರಂ ಪುರವರದೊಳ್ ೧೩

---

[1] ಪ (ಘ) [2] ಮುಗುಳೆ (ಗ) [3] ಪುರದೊಳ್ (ಕ) [4] ಗಂಪು (ಕ ಘ) [5] ಸು(ಕ ಘ)
[6] ಯೆ ಮಗುಳ್ಚೆ (ಗ) [7] ನೊ (ಕ ಘ) [8] ಬ (ಗ)

ತರಳಾಪಾಂಗಂಗಳೊಳ್ ಮಚ್ಚರಿಪಲರ್ಗಣೆಯಂ ಕಟ್ಟಿ ತೂಪಂದದಿಂ[1]ಚಾ
ಮರಮಂ ವಕ್ಷೋಜಪೀಠಸ್ಥಿತಮದನನೃಪಂಗೆತ್ತುವಂತೆತ್ತಿ ಪೂಪಂ
ದರಹಾಸಶ್ರೀಯನೀವಂತಿರೆ ಪೊಸಸಸೆಗಳ್ಗಂತವಂ ಸುಯ್ಯ್ವ ಕಂಪಿಂ
ಪೊರೆವಂತಾ ಸಂತೆಯಿಂದಂ ತೊಲಗದು ಸತತಂ ಪುಷ್ಪಲಾವೀಕದಂಬಂ

ಎಲೆ ತಮ್ಮ ಕದಂಪಿನ ಮಾ
ರ್ತಲೆ[2]ಯೆಂದೀಕ್ಷಿಸಿದ ಮಾಲೆಗಾರ್ತಿಯರಲರ್ಗ
ಣ್ಮಲರ್ವೆಳಗು ಸಟ್ಟವೋಲ್ ಬಿಳಿ
ಯೆಲೆಗಳ್ ತಂಬುಲಿಗವಸರರೊಳ್ ಕರಮೆಸೆಗುಂ ೧೫

ಪಸರಿಸುವ ಘಟ್ಟವಳ್ಳರ
ಪಸರದ ಪೊಸಗಂಪಸಲಸದುಂಡಬ್ಬುಮೆಯಂ
ಪೊಸೆದು ಕಳೆವಂತೆ ಗಂದಿಗ
ವಸರದ ಗಂಧಕ್ಕೆ ಪಾಯ್ವುವಳಿಗಳ ಬಳಗಂ ೧೬

ಆಗಸಮನುಗಿವ ಮಸೆಗಳ
ದೇಗುಲದಿಡಿವ್ರಗಳೋಳಡಿಯನಿಡಲಜಿಯದೆ ತಾ
ರಾಗಣಮಿಳೆಗಿಬಿದಂತೆವೊ
ಲಾಗಿರ್ಕುಂ ಪುರದ ಕಂಚಗಾಡಿಜೆ ಪಸರಂ ೧೭

ಶರಸಿಧಿಯೆಂಬ ಕೆಯ್ಯ ಬೀಳಸಂ[3] ಬಿದಿಯೊರ್ಬುಳಿಮಾಡಿ ಕೂಡಿದಂ
ತಿರೆ ನವರತ್ನರಾಶಿನಿಕರಂ ಕನತ್ರಾಜಳಮಕರಶ್ರೀಯಿಂ
ಕರಗಿದೊಡಚ್ಚು ಪೆಟ್ಟಿದವೊಲೊಟ್ಟಿರೆ ಪೊಂಗಳ ಬೆಟ್ಟು ಮುಂದೆ ಬ
ಜ್ಜರವಸರಂಗಳಚ್ಚರಿಯನೀವುವು ನೋಡೆ ಕುಬೇರ ಲಕ್ಷ್ಮಿಗಂ ೧೮

ಆ ಬಜ್ಜರಸಿರಿಗೆ ಪೊಚ್ಚ ಪೊಸ ಪಸದನಮೆನಿಸಿ—

ತೊಳಗಿದುವು ಪಂಚರತ್ನದ
ಬೆಳಗಂ ಕೊಯ್ವೊಟ್ಟಿದಂತಿರೊಟ್ಟಿ[4]ದ[5]ಪಟ್ಟಾ
ವಳಿಯ ದುಕೂಲದ ಚೀನದ
ತ್ರಳಿರ್ವಟ್ಟೆಯ ಪಟಿಯ ವಟಿಯ ದೂಸಿಗವಸರಂ ೧೯

ಅಂತು ಪೊಗಪ್ತೆಗೆ ನೆಲೆವನೆಯಾಗಿ ಸಿರಿಗೆ ನೆಲೆಯುವುದಜಿಂ ಪಾಲ್ಗಡಲಂತಾಗಿ, ಕಲ್ಪಕುಜಾಸ್ಪದಮಾದ ಮೈವೆಂಬಿಂ ಮೇರುಗಿರಿಯಂ, ಅಂತರ್ಗತ ತ್ರಿಭುವನ

---

1 ಬಂಧುರವಕ್ಷೋಜಾತಮಧ್ಯ (ಫ) 2 ಯಂದಿಟ್ಟ (ಫ) 3 ಳಿಯಂ (ಫ) 4 ರೆ (ಕ)
5 ಚಿನ್ನದ (ಕ ಗ ಫ)

ವಿಭವಮಾದ ಕಾರಣದಿಂ ಕೇವಳಜ್ಞಾನಮುಂ, ಸದಾಸಗಜಾಳಂಕೃತಮಾದ ಪೆರ್ಮೆಯಿಂ ಪಶುಪತಿಪ್ರತಿಮೆಯುಂ, ನಿರಂತರೋಚ್ಚತುರಂಗಾಕೀರ್ಣಮಾದ ಕೀರ್ತಿಯಿಂ ಕೇಳೀನಿಕೇತನಮುಂ, ಅಂಗನಾಭಿರಾಮಮಾದ ಪೆಂಪಿನಿಂ ಪ್ರಾಜ್ಯ ರಾಜ್ಯಾಂ[1]ಗದಿರವಂ,[1] ನಿರುಪಮಸರಾವತಾರಮಾದ ಸೆಗಟ್ಟಿಯಿಂ ಪಾಂಡುಕುಳಮುಂ, ದೇವಕುಲಾಧಿಷ್ಠಿತಮಾದ ವಿಖ್ಯಾತಿಯಿಂ ನಾಕಲೋಕಮುಂ, [2]ವೆಥಿಸ[2]ನಾಥಮಾದ ದೆಸೆಯಿಂ ದಶರೂಪಕಮುಮಂ ಪೋಲ್ತು ಸೊಗಯಿಸಿದುದಂತುಮಲ್ಲದೆಯುಂ—

ಆಗಟಂಭೋರಾಶಿ ಸಾಳಂ ಬಳಸಿ ಬಳೆದ ವೇಳಾಚಳಂ ವೀಧಿಗಳ್ ಸಿಂ
ಧುಗಳತ್ಯುತ್ತುಂಗ [3]ದೇವಾಲಯತತಿಗಳೆ ತಳ್ತ[3]ದ್ರಿಗಳ್ ರಮ್ಯಗೇಹಾ
ಳಿಗಳೂರ್ಗಳ್ ಪೆರ್ಮೆಯಿಂ ತಾನೆನೆ ಜನಮೊದವಿರ್ದಾ ಪುರಂ ಪೆಂಪು ತನ್ನೊಳ್
ಮಿಗೆ ಜಂಬೂದ್ವೀಪಮುಂ ಪೋಲ್ತಿರೆ ಸುರಗಿರಿವೋಲ್ ರಾಜಿಕುಂ ರಾಜಗೇಹಂ ೨೦

ಬಗೆಗೊಳ್ಗುಂ ಮದದಂತಿಶಾಲೆಗಳಿನತ್ಯುತ್ತುಂಗಜಾತ್ಯಶ್ವಶಾ
ಲೆಗಳಿಂ [4]ಸುತ್ತಿದ[4] ಜೇನಸಾಲೆಗಳಿನೊಪ್ಪಂಬೆತ್ತ ಸಂಗೀತಶಾ
ಲೆಗಳಿಂ ವಿಶ್ರುತಮಂತ್ರಶಾಲೆಗಳಿನೊ[5]ಳ್ಪಂ[5] ತೀವಿದಾಸ್ಥಾನಶಾ
ಲೆಗಳಿಂ ಕೌತುಕಕೇಳಿಶಾಲೆಗಳಿನಾ ರಾಜೇಂದ್ರರುಂದ್ರಾಲಯಂ

ಸಿತಮಂದುರಾಗ್ರಜನಿತ
ಪ್ರತಿಬಿಂಬಮನಿತರ ತುರಗಮೆಂದಿಸ ಹಯಸಂ
ತತಿ [6]ಕಿಳ್ಜಿಱಿ ಕಿಳಿರ್ದಪುವು ಧೈ
ಪತಮತಿ[6]ಶಯಮಾಗೆ ರಾಜವಾಜಿಗಳವಱೊಳ್ ೨೨

ತುಱುಗಿ ತುಂಬಿಗುರುಳ ಬಂಬಲಿದೆ ಕಪೋಲರಂಗದೊಳ್
ತುಟಿಂಕೆ [7]ಪೊಂಗರಂಗದೊಳ್[7] ಮಲಂಗೆ ವಿಜಯಮಂಗದೊಳ್
ಮಿಱುಗೆ ಪಲ್ಲ ಚವಿಗಳೊಲಿದು ನೆಲಸೆ ಚೆಲ್ವುಯಾನದೊಳ್
ಬೆಡಂಗು ಬಳೆಯೆ [8]ಮಾ[8]ಸದೊಳ್ ಮನಂ ತೊಡಂಕೆ [9]ಗಾ[9]ಸದೊಳ್
[10]ನೆ[10]ಱೆಯೆ ನವಪಯೋಧರೋತ್ಥ ಕುಂಭಮುಲಿಯೆ ಪಾದದೊಳ್
ಜಳಾಂದುಕಂ ವಿನೋದದೊಳ್ ಕಡಂ[11]ಗೆ[11]ಮಧುರಮೋದದೊಳ್
[12]ಪ್ಪಿ[12]ಱಿದು ಪುಗುಗುಮಂಗನೆಯರುಮಂಕದಾನೆಯುಂ [13]ನಮ[13]
ಸ್ಸಿಕಾಮುನಿಖಿಳಭವನಮುಂ ತದೀಯರಾಜಭವನಮುಂ ೨೩

---

1 ಸಧಿರಮುಂ (ಕ) ಸಿಬಿರವಾದ (ಘ) 2 ವಿತ್ತೇಶ (ಗ) 3 ದೇವಾಯತನತತಿಗಳೆಳ್ದದ್ರಿಗಳ್ (ಕ) 4 ವಿಶ್ರುತ (ಘ) 5 ಳ್ಪಂ(ಗ) 6 ಕೆಳಱಿಕಿಳಿಱುವುವು ಧಾರಿತಮತಿ (ಗ) 7 ಸೊರ್ಕಪಾಂಗದೊಳ್ (ಕ ಘ) 8 ಮೋ (ಘ) 9 ದಾ (ಕ ಗ ಘ) 10 ಮೆ (ಕ ಗ ಘ) 11 ಗಿ (ಕ) 12 ನೆ (ಘ) 13 ಮನಂ (ಕ ಘ)





ತರುಣೀಲೋಚನಚಂದ್ರಿಕಾಮಳಯಜಪ್ರಕ್ಷೋ[1]ದ[1]ಮಂ ಕಾಮಿಸೀ
ದರಹಾಸೋಜ್ಜ್ವಲಮಲ್ಲಿಕಾಮುಕುಳಮಂ ಕಾಂತಾಮುಖೇಂದುಪ್ರಭಾ
ತರಳೋದ್ಯದ್ಮದುಕೂಲದೀರ್ಘಪಟಮಂ ತಳ್ಕೈಸಿ ತದ್ರಾಜಮಂ
ದಿರಲಕ್ಷ್ಮೀವಧು ಕೂಡೆ ಬೆಳ್ಪಸದಸಂಗೊಂಡಂತೆ ಕಣ್ಗೊಪ್ಪುಗುಂ ೨೪

ತರುಣೀನೇತ್ರಪ್ರಭಾಕೌಮುದಿಯಿಸುದಿರ್ವ ಚಂದ್ರೋಪಳಾಗಾರಜಂಮೂ
ತ್ಕರದಿಂದಂ ನಾಂದು ನೀಡುಂ ಶುಕಹರಿತಹರಿದ್ವೇದಿಕಾಶಾಡ್ವಲಕ್ಕಾ
[2]ತುರಿಸುತ್ತುಂ[2] ನರ್ತಕೀಕೇಕರತ[3]ರುಣ[3]ತಟಿಸ್ಮಂಜರೀಸ್ಮೇರಸೀಳೋ
ಪರಿಷತ್ಪ್ರಾಸಾದಸಂಗೀತಕ ಮುರಜರವಕ್ಕಾಡುಗುಂ ಕೇಕಿವೃಂದಂ ೨೫

ಬಿರಿಮುಗುಳಜ್ಜ[4]ಪೂವಲಿ[4]ಗೆ ಸೌಸವ[5]ದಪ್ಪಿ[6]ಗೆ ಸೂಸುತಿರ್ಪ ಕ
ಪ್ಪುರದ ಪರಲ್ಗೆ ಸೀ[6]ಟ್ರ[6]ಳಿದ ಕತ್ತುರಿಗೊತ್ತರಿಸುತ್ತೆ ಪೋಪ ಪೆಂ
ಡಿರ ಕುಚಕುಂಭದಿಂದುದಿರ್ವ ಕುಂಕುಮರೇಣುಗೆ ಪಾಯ್ವ ತುಂಬಿಯಿಂ
ಚರದೊಳೆ ತಳ್ತು ಮೂರ್ಛಿಸುವುದಲ್ಲಿ ಸಬಂಚಿ ವಿಸಂಚಿಯಿಂಚರಂ ೨೬

ಪೊಳೆದು ಪೊದಬ್ಬಿ ಪರ್ಬಿದ ಸುಧಾಂಶುಗಳಾಗಸಗಂಗೆ ಮೇಗೆ ಬ
ಳ್ಳಿಳ ಬಳೆದಂತೆ ಪಜ್ಜಳಿಸೆ ಬೆಳ್ಗುಗಿಲೇಂ ಬಳಸಿರ್ದುದೋ ಹಿಮಾ
ಚಳಮೆನೆಸಲ್ಕೆ ಸುತ್ತಿಱಿದ ರಾಣಿಯ ವಾಸದ ಬಳ್ಳಿಮಾಡದಿಂ
ತೊಳಗುತುಮಿರ್ಪುದಲ್ಲಿ ಕರುಮಾಡಮನೇಕತಳೋನ್ನತೋದಯಂ ೨೭

ಅಸಿತೆಸೆದುವು ಕರುಮಾಡದ
ಕೊನೆವೆಳಗುಗಳಂಗನೆಯರ ನಯನೋತ್ಪಲಸಂ
ದಣದ ಸಿರಿ ತೊಲಗದಂತರ
ಮನೆಯಂ ಬೆಳ್ದಿಂಗಳಿಂದೆ ಬಾಸಣಿಸಿದವೊಲ್ ೨೮

ಪಿರಿದುಂ ನಲಿವುದು ದೀಹದ
ಹರಿಣಂ ಶಶಿಬಿಂಬದೊಳಗೆ ಸಿಲ್ಕಿದ ಹರಿಣಂ
ಕರುಮಾಡದಿನಿಟಿದಂತಿರೆ
ಮರಕತಕುಟ್ಟಿಮವಿಶಾಲಶಾಡ್ವಲತಲದೊಳ್ ೨೯

ಆ ಕರುಮಾಡದೊಳಿರ್ಪಂ
ನಾಕವಿಮಾನದೊಳೆ ದಿವಿಜನಾಯಕನಿರ್ಪಂ
ತಾ ಕೃತಿನಿರ್ಜಿತಮಕರಪ
ತಾಕಂ ಶೃಂಗಾರಶೇಖರಂ ಖಚರೇಂದ್ರಂ ೩೦

[1] ಭ (ಘ) [2] ದರಿ . . . (ಕ) ದರದಿಂದಂ (ಘ) [3] ರಳ (ಘ) [4] ವೋವರಿ (ಘ)
[5] ದೊಡ್ಡೆ (ಕ ಗ) [6] ರ್ದ (ಕ)

ಕಮಠಂ ದುರ್ದರ್ಶನಂ ಭೀಷಣವಿಷವದನಂ ಶೇಷನತ್ಯಂತಮೂರ್ಖಂ
ಸಮದಾಶಾವಾರಣಂ ಕರ್ಕಶಮಖಿಳಕುಳಾದ್ರೀಂದ್ರಮೆಂದೊಲ್ಲದೆಂದುಂ
ಕಮನೀಯಂ ಪೂರ್ಣಚಂದ್ರಾನನನತಿಚತುರಂ ಸ್ನಿಗ್ಧನೆಂದೊಲ್ದು ಧಾತ್ರೀ
ರಮೆಯಿರ್ಪಳ್ ತನ್ನರಾಧೀ[1]ಶನ ಗು[1]ರುಭುಜದೊಳ್ ಪೆಂಡಿರಿಂತಾಗವೇಡಾ ೩೧

ಜಳನಿಧಿಯಲ್ಲಿ ಪುಟ್ಟಿ ಜಳಜಾಕ್ಷನ ಪೇರುರಮೆಂಬ ತೊಟ್ಟಿಲೊಳ್
ಬಳೆದು ವಿಳಾಸದಿಂ ಜಳಜದೊಳ್ ನಲಿದಾಡಿ ಬಟಿಕ್ಕೆ ಯೌವನಂ
ಮೊಳೆವುದುಮಾರುಮಂ ಬಗೆಯದಾ ನೃಪನೊಳ್ ಸಿರಿ ಕೂರ್ತುಬಂದು ಕೋ
ಮಳೆ ನೆರೆದಿರ್ದಳಂತೆ ವಧು ಕೂ[2]ರ್ತ್ರೊಡೆ[2] ಪೆತ್ತರ ಮಾತುಗೇಳ್ವಳೇ ೩೨

ಸುರುಚಿರಪತ್ರಲೇಖೆ ಲಲನೋಚ್ಚಕುಚಕ್ಕೆ ಶಶಾಂಕಲೇಖೆ ಶಂ
ಕರಮಕುಟೋದಯಕ್ಕೆ ಮದಲೇಖೆ ಗಜಕ್ಕೆ ಮಯೂಖಲೇಖೆ ಭಾ
ಸುರಮಣಿಗೊಪ್ಪುವಂತಿರೆ ಮನಃಪ್ರಿಯೆ ಕಾಮಿನಿಯಾಗಿ ತನ್ನ ಹೇ
ಶ್ವರತಿಳಕಂಗನೂನಗುಣವಿಭ್ರಮ ವಿಭ್ರಮಲೇಖೆಯೊ[3]ಪ್ಪುವಳ್[3] ೩೩

ಮದನಂ ಕರ್ವಿನ ಬಿಲ್ಲೆಗೆತ್ತವಳ ಪುರ್ಬಂ ಗ[4]ರ್ವ[4]ದಿಂದೇಱಸಲ್
ಪದೆವಂ ನೀಳ್ದಲರ್ಗಣ್ಣ [5]ಚೆಲ್ವ[5]ನೆಳಗಂ ಬಾಣಾಳಿಗಳ್ಗೆತ್ತು ಮಾ
ಣದೆ ಕೈನೀಡುವನೊಡ್ಡುಗೊಂಡು ಕಬರೀಪ್ರಾಗ್ಭಾರಮಂ ತೋರ್ಕೆಗೆ
ತ್ತಿದ ಜೈತ್ರಧ್ವಜಮೆಂದೆ ಗೆತ್ತು [6]ಮೆಚ್ಚು[6]ವಂ ಮೀನಧ್ವಜಸ್ತಂಭಮಂ ೩೪

ಆಕೆಯಾ ಖಚರನ ಮನೋಮಾನಸಕ್ಕೆ ರಾಜಹಂಸಿಯುಮಾ ರಾಜಹಂಸನ ಯೌವನಮದಕ್ಕೆ ಮದ[7]ಮಧು[7]ಕರಿಯುಮಾ ಸುರತಮಧುಮಧುಕರನ ತನುಚೂತಕ್ಕೆ ನವಮಾಲಿಕೆಯುಮೆನಿಸಿರ್ದೊಂದು ದಿವಸಂ ಪಸುರ ಬಣ್ಣದ ಬಿಳಿಯಲರ್ಗಣ್ಣ ಪೊಳೆವಡಿದಳಿರ ತುಂಬಿಗುರುಳ ಪೀನಸ್ತನಸ್ತಬಕದರುಣಾಧರಪಕ್ವಫಲದ ಸುಭಗಭುಜ ಶಾಖೆಯ ಲತಾಂಗಿಯರ್ವೆರಸೆತ್ತಿದ ಪಲವು ಪೀಲಿಗೊಡೆ[8]ಗಳ[8]ನಿಕ್ಕಿ ಸೊಗಯಿಸುವ ಸೀಗುರಿಗಳುಮೆಸೆಯೆ ವನಲಕ್ಷ್ಮಿಗೆ ಬಿರ್ದುವರ್ಪ ವಸಂತಲಕ್ಷ್ಮಿಯಂತೆ ಲೀಲೆಯಿಂ ಬಂದು ಕುಸುಮಶರನ [9]ಕೊಪ್ಪ[9]ದಂತಿರ್ದ ಕುಸುಮಾಕರೋದ್ಯಾನಮಂ ಪೊಕ್ಕು ಬರೆವರೆ ತೊಟ್ಟನೆ ಕಟ್ಟಿದಿರೊಳ್—

ಸುರಿವ ಮಧುದ್ರವಂ ಸುರಭಿ[10]ಲಾಲೆ[10]ಗಳಂತೆ [11]ಪ[11]ರಾಗಮಂಗದೊಳ್
ಪೊರೆದ ರಜಂಗಳಂತೆ ಮಱಿದುಂಬಿಯ ಬಂಬಲೆ ಬಲ್ಗುರುಳ್ಗಳಂ
ತಿರೆ ಹಸುಗೂಸಿನಂತೆ ಹಸಿತಂ ಮಿಗೆ ಸೋಂಕಿಲೊಳೊಪ್ಪಿ ಪುಷ್ಪಮಂ
ಜರಿ ಪೊರಳುತ್ತುಮಿರ್ಪ ಲತೆಯಂ ಲಲಿತಾಂಗಿ ಮ[12]ರುಳ್ದು[12] ನೋಡಿದಳ್ ೩೫

[1] ಶ್ವರನು (ಘ) [2] ರ್ತರೆ (ಘ) [3] ಪ್ಪಿದಳ್ (ಕ) [4] ರ್ಬ (ಖ) [5] ಸಣ್ಣ (ಕಖ) [6] ಮುಱಿ (ಖ) [7] 'ಘ' ಪ್ರತಿಯಲ್ಲಿಲ್ಲ [8] ಯ (ಕ) [9] ಕುಪ್ಪ (ಗ) ಕೋಪ (ಘ) [10] ಲೋಳೆ (ಕ) ಶೋಭೆ (ಘ) [11] ಸ (ಘ) [12] ರಲ್ದು (ಘ)

ಅದಱ ಕೆಲದೊಳ್—

ಜರಿದದನೆ ನೋಡಿ ನವಮಂ
ಜರಿಯಂ ತಾಂ [1]ಪೆಱದ[1] ಮಱುಕದಿಂ ಕಣ್ಬನಿಯಂ
ಸುರಿವಂತೆ ಸುರಿಯೆ ಸೊನೆ ಕೇ
ಸುರಿಗೊಂಡಂತಿರ್ದ ಚೂತಲತೆಯಂ ಕಂಡಳ್

ಅಂತು ಕಂಡು ಸಂತತಿವಡೆದ ಸೌಭಾಗ್ಯೆಯರುಮುಱಿದ ಮದ್ವಿಧೆಯರಪ್ಪ ಮಂದಭಾಗ್ಯೆಯರುಮೀ ಯಂದಮೆಂದೆ ಮನದೊಳ್ ನೊಂದು ತಾನುಂ ಪೆಣ್ಣಂ ಪಡೆಯಲಟ್ಟಿಗೆಯ್ವು ಮತಿಚತುರೆಯಪ್ಪುದಱಂದದಱ ಮುಂದೆ ನಿಂದು ನೊಂದು ನೋಡಿ ನಿಡುಗ[2]ಣ್ಮೇ[2]ಂಗಳಂ ನೀರಾಟಮಾಡಿಸುತಿರ್ಪನ್ನೆಗಮಲ್ಲಿ ಬಾಲಚೂತ ಶಾಖಾಂತರದೊಳ್—

ಪಡೆಯದೆ ಮಿಂಚನುದ್ಘಮೊಗೆವಂಬುದಮಾಲೆಯ ಚಂದ್ರ[3]ಲೇಖೆ[3]ಯಂ
ಪಡೆಯದ ಪೂರ್ವಯಾಮಿನಿಯ ಮಂಜರಿಯಂ ಮಧುರಸ್ಮಿತಾಸ್ಯೆಯಂ
ಪಡೆಯದ ಚೂತವಲ್ಲರಿಯ ಚಿತ್ರಜನಾಜ್ಞೆಯೆನಿಪ್ಪ ಬಾಳೆಯಂ
ಪಡೆಯದ ರಾಜವಲ್ಲಭೆಯ ಪೆಂಪಿನೊಳೇಂ ಕವಿರಾಜಕುಂಜರಾ ೩೭

ಎಂಬ ನೀತಿಯನರಗಿಳಿಯೋದುವುದುಂ ಕೇಳ್ದಿರ್ಮಡಿಸಿದುಬ್ಬಲ ಬ[4]ಲ್ವೊ[4]ಱಯಂ ಪೊ[5]ತ್ತು[5] ನಿಂದಿರಲಾಱದೆ ಚಂದನಲತೆಯನೆಯ್ದಿ ತಗ್ಗಿಬಲಂ ಸಾರ್ದು ಕೆಳದಿಯರಾ ಬೆರಸು ಕುಳ್ಳಿರ್ಪುದುಂ; ಅನ್ನೆಗಂ ಹಿಮಂಬೊಯ್ದ ಪದ್ಮಿನಿಗೆ ಚಂದ್ರೋದಯ ಮಪ್ಪಂತೆ—

ವನನಾಗಾನಂದದಿಂದಂ ವನವಿಹರಣಲೀಲಾಸರೋಮಗ್ನನಲ್ಲಿ
ರ್ದ ನಿಜೇಶಂ ಕೂಡೆ ಕೇಳ್ದಾ ಶುಕಪಠನವನಿನ್ನೊರ್ಮೆಯಿನ್ನೊರ್ಮೆಯೆಂತೆಂ
ತೆನುತಾಗಳ್ ಬರ್ಪುದಂ ಕಂಡೆರ್ದೆ ಪಡಿದೆಱದಂತಾಗೆ ತಾಂ ಲಜ್ಜೆಯಿಂ ತೆ
ಕ್ಕನೆ ಪೋದಳ್ ಕಾಂತೆ ತನ್ನುನ್ನತಿಯದಿಸಿಯರಿಂದತ್ತಮತ್ತಂಟೆ ದೈನ್ಯಂ ೩೮

ಅಂತೆನುತೆ ನಸುನಗುತುಂ ಬಂದು, ಮುನ್ನ ಮನದೊಳ್ ತಾನಱಯೆ ತನ್ನ [6]ಮನಃ[6]ಕಾಮ್ಯೆಯಾಗಿರ್ಪ ಕಾಮಿನಿಯಂ ಕಂಡು ತನ್ನ ನಿಜನಿರಾಲೋಚಿತಾಳಾಪಕ್ಕೆ ಚಂದ್ರಶೇಖರ[7]ನೆನೆ[7] ಶೃಂಗಾರಶೇಖರಂ ವಿಷಾದಿಯಾಗಿ ಮುನ್ನೇಸಱ[8]ಶಶಿ[8]ಲೇಖೆ ಯಂತಿರ್ದ ವಿಭ್ರಮಲೇಖೆಯಂ ಮದಲೇಖೆಯಂ ಸಾರ್ವ ಮಧುಕರನಂತೆ ಸಾರ್ದು, ಮದಮಧುಕರಮಧುರನಿನದದಿಂ ನಿನಗಿನಿತು ತನುಜೆವಣೆವ ಶಕುನ[9]ವನೆನ್ನ[9]ನಿದಿ [10]ಗೊರ್ಳ್ಕೆಂಬ[10]ಂತೆ ಮಿಸು[11]ಕು[11]ವ ತನ್ನ [12]ಕ್ಕೆ[12]ಯ್ಯ ಕೇಳೀಮಂಜರಿಯನಾ ಸೌಂದರ್ಯ

[1] ತಿಱದು (ಕ ಗ) [2] ಣ್ಣೀರ್ಗ (ಕ ಫ) [3] ಮಾಲೆ (ಕ ಗ ಫ) [4] ಯಲ್ವೊ (ಕ ಫ) [5] ಕ್ಕು (ಕ) [6] ನಿಜ (ಖ) [7] ನಂತೆ (ಕ) [8] ಚಂದ್ರ (ಖ) [9] ಮೆನ್ನ (ಕ) [10] ಗೊರ್ಳ್ಕುಬಂ (ಕ) [11] ಗು (ಕ) [12] ರ (ಫ)

ಮಂಜರಿಯ ಕರಕಂಜಕ್ಕೆ ನೀಡಿ ನೀಡಿಲ್ಲಿದೆ ಕೆಲದೊಳ್ ಕುಳ್ಳಿರ್ದು ಎಂದಿನ[1]ಪರಿಯಿಂ[1] ತನ್ನತ್ತ ಪರಿಯದೆ ಲತೆಯತ್ತಲೆ ಪರಿವ ಕಡುನಲ್ಲಳ ಕಡೆಗಣ್ಣ ಪರಿಯಂ ಭಾವಿಸಿ ನವಮಂಜರಿಯಂ ಪೆತ್ತೀ ನವಮಾಳಿಕಾ ಲತೆ[2]+[2]ಲತಾಕೋಮಳೆಯ ಕುಮಾರಿಯಂ ಪಡೆವ ಬಗೆವ ಬಯಕೆಯ[3]ನಲ್ಲ[3]ಗರ್ಗಂ ನೆಗಪಿ ತೋಱುದುದು. ಈ ಭೀತಜಾತಲತೆಯುಮಾ ನೀತಿಯನೋದಿದರಗಳಿಯುಮೆನ್ನ ಮರ್ಮಭೇದಿಯಪ್ಪ ಮಾತುಗಳುಮೀ ತಳೋದರಿಯಪಗಟಿ[4]ದಲ[4]ಕಿಡಿಯನುಬ್ಬರ[5]ಮುರಿಪಿ[5]ದುವೆಂದಾತ್ಮಗತದೊಳ್ ಬಗೆದು—

ಮುಗಿಲಿರ್ದಂತೆಳಮಿಂಚುಗಳ್ ಕಱಿವವೋಲ್ ಪಾರ್ದಂದುಮಂ ಬಂದು ತೋ
ರಗುರುಳ್ ತಳ್ತಿ[6]ಡಿದೊಪ್ಪೆ[6] ಕಣ್ಮಲರ್ಗಳಿಂ ಪಾಯ್ತರ್ಪ ಬಾಷ್ಪಾಂಬುಬಿಂ
ದುಗಳಂ ಪದ್ಮದೊಳೊಂದಿ ಸಿಂದ ಹಿಮಬಿಂದುವ್ರಾತಮಂ ನೂಂಕುವಂ
ತೊಗೆದರ್ಕಂ ಕರದಿಂದಮಂದು ತೊಡೆದಿಂತೆಂದಂ[7]ನೃಪಂ[7]ನಲ್ಲಳಂ ೩೯

ಎಂದು ಸರಸ್ವತಿ ಕೆಳದಿಯಾಗಿಯುಂ [8]ಕೆ[8]ಳೆಯಂ ಪಡೆಯದಂತೆ, ಸಿರಿ ಸಖಿಯಾಗಿಯುಮರ್ಥಸಿದ್ಧಿಯಾಗದಂತೆ, ವಸಂತಲಕ್ಷ್ಮಿ ವಯಸ್ಯೆ[9]ಯಾಗಿಯುಂ ಪೂವಂ ಪಡೆಯದಂತೆ, ದಯೆ ದಯಿತೆಯಾಗಿಯುಂ ಶಾಂತಿವಡೆಯದಂತೆ, ನಮ್ಮ ಕುಲವಿದ್ಯಾದೇವತೆಯಪ್ಪ ಪದ್ಮಾವತಿ ಸಕಲತ್ರಿಭುವನವರದೆ ಜಿನಗಧಿದೇವತೆಯಾಗಿಯುಂ ಸುತೆಯಂ ಪಡೆಯದುಬಲಂಪಡೆವುದುಂ ಕುಳಿ[10]ವುಗದೆ[10] ನಾಣ್ಚಿ ನಿನ್ನೊಡಲೊಳ್ ನೀನೋಡಿ ಪುಗುವುದುಂ, ನನೆಯುಕ್ಕೆಯಂ ಬೀಱಿದೆನ್ನ ಮನಕ್ಕೆ ಬೇ[11]ಗೆ[11]ಯಂ ಬೀಱುವುದುಂ ಮಗಳಂ ಮುದ್ದಾಡಿಸದೆ ಕಣ್ಣನೀರಂ [12]ಬಟ್ಟಾ[12]ಡಿಸುವುದುಂ, ಎನಗಚ್ಚಮುಂ ತುಚ್ಚಮುಮಚ್ಚರಿಯಾದವುದೆಂದು ಅರಸನುಸಿರದಿರೆ ಪೊಲಗೆಟ್ಟ ಮಧುಕರಿ ತೀಡಿದೆಲರ ಕಂಪಿಂ ಬನದ ಬಟ್ಟೆಗಂಡಂತೆ ಸಂತಸಂಬಟ್ಟೀ ಜೆಸಕ್ಕೆ ಪಸಾದಮೆಂಬಂತೆ ನೂಪುರಾರಾವಮೊಡನೋದಿ ಘೋಂಕಸೆರ್ದು ದೇವತೆಯನಾರಾಧಿಸಿ ತಾಂ ಬರವಂ ಪಡೆವುದರ್ಕೆ [13]ಸಕ್ಕಿ[13]ಯನುಯ್ವಂತೆ ನಾಥನ ಕಣ್ಣಂ ಮನಮುಂ ಬೞಿಯೊಳಿಕ್ಕಿಕೊಂಡಾ ಬಾಲೆಯ ಬಾಳೋದ್ಯಾನದ ನಡುವೆ ಪೂವಿನ ಪುಡಿಯೊಟ್ಟಿ ಬೆಟ್ಟಾಗಿರ್ದಂತಿರ್ದ ಪೊನ್ನ ಬಸದಿಗೆ ಪೋಗಿ ಪೂಗೋಲದೊಳ್ ತಾನುಂ ತನ್ನ ಕೆಳದಿಯುದುಂ ಕಾಲ್ತೊಗಂಗಳಂ ತೊಳೆದು ತಳಿರುಮಂ ನನೆಯುಮನರಲುಮಂ ಫಲಂಗಳುಮಂ ತಿಱಿದುಕೊಂಡಾ ಬಸದಿಯೊಳ್ ಪೊಕ್ಕು ಬದಿಬಯ್ಸ ಭುವನಭಾಗ್ಯದೇವತೆಯಂತಿರ್ದ ಪದ್ಮಾವತಿಯ ಪಾದಪೀಠಮಂ ಬೇಡದೆ ಪೆಟ್ಟಮುಂ ವಿಭ್ರಮಲೀಲೆ ನೊಸಲೆಂಬ ಶಶಿಲೇಖೆಯನಲಂಕರಿಸಿ ಪಲ ತೆಱದರ್ಚನೆಗಳಿನರ್ಚಿಸಿ ಪಲವು ನೂಱ್ ಪೊಗೞ್ತು ಕಯ್ಗಳಂ ಮುಗಿದು—

ಪರಸದ ದೈವಕ್ಕೆಲ್ಲಂ
ಪರಿಸಿ ಪರಿಶ್ರಮಮನೆಯ್ದಲೇಂ ನಿನ್ನ ಪದಾಂ
ಬುರುಹಕ್ಕೆ ತುಂಬಿಯಾದೊಡೆ
ದೊರೆಕೊಳ್ಳವೆ ಕಂಪಿನಂತೆ ಬೇಟ್ಟ ವರಂಗಳ್ ೪೦

1 ಪರ್ಯಂತಂ (ಛ) ವಸಾನಮೆಂದಿನ (ಗ) 2 ಯ (ಕ) 3 ಯದೆ (ಗ) 4 ದಾಲ (ಗ) 5 ಮುಂಪಿರಿ (ಕ) 6 ಳ್ತರಱಿ (ಗ) 7 ಪ್ರಿಯಂ (ಕ) 8 ಕೆ (ಕ) 9 ಶೆ (ಖ) 10 ಯಡಗೆ (ಘ) 11 ನೆ (ಘ) 12 ಬಂಱಿ (ಘ) 13 ಶಕ್ತಿ (ಕ)

ಕಣೆದನಿತಱೊಳೆಂ ಕುಡುಗುಮೆ
ಪೊಡವಿಯ ಕಲ್ಲೆಲ್ಲಮೆಱಗೆ ಬೇಡಿದ ವರಮಂ
ಕುಡುವಂತಿರೆ ನಿನ್ನಯ ಕೇ
ಸವಿಗಳ ನಖಮಣಿಗಳೆಂಬ ಚಿಂತಾಮಣಿಗಳ್ ೪೧

ಲೋಕಸ್ತುತೆ ಮಣಿಕನಕ ಪ
ತಾಕೆಯಿನರ್ಚಿಸುವೆನೆಸೆವ ನಿನ್ನೀ ನಿಲಯ
ಪ್ರಾಕಾರಮಂ ಮನೋಜಪ
ತಾಕನ್ಪೊಲೊಪ್ಪುವಳನೆನಗೆ ಕುಡು ತನುಭವೆಯಂ ೪೨

ಸಕಲಕಲಾಧರೆ ಮಣಿದೀ
ಪಿಕೆಯಿಂ ಬೆಳಗಿದಪೆನಮಲನಿಜಗೃಹಮಂ ಪು
ತ್ರಿಕೆಯುಂ [1]ಕುಡೆನಗೆ[1] ಕುಲದೀ
ಪಿಕೆಯಂ ಸುರದನುಜಖಚರಪೂಜಿತಚರಣೇ ೪೩

ತನುಭವೆಯನೀವುದೆನಗ
ರ್ಚನೆಮಾಡುವೆನೊಲ್ದು ದೇವಿ ನಿನಗಾಂ ನಲಿದ
ರ್ಚನೆಮಾಡುವಿನಂ ರತಿಯುಂ
ಮನೋಜನುಂ ಗೆ[2]ಲ್ದಪೆಂದು ಭುವನತ್ರಯಮುಂ ೪೪

ನನೆಯುಂ ಸುರಿವೆಂ ನಿನ್ನಯ
ಕೊನೆಮುಡಿಯೊಳ್ ದೇವಿ ಕುಡುವುದೆನಗಾತ್ಮಜೆಯಂ
ನನೆಯಂಬುಗಳಂ ಸುರಿಗುಂ
ಮನೋಭವಂ ಮನದೊಳಾ[3]ವಳಂ ನೋಳ್ಪವರಂ ೪೫

ದೇವಿ ಕುಡು ಸುತೆಯನೆಲೆ ಪ
ದ್ಮಾವತಿ ನಿಜಕರದೊಳಿಸೆ[4]ಯೆ[4] ವಜ್ರಾಂಕುಶಮಂ
ತೀವುವೆನಂಕುಶಮಾದವು
ದಾವಳ ಕಣ್[5]ಚಿತ್ತಮತ್ತದಂತಿಗೆ ಪತಿಯಾ ೪೬

ಕಟ್ಟಿದಪೆನಮಳಮಣಿಮಯ
ಪಟ್ಟಮನಾಂ ನಿನ್ನ ಜಾಳಪಟ್ಟದೊಳೊಳ್ಪಂ
ಕೊಟ್ಟತನುಚಕ್ರವರ್ತಿಗೆ
ಪಟ್ಟಂಗಟ್ಟುವ ಮಗಳನೀವುದು ದೇವೀ ೪೭

[1] ಕುಡು ನೀಂ (ಕ ಗ ಘ) [2] ಲ್ದುವಂ (ಕ ಘ) [3] ಕೆಯಂ (ಘ) [4] ವ (ಕ) [5] ಬಿ (ಘ)

ಕುಡುವುದು ಪಿಡಿವೆಂ ಪುತ್ತ್ರಿಸ
ಕೊಡೆಯುಂ ಚಾಮರಮನಿಕ್ಕುವೆಂ ಸಿಸ[1]ಗೊಪ್ಪಂ[1]
ಪಡೆದತನುಗೆ ಬೆಳ್ಗೊಡೆಯಂ
ಪಿಡಿಯಿಪ ಚಾಮರಮನಿಕ್ಕಿಸುವ ಬಾಳಕಿಯಂ ೪೮

ಕುರುಳಂ ಕೊಯ್ದೀಱುಸುವರ್
ಮರುಳ್ಗಳಜ್ಞಾನದೇವತೆಯಗ್ರಾಂ ಸಿಸ್ಸೀ
ಚರಣದೊಳೆ ಪೂವಸಿಡುವೆಂ
ಕುರುಳ್ಗಳಂತೆಱಗೆ ತುಂಬಿ ಕುಡುವುದು ವರಮಂ ೪೯

ಎಂದಾದೇವಿಗೆ ಪೊಡೆಮಟ್ಟು ಬಂದು ಶ್ರೀಮ[2]ತ್ಯಾ[2]ರ್ಯಿಕಾಸಮಕ್ಷದೊಳಾ ಕಾಮಿನಿ ಕಾಮದಂಗಳಪ ನೋಂಪಿಗಳುಮಂ ನಿಯಮಂಗಳುಮಂ ಕೈಕೊಂಡು ದಾನದೊಳ್ ಧನಮಂ ಪೂಜೆಯೊಳ್ ಪೊೞ್ತುಂ ಉಪವಾಸದೊಳ್ ವಾಸರಮಂ ತವಿಸುತ್ತುಮಿರೆಯಿರೆ ಮತ್ತೊಂದು ದಿವಸಂ—

ಪಾಯ್ವ ಕುಜಂಗಳಂ ಮಿಡಿದು ನೋಡುತೆ ಕೌಂಕುಳನೆತ್ತಿ ಕಂಪನಾ
ರಯ್ವು[3]ತು[3]ಮೊತ್ತುತುಂ ಮೊಡವಿಯುಂ ಮೊಗಮಂ ಮೃಗನೇತ್ರೆ ದರ್ಪಣ
ಕ್ಕುಯ್ವುದುಮೆಲ್ಲಮಂ ಕಳೆದು ಮಾಣಿಕಮಂ ಪೊಸಪೊಂಗಳಿಂದೆ ಕೈ
ಗೆಯ್ವುದು ಮಾ[4]ಕೆ[4] ಕೆಯ್ಗೆ ಸೆಳೆಯಂ ಸಖಿ ಕೊಟ್ಟಳದೇಂ ಪ್ರಗಲ್ಭೆಯೋ ೫೦

ತೊಳಗುವ ಮೆಯ್ಗಳೊಳ್ ತಿಮಿರ್ದ ಕುಂಕುಮದಿಂದಮದು[5]ಟ್ಟ ವೆಳ್ಪಿ[5]ನಂ
ದಳವಡೆ ತೊಟ್ಟ ಪೊಂದೊಡಿಗೆಯಿಂ ಜಳಕೋಮಳಹಸ್ತಶಾಖೆಯೊಳ್
[6]ತಳೆದಿ[6]ಳಗೊಂಬ[7]ನಂದೆ[7] ಪೊಳೆದೊಂದು ವಿಳಾಸದಿನಗ್ಗಳಂ ತಳಿ
ರ್ತೆಳಲತೆಯಂತೆ ತೋಱುದರುಣಾಧರೆ ಪುಷ್ಪಿತೆಯೆಂಬುದೊಪ್ಪದೇ ೫೧

ಸುಯ್ಗೆಱಗುವ ಮಗಮಗಿಸುವ
ಮೆಯ್ಗೆಱಗುವ ಜಘನಕೆಱಗುವಳಿ ಪೇೞ್ವುವು ತ
ಬ್ಬಯ್ಗಣೆಯನ ಜಯಲಕ್ಷ್ಮಿಯ
ತಾಯ್ಗಱುಪಿದೆನೆ ಮಿಸುಪ ಸತಿಯ ಪುಷ್ಪೋದಯಮಂ ೫೨

ಮುಟ್ಟಲ್ ಪಡೆಯದೆ ಬಿಮರಂ
ಬಟ್ಟಿಂ ನಡೆನೋಡೆ ಮದನತಾಪದಿನೋಪಳ್
[8]ಮಿ[8]ಟ್ಟನೆ ಮಿಡುಕದೆ ಮನದೊಳ್
[9]ಕಿಟ್ಟಳದೊಳ್[9]ಮಿಡಿರ್ದಂದು ಮಿಂದಪೊಲಧಿಪಂ ೫೩

---

[1] ಗಂ ಪೇೞ್ (ಗ ಘ) [2] ಸ್ವಾಚಾ (ಘ) [3] ದು (ಕ ಗ) [4] ಗೆ (ಕ) [5] ಟ್ಟು ಮುಳ್ಪ (ಕ) ಟ್ಟು ಬೆಳ್ಪಿನಿಂ (ಗ) [6] ಸೆಳೆಸೆ (ಕ) [7] ನಂತೆ (ಕ ಘ) [8] ನೆ (ಕ) [9] ಮುಟ್ಟು ಬೊಳೊಡ (ಗ)

ಅಂತು ಋತುಸಮಯಮಾಗಿ ಚತುರ್ಥದಿನದೊಳ್ ಬಿಸಿಲಂ ಕಳೆದು ಬೆಳ್ದಿಂಗಳಂ ತುಡುವ ಗಗನಲಕ್ಷ್ಮಿಯಂತೆ ಕೆಂಪಿನ ಪಸದನಮಂ ಕಳೆದು ಪಲ್ಲಂ ಸುಲಿದು ತಲೆನೀರಾ ಮಿಂದು ಚಂದನಮಂ ತೊಡೆದು ಜಾದಿಯಂ ಮುಡಿದು ಮುತ್ತಂ ತೊಟ್ಟು ಬೆಳ್ದಡಿ ಯನುಟ್ಟು ಬಳಪದೋಲೆಯನಿಟ್ಟು [1]ಶ್ವೇತ[1]ಮಾಲೆಯನಲೆ ಬಿಟ್ಟು ಕೈಗೈಯೆ—

ಅಗ್ಗದ ರಾಜಹಂಸೆಗಳ ಯಾನಮನಲ್ಲದೆ ಕಾಯಕಾಂತಿಯಂ
ಸುಗ್ಗಿಯ ತೋರಮಲ್ಲಿಗೆಯ ಗಂಧ[2]ಮನ[2]ಲ್ಲದೆ ಮೆಯ್ಯ ಬೆಳ್ಪುಮಂ
ಸಗ್ಗದ ಸಾರಮಪ್ಪಮರ್ದಿನಿಂಪುಮನಲ್ಲದೆ ನಿರ್ಮಲತ್ವಮಂ
ಬಗ್ಗಿಸಿ ಕೊಂಡವೋಲೆಸೆದುದಂಗನೆಗಾ ಧವಳಪ್ರಸಾಧನಂ ೫೪

ಸೊಗಯಿಸುವಚ್ಚ ಬೆಳ್ಪಗೆಯ ತಾಯ್ಗಳು ಕಾಮನ ಕೀರ್ತಿ ಚಂದ್ರಲೇ
ಖೆಗೆ ಬರವಂ ಸುಧಾರಸಮನಿತ್ತಧಿದೇವತೆ ತನ್ನ ಕಣ್ಣ ಬೆ
ಳ್ಪುಗಳೆನೆ ಬೇಱೆ ಬೆಳ್ಪಸದನಂ ತನಗೆಂದೊಡೆ ಚೆಲ್ವನೇಡ್ಗಯಿಂ
ನಗುವುದದೊಂದು ವಿಸ್ಮಯಮೆ ವಿಭ್ರಮಲೇಖೆ ಮೃಣಾಳಲೇಖೆಯಂ ೫೫

ಎನೆ ಬೆಳ್ಪಸದನಂಗೊಂಡು ಬಾಲೇಂದುಶೇಖರನ ಸೂಡ್ಗವರ್ಪ ಭಾಗೀರಥಿ ಯಂತೆ ಶೃಂಗಾರಶೇಖರನ ಸೂಡ್ಗವಂದು, ಪುಷ್ಪಮಧುಜಳಮಂ ಪೇಱು ಪೊಱ ಪೊಣ್ಮುವ ತೆಳ್ಮುಗಿಲ ಮುಱುಗಳಿಂ ಮಿಱುಗಿ ನೆಲಸಿ ನಿಂ[3]ದ ಪಾ[3]ವುಗಳ ಪಡೆವಣಿಯ ಬೆಳಗಿಂ ಬೆಳಗುವ ಬೆಳ್ಪಟ್ಟಮಂ ಪುಗುವಂತೆ ಮಗಮಗಿಸಿ ಪೊಱಮಡುವ ಸುಗಂಧ ಧೂಪದ ಪೊಗೆಯ ಪರ್ಬು[4]ಗೆಯು[4] ಕ[5]ಜ್ಜ[5]ಳಿಕೆ ಮ[6]ಸು[6]ಳೆ ಜಲಜಲಿಸಿ ತೊಳಪ[6]ತಾಣ ದೀವಿಗೆ[6]ಗಳಿಂ ಕರಮೆಸೆವ ಕರುಮಾಡಮುಂ ಪೊಕ್ಕು, ಶಶಿಮಣಿಶಿಲಾ[7]†[7] ತಲಮನ ಲಂಕರಿಸುವಂತೆ ನಿರ್ಮೋಕನಿರ್ಮಲದುಕೂಲ ಪ್ರಚ್ಛದಾಚ್ಛಾದಿತಹಂಸತೂಲತಲ್ಪ ಸನಾಥ ಶ್ರೀಮಂಚಮನಲಂಕರಿಸಿ, ಕಂಪಿನಿಂ ಪೊರೆದು ಪೊಱಮಡುವ ತುಂಬಿಯ ತುಱುಗಲಿಂ ಮುಱಿದು ನಟ್ಟ ಸಂಪಗೆಯ ಪೂಗೊಂಬಿನ [8]ಗೊಂಚಲ್ವೂಗಳಿಂ[8] ಮನೋಹರಮಾದ ಮಲ್ಲಿಕಾಮಂಡಪದೊಳ್ ಮನಸಿಜನ ಸೂಡ್ಗವಂದು ಕುಸುಮ ದೆಸೆಬ ಸಜ್ಜೆಯನೇಱಿದ ರತಿಯ ರಮಣೀಯತೆಯಂ ನಸುನಗುವಂತೆ ನಲ್ಲನ ನಗೆ ಮೊಗದೊಳ್ ಮುಗುಳ್ನಗೆಯಂ ನಗುತುಮಳಿಪಿಂ ನೋಡುವುದುಂ, ಕುಸುಮಚಾಪ ಲತೆಗೆ ಕೈನೀಡುವ ಕಾಮನಂತೆ ನಿಜತನುಲತೆಗೆ ಕೈನೀಡಿದ ಕಾದಲನ ತೋಳ್ವಟವಿಡಿದು ಪೊಕ್ಕು ಪಿರಿದು ಮಂಜರಿಯಿಂ[9]ಮೋದಿ ಮಾಪಸಪ್ಪಿದ[9] ಮಲ್ಲಿಗೆಯಂತೆ ಮೊಲೆಯಿನು ರಮನೀಡಿಱಿದು ನೀಡಸನಮರ್ದಪ್ಪಿ ಚಕೋರಂಗಳಿಂ ಚಂದ್ರಮಂಡಲಮಂ ಚೆಲ್ಲ ವಾಡಿಸುವಂತೆ ದಯಿತನ ದರಹಸಿತವದನಮಂ ಕಡು[10]ಪಂ[10] ಕಱಿವ ಕಣ್ಣ ಕೂರ್ವೆಳ ಗೆಂಬ ಕೂರಲಗಿಂ [11]ಕ್ರೂಂಕಿ[11] ಕೆಂದಳಿರಂ ಕರ್ಚಿ ಕೂಜಿಸುವ ಕೋಗಿಲೆಯಂತೆ ಕಾಂತನಧರದಳಮನಡಸಿ ಪಿಡಿದು ಗಳಕಳರವಮಂ ಕೆದಱಿ ಬಲ್ಪಿನಿಂ ಬಾಯಿಂ ಬಾಯಂ

---

1 ಸೆಳೆ (ಗ) 2 ಮುಮ (ಕ ಫ) 3 ದರವಾ (ಫ) 4 ಯಿನು (ಕ ಫ) 5 ಗು (ಕ) 6 ಆಸ್ಥಾನ ದೀಪಿಕೆ (ಫ) 7 ಮಣಿ (ಫ) 8 ಗೊಂಚಲ್ವೋಲ್ ಪೂಗೊನೆಗಳಿಂ (ಗ) 9 ನೋಡಿ ಮಾಮರನನಪ್ಪುವ (ಗ) . . . ಮಾಮರನನಪ್ಪುವ (ಫ) 10 ಗಂಪಂ (ಖ) 11 ಕೂಡೆ (ಫ)

ಪಿಡಿಸಿ ಚಾಯ್ಗೆ ಪಾಯ್ದು ಪತ್ತೆವೊಯ್ದಂತೆ ಪತ್ತಿ ತೞ್ತು ತೋಳ ತೊಡಂಕಂ ತಪ್ಪಿಸಿ ನಾಂಟಿದ ಮೊಲೆಯನುರ್ಚಲೀಯದೆ ತೆಗೆದಪ್ಪುವ [1]ಸೂೞಿವಂ[1]ತಾಳ್ದಿ ನಟ್ಟ ಕಣ್ಗೊ[2]ಳವುಗದ[2] ಕಣ್ಣ ಬೆಳಗಂ ಕಿಱುತ್ತುಕೊಳ್ವಂತೆ ನೋಟದೊಳ್ ನೋಟಮಂ ಗಂಟಿಕ್ಕಿ ಬೆರಸಿ ಒರಸೆಳೆವ [3]ವಲ್ಲಭ[3]ನೊಳ್[4]ಕಲ್ಪವ್ರೋೞ[4]ಡಿಯುಂ ಮೇಗುಮುದ್ದುಮುಂ ತಿಗಟಮುಂ ತಾಱುಂ ತಟ್ಟುಮುದಿರುಂ ಬಱಿಯುಂ ಬೆಱ್ದುಂ [5]ಬಱಲ[5]ದೆ—

[6]ಆ[6]ಱಸುವ ಬಯ್ಸ್ವ ಬಗ್ಗಿಸುವ ಬತ್ತುವ ಬಾಯ್ದೆಱೆ [7]ಗೊಳ್ವ ನುಂಗುವ[7]
ವ್ವಳಿಸುವ ಮುದ್ದುಗೆಯ್ವ ಪುೞುಗುಳೊತ್ತುವ ಬೆಂಡೋಗೆವಕ್ಕಿ ಕಂಕಣಂ
ಗಳರವಮುಣ್ಮೆ ಪೊಯ್ವಗಿವ ಸಾಣೆಡೆಗೆಯ್ವುವ ಹಸ್ತಶಾಖೆ ಕಂ
ಟಳಿಸುವ ಗಂಟುಗೊಳ್ವೆಡರೆ ಜಱ್ಜುವ ಪುರ್ಬೆಸೆಯಲ್ಕೆ ಕೂಡಿದ[8]ಳ್[8] ೫೬

ಅಂತು ಕೂಡಿದಿಂಗಡಲೊಳಳ್ಕಾಡಿದಿಂದೊಱೆಯಂತೆ ಇನಿಯನಂಗಂಗಳೊ[9]ಳಂಗಂಗಳ್ ಬೇರ್ಕೆಯಲ್ ಒಗೆ[9]ದಂತೆ ಬೞಲ್ದು ಬೆರಸಿ [10]ಸುರತ[10]ಶ್ರಾಂತಿಯಿಂ ಸುಖಸುಪ್ತೆಯಾಗಿ ಬೆಳಗಪ್ಪ ಜಾವದೊಳ್

ಕೊಳನಂ ಕನ್ನಡಿಯಂ ಕನತ್ಕಳಶಮಂ ಪೆಣ್ಣಂಚೆಯಂ ಮತ್ತಕೋ
ಕಿಳಮಂ ಕರ್ಬಿನ ಬಿಲ್ಲ[11]ನ್ನೈದು[11] ನನೆಯಂ ಬೆಳ್ದಿಂಗಳಂ [12]ತಳ್ತು ಬಂ
ದೆ[12]ೞಮಾವಂ ಮಲರ್ದಿರ್ದ ಮಲ್ಲಿಗೆಯನೊರ್ಬಳ್ ಲೀಲೆಯಿಂ ಪುಷ್ಪಕೋ
ಮಳೆ ಪೂಮಾಲೆಯನೀವುದಂ ಕನಸಿನೊಳ್ ಕಂಡಳ್ ಮಹೋತ್ಸಾಹದಿಂ ೫೭

ಅಂತು ಕಂಡು ತನ್ನ ನಿದ್ರೆಯೊಡನೆ ಕಱ್ತಲೆಯುಂ ಪರಿಯೆ ತನ್ನ ಮುಖದೊಡನೆ ದಿವಸಮುಖಮುಜ್ಜ್ವಲಿಸೆ ತನ್ನ ಕಣ್ಮಲರೊಡನೆ ಕಮಲದಲರುಮಲರೆ ತನ್ನ ಮನದೊಡನೆ ಚಕ್ಕವಕ್ಕಿಗಳುಂ ನಲಿಯೆ ತನ್ನ ಮನೋರಥದೊಡನೆ ರವಿರಥೋದಯಮಾಗೆ ತನ್ನ ಪಿಂಡುಗಂಕಣದೊಡನೆ ಕೊಳರ್ವಕ್ಕಿಗಳುಲಿಯೆ ಸಜ್ಜೆಯಿನುಬ್ಬುಗದಿನೆರ್ದು ಪ್ರಾಭಾತಿಕವಿಧಿಯುಂ ನಿರ್ವರ್ತಿಸಿ ಶೃಂಗಾರಗೇಹದೊಳ್ ಶೃಂಗಾರಂಗೆಯ್ವುತ್ತಿರ್ಪನ್ನೆಗಂ—

ಎಡದ ಕರದೊಳ್ಗಂಧಂ ಪೂಮಾಲೆ ಸಿರ್ಪಿನ ಸೇಸೆ ಪೊಂ
ಬಡಲಿಗೆಯೊ[13]ಳ್ಕೊಳ್ವಂದಂ[13] ಚೆಲ್ವಾಗೆ ಗಂಧಜಳಂಗಳಂ
ಪಿಡಿದು ಕಳಸಂ ಕೆಯ್ಯೊಳ್ ಮುತ್ತಿಂಡಱೊಳ್ ಮಿಗೆ ಶೋಭೆಯಂ
ಪಡೆಯೆ ಪಡೆಪಿಂದೊರ್ವಂ ಬಂದಂ ಪ್ರಗಲ್ಭಪುರೋಹಿತಂ ೫೮

---

[1] ಪೊರಸುೞಿಪಂ (ಗ) [2] ಳವುಗುವ (ಗ) ಳ್ಕಪೊಗೆದ (ಘ) [3] ನಲ್ಲ (ಖ) [4] ಮಲ್ಲಡೊರ್ದ (ಕ ಘ) [5] ಬೀಱಿ (ಖ) [6] ಬ (ಕ ಘ) [7] ನುಂಗುವಂತಿರ (ಕ ಗ ಘ) [8] ರ್ (ಕ ಘ) [9] ಡಂಗಿ ಬೇರ್ಕೆಯರ್ ಬಗೆತಪ್ಪಿ (ಖ) [10] ರತಿ (ಕ ಘ) [11] ನಾಯ್ದು (ಕ ಗ ಘ) [12] ಮುದ್ದುಗೆಯ್ವ (ಗ) [13] ಳಂದೊಂದು (ಕ)

ಅಂತು ಬಂದು, ದೇವರ ಬರವಂ ಕಾಣ್ಬಂತೆ ತನ್ನ ಬರವಂ ಕಂಡಿದಿರೆೞ್ದು ಕೆಯ್ಗಳಂ ಮುಗಿದ ರಾಜವಲ್ಲಭೆಯ ಮುಂದೆ ನಿಂದು—

ಶ್ರಿಯಂ ದೇ[1]ಯಾ[1]ತ್ತುಷ್ಟಂ ತ್ರಿಭುವನಮಿದಂ ಕರ್ಮಕಾನಂ
ಸಮಾಕರ್ಷಲ್ಲೋಽಪ್ರತಿಮಮತುಲಂ ಯೋ ವಿಜಯತೇ
ಅಯಸ್ಕಾಂತಂ ಕಾಂತ [2]ಸಮದಮರಿಕಾಕುಂತಳತತೇ[2]
ಚ್ಚಿ ವಿಶ್ವಾಮಶ್ರೀರ್ಮಾ ಜಿನಚರಣಚಂಚನ್ನ ಬಿಜಯಃ

ಎಂದೋದಿ ಗಂಧೋದಕಮಂ ಸಿದ್ಧ[3]ಸೇಸೆ[3]ಯುಮಂ ಕುಡುವುದುಮಂ ಕೊಂಡು ಕುಳ್ಳಿರ್[4]ದೊಡನೆ[4] ತನ್ನ ಕಂಡ ಕನಸನನುಕ್ರಮದಿಂ ಪೇೞೆ ಕೇಳ್ದು—

ಕೊಳದಿಂ ಜಲಜಾಕ್ಷಿಯನು
ಜ್ಜ್ವಳದರ್ಪಣದಿಂದನಂಗಮಂಗಳನಿಧಿಯಂ
ಕಳಶದಿನಧರದಳಾರ್ಚಿತ
ವಿಳಾಸರಸಪೂರ್ಣಕನಕಕಳಶಸ್ತನಿಯಂ ೬೦

ಪದವಿಡುವಂಚೆಗಂಡ ಫಲದಿಂದೆ [5]ಮರಾಳ[5] ಮರಾಳಯಾನೆಯಂ
ಮದಕಳಕಂಠನಿಂ ಶ್ರವಣಸೌಖ್ಯಕಳಾಪರಮ್ಯೆಯಂ
ಮದನನ ಚಾಪದಿಂ ಮಧುರವಕ್ರಿಮದಾನಮದಾ[6]ಸ್[6]ತಾಂಗಿಯಂ
ಪದೆಯದು[7]ದ[7]ಲ್ಲದಂಗಜಜಗಜ್ಜಯಶೋಭಿಯಶೋಭಿರಾಮೆಯಂ

ನನೆಯಿಂ ಸೀಱಿಯಸಿಂದುಕಾಂತಿಯೊದವಿಂ ಕಾಂತಾಸ್ಯೆಯಂ ಬಂದ ಮಾ
ವನೆ ತಳ್ತಪ್ಪಿದ ಮಲ್ಲಿಕಾಲತಿಕೆಯಿಂ ರಾಗಸ್ವಯಂಗ್ರಾಹನಾ
ಥನಿಷಕ್ತಾಂಗಿಯನೊರ್ಬಳೆಂದು ಪೊಸತಂ ಪೂಮ್ಮಾಲೆಯಂ ಕೊಟ್ಟ ದ
ರ್ಶನದಿಂ ದೇವತೆಯಿತ್ತಪಳ್ ನಿನಗೆ ಲೀಲಾವೃತ್ತಿಯಂ ಪುತ್ರಿಯಂ ೬೧

ಎಂದು ಸ್ವಪ್ನಫಲಮಂ ಪೇೞ್ದು ಪುರೋಹಿತನಂ ಮಣಿಕುಂಡಳಾದಿಗಳಿನರ್ಚಿಸಿ ನಿಜ್ಜಂ ಪೋಪಂದಮಲ್ಲದೆ ಪದಾವತಿಯಲ್ಲಿಗೆ ಪಿರಿಯ ಸಿರಿವೆರಸು ಪೋಗಿ ಪರಕೆಯಂ ಕೊಟ್ಟು ಪರಮೇಶ್ವರಪೂಜಾಮಹೋತ್ಸವಕ್ರಿಯಾಗಿರೆ ಮತ್ತೆ ಕೆಲವಾನುಂ ದಿವಸದಿಂ—

ಸೆಳೆನಡುವನುಡಿವ ಭರದಿಂ
ಬಳೆವಂತಿರೆ ಬಳೆಯೆ ಮೊಲೆಗಳವಱೊಳ್ ಚಲದಿಂ
ಬಳೆವಂತು ಬಳೆಯೆ ನಡುವು
ಮ್ಮಳಿಸಿದವೊಲ್ ಕರ್ಗಿ ಕೊಂಡುವವಱ ಮೊಗಂಗಳ್ ೬೨

1 ಯಂ (ಕ) 2 ಸನಮದಮರೀಕುಂತಳಕುಲ (ಕ) 3 ಶೇಷೆ (ಕ) 4 ಲ್ಬುಡಿಸಿ (ಕ)
5 ಮೆ ಬಾಲ (ಗ) 6 ಲ (ಕ) 7 ಮ (ಕ ಘ)

ಅಂತುಮಲ್ಲದೆ—

ಪ್ರಿಯನ ಮೊಗಕ್ಕೆ ನಾಣ್ಚಿಯೆ ಬೆಳರ್ತ ಪೊಲಾಯ್ತು ಮುಖೇಂದು ಮುಗ್ಧೆ ಮುಂ
ಬಯಕೆಯೊಳಪ್ಪ ಲೀಯದಿರೆ ಕಾಯ್ಬ ಸಿಯಂ ಕುದಿದಿಟ್ಟ[1] ಕಯ್ಯ ಬೆಂ
ಕೆಯೊ[2]ಳೆ ಕರಂ[2]ಗಿದಂತೆಸೆದುದುತ್ಕುಚಚೂಚುಕಮೊಳ್ಪುಸಿರ್ಗೆ ಮೆ
ಯ್ಮೆಯಸಿಡೆ ಗರ್ಭಶೋಭೆ ಮುಳಿದಂತಿರೆ ಪೋಯ್ತು ವಳಿತ್ರಯಂ ೬೪

ಅಂತು ಗರ್ಭಚಿಹ್ನಂಗಳ್ ನೆಱಯೆ ನೆಱಯೆ—

ಎಳವಸಿಱೊಳ್ ಸುಧಾಂಶುಮುಖಿಗೇನೆಸೆದಿರ್ದುದೊ ಬಂದ ನಂದನಾ
ವಳಿಯೊಳಗಾಡುತಿರ್ಪ ಪೊಸಮಲ್ಲಿಗೆಯಂ ಮುಡಿವಂಗಯಿಷ್ಟಿಯೊಳ್
ಪುಳಯುಜದಣ್ಪುಸಿಕ್ಕುವೆಣೆವಕ್ಕಿಯ ಕೇಳಿಯನೋಲ್ದು ನೋಟ್ಪ ಕೋ
ಮಳೆ ತಳೆವಲ್ಲಕೀ ರವಮನಾಲಿಸುವೊಂದು ವಿಳಾಸದೋಹಳಂ ೬೫

ಅಂತು ಬಯಸ್ಸುತ್ಕ ಬಯಕೆಗಳಿಂ ಸವಸುಖಕರಮಾಗಿ ನವದಿವಸದಂತೆ ನವಮಾಸಂ ನೆಱಯೆ 'ಪ್ರಜನನ'ಮೆಂಬ ಪೆಸರಿಂ ಮಿಸುಪ ಮಾಸದೊಳ್—

ಬಿಸಿಯುಂ ತಣ್ಣೆದನಪ್ಪವೊಲ್ ಕಡಲೊಳಂದೋಲಾಡೆ ಚಂಡಾಂಶು ತಾ
ನೊಸೆದಂತುಜ್ಜ್ವಲಮಾಗೆ ಸಗ್ರಹಗಣಂ ತಾರಾಗಣಂ ಕಂಡು ರಾ
ಗಿಸುವಂತೇಳ್ದಯಿನೊಪ್ಪೆ ಚಂದ್ರನುದಯಾದ್ರೀಂದ್ರಾಗ್ರದೊಳ್ ಪೊರ್ದೆ ದ
ಳ್ಳಿಸುವಂತೊರ್ಮೊದಲುರ್ಚೆ ಕೂರ್ಚೆ ಸುಭಗಶ್ರೀಜನ್ಮ[5]ಸನ್ಮೋದಿತಂ[5]

ಪೊಸಪೂವಂ ಸೂಸೆ ಮಂದಾನಿಳನತಿಮುದದಿಂ ಮಂಗಳಂಪಾಡೆ ಭೃಂಗೀ
ವಿಸರಂ ತಳ್ತೋದೆ ಕೀರೋತ್ಕರ ನೊಸಗೆಮರುಳ್ಕೊಂಡುವಲ್ಲೀಕುಳಂ ನ
ರ್ತಿಸೆ ನಾನಾಭಂಗಿಯಿಂದಂ [6]ರತಿಯೊಡನೆ ಪಿಕಸ್ನಿಗ್ಧ[7]ರಾಗಾ[7]ನುಗಂ ಘೂ
ರ್ಣಿಸೆ ಶಂಖಧ್ವಾನದಿಂದಂ ಸ್ಮರಸರಮನೆಯೊಳ್ ವರ್ಧಮಾನಪ್ರಣಾದಂ

ಲತೆಯುಂ ನಂದನಭೂಮಿ ದೀಪಿಕೆಯನಗ್ನಿಜ್ವಾಲೆ ರತ್ನಾಕರ
ಕ್ಷಿತಿ ಮಾಣಿಕ್ಯಶಲಾಕೆಯಂ ಪ್ರತಿಭೆ ಕಾವ್ಯಪ್ರೌಢಿಯಂ ವೀಣೆ [8]ಸಂ
ಶ್ರುತಿಯಂ ಪದ್ಮಿನಿಯಂ ಮಹಾಸರಸಿ ಕಂದರ್ಪಾಗ್ನಿಯಂ ಕಾಮದೇ
ವತೆ ಪೆಂಪಿಂ ಪಡೆವಂತೆ ಕಾಂತೆ ಪಡೆದಳ್ ಲೀಲಾವತೀದೇವಿಯಂ ೬೮

ಆಗಳ್ ಬಾಜಿಸುವ ಬದ್ದವಣಮುಂ ತಳಿಪ ರಾಜಾಂಗಣಮುಂ, ಎತ್ತಿ ನಿಮಿರ್ವ ಗುಡಿಗಳುಮಿಕ್ಕುವ ರಂಗವಲಿಗಳ ದಾಂಗುಡಿಗಳುಂ, ಕಟ್ಟುವ ತೋರಣಂಗಳುಂ, ಪಣ್ಣುವ ವಿತತವಾರಣಂಗಳುಂ, ನೈಮಿತ್ತಿಕರೆಡೆದುಕೊಳ್ವ ದಾ[10]ನಂ[10]ಗಳುಂ ಪಾಡುವ

[1] ದಂತೆ (ಕ ಖ) [2] ಉರೆ ಕಂ (ಖ) [3] ಕರ(ಕ) ಕಳ (ಖ) [4] ನೈಜಸವ (ಖ)
[5] ಸಮ್ಮೋಹದಿಂ (ಖ) [6] ಗ (ಖ) [7] ನಾದಾ (ಕ ಖ) [8] ಸುಶ್ರು (ಖ) [9] ಳಿವ (ಗ)
ಳಿರ (ಖ) [10] ಯಂ (ಕ ಖ)

ಮಂಗಳಗೇಯಂಗಳುಂ, ಕೈನಿಱಿದಾಡುವ ಕುಳವೃದ್ಧೆಯರುಂ, [1]†[1] ವಂದಾರಮಂ ಕಟ್ಟುವ ಪೆಂಡಗೆ[2]ಯರುಂ, ಫಣಸುವಜ್ಜರುಂ, ಪಱಿದುರುಳ್ವ ಗೆಜ್ಜೆರುಂ, ಸುಟಿವ ಸೂಳಾಯಿತರುಂ ಸುತ್ತಿದಡಂಗಾಯಿತರುಂ, [3]ಮಡಿ[3]ಗಟ್ಟುವ ಪರಿಚಾರಕೆಯರುಂ, [4]ಕುಣಿವ ಕುಮಾರಿಯರುಂ, ಬೈತಲೆಯೊಳ್ ಸೆಂದುರಮಂ ತಳೆವ ಸುವಾಸಿನಿಯರುಂ, ಎಡೆಯಾಡುವ ಚಾಮರಗ್ರಾಹಿಣಿಯರುಂ, ಮುಡಿಯೊಳಿಡುವ ಮಾಲೆಗಳುಂ, ಕಿವಿಯೊಳಿಡುವೋಲೆಗಳುಂ, [5]ಮರಿಪಿಟ್ಟುಗಳು[5]ಮಿಟ್ಟುಕೊಳ್ವ ಬೊಟ್ಟುಗಳುಂ, ಮಿಡಿವ ಕಾಡಿಗೆಗಳುಂ, ಪಿಡಿವ ಕೊಡೆಗಳುಂ[6], ತುಡುವ ತೊಡಿಗೆಗಳುಂ, ಉಡಲ್ಪುಡುವ[7]ಜ[7] ವಳಿಗಳುಂ, ಇಟಿಪಿದ ಪೆಳಾವಳಿಗಳುಂ, ಕೊಳ್ವ ಬಿಟ್ಟುಗಳುಂ, ಕೊಡುವ ಮುತ್ತುಗಳುಂ, ತಳೆವ ಸೇಸೆಯಕ್ಕಿಗಳುಂ, [8]ಮರಿಪಿಟ್ಟುಗಳಿಂ ತೀವುವ ಸನೆಯಕ್ಕಿಗಳುಂ[8], ಪೀಱುವ ಬಾಯಿನಂಗಳುಂ, ಪದ್ಮಾವತಿಗೆ [9]ಪೋದ[9] ಪೊಸಬಾಯಿನಂಗಳುಂ, ನೂಲ ಸುಡಿಸಿದ ನೇಗಿಲುಗಳುಂ, ಕಾಪಂ ಬರೆವ ಬಾಗಿಲುಗಳುಂ, ನಿಱುಸುವ ಕೈದುಗಳುಂ, ಪಿಪ್ಪರೋದುಗಳುಂ, ಬೇಳುವ ಹೋಮಂಗಳುಂ, ಮಗಮಗಿಸಿ ಸೆಗೆವ ಧೂಪಧೂಮಂಗಳುಂ, [10]ಬೇವಿನೆಲೆಯೊಳ್ ಬಿಳಿಯ ಪೆರಲುಂ[10] ಪೊರೆದಿಕ್ಕುವ ಧೂಪಂಗಳುಂ, ಕಾಬ್ಬತ್ತಿಯ ಬತ್ತಿಯೊಳಂ ಕೌಱಿಗ್ಗೆಯೊಳ್ ಪೊತ್ತಿಸಿದ್ದ ದೀಪಂಗಳುಂ, [11]ಪಡುವಿನೆಡೆಯೊಳ್ ಕೊರಳ[11]ಗಳುಂ, ನಾಂದುವ ಬೇವಿನ [12]ಸರಳಿಗೆ[12]ಗಳುಂ, [13]ಕೂ[13]ಲೊಳ್ [14]ಸಾ[14]ಂಗುಸೂಲಂ ಸುತ್ತುವ ಕುಡುಗೋಲ್ಗಳುಂ, ಮರ್ಚಿಸುವ ತಗ್ಗೆಬಲ್ಗಳುಂ, ಪಾಸುವ ಬೆಳ್ಮಡಿಗಳುಂ, ಪೂಜಿಸುವ ಕನ್ನಡಿಗಳುಂ, ಪಾಲಂ ಪೊಯ್ವ [15]ಕಳಶಂ[15]ಗಳುಂ, [16]ಪುಂ[16]ಜಿಸುವ ಕಣಶಂಗಳುಮೆಸೆಯೆ ಚಂದ್ರಲೇಖೆ ಚಂದ್ರಿಕೆಯುಂ ಪಡೆಯೆ ಪರಿಕ್ಷುಬ್ಧಮಾದ ಪಯೋಧಿಯಂತೆ ಪಿರಿದುಂ ಕಳವಳಮನಪ್ಪುಕೆಯ್ವ ಪ್ರಸೂತಿಕಾಪದನಕ್ಕೆ ಶೃಂಗಾರಶೇಖರಂ ಬಂದು ಮಹೋತ್ಸವಮಂ ಮಾಡಿ[17]ದಶಮ[17]ದಿನದೊಳ್ ಪ್ರಸೂತಿಕಾಪ್ರಸಾರಿತಜಿನೇಂದ್ರ ಮಹಾಮಹಿಮೆಯಿಂ ವಾಸವಂ ಬಂದು ನೋಡಿ ಪೋದುದೆ ನಾಣೆಯುಂ ನಿಮಿತ್ತಮಾಗೆ ಬಾಳಕಿಗೆ ವಾಸವದತ್ತೆಯೆಂದು ಪೆಸರನಿಟ್ಟು [18]ಸಂತೋಷ[18]ದಂತನೆಯ್ದಿ ತನ್ನ ವಿನೋದಮೆ ವಿನೋದಮಾಗಿ ಸುಖದಿನಿರೆ, ಪೋಳವೇಳವೆಱಿಯಂತೆ ಪ್ರತಿದಿನಂ ಪ್ರವರ್ಧಮಾನೆಯಾಗೆ—

ಎಳಲತ್ತೆಯಂತೆ ಕೋಮಳಿಕೆಯಿಂದೆಳಮಾಣಿಕದಂತೆ ಕಾಂತಿಯಿಂ
ದೆಳಗಿಳಿಯಂತೆ ಸೋಲಿಪ ತೊದಳ್ನುಡಿಯಿಂದೆಳಯಂಚೆಯಂತೆವೋಲ್
ತಳರಡಿಯಿಂ ಮನಂಗೊಳಿಸಿದಂತಿರೆ ಪತ್ತಿಸಿ ತಾಂ ಬಟಿಕ್ಕದೇಂ
ಕಳೆದಳೊ ಬಟ್ಟೆಯಂತೆ ಕಳಕೇಳಿಕೆ ಬಾಳಿಕೆ ಬಾಲ್ಯಕಾಲಮಂ ೬೯

1 ಸ (ಘ) 2 ಶುದ್ಧೆ (ಕಘ) 3 ಅಡಿಗಡಿ (ಗ) ಗುಡಿ (ಘ) 4 ಮ (ಘ) 5 ಮರೆವ ಪಿಟ್ಟುಗಳು (ಕ) ಅರುಪಿಂಗಳ (ಘ) 6 ಬಿಡುವ ಕೊಡಿಗೆಗಳುಂ (ಕ) ಘಪ್ರತಿಯಲ್ಲಿಲ್ಲ 7 ತಿ (ಘ) 8 'ಕ' ಪ್ರತಿಯಲ್ಲಿಲ್ಲ 9 ಕಘ ಪ್ರತಿಗಳಲ್ಲಿಲ್ಲ 10 ಬೇವಿನೆಣ್ಣೆಯೊಳ್ ಬೆಳ್ಳುಳ್ಳಿಯುವರಲುಂ (ಕ ಘ) 11 ಕಾಯ್ದುರಚೆಗಳುಂ (ಕ) ಪದಪಿನರಳಿಗಳೊಳ್ ಕೊಯ್ದುರಲೆ (ಘ) 12 ಸಲಿಗೆ (ಕ) ಪಲಗೆ (ಘ) 13 ಕೊರ (ಘ) 14 ಪೋಂ (ಘ) 15 ಕಳಹಂಸೆ (ಖ) 16 ಪೂ (ಖ) 17 ದಸಮ (ಖ) 18 ಸಂತಸ (ಕಘ)

ಯೊಳಂಡುಮುಟ್ಟಿ [1]ಮಿಟ್ಟು[1]ಕೊಟ್ಟುಂ ವನಲಕ್ಷ್ಮಿಯೊಡನೆ ಬೆಳೆವೆಳಲತೆಗೆ[2]ಪೊಡನೆ[2] ಬಳೆದು ತನ್ನೊಡನೆ ಸಕಳಕಳೆಗಳಂ ಕಲ್ತ ಮನದನ್ನಳಾದ ಕಳಾವತಿಯುಂ, ಕೈಗೆಯ್ದುರ್ ಕಲಿಸಿದ ತಮಾಳಿಕೆಯುಂ ಮೊದಲಾದ ನಾಲ್ಸಾಸಿರ ನರ್ತಕಿಯರುಮಿಂಬರೆ [3]ಗಾಯಕಿಯರುಂ,[3] ಕಳಭಾಷಿಣಿ ಮೊದಲಾದೈಸಾಸಿರದ ಮೇಳದ [4]ಕೇಳದಿ[4]ಯರುಂ, [5]ಅಸಿಬರೆ ಪರಿಚಾರಿಕೆಯರುಂ ಚಿರಸಾಗಸುಂ[5] ಲೀಲೆವೆರಸಿರ್ಪುದರಿಂ, ಲೀಲಾವತಿಯೆಂಬ ಪೆಸರಂ ಪಡೆದು ನಿಜಜನಕಂ ಮಾಡಿಸಿಕೊಟ್ಟ ಕಾಂತಿಕಮಲಕರ್ಣಿಕೆಯೆಂಬ ಕನಕವೆಸದ ಕನ್ನೆವಾಡದ ಕಡೆದೊಳ್ ಕಮಳಕರ್ಣಿಕೆಯೊಳ್ ಕ್ರೀಡಿಸುವ ತುಂಬಿಯಂತೆ ಕೆಳೆವೆರಸಿರ್ದ ತನ್ನಾತ್ಮಜೆಯು ಯೌವನವಸಂತಮುದಿಯಿಸೆ ತನುಲತೆಯಂ ಕಂಡು ಶೃಂಗಾರಶೇಖರಂ ಮಾರಾಕಾರರುಮಪ್ಪ ರಾಜಕುಮಾರರಂ ಬರಿಸಿ ಸ್ವಯಂಬರಮುಂ ಸ್ಮರಂ ಬರಲೆತ್ತಂತೆ ಬಿತ್ತರಿಸಿದಾಗಳ್—

ಶ್ರೇಯಂ ಕವಿತೆಗೆ [7]ನವ[7]ಚಾರಾಂ
ಪೇಯಂ ಮಧುಕರಿಗೆ ಸಲ್ಲದಂತಿರೆ ದೊರೆವ
ತ್ತಾ ಯುವತಿಗೆ ಚಿತ್ತೋದ್ಭವ
ದಾಯೆಯೆನಲ್ ಸಂದುದಿಲ್ಲ ರಾಜಸಮಾಜಂ ೭೭

ಅಂತು ಲೋಕದೊಳಗುಳ್ಳ ರಾಜ[6]ಸಮಾಜಂ[6] ರೂಪಾಕ್ಷೇಪಸಂಗತಮಾಗಿಯುಂ ಕಂಪಿಸಂತೆ ಕಣ್ಗೆ [8]ಪಾರದವ[8]ಸಂ[9]ಗತಮಾಗಿಯುಂ ಮನಕ್ಕೆ ಸಾರದೆಪೋಗೆ, ಸಕಲಜನ ಮಿಾಕೆಯ ಜನ್ಮಸಂ ಕೇತಕೀವನದಂತೆ ನಿಷ್ಫಲಮಾಗಿ ಪೋದುದೆಂದು ಚಿಂತಿಸುತ್ತುಮಿರೆ, ಮತ್ತೊರ್ಮೆ ನಿಶಾವಸಾನಸುಪ್ತಿಯೊಳ್—

ನಯನಾಂಜನಮಂಜನಮೆನೆ,
ನಯದಿಂ ಮುಸುಕಿದ ದುಕೂಲಮುಮರ್ದಿರೆ ಮೊಗದೊಳ್
ಪ್ರಿಯನಿಧಿಯುಂ[10]ಶೈತ್ಯ[10]ಕುಶೇ
ಶಯಲೋಚನೆ ನೋಡುವಂತೆ ಸೊಗಯಿಸೆ ನೀಡುಂ ೭೮

ಹರನೇತ್ರಜ್ವಾಲೆಯಿಂ ಜೀವತನುವನುಮೆ ಕಾಣುತ್ತೆ ತನ್ನಾಳಿಯೊಳ್ ಸುಂ
ದರಲೀಲಾಮಾತ್ರಮಿರ್ದಂತಮೃತಕಿರಣನಂ ಕೊಂಡಪೂರ್ವಪ್ರಭಾವಂ
ಬರಿ ಮೆಯ್ಯೊಳ್ ಪುಷ್ಪಬಾಣಂ ಪಿಡಿದು ತಳೆದು ಮತ್ತೆತ್ತಿದಂತಿರ್ದ ಶೋಭಾ
ಕರರೂಪಾಕಾರನಂ ತತ್ತರುಣಿ ಕನಸಿನೊಳ್ ಕಂಡು ಸೋಲ್ದಳ್ ಮೃಗಾಕ್ಷೀ ೭೯

ಅಂತು ಸೋಲ್ತು ಘೋಂಕಸೆಟ್ಟು ತಾನತಿಮುಗ್ಧೆಯಪ್ಪುದರಿಂ ಕನಸನೆ ನನಸೆಂದು ಬಗೆದು—

[1] ಕ ಫ ಪ್ರತಿಗಳಲ್ಲಿಲ್ಲ [2] ಅಂತೆ (ಕ ಫ) [3] ವಾಯುರುಂ (ಗ) [4] ಕನ್ನೆ (ಗ) [5] ಚಿರ ಸಾಳ್ವಳುಂ (ಕ ಫ) [6] ಕಫಪ್ರತಿಗಳಲ್ಲಿಲ್ಲ [7] ವನ (ಕ) ಮಧು (ಫ) [8] ಲೋಕಂ (ಕಫ) [9] ಕಫಗಳಲ್ಲಿಲ್ಲ [10] ಕೈತ (ಫ)

ಕೆಲಸಂ ಸ್ಫಿಂತ್ರ ಮಣಿಸ್ತಂಭದ ಮುಱಿಗಳಸೌತ್ಕಟ್ಯದಿಂ ನೋಡಿ ಕಯ್ಯಾ
ತಲದೊಳ್ ಸಾಂಚಾಲಿಕಾಸಂಚಯದೊಳತುಳ ನೀಳಕಾಂತನಿಂದಾದಬಲ್ಗ[1]
ಬ್ಬಲೆಯೊಳ್ ಜೊನ್ನಂಗಳೊಳ್ ಕನ್ನಡಿಯೊಳ್[2]ಚಕಿಲ್ವೇಣಿಗ[3]ಕಾಕುಂಬದೊಳ್ಸ್ಯಂ
ತಲದೊಳ್ ಚಿತ್ರೇಶನಂ ಸಂಭ್ರಮದಿನಱಸಿದಳ್ ಕಾಂತೆ ವಿಭ್ರಾಂತಿಯಿಂದಂ ೮೦

ಪಲವುಂ ಸುದಿಗಳೊಳೇಂ ಕೇಳ್
ಮಲೆ ಕನ್ನೊಳ್ ಮೞಿದ ಚಿತ್ರದೊಳ್ ನಿಲಿಸಿದ ಕಾ
ದಲನಂ ಕಣ್ಮಲರಂ ನಡು
ಮೊಲೆಯುಂ ಬಿಗೆ ಬಗೆದು ನೋಡಿದಳ್ ಬಗೆಯೞಿಯಂ ೮೧

ಅಂತು ಪ್ರತಿಮಾಗತತಂಗೆ[4]ಹತ್ಪ್ರಿಯನಂ ಕೆಳದೊಳಱಸುವ ಮುಗ್ಧ ಚಕ್ರವಾಕಿಯಂತೆ ಕನಸಿನೊಳ್ ಕಂಡ ಕಾಂತನಂ ನೆನಸಿನೊಳ್ ಕಂಡೆನೆಂದೇ ಬಗೆದು ಬಗೆಯಱದಱಸಿ ಎಲ್ಲಿಯುಂ ಕಾಣದೆ—

ಬಳಗಱದೆನ್ನನಿಂತಿವನಿತುಂ ನೆಗುತಿರ್ದಪನೆಂದು ಮಿಂಚುವ
ಳ್ಳ ಮಣಿಸಾಲಭಂಜಿಕೆಗ[5]ಳೊಳ್ 'ವಿಪ್ರಯೋಗ ಬಿಜಗ[6]ನಿತ್ಯಮಿ'
ತ್ರಳಕದಿನೊಕ್ಕ ಮಲ್ಲಿಗೆಮುಗುಳ್ ಬಿಱಯುತ್ತಿರೆ ಮುಗ್ಧೆ ಚಿತ್ರದೊಳ್
ಮುಳಿಸನೊಡರ್ಚಿದಳ್ ಮೊಱಿವ ತುಂಬಿಗಳಂ ಕಡುಗಣ್ಣೆ ನೋಡಿದಳ್ ೮೨

ಅಂತು ನೋಡಿ ನೀಡುಂ ಭಾವಿಸಿ ಬಸವಳಿದು ಪೊಱ್ಱಂ ಕಳೆಯುತ್ತುಮಿರೆ—

ಇನುಸಾಸ್ರಯಂ ಗೇಯಂ [7]ಮುಹಿತಕೆ[8]ರಣಂ ಶೀತಕಿರಣಂ,
ವಿಷಾಹಾರಂ ಹಾರಂ, ಹೃದಯದಹನಂ ಗಂಧಮಹನಂ,
ದ್ವಿಷಜ್ಜಾತಂ ಚೂತಂ, [9]ಪಿತೃವನಸಮದಾಯ್ಯಂಬುಜವನಂ,
ವಿಷಾದಾಯಂ ಕಾಯಂ, ವನಿತೆಗವನಿಂ ಚಿತ್ರಭವನಿಂ ೮೩

ಅಂತಾಕೆ ನೋಲದ ನೊರ್ಕೆಂ ಮೇಗುಂ ಮೆಯ್ಯುಱಯದೆ ಮುಗ್ಧಾ ಕಂಡ ಕ್ರಸಿನಂತೇನುಮೆನಲಱಯದೆ ಮದನಮಹಾದಾಹದಿಂ ದೇಹಂ ಕರಂ ಕೊರಗಿ ಕಡುಬಡವಾಗಿ ನೀಗಿಱಚ್ಚುಗೊಂಡ ಕಮಲಿನಿಯಂತಿರಿರ್ದ ಕಾಮಿನಿಯಂ ಕಂಡು ಮನಂಗಾಣಲಾಱದೇ ಕಾಂತಕ ಕರೆದು ತನ್ಮಾಳಿಕೆ ಕಳ್ಳಾವತಿಗಿಂತೆಂದಳ್—

ಗಿಳಿಗಿನ್ನುಂ ಕುಡುಕಿಕ್ಕೆನೆಂಬಳಲೆ ನೀನಾರೋಗಿಸೆಂದಂದು, ಕೋ
ಕಿಳಮಿನ್ನುಂ ತಳಿರ್ಗಚ್ಚದೆಂಬಳಲೆಯುಂ ಮೆಲ್ಲೆಂದೊಡೇಟ್ ಮುಜ್ಜನಂ
ಗೊಳಲಿಂದಂದೆಲರಿಂದೆ ಮೆಯ್ ನಡುಗಿತೇಟ್ ಕ್ರಂದನೋದ್ವರ್ತಮಾ
ಗಳಿದೇಕಿಲ್ಲೆನೆ ಸಾವು ಕಾವುದೆನೆ ಕೇಳ್ಗುಂಡಿದೆನೆಂಬಳ್ ಸಖೀ ೮೪

---

[1] ಬಾಳ್ಗ (ಫ) [2] ಆಡಿಯೊಳ್ಚದ್ಯೇಣಿ (ಕಫ) [3] ಮನಃ (ಫ) [4] ಮುಗ್ಧ (ಕ ಗ ಫ) [5] ನಿತ್ಯಳಿ (ಕ ಫ) [6] ದಳತಕೆ (ಗ) [7] ಸಕೇತ ವನಮಾ (ಕ) ಸಂಕೇತವನದಾ (ಖ) [8] ಗೆ (ಕ ಫ) [9] ಛತೆ (ಕ ಗ)

ಅದಲ್ಲದೆಯುಂ—

ಇರವೇನೊಂದೆಡೆಯಲ್ಲಿ ಬಾಸಿಸುತೆ ಪೀನಂಬಿ ಕರಂ ಪುಟ್ಟಿ ಮ
ಜ್ಜರಣ[1]ನ್ನಾ[1]ನನನ್ರಂ[2]ಜ[2] ತನ್ನ ಮ[3]ಱ[3]ಯುಂ [4]ಬಟ್ಟೆಬಟ್ಟ[4]ದಂಬಳ್ ಮಿದು
ಳ್ಕುರುಳಾ[5]ಯ್ದೆ[5]ಬಲೆ ಸಜ್ಜೆಗೆಂಬೆನಬಳೇ ಕಂಡಂತು ಕಣ್ಬುಜ್ಜುಗುಂ
ವಿರಹಂ ಕೈಮಿಗೆ ಚಕ್ಕಪಕ್ಕ ಪೊರಳುತ್ತಿಂತಿರ್ಪುದೆಂಬಳ್ ಸತೀ

ಅದಲ್ಲದೆಯುಂ—

ತಿಱಯುದಿರಕ್ಕ ತೀರ್ದಪುವು ಕೆಂದಳಿರಾಪ್ರುದೊಳೇಕೆ ಪದ್ಮಮುಂ
[6]ಪೆಱದನೆಯುಂಜೆಗಳ್ ಪಸಿದು ಸತ್ತಪುವಾಯ್ತೊಡೆ ಮಾಣ್ದು ಪೂಗಳಂ
ಪಜೆಮಿಗಳಿಂತು ಜೀವಿಸುಗುಮೆಂದ್ದಿರದ್ದೇ ನಿವದಿಂದಮಿಲ್ಲ ಸೀ
ರೆಜಿದಳಿವಳ್ ತಳಿರ್ಮುಡಿಗೆ ಕನ್ನೆ ಪುರಕ್ಕಲ[7]ರ್ಪೆಕ್ಕೆ[7]ಗಿಂತಿದೇಂ

[ಎಂಬುದುಂ] ಆಕೆಯಾನುಮಿದನೆ ಮದಂತರ್ಗತದೊಳ್ ಬಗೆದೀ ಕನ್ನೆ ಕುಸುಮಶರನನ್ನ ಘನಾವನಾನುಮೊರ್ವ ಮಹಾನುಭಾವನಂ ಕನಸಿನೊಳ್ ಕಂಡು ದಿಟಮೆಂದೇ ಬಗೆದಿಲ್ಲಿ ಡಯೊಳಱಸಿ ಮಱುಗಿಪ್ಪಳೆಂದಱದು ಪಿನಗಱಸಲೆಂದಿರ್ದ ವಾಪಱ[8]ಪಿ[8] ಮಹಾತ್ಮನನುಮನಪೂರ್ವ ಪ್ರಾಯರೂಪವಿಭ್ರಮವಿಭವನಂ ಕಾಣದೇ ಕೇಳುಮಳಿ ಕಾಮವಿಕಾರದಿಂ ಕನಸಿನೊಳ್ ಬಂದ ಸೌಭಾಗ್ಯವಂತನಂ ಜಾತವನಲಕ್ಕಿಯು ಕುಸುಮಾಂಕುರವಿಕಾರದಿಂ ಬಂದ ಬಸಂತನುಮನಱಪುದೇಂ ತಪ್ಪಲ್ಲಱಯುದಾದೊಡಮಿನ್ನುಮಾನೆ ಮನೋಹರಿಯು ಮನಮುಂ ತಿಳಿದು ಪಿನಗೆ ತಿಳಿಯವೇಳ್ಕುಮೆಂದು ಪೋಗಿ ತನ್ನ ಮನದನ್ನಳಪ್ಪುದಱಂ [9]ಮೇಳಿಸಿ[9] ಮನದೆಗೊಂಡಾಕೆ ಪಿನ್ನ ಪರಿ ಮುನ್ನಿನ ಪರಿಯಲ್ಲದೇಂ ಬನ್ನಂಬಟ್ಟಿಂತೆ ಬನ್ನಿಸಿರ್ಪೆಯೆನೆ—

ಎನ್ನ ದುಂಬಿಯುಗುಳ್ವ ಪೆಸ ಮಧು
ರಮಧುಗಳಂ ಪಿಡಿಯ ಬಳಿಯ ಕಪ್ಪಾವರಿ[10]ಯಿಂ[10]
ರಮಣಿ ನಸುನೆಗಪಿದಳ್ ಮದ
ನಮೋಹರದಿಂ ಬಾಷ್ಪಬಹಳಬಳಕ[11]ಣ್ಕೆ[11]ಕೆಗಳಂ

ಎನೆ; ನೆಗಪಿಯೊರ್ವನಪೂರ್ವವಿಲಾಸನಂ ಸಿದ್ದಗೆಯ್ದಲ್ಲಿ ಕಂಡೆನೆನೆ ಮುಗುಳ್ನಗೆ ನಕ್ಕು ಕಣ್ಣಾಸೀರ್ಗಳಂ ತೊಡೆದು ಪೀಂ ಬೆಸಗೊಳ್ಳ ಕನಸಿಂತುಬೆಂ[12]ದು[12] ಪೇಳ್ವು ಸಂತಸದಂತಸ್ಸ[13]ದ[13] ತನ್ನ ಒಂದಿಗರಿದಂ ಪಿರಿದುಮಿಲ್ಲಪ ಕಾರಣದಿಂ ಕಳಾವತಿ ಮತ್ತಮಿಂತೆಂದಳ್ : ದಪನಕ್ಕೆ ಪೂವಂ, ಕರ್ಬಿಂಗೆ ಪಣ್ಣಂ, ತಣ್ಗದಿರಂಗೆ ಮೆಯ್ಯುಂ, ಜೇನಿಗೆ ನಾಲಗೆಯುಂ, ಕಾಮಂಗೆ ರೂಪನಱಸುವುದೆಗಿನ ಸುಗ್ಗಿಯಾದಂತಕ್ಕುಂ, ರಂಭೆಯೊಳ್ಬಳೆನೆ ಸೊಬಗಂ, ಸರಸ್ವತಿಯೊಳ್ಬಳೆನೆ ಜದುರಂ, ಸಿರಿಯೊಳ್ಬಳೆನೆ ಪುಣ್ಯಮುಂ,

---

1 ವ್ಯಾ (ಕ ಘ) 2 ತ (ಕ ಘ) 3 ಂ (ಕ ಘ) 4 ಬಟ್ಟಪ್ಪ (ಕ ಘ) 5 ಯ್ಯೆಳಗೆ (ಕ ಘ) 6 ತ (ಕ) 7 ರತ್ತ (ಕ ಘ) 8 ಪಿ (ಕ ಘ) 9 ಮುಳಿಸಿಂ (ಗ) 10 ಗಳ (ಕ ಗ ಘ) 11 ಳ (ಕ ಖ) 12 ಬುದಂ (ಖ) 13 ಸಂತ್ಸ್ವ (ಘ)

ನೀನೊಲ್ದಿಯೆನೆ ವಿಳಾಸಮ
ನೇನವಲೋಕಿಪುದೊ ಎನ್ನ ನನೆನೆಂಬ ಪರಿ
ಜ್ಞಾನಂ ಬೇಳ್ಪುದು ಬಿಸಜಾನ
ಭಾನನೆ ನೀಂ ಬರೆದು ತೋರ್ಪುದಾತನ ರೂಪಂ ೮೮

ಎಂದು ಪಳಿಕಿನ ಪಲ್ಲಗೆಯುಮಂ ಬಣ್ಣವಣ್ಣಿಗೆಯ ಬಟ್ಟಿಗೆಗಳಂ ತಾನೆ ತಂದು ಕೊಟ್ಟು ತೊಡೆಯನೇಱಿಸಿಕೊಂಡು ನೋಡುತ್ತುಮಿರೆ—

ಮನದೊಳ್ ಸಲೆ ನೆಲಸಿದ ಮುದ
[1]ನನನೀಕ್ಷಿಸಿ[1] ಬರೆವ ತೆಱದೆ ದರಮುಕುಳಿತಲೋ
ಚನೆ ನೆನೆದೇಂ ಬರೆದಳೊ ಕಾ
ಮನೆ ಬರೆ[2]ದಿ[2]ತ್ತಂತೆ ವರನ ಮುಖಚಂದ್ರಮನಂ ೮೯

ಉದಿರ್ದುವು ಕರ್ಣಯುಗ್ಮದ ಪನಿ
ಯುದಯಿಸೆ ಕಾಂತನ ಮುಖೇಂದು ಕರಕಮಳಂ ಮಾ
ಣದೆ [3]ನಡುಗಿದುದದಱ[3] ಬಿಮ
ರ್ದನು ತನು[4]ಕಲಿ[4]ಮಣಿಕಲಾಕೆ ದಳಿತೇಕ್ಷಣೆಯಾ ೯೦

ಆಗಳದಂ ಕಂಡು—

ನಡುಪ [5]ಬೆರಲ್ಗಳಂ[5] ಪಿಡಿದು [6]ಬಟ್ಟಿಗೆ ತೊಟ್ಟನೆ ಬೀದ ಕೊಟ್ಟುಮುಂ
ತೊಡೆದು ನೆಱಂಗಿನಿಂದವಳ ಘರ್ಮಜಳಂಗಳನಾಯತಾಕ್ಷಿಗಳ್
ಬಿಡುವುದಬಿಂದುವಂ ಕರತಲಂಗಳಿನೊತ್ತಿ ಮನೋಭವಗ್ರಹಂ
ಬಿಡಿದ ಲತಾಂಗಿಯಂ ಬರೆಯಿಸಂಗನೆಗಂ ಕರಮಾದುದುಬ್ಬೆಗಂ ೯೧

ಅಂತು ಬರೆ[7]ಯಿಸೆ[7]—

ಚಿತ್ರಭವನೆಂಬ ಕಂಥು ನಿ
ಮಿತ್ರಂ ತಾನಾಗೆ ರಾಗ[8]ವಶ[8]ದಿಂದ[9]ಮದೇಂ[9]
ಪೆತ್ತುದೊ ರಮಣನ ರೂಪಂ
ತತ್ತರುಣಿಯ ಪಾಣಿಪದ್ಮ ಬಿವ್ಯಾಪಾರಂ ೯೨

ಆಗಳ್—

ಪ್ರತಿಮಾಗತನಿಜರೂಪಕ
ಮತಿನಿರ್ಮಳಫಲಕತಲದ ಪ್ರತಿರೂಪಕದೊಳ್
[10]ಪತಿಯುಮಂ ಕಂಡಳೆಗೆತ್ತಾ[10]
ಸ್ಮಿತಮುಖಿ ಪೊಕ್ಕಪ್ಪಿದಂತಿರೇನೊಪ್ಪಿದಳೋ ೯೩

---

[1] ನನೆನಟ್ಟಿಸಿ (ಗ) [2] ದಿ (ಕ ಖ ಗ) [3] ನವನದುಗಿಪ್ಪೊಡೆ (ಗ) . . . ದಮರೆ (ಘ) [4] ಬಿಡೆ (ಘ) [5] ಕರಂಗಳಂ (ಖ) [6] ಬಿ (ಕ ಘ) [7] ಯಿನೆ (ಘ) [8] ರಸ (ಗ) [9] ವದಂ (ಕ ಘ) [10] ಪ್ರತಿಗನಿತಮಾಗಲಂತಾ (ಗ)

ಲೋಚನಬಾಣಪತನಭಯ[1]
ಸಾಚೀಕೃತವದನೆ ವಿನಯವಿಧಿಯಿಂ ಕೀರ್ದಂ
ತಾ ಚಿತ್ರದ ಪತಿಗಂ ಘೂಳಿ
ದಾ ಚದುರಿಕೆ ಮೊಗಮನಪ್ಪವಿಟ್ಟಿಂತೆಸೆದಳ್ ೯೪

ಅಲ್ಲಿಂಬಳಿಯಂ ಕನಾಳಿಕೆಯುಂ ಕಣ್ಸನ್ನೆಯಿಂ ಕಳಾವತಿ ಕರೆದು ತಲೆಯಂ ಕವಿಗಿ ನೋಡುತ್ತುಮಿರೆ—

ಶಶಿಯಂ ಜಯೋಕಾಡುತಿರ್ಕುಂ/ಮೊಗಮಂಬುಜಮುಮಂ ಜಾಣೆಮನ ಚಕ್ಷುರ್ವಿಕಸ್ವಂ
ದಶನಂ ದಾಳಿಂಬಬಿಂಬಂಗಳನಿಬಿಸುಗುಂ ಪೀಳಸೀರೇಚಕೋಚ್ಛ್ವ
ವಿಶದಶ್ರೀನೇತ್ರಮಂಗಂ [2]ವಿಕಚಕುವಲಯಶ್ಯಾಮಲಂ[2] ಪ್ರಾಯಮಂ ಮಾತ್ಸ
ದಶಪ್ಪರ್ಪಂ ತಾನೆನಲ್ ಚಿತ್ರದೊಳಮವನ ರೂಪಾದುದಾದಂ ವಿಚಿತ್ರಂ

ಆತನ ತೋಳೊಳ್ ತಳ್ತ ಮ
ಹೀತಳ[3]ಮುಂ ಪೂಸಿದಮಳ ಮಳಯಜಗಂಧ
ಕೆಯ್ಗೇತೆಜಗದಳಿಯುನಿಬಿಪುದು
ಮಾ[4]ತೇಂ ಕರ್ಮಾರ್ಕ್ಕೆ[4] ಮತ್ತಗಜಪತಿಗಮನೆ ೯೫

ಎಂದು ಪೇಳುತ್ತುಂ ತೂಂಕಡಿಸಿ ಗಿಳಿ ಮಱದೊಱಗುವುದುಮದೆಲ್ಲಮಂ ಕೇಳ್ದು ಕಣ್ಬುಲರ್ಗಳ್ತ್ತಿಳಕರಿಯ ಮತ್ತೆಯುಂ ಮತ್ತೆ ನೋಡಿ [5]ಬಹಿರಂಗಮಱಯದುದನಂತರಂಗಮಱಗುಮೆಂಬು[5]ದನಱಪುವಂತೆ ವಿರಹದುರಿಯ [6]ಸುರಿದು ಹುಱದಂತಿ[6]ರಾದ ಮನಮಾಲಿಗೊಡೆ ಮದನಬ್ಬರಮೊಳಸೋಱ [7]ಸುರಿದಂತಿರಾದ[7] ತತ್ಕಥಾರಸದ ಕಾಳ್ಪುರಂ ಮೇಲೆ ಕವಿಯೆ, ಮುಳುಂಗಿದಂತೆಯುಮಾನಂದದಿಂ ಮುಂದುಮುಂದುಮಾದಂತೆಯುಂ [8]ಶಿತಾಸ[8]ನಿಶಿತಶಸ್ತ್ರಂ ನೆಱಂ ನಡೆ ಮುಱಿದು ಪೋದಂತೆಯುಂ [9]ಸುಳಿದ[9] ನೋರ್ಕಿಂ ಮೆಯ್ಯುಱದು ಕಿಱದು ಬೇಗದಿನೆಱದು ಬೆಱಗಾಗಿ ಸಂಜಾತಸ್ವಪ್ನಸಂಸ್ಕಾರಸಂತತಿ[10]ತತ್[10]ರೂಪನಿರೀಕ್ಷಣದಿಂ ಸಾತಿಶಯ ಸ್ಮರಣಮಂ ಮುಂದಿಡೆ, ನಿಜಮನೋಹರಿಯ ಮನೋಹರರೂಪಾತಿಶಯಮುಮಂ ಭಾವಿಸುತ್ತುಮೇನಾನುಮನನುಮಾನಿಸುತ್ತುಮಿರ್ದ ಮಾನವಮದನನಂ ಮನದನುರಾಗದಿಂ ಮಕರಂದನಿಂತೆಂದಂ—

ಇದು ನಿನ್ನ ವೃತ್ತಕಂ ತ
ಪ್ಪದು ಕೂಡಿದುದೆನ್ನ ಬಯಕೆ ಬಯಸಿದುದುದಯಂ
ಬದಿಯ ಚದುರೋಜೆಗೊಂಡುದು
ಮದನಂ ಕೃತಕೃತ್ಯನಾದನೆಂದು ನರೇಂದ್ರಾ ೯೬

---

[1] ಜಳ (ಕ ಫ) [2] ಕರಿಕಳಭವಪುಶ್ಯಾಮಲಂ (ಗ) [3] ಮಂ (ಕ ಗ ಫ) [4] ತಂಕರ್ಮಾತ್ರೆ (ಗ) [5] ಬಹಿರಂಗಮುಱಯದುದಂತರಂಗಮುಱಯದ ಬಹಿರಂಗಮಿಲ್ಲೆಂಬು (ಫ) [6] ಸುರಿದು ಹಾಕಿದಂತಿದಿ (ಫ) [7] ಸುಳಿವ (ಗ) [8] ಶಾಂತ (ಫ) [9] ಶೋಕದ (ಗ) [10] ವತ್ಸ (ಗ)

ಅನುರೂಪರನಿವರಂ ಪಡೆ
ದನುರಾಗಮನಾಗುಮಾಱ ತನಗಂ ಕೂಡ
ಲ್ಕನುವಿಸುತಿರ್ದಪನೀಗಳ್
ಜಿನದಮನೇನೆಂಮ ಪೇೞ್ವನಬ್ಜೋದ್ಭವನಾ ೯೮

ಅಂತೆಂದು ವಿಧಾತ್ರನ ಸಂ[1]ವಿಧಾನವೈದಗ್ಧ್ಯತೆಗೆ ಮೆಚ್ಚಿ ಬಿಣ್ಣಿಸುತಿರ್ಪನ್ನಂ—

ಪೆಱಪೆಗೆಮೆ ಚಂದ್ರಿಕಾಜಲ
ಮಱತಿರೆ ಕೆಸರಂತೆ ತೋಱೆ ಗಗನಸ್ಥಲಿ ಬಾಂ
[2]ದೊಱೆಯುಸರತಟದೊಳೆಸೆವಿಮಾಂ
ಗುಱಿಕೆಯ ಬಕದಂತಿರಿರ್ದುದಿಂದುವಬಿಂಬಂ ೯೯

ತುಱುಗಿರೆ ಗಗನಾಂಗಣದೊಳ್
ಮಿಱುಗುವ ತಾರಕನಿಕಾಯತಂಡುಳಕುಳಮಾ
ಯ್ದುಱಿಸಿ ರುಚಿತುಂಡದಿಂದಂ
ಕುಱುಕಿದುದು ಪತಂಗತಾಮ್ರಚೂಡಂ ಕ್ರಮದಿಂ ೧೦೦

ಅಂತುಮಲ್ಲದೆಯುಂ—

ಅರುಣರುಚಿರಾಂಬರಂ ಲಂ
ಬಿರುಚಿಚಯಂ ಸೋ[3]ವಿ ತಿಮಿರಮಧುಕರಕುಳಮಂ
ಕರಕಿಸಲಯದಿಂದಂ ಭಾ
ಸ್ಕರಭೌತಿಕನಾಯ್ದುನೆಬ್ಬಿ ನೀರ್ವೂವುಗಳಂ ೧೦೧

ಅಂತು ಸೂರ್ಯೋದಯಮಪ್ಪುದುಮಾ ಸರೋವರಕ್ಕೆ ಬಂದು ಕರಚರಣ ಮುಖ ಸರೋಜಪ್ರಕ್ಷಾಳನಂಗೆಯ್ದು ತದುತ್ತರತೀರದೊಳ್ ವಿದ್ಯಾಧರಿಯರ್ ವಿನೋದದಿಂ ಕಿಸುಗಲ್ಲೊಳ್ [4]ಮಾಡಿದುದಾಗಿಯುಂ ಕಮಲದಲಚ್ಛಾಯೆಯಿಂ ಸುರಕತರುಚಿಯಿಂ ರಚನೆಗೆಯ್ದು ಬಳಿದಂತೆ ಕೆಱುಮುಱುಕನಾಗಿಯುಂ, ಮಿಱುಪ ಚೆಲ್ವಿಂ ಪಿರಿದೆನಿಸಿದ ಸೋಪಾನಪಟಂಕಕೂಟದೊಳ್ ಕುಮುದಕುವಲಯಕಲ್ಹಾರಕಮಲಕುಸುಮಪ್ರತಿಬಿಂಬದಿಂ ಬಾಲಾರ್ಕಗಳಿಂ ನಿತ್ಯಪೂಜೆವಡೆದಂತಿರ್ದ ಜಿನಪ್ರತಿಮೆಯುಂ ಬಂದಿಸಿ, ನೀರ್ವೂಗಳನರ್ಚಿಸಿ ಪದ್ಮಾವತೀಪ್ರತಿತಮಾರ್ಗದಿಂ ಬರುಂ ಪೋಗುವಾಗ—

ನಿನಗೋರ್ವಂಗಲ್ತು ಕುಂಭೋದ್ಭವನ ಘುವನ ಸಂಸ್ಕೃತ ಸಾವಕ್ತ್ರದಿಂದಾ
ಯ್ತಿನಗಂ ಕೇಳ್ ಭಂಗಮಿಂದುಕ್ಷಯದ ಸೆವದೆ ನೀಂ ಕುಂದದಿರ್ ವೀಚಿಮಾಲಾ
ನಿನದೌಘವ್ಯಾಜದಿಂ ನೀನುಡಿವೆನುತೆ ತಾಂ ಬುದ್ಧಿವೇಳಲ್ಕೆ ಬಂದಂ
ತೆನಸುಂ ಪರ್ವಿತ್ತು ಪೂರ್ವಾಪರಜಲನಿಧಿಯಂ ತಾ[9]ಗಿ ಸಂಧ್ಯಾಚಲೇಂದ್ರಂ ೧೦೨

[1] ನ (ಖ ಘ) [2] ಱತೆ (ಕ ಗ ಘ) [3] ಗೆ (ಕ) [4] ದು (ಕ ಘ) [5] ಘುದಿಮದಾಂ (ಘ) [6] ಬಿಂಬಮಂ (ಗ) [7] ರೆ (ಗ) [8] ಸಿದ್ಧ (ಕ ಘ) [9] ಗೆ (ಘ)

ಅಳುರ್ವ ದವದಹನನಿಂ ಬೇ
ಸಱವಿಯ ಮಲಯಜದ ಸುರಿವ ಕರ್ಪೂರದ ಗು
ಗ್ಗುಳನಿರ್ಯಾಸದ ಸವಸರಿ
ಸುೞದಿಂ ಮಗಮಗಿಪುವಗದ ನಾಲ್ಕುಂದೆಸೆಗಳ್ ೧೦೯

ಕೆಡೆದುದೊ ನೀಲದ ಸಱಿಯೆಂ
ಪೊಸವೆರ್ಚಿದ ಬೆಗಡುಗೊಂಡು ಬೆಳತಿಗೆಗಣ್ಣಿಂ
ಕುಡುಮಿಂಚಿನ ತುಡುಗೆಗಳಂ
ತುಡಿ[1]ಸುವ ತೆಱನಿದು[1] ಮುಗಿಲ್ಗೆ ಶಬರಿಯರರೆಬರ್ ೧೧೦

ಎಱಗೆ ಹರಿ ಮುರಿದ ಕುಲಿಶದ
ಸುಱಗಳಿವೆನೆ ಮಿಱುಗೆ ವಜ್ರದೆಸೆವ ಪರಲ್ಗಳ್
ಸಱಿಯುದಿಱಕೆಯನೆ ಕಿಕ್ಕಿಱ
ಗಿಱದಿರ್ದುವು ಕುಧರದಗೆಯೊಳಿಱಪ ಮುಗಿಲ್ಗಳ್ ೧೧೧

ಆವಾಸಮೋಹದಿಂ ಪೆ
ಬರ್ಬಾಡುವು ಮುತ್ತು ಸತ್ತ ಕಬ್ಬಲೆಗಳೆಸಲ್
ಕಾವಲಿಯ ಕರಿಯ ಬಣ್ಣದ
ಸಾವುಗಳೆಸೆದಿರ್ಪುವಾ ಗುಹಾಗಹ್ವರದೊಳ್ ೧೧೨

ಕಡುವೆಳೆದ ತಾಳತರುವಂ
ಕೆಡಪಿದವೊಲ್ ಪೊರಬುತಿರ್ಪ ಪೆರ್ಪಾವುಗಳಿಂ
ತುಡುಕಿದುವೊ ಜಿಹ್ಮಜಿಹ್ವಾ
ವಿಡಂಬಮಂ ಘನಗುಹಾಮುಖಂಗ[2]ಳೊಳಗವಾ[2] ೧೧೩

ಮರದಡಿಯೊಳ್ ಮು[3]ದುಡಿದ[3] ‘ಮುದು[4]
ಗರಡಿಯ ಮೆಯ್ಯಲ್ಲಿ ಪರಿಯೆ ಪ[5]ರೆದೆಲೆ[5]ಯೆಡೆಯಿಂ
ತರುಣರವಿಕಿರಣತತಿ ವನ
ಚರಿಯರ್ ಪುಲಿಗೆತ್ತು ತೊಲಗುವರ್ ಗಿರಿವರದೊಳ್ ೧೧೪

ಇಕ್ಕಿದ ತತ್ತಿಗೆ ಕಬ್ಬಲೆ
ಪಕ್ಕಿ ಭಯಂಬಟ್ಟು ರವಿಕರಾಹಿಯ ದಿಸೆ[6]ಯಿಂ[6]
ಸಕ್ಕದೆ ಪೊದೆಯಿಸಿತೆನೆ ಮೆ
ಯಿಕ್ಕಿರ್ದುವು ನೀಳದೊಳ್ ತಮಾಳದ ತ[7]ರು[7]ಗಳ್ ೧೧೫

---

[1] ಸುವಂತೆಱಗಿ (ಗ) ಸುವತೆಱದಿಂ (ಕ ಫ) [2] ಗಳ್ನಗದ (ಗ) [3] ದುಡಿ (ಗ) [4] ವಯ (ಖಗ) [5] ರದೆಡೆ (ಗ) [6] ಯಂ (ಗ) [7] ತಿ (ಕ ಫ)

ಎಂಬ ಪೊಗಳ್ತೆಗಳಂಬುಮಿ
ದೆಂಬುದನಾ ಕಲಶಘನಸ್ತನಿಸುತಿದೆ ಸಭ
ಕ್ಕುಂಬಿ[1]ಬ[2]ರುಚಿಗಳಿಂ ರವಿ
ಬಿಂಬಮುಮಂ ಮಿಕ್ಕು ಬೆಳಗಿಪ್ಪೊಳ್ ಸೊಗಯಿಸುಗುಂ ೧೧೬

ಆಗಸಮಿದು ಬಕ್ಕಂಬಯು
ಲಾಗಿರಲಾಗೆಂದು ಪಡೆದ ಮಣಿಯುಂ ಬಗೆಯಂ
ತಾಗೆ ತೀವಲ್ ನೆಲಿಸುದೆ
ಇಂ ಗಿರಿಯುಂ ಪಡೆದನಬ್ಬ ಘನಸ್ತನಿಸುವ್ರದಂ ೧೧೭

ಅಂತು [3]ಕಂಡು[3] ಮ[4]ನಂ[4]ಗೊಂಡು ಮಿಜ್ಜುತ್ತುಮಜ್ಜರಿಪಡುತ್ತುಮರಸನುಮ ಮಾತ್ಯಪುತ್ರನುಮಾ ಪರ್ವತದ ತಪ್ಪಲ್ಪಿಡಿದು ಪೋಗೆಪೋಗೆ ಮುಂದೊಂದುಪತ್ಯಕದೊಳ್—

ಕಡುವೆಟ್ಟಿತ್ತಾಗಿ ಮೇಗಿರ್ದ ಜಲಜಲಧರಂ ಪಿಂದಣಾಕೋರ್ದುಯುಂ ಬೆ
ಟ್ಟಗ್ಗೆಯುಂ [5]ಭಾ[5]ಚಕ್ರಮುಂ ಪೋಲ್ತಿರೆ ಕೆಲದಜಳಜ್ಜಾಮರೌಘಂ ಬೆಡಂಗಂ
ತುಡೆ[6]ಸುತ್ತುಂ ಸಿಂಧು[6]ಜಾಳಂ ಬಳಸಿದ ಶಿಲೆಯೊಳ್ ಸಿಂದ ಯೋಗೀಶ್ವರಂಗೇಂ
ಪೊಣ್ಮುಟ್ಟಾನಂದಮುಂ ತಾಳ್ದಿದನೊ ಹೃದಯದೊಳ್ ವಿಶ್ವವಿದ್ಯಾವಿನೋದಂ ೧೧೮

ಇದು ವಿದಿತವಿವಿಧಪ್ರಬಂಧವನವಿಹಾರಪರಿಣತಪರಮಜನಚರಣರಮ್ಯ [7]ಹ್ಯಮಾ[7]ಚಳೋಚ್ಚಳಿತ
ನಖಿನಿಯುಖಮಂದಾಕಿನೀಮಜ್ಜನಾಸಕ್ತ ಸಂತತೋಲ್ಲಿಕ್ತದಾನಾಮೋದಮುದಿತ
ಬುಧಮಧುಕರಪ್ರಕರ ಕವಿರಾಜಕುಂಜರ ನೇಮಿಚಂದ್ರ ವಿರಚಿತಮಪ್ಪ
ಲೀಲಾವತಿಯೊಳ್ ನಾಯಕಾಭ್ಯುದಯವರ್ಣನಂ ಸಪ್ತಮಾಶ್ವಾಸಂ

---

[1] ರವಿ (ಕ ಖ ಗ) [2] ದೆ (ಗ) [3] ಬಂದು (ಗ) [4] ನಡೆ (ಘ) [5] ಘೂ (ಖ ಗ)
[6] ಕುಡೆ ಸುತ್ತುಂ ಸಿಂಧು (ಕ ಘ) [7] ಹವಸ್ಯಾರ್ (ಕ ಘ)

ಇಂದ್ರಕೂಟ ಜಿನಾಲಯ ವರ್ಣನಂ.

# ಅಷ್ಟಮಾಶ್ವಾಸಂ

ಶ್ರೀಯುವತಿನಾಯಕಂ ಯತಿ
ನಾಯಕನಂ ಬಲದೊಳಿಕ್ಕಿ ಜಾತಸುಖಾಬ್ಧಿ
ಪ್ರಾಯಂ ನವಮಧುಕರಚಾಂ
ಸೇಯಂ ಪೋತರೆ ಮನೋನುರಾಗದಿನಾಗಳ್ ೧

ಸುರಿವ ಮದಧಾರೆ ಮಿಂಚಿನ
ದೊರೆಯೆನಿಸುವ ದಂತಮಿಡಿದ ಮೆಯ್ಯ ಪರ್ಳವ
ಟ್ಟಿರೆ ಕಾರ್ಮುಗಿಲ್ಗ[1]ಳಿ[1]ಕ್ಕಿದ
ಕುರುಣೆಗಳೆನೆ ಕರಿಗಳಿರ್ದುವಾ ಗಿರಿತಟದೊಳ್ ೨

ಸೊವಡಿಂ ಸೊರ್ಕಿಸುತುಂ ಕರೇಣುಕುಳಮಂ [2]ಸಾದ್ರಾರ್ದ್ರ[2] ಸಾಮೋದಪ
ಲ್ಲವಮಂ ಮೇವುತೆ ತುಂಬಿ ತುಂಬಿಗಳನುದ್ಯದ್ಗಲ್ಲದಿಂದಗ್ರಪ
ಲ್ಲವದೊಳ್ ಸೋವುತೆ ಸೋರ್ವ ದಾನಜಲದಿಂದಂ ಪಲ್ಲಕೀಕಾನನೋ
ದ್ಭವಮಂ ಮಾಡುತುಮಾಡುತಿರ್ದುವಗದೊಳ್ [3]ಕೋವಿಟ್ಟ ಕಾಡಾನೆಗಳ್ ೩

[4]ಮತ್ತಮೊಂದು ವಿವಿಕ್ತಪ್ರದೇಶದೊಳ್[4]—

ಕೊಳದೊಳ್ ಬಾಳಮೃಣಾಳಿನೀಕಬಳಮಂ ಕಿೞ್ತೆತ್ತಿ ಹಸ್ತಾಗ್ರದಿಂ
ತಿಳಿನೀರಂ ತೆಗೆದೊಯ್ಯನೂಡಿಸಿ ಪರಿಮ್ಲಾನಾಸ್ಯದೊಳ್ ಶೀಕರಂ
ಗಳನೀಡಾಡಿ ಪೊದಳ್ದು ಪಚ್ಚೆಗೊಡೆಯೆಂಬಂತೆತ್ತಿ ಪಂಕೇಜಿನೀ
ದಳಮಂ ಬಾಳಕರೇಣುವಂ ಬಯಿಕೆಯೊಳ್ ಕೊಂಡಾಡುತಿರ್ದತ್ತಿಭಂ ೪

ಮತ್ತೊಂದೆಡೆಯೊಳ್,

ಪದನಂ ಹಸ್ತಾಗ್ರದಿಂ ಘ್ರಾಣಿಸಿ ಬೆದೆ[5]ಪಿಡಿ[5]ಯಂ ಮೆಚ್ಚಿ ಮೇಳಕ್ಕೆ ಮೆಯ್ಯಾ
ಱದೆ ನೀಡುಂ ನಿದ್ದೆಯಂ [6]ಶೀ[6]ಸುಮನಱಿಯದೆ ನೀರೂಡದುರ್ವೀರುಹವ್ರಾ
ತದ ಪೊಯ್ಲಿಂ ಕೂಡಿ ಮೆಯ[7]ಸು[7]ಕ್ಕನೆ ಸು[8]ಲಿ[8]ಯೆ ಮದಂ ಮೆಯ್ಯೊಳೞ್ಬಾಡೆ ಕಾಡೊಳ್
ಮದನವ್ಯಾ[9]ಸಂಗ[9]ದಿಂದಿರ್ದುದು [10]ಗಿಡಿಗಿ[10]ಡಿಬಂತ್ರಂಬೊಲಂದೊಂದಿಭೇಂದ್ರಂ ೫

---

[1] ಳು (ಕ) [2] ಸಾಂದ್ರಾರ್ದ್ರ (ಘ) [3] ಕೂಗಿ (ಗ) [4] ಈ ವಚನ ಖ ಗ ಪ್ರತಿಗಳಲ್ಲಿ ಹಿಂದಿನ ಪದ್ಯದ ಮೊದಲೇ ಬರುತ್ತದೆ [5] ಪಡಿ (ಗ) [6] ಶೇ (ಕ) [7] ಸೊ (ಕ ಘ) [8] ೦ (ಘ) [9] ಪಾರ (ಕ ಘ) [10] ನಿಡಿನಿ (ಘ)

ಮತ್ತೊಂದೆಡೆಯೊಳ್—

ತಳಿರಿಂದಂ [1]ಕೊಡೆ[1] ದಾಸ್ಯಮಂ ತುರುಕಿ ಮೆಲ್ಪಿಂ ಗಲ್ಲಮಂ ಜೊಲ್ಲಿದಿಂ
ದೆಸೆಮುತ್ತಿತ್ತುಯ್ಯನೆ[2]ಸೋ[2]ಜಕಕ್ಕೆ ಕರಿ ಕ್ಕೆಯುಂ ಸೀಡಿ ಸಿಂದತ್ತು ಭೂ
ತಳದೊಳ್ [3]ಪೊಯ್ದು[3]ಪದಕ್ಕೆ ಪೋಪ ಕಿಡಿಯುಂ ಮತ್ತೊಂದು [4]ನಾಗಂ[4] ಮನಂ
ಗೊಳಿಸಿತ್ತೊಂದೆಡೆ[5]ಗೊಡ್ಡು ಗೂಡಿ[5]ಸುಮನೋ [6]ಕಾ[6]ಮನಾಗಮನಾಚಾರಮಂ ೬

ಮತ್ತೊಂದೆಡೆ[7]ಯೊಳೊಡೆ[7]ದ [8]ಕರ[8]ಟದಿಂ ಪೊಱಮಡುವ ಪೊಸಮದದ ಪೊನಲ್ತೊರೆಯನೆಟ್ಟಿ ನಟ್ಟು ನೋರ್ವ ನಿರ್ಝರದಿಂ ಮುಱುಂ[9]ಗಿದ[9] ಕರಿಯು ಗಿರಿಯುಂತೆ ಕರಿ ಪತ್ತೆ ಪತ್ತೆನಾದುರ್ ಮೊಗದೊಳ್ ಮೊಗಮನಿಟ್ಟು ಪುಳಕಿತಮಾದ ಕರಟತಟಮಂ [10]ತುಡುಂಕ[10]ಲೊಡನೆ—

ಮದಧಾರಾಜಳದಿಂದೆ ನಾಂದ ಸಿಜಗಂಡಕ್ಕಾಗಿ ರ್ಮುಱಿದು ಶಮು
ತ್ತಿದ ಮತ್ತಾಳಿಗೆ ಬೆರ್ಚಿ ಪೋಗೆ ಬಿಸಿಸಂದಾಕ್ಷೇಪಿತ್ತರಂ ನೋಡೆ ನೋ
ಡದೆ ಸೋಪಂ ಮುಱಿದೇಯಿ ಕೊಳ್ಳದೆ ಕನಲ್ದಾತ್ಮಕ್ಕದಿಂ ಪೊರ್ದ ಪೊ
ರ್ದದೆ [11]ಪೋ[11]ಯ್ತೊಳ್ಪಿಡಿ ಧೂರ್ತಸಂಗತಿಯಿನೇಂ ಕಾದಲ್ತೆ [12]ಕೇಡೆಯ್ದುದೇ[12]

ಮತ್ತಮೊಂದೆಡೆಯ ಕೊಳನ ತಡಿಯೊಳ್ ಕುಳಿರ್ಕೊಳ್ವುಡುವ ಗಾಳಿಗೆ ಮೆಯ್ಯನೊಡ್ಡಿ ಮುಱಿದೊಟ್ಟಿ ಬಿಟ್ಟಿದ ಕೆಂದಳಿರಂ ಮೆಟ್ಟಿ—

ನವಶೀರೀಷಮನೊಟ್ಟಿಕೊಂಡು ವಿಕಚೋತ್ಕರ್ಷಪ್ರವಚ್ಚಂದನ
ದ್ರುಮದಿಂ ನಾಂದು ಕರಾಂಬುಶೀಕರದೆ ತನ್ನಂ ತೊಯ್ದು ಕರ್ಪೂರರೇ
ಣುವನಾಂತೊಯ್ಯನೆ ನೆರ್ಮಿ ಸಾಲತರುಮಂ ಶ್ವಾಸಾನಿಳೋತ್ಫುಲ್ಲಪ
ಲ್ಲವದಿಂ ಬೀಸಿಕೊಳುತ್ತುಮಿರ್ದುದು ವಿಯೋಗಮ್ಲಾನ[13]ವನ್ಯ[13]ದ್ವಿಪಂ ೮

ಅದಂ ನೋಡಿ ಮಾನವಮದನನೀ ಮದಕರಿಯುಮೆನ್ನವಂದಿಗನೆಂದು ನೋಡುತ್ತುಂ ಬರೆವರೆ—

ಇತರೇಭಾ[14]ರ್ಪಿ[14]ತಬಾಲಪಲ್ಲವಮನಾದಂ ಮೆಚ್ಚದೀಡಾಡಿ ಸ
ಮ್ಮತಿಯಿಂ ಮೇದು ಮದಿರ್ದ ಪಚ್ಚೆಲೆಗಳಂ ಮತ್ತಂ ಮದಾಮೋದವಾ
ಸಿತಶೀತಾಂಬುವನೊಲ್ಲದಗ್ರರದನವ್ಯಾಘಾತಘಟ್ಟಾಂಬುದ
ಸ್ರುತನೀಹಾರಾಂಬುವನೂಡಿಕೊಂಡಿಭಮಿದೇಂ ಮಾನೋನ್ನತಂಗೊಪ್ಪದೇ ೯

---

1 ತಗೆ (ಗ) 2 ಸಂ (ಘ) 3 ಪಾಯ್ದು (ಕ ಘ) 4 ನಾರ್ಗಂ (ಕ) ತಾರ್ಗಂ (ಘ) 5 ಗೋದುದೋಡಿ (ಗ ಘ) 6 ಪೋದ್ಭುತಂ ಸಿಂಧುರಂ (ಘ) 7 ಳಿ (ಖ ಗ) 8 ಖಗ ಪ್ರತಿಗಳಲ್ಲಿಲ್ಲ 9 ಕಿ (ಖ) 10 ಪುಗ (ಗ) 11 ಬಾ (ಕ) 12 ಗೇಗೆಯ್ದುದೇ (ಗ) 13 ಮ (ಘ) 14 ದ್ರ್ಪ (ಕ ಘ)

[1]ಅದನ[1]ವಳೋಕಿಸಿ ಕವಿಧವಳನಿದುವುಂ ಮಚ್ಚರಿತಮೆಂದು ಮೆಚ್ಚುತ್ತುಂ ನಡೆಯೆ ನಡೆಯೆ—

ನಾದೇಯಾಂಬುವೊಲರ್ದಿಕೊಂಡು ಶಿರದೊಳ್ ಕರ್ಪೂರರಮಂ ಪೊಯ್ದುಕೊಂ
ಡಾದಂ ವಾಸನೆಗೊಂಡು ಕಿಬ್ತು ಕುಮುದಾಂಭೋಜಾತಮಂ ಚಂದನ
ಚ್ಛೇದಸ್ಯಂದನದಿಂದೆ ಸಾಂದುಕೊಳುತುಂ ಪೋದತ್ತು ಚೂತಚ್ಛದೋ
ನ್ಮಾದಂ ಮುಗ್ಧಮದಾಳಿಗೀತರಸಿಕಂ ಮತ್ತೊಂದು ಗಂಧದ್ವಿಪಂ ೧೦

ಪೊರೆದಿರೆ ಪತಿಯ ಮದಂ ನಿಜ
ಕರಟದೊಳರೆಗರ್ಚಿ ಬಿದಿರ ಕಟ್ಟಿಲೆಯನೆರಡಂ
ಬರುತುಮದೇಂ ಕರಮೆಸೆದುದೊ
ಕರೇಣು ಮದಕಳಭದಂತೆ ಕಡುಪಿಂದಾಗಳ್ ೧೧

ತೆರಳೆ ತನು [2]ತುಕ್ಕಿ[2] ಮೂತ್ರಂ
ಸುರಿಯೆ ತಳಿರ್ ಸೃಕ್ವದಿಂದೆ ಕಣ್ಗಳ್ ಸುಖದಿಂ
ದರೆಮುಗು[3]ಳೆ ಮುಱಿದು[3] ಕರದಿಂ
ಕರೇಣು ಮೊಲೆಯುಂಬ ಮಱಯನೇಂ ತುಡುಕಿದುದೋ ೧೨

ಪರಿಪರಿದು ನಲಿದು ಮೊಲೆಗಳ್
ತೊರೆದಿರೆ ತಣಿಯುಂಡು ಪಾಲ್ಗಳಂ ಪುಷ್ಕರದಿಂ
ಬರೆತೆಗೆದು ಮುಱಿದು ನೋಡುವ
ಕರಿಣಿಯ ಮೊಗದೊಳ್ ತುಳುಂಕಿತೊಂದಿಭಕಳಭಂ ೧೩

ನೀಡದೆ ನಿಜಪತಿ ಪದೆಪಿಂ
ನೀಡಿದ ಪೊಸದಳಿರ್ಗೆ ಕಮಳಮೃದುಪುಷ್ಕರಮಂ
ನೀಡಿ ನಲಿದುಡುಕುತುಂ ಮೊಲೆ
ಯೂಡಿದುದು ಕರೇಣು ಕಳಭಮಂ ಕಾನನದೊಳ್ ೧೪

ಉಡಿಯೆ ಕರಿ ಚಂದನದ ತಳಿ
ರ್ಗುಡಿಯಂ ಭಯದಿಂದೆ ಬಿಟ್ಟು ಪರಿವೆಳವಾವಂ
ಪಿಡಿ ಪಿಡಿಯೆ ಪಿಡಿಯು ಪೋತ್ತರಂ
ಪಿಡಿ[4]ದೋ[4]ಡಿದುನಂದು ಪೂತ್ಕೃತಕ್ಕಗಿದಗದೊಳ್ ೧೫

ಪೂವಿಂದೆ ಪಿಡಿದು ತೀವಿದ
ಮಾವಿನ ಕೆಂದಳಿರನುಡಿದು ಕುಡೆ ಬಿಸುಟಳಿಗ
ಳ್ಗೀವೈಸಿ ಮೇವ ಕಮಳದ
ಕಾವೆಂದೆಳವಿಡಿಯ ಪಲ್ಲನೆಣೆದುದು ಕಳಭಂ ೧೬

---
[1] ಅಂತ (ಕ ಫ) [2] ತಕ್ಕೆ (ಗ) [3] ಳು ಮುಗಿವ (ಫ) [4] ದಾ (ಕ ಗ ಫ)

ಮಿಳಿರೆ ಕಿವಿಗಳ್ ತವಮಾಳದ
ತಳಿರಂತಿರೆ ಪೊಳೆಯೆ ಪವಳದಂತಿರೆ ಬಾಯ್ ಕೈ
ಗಳನೆತ್ತಿ ಪರಿದು ಪೋರ್ದುವು
ಕಳಭಂಗಳ್ ಸಲಿದು ನೋಡುತಿರೆ ತಾಯ್ವಿಡಿಗಳ್ ೧೭

ಕಾಲೊಳ್ ತೊಡರ್ದುತ್ಪಲದಳ
ಮಾಲೆಗಳು[1]ಲಿ[1] ಗೆಜ್ಜೆಯೆನಿಸೆ ಮಾಂಗಾಯೆನೆ ಕ
ರ್ಣಾಲಂಬಿಕಮಳಮುಕುಳಂ
ಬಾಲೇಭಂ [2]ಬಸೆ[2]ಯ ಪೆಱಗೆ ಬಂದುದು ಕೊಳದಿಂ ೧೮

ತುಂಬಿಗುರುಳಲೆಯೆ ಕೈಯಲ
ಗೆಂಬಿಸಮಲಗೊರ್ಣಿಂಬು ಪೊಳೆಯೆ ಪಲ್ಲಳ ಛವಿ ಮಿಂ
ಚಂ ಬೀಱೆ ಬೇಱೆ ಸಮದ
ಸ್ತಂಬೇರಮಮೆಸೆದುದೊಂದು ಮೈಲಾರನವೋಲ್ ೧೯

ಹರಿ ಭೇದಂಗೆಯ್ಯೆ ಬಿರ್ದೋಪನ ಪಡಿಮೊಗದೊಳ್ ತುಂತುಱಂ ತೂಱುಸುಯ್ಯಂ
ಕರದಿಂದಾರಯ್ದು ಬಾಯೊಳ್ ತದುಕಿಸ ತಳಿರಂ ತೂಂತಿ ರಕ್ತಾದ್ರ್ರಮುಕ್ತೋ
ತ್ಕರಮಂ ಮತ್ತಾಯ್ದು ಪುಣ್ಣೆತ್ತಿಯೊಳೆ [3]ಹುದುಗಿ[3] ಬಾಷ್ಪಪ್ಲುತಾಲೋಕೆ ಶೋಕಾ
ತುರೆ ದುಃಖೋದ್ರೇಕದಿಂದಂ ಬಸೆ ಪರವಸೆ ಬೀಸಿತ್ತು ಕರ್ಣಾಗ್ರದಿಂದಂ ೨೦

ಅದಂ ನೋಡಿ ನೋಡಲಾಱದೆ ಕರುಣದೊಳ್ ಬಿಱುಬಿಱುದಳುವರಸನಂ ಬಱುಂಟಿ ಬರೆ[4]ತ್ತೆಗೆದು[4] ಮಕರಂದಂ ಸುಟ್ಟಿಸಿ ತೋಱೆ—

ಕೆದಱಿದ ಕೇಸರಂ,ಕುಸಿದ ಪಿಂದೊಗೆದೊಡ್ಡಿದ ಕಂದವೇಱೆ ಕ
ಟ್ಟಿದ ಬಸಿಱೆತ್ತಿದೇಕಚರಣಂ ತೆಱೆದಾನನವಾಳೆ ಸುತ್ತಿ ಪ
ತ್ತಿದ ಕುಡಿವಾಲಮೊಪ್ಪೆ ಕಿವಿಗಳ್ [5]ಕಿಱುಪು[5]ತ್ತಿರೆ ಪಾಯ್ದು ದೇವಕೂ
ಟದ ಕಱುವಿಟ್ಟ ಕೇಸರಿವೊಲಿರ್ದುದು ಕೇಸರಿ ಕುಂಭಿಕುಂಭದೊಳ್ ೨೧

ಸೆಗೆದ ಮಿಡುಳ್ಗಳಿಂ,ಸ್ಫುಟಸಟಾಟವಿ ಪೆರ್ಜೆ ನಿಷಿಕ್ತರಕ್ತದಿಂ
ದ್ವಿಗುಣಿಸೆ ಬಾಯ ಕೆಂಪು ಪೊಸಮುತ್ತಿನ ಪತ್ತುಗೆಯಿಂದೆ ಪಲ್ಲೆ ಪ
ಲ್ಲೊಗೆದವೊಲಾಗೆ ಲಂಘಿಸಿ ನಖಾಂಕುರದಿಂ ಕುಡುದಾಡೆಯಿಂ ಕನ
ಲ್ದುಗಿಬಗಿಮಾಡುತಿರ್ದಪುದು ಕೇಸರಿ ಕುಂಜರಕುಂಭದೇಶ[6]ದೊಳ್[6] ೨೨

ಅಗಜಗಜಲೋಹಿತಾಹಿತ
ವಿಗಳದರುಣರಣವಿಕಾಸಿಕೇಸರಿ ಹರಿ ಪಾ
ಯ್ದುಗಿದಪುದುಗುರಿಂ ಮುತ್ತಿನ
ಪಗೆವಂ ತೆ[7]ಱೆ[7]ವಂತೆ ಕುಂಭಿಕುಂಭಸ್ಥಳಮಂ ೨೩

---

1 ಖಿ (ಗ) 2 ಸೆಳೆ (ಕ) 3 ಪುದಿದು (ಕ) 4 ಸಡೆ (ಖ) 5 ನಿಂಸು (ಘ)
6 ಮಂ (ಕ) 7 ಗೆ (ಖ ಗ)

ಕೊರಲೊಳ್ ತಕ್ತಗ್ಗಳಂ ತೊಂಗಲ ಪೊರಜೆ[1]ವ್ರೊ[1]ಲಿಂಬಾಗೆ ಬಾಲಂ [2]ಬಳುಂಕಲ್[2]
ತ್ತಿರೆ ಗಾತ್ರಂ ನೆತ್ತಿಯೊಳ್ ನಟ್ಟುಗುರುಗಿಯೆ ನಿಶಾತಾಂಕುಶಶ್ರೀಯಿನುದ್ಯ
ತ್ಪರಿಯಂ ಸಾಯ್ಪೇಱು ಬಂಬಲ್ವಱುಯಿಸಿ ಗಿರಿಯೊಳ್ ಪೋ[illegible]ಸುತ್ತುಂ [4]ಸರ[4]ಕ್ಕೀ
ಸರಿ ಕಾ[5] ಸಾರಕ್ಕೆ ಕೊಂಡುಯ್ದುಪುದಿದು ಮೃಗರಾಜಂಗೆ ಸೇ[6]ಬಂ[6]ದಮಲ್ತೇ ೨೪

ಎನುತುಂ ಪೋಗೆವೋಗೆ—

ಎಳವುಲ್ಲನಾಯ್ದು ಮೇವೊಂ
ದೆಳವುಲ್ಲೆಯನೆಱಗಿಕೊಂಡು ಕುಕ್ಕುಟಸರ್ಪಂ
ಗಳನೆಱಗಿಕೊಂಡು[8]ಪೋಯ್ತಾ[8]
ಗಳೆ ಪವ್ವನೆ ಪಾಱೆ ನೃಪನ ಮನಮುಂ ಕೃಪೆಯುಂ ೨೫

ಅಂಬರದೊಳಾದಱ ವಿಕಳಾ
ಡಂಬರರವಮೊಗೆಯೆ ನೆಗಪಿ ಕೊರಲಂ ಬೆನ್ನೊಳ್
ಕೊಂಬುಗಳ ಕೊನೆಯಿನುಗೆ ನಯ
ನಾಂಬುಗಳೀಕ್ಷಿಸಿದುದಾತ್ತ ಕರುಣಂ ಹರಿಣಂ ೨೬

ತುಂಡಯುಗಂಗಳಿಂ ನೆಗಪಿ ಕೊಂಡೆರಡುಂ ಮಿಗೆ ಪಾಱು ಪೋಪ ಭೇ
ರುಂಡನ ತುಂಡದೊಂದು ಶರಭಂ ಜಗುಳ್ದೊಯ್ಯನೆ ಬೀಡೆ ಬೇಗದಿಂ
[7]ಚಂ[7]ಡಿಸಿ ಪಾಱದೊಂದೆಱಗಲೊಂದೆ[8]ಬಲು[8]ತ್ತಿರೆ ವಕ್ತ್ರಮಾ ನಭೋ
ಮಂಡಲದಲ್ಲಿ ನಿಂದುದನಭೀಕ್ಷಿಸಿದಂ ಕವಿರಾಜಕುಂಜರಂ ೨೭

ಅಲ್ಲಿಂ[9]ಪೋ[9]ಗೆವೋಗೆ ತ್ರೊಟ್ಟನೆ ಕಟ್ಟಿದಿರೊಳ್—
ತಳಿರ[10]ಸವಂ[10]ಗ ಪೂತ ಸೆಳೆಗೊಂಚಿನ ಬಿಲ್ ನವಫುಲ್ಲ ಕಂಕಣಂ
ಜೞಿಯುಸಿಯಂಬು ಮಾಂದಳಿರ ಕೈಪೊಡೆ ತೋರಮುಱುಂಬಿನೊಳ್ ತೆಱಂ
ಬೊಳೆವಲಗೊರ್ಂಜಲೊಪ್ಪೆ ತನು ನೀಲಶಲಾಕೆವೊಲಾಗೆ ಕಾಮನಂ
ತಳವಡೆ ಬಂದಳಂದು ಮೊಲೆ ಬಾರದ ಬಾಲೆ ಪುಳಿಂದೆ ಲೀಲೆಯಿಂ ೨೮

ಆಕೆಯುನಾ ಕುಮಾರಂ ಕಂಡು ತನ್ನಂ ಗುಱಿಮಾಡಲಱಿಸಿ ಬರ್ಪ ಕನ್ನೆಯೆಗೆತ್ತು ಭಯಮುತ್ತು ಮತ್ತೊಂದು ರೂಪಾಗಿ ಕುಱುಕುಱುನೆಟ್ಟಿ ಕೆಱುದಂತರದೊಳ್ ಕೆಲಕ್ಕೆ ತೊಲಗಿ ಕೆಲ್ಲೈಸಿ ಪುಲ್ಲೆಯಂತೆ ಪುಲ್ಲಂ ಸೋಂಕದೆ ಪಾಱು ಬೆರ್ಚಿ ನೋಡುತು ಮಾ ಪುಳಿಂದಿ ಪೋಪುದುಮನಿಮಿತ್ತನಿಜಮನೋವೃತ್ತಕಪ್ರಿಯವಯಸ್ಯೆ ದರಸ್ಮಿತ ದರ್ಶನದತ್ತಲಜ್ಜಾಸರಸಸಲ್ಲಿಂದಂ ನಡೆಯೆ ನಡೆಯೆ—

---

[1] ಯೊ (ಕ ಫ) [2] ಪಳುರ್ಕು (ಕ ಫ) [3] ಪರಿ (ಫ) [4] ರಕ್ಕಾ (ಫ)
[5] ಬ್ರಂ (ಕ ಫ) [6] ಪಾಯ್ದೊ (ಫ) [7] ಖಂ (ಫ) [8] ೞಯು (ಫ) [9] ಪೊಱು (ಖ ಗ)
[10] ಶರಂ (ಕ ಫ)

ಸೀಲಾಂಬು[1]ದ[1]ಲೇಖೆಗಳಿನೆ
ಶೈಲದ ಸಾನುವಿನೊಳೆಸೆದರತಿಚಪಲತಟಿ
ನ್ಮಾಲಾಮಂಜರಿಯಂತೆ ವಿ
ಲೋಲಾಕ್ಷಿಗಳಡರೆ ಪೊಳೆಪಿನಂ ವನಚರಿಯರ್ ೨೯

ಅಲ್ಲಿಯೊರ್ವಳ್ ತಳ್ತಿರ್ದ ಶೋಕೆಯ ತಣ್ಣೆಲೊಳ್—

ನಸಿಪೆರಸುಟ್ಟು ಮಾಂದಳಿರನೊಪ್ಪಿರೆ ಕಾಡಲರಂ ತುಱುಂಬಿ ಚಂ
ದನದೊರೆಕಲ್ಲಿ ಪೊಯ್ದು ಬಿದಿರಕ್ಕಿಯನುನ್ನದದಂತಿದಂತದೊಂ
ದೊನಕೆಯನೆತ್ತಿ ನು[2]ಣ್ಣಸಿಯ[2] ಸುವ್ವಿಯ ಗಾವರದೊಳ್ ತೊಡರ್ಚಿದೋ
ಪ್ಪಸಿಗೆ ಪುಳಿಂದಿ ಪಾಡಿದಳೊಱಲ್ದು ಗುಣಪ್ರಿಯನಂಕಮಾಲೆಯುಂ ೩೦

ಆಕೆಯ ಕೂರಿತಪ್ಪ ಕಡೆಗಣ್ಣ [3]ಕೊನೆ[3]ಯೇಱಂ ಪೆಱುತ್ತುಮಾ ಯೌವನವನ
ಕಿರಾತನುಮಲ್ಲಿಂ ತಳರೆ ಮತ್ತೊಂದು ಬಾಳತಮಾಳದೊಳ್

ಇಂಚರ[4]ದ[4]ಮರ್ದಿನ ಸವಿಯು ಪು
ಳಿಂಚಿನ ಕಿವಿಗಳ್ಗೆ ವೃತ್ತಕುಚೆ [5]ಪ[5]ತಿಯುರಮಂ
ಮಿಂಚಿನವೊಲಪ್ಪಿ[6]ಮಿ[6]ಡಿದ ವಿ
ಪಂಚಿಯನೆ ಪುಳಿಂದಿ ಪಾಡಿದಳ್ ಮಾನ[7]ವ[7]ನಂ ೩೧

[8]ಮತ್ತೊಂದು ಕುಸುಮಿತವನಾಂತರದೊ[8]ಳವಳ ದನಿಯೊಳ್ ದನಿ ಬಂದು ಬೆರಸೆ
ಬಂದ ಮಾವಿನ ಬಱಲ್ದ ಸೆಳೆಗೊಂಬಂ ನೆಮ್ಮಿ—

ದನಿಯ ಪೊಗರಾ ಮನೋಭವನ ಬಾಳ್ಪೊಗರಂತಿರೆ ಚಿತ್ರಮಿತ್ತು ಮೇ
ವನೆ ಮಱದಾಲಿಸುತ್ತಿಸೆವ ಪುಲ್ಲೆಯುಮಾಗಳದರ್ಕೆ ಸಾರ್ದ ಬೇ
ಡನುಮಿರೆ ಚಾಪಮಂ ತೆಗೆದು ಚಿತ್ರಿಸಿದಂತೆ ಮನೋನುರಾಗದಿಂ
ವನಚರ ಪಾಡಿದಳ್ ಮಧುರಗೀತಿಗಳಂ ಕವಿರಾಜಮಲ್ಲನಾ ೩೨

ಮತ್ತೊಂದು ಕುಳಿರ್ವ ಕೊಳನ ತಟಿಯ ವಿಪುಳ ಪುಳಿನತಳದೊಳ್—

ಬೀಣೆಯ ದಂಡಿಗೆಯಂತಿರೆ
ಮಾಣದೆ ಮೊಱೆವಳಿಗಳಿಂ ಸನಾಳಾಂಬುಜಮಂ
ಜಾಣಿಂದೆ ಪಿಡಿದು ಪಾಡಿದ
ಳೇಣೇದೃಶೆ ಶಬರಿ ಸುಕರಕಪಿಶೇಖರನಂ[9] ೩೩

[1] ಜ (ಕ ಫ) [2] ಣ್ಣಸರೆ (ಕ ಫ) [3] ಕೋರೆ (ಕ ಫ) [4] ಮ (ಕ ಫ)
[5] ಸ (ಕ ಫ) [6] ಪಿ (ಫ) [7] ದ (ಗ ಫ) [8] ಕ ಫ ಪ್ರತಿಗಳಲ್ಲಿಲ್ಲ [9] ನಾ (ಕ ಫ)

ಮತ್ತೊಂದು ಕುಸುಮಿತವನಾಂತರದೊಳ್—

ರಾಗರಸಂ ಪೊಸಲ್ವೊಸಲಸಟ್ಟುವಿಸಂ ಕವಿತಂದು ತೊಯ್ದವೋಲ್
ತೂಗುವ ಕೆಂದಳಿರ್ ತೊಲಗೆ ತುಂಜಿಯ ಬಣ್ಣದ ಮೆಯ್ಯ ಬಣ್ಣದಿಂ
ಕೋಗಿಲೆಯಂತೆ ಕ[1]ಗ್ಗೊಳಿಸು[1]ತುಂ ಕಳಕಂಠಿಕೆ ಕೊಂಬನೇಱಿ ಕಾ
ಬ್ಬೊಗಳನಾಯ್ದುತುಂ ಶಬರಿ ಪಾಡಿದಳಾ ಕವಿತಾವಿಳಾಸಮಂ[2] ೩೪

ಮತ್ತೊಂದು ತರುಣಕುಜಕುಂಜಪ್ರದೇಶದೊಳ್—

ವನಚರಿ ಪಾಡೆ ಪಾಡುಗಿದು ಸಾರ್ದೊಲಿದಾಲಿಸುತಿರ್ಪ ದಂತಿಯಂ
ವನಚರನೆಚ್ಚೊಡೈದೆ ಬಿರಿದಾನೆಯ ಕುಂಭದಿನು[3]ನ್ನಮ[3]ನ್ನಿಜ
ಸ್ತನಧರಕುಂಭಮಂಡಲಕೆ ಸೋಲ್ತುದು ನೇಸೆಯನಿಕ್ಕುವಂತೆ ಮು
ತ್ತಿನ ಸರಿ ಸೋಱೆ ಹಾರರಜನಾತುರೆಯಾದಳವಳ್ ವಿಳಾಸದಿಂ ೩೫

ಪೊಳೆದು ಕದಂಪನಪ್ಪಳಿಸಿ ಪಾಲೆಯೊಳೊಪ್ಪುವ ದಂತದೋಲೆಯೊಂ
ದಳವಡೆ ಲೀಲೆಯಿಂ ಪಸಿಯ ಬಣ್ಣದ ಜೇಡಿತಿ ತಳ್ತಲೊಳ್ ತಳ
ತ್ತಳಿಸುವ ತೋರಮುತ್ತುಗಳನಾಯ್ದು[4]ಳಿಗಂ[4] ಮುಗಿಲಂ ಪಳಂಚೆ ಬಿ
[5]ರ್ದಳೆಯುಡು[5]ಜಾಲಮಂ ಪಿಸುಕರಂಜಿರನಾಯ್ವ ನಿಶಾಪಘೂಟಿವೋಲ್ ೩೬

ಮತ್ತೊಂದು ಕೆಂದಳಿರ ಕಾವಣದೊಳ್—

ಆನೆಯ ನೆತ್ತಿಯಂ ಬಿರಿವಿನಂ ಪರಿದೆ[6]ಚ್ಚುದಿ[6]ರ್ದಜ್ಜ ಮುತ್ತನೇಂ
ತಾನೆ ವಿನೋದದಿಂ ತುಡಿಸ[7]ನೇ[7] ಮೊಲೆಬಾರದ ಮುನ್ನ ಮಾಗಳಾ
ಯ್ತೇನೆಸಕಂ ನಿನತ್ತು ಪತಿಗೀ ಪೊಸಜವ್ವನದೊಳ್ ನಿಜೋನ್ನಮ
ತ್ತೀನಕುಚಂಗಳೊಳ್ ಬಿರಿದ ಮುತ್ತಿನ ಹಾರಮನಿಕ್ಕುತಿರ್ದಪಂ ೩೭

ಎಂದು ಕೇಳದಿಯ ಕೊರಲಂ ನೋಡಿ ನಗುತ್ತುಂ ನುಡಿಯದಂತೆ ನುಡಿ[8]ವ[8] ಜೇಡಿತಿಯುಂ ನೋಡಿ ಮನದಭಿಪ್ರಾಯಮಂ ಮೆಚ್ಚುತ್ತು [9]ಮವರಿರ್ವರುಂ[9] ಪೋಗೆವೋಗೆ—

ಆಱದಿರೆ ತೆಗೆಯಲಿನಿಯಂ
ಮಾಱಲ್ ಪೋದಳ್ ಮಿಗಕ್ಕೆ ಬಿಲ್ಲಂ ಬಿಲ್ಲ
ಗೇಱದ ಜವ್ವನಸಿರಿಯಂ
ಬೀಱಲ್ ಪೋಪಂತೆ ಶಬರಿ ಶಬರಾಲಯದೊಳ್ ೩೮

1 ಗ್ಗೆಸವು (ಕ ಫ) 2 ನಾ (ಕ ಫ) 3 ನ್ನತಮ (ಕ) 4 ಕಂ (ಫ) 5 ಟ್ಟೆಳೆಯುಡೆ (ಫ) 6 ಚ್ಚಂತಿ (ಫ) 7 ದೇ (ಫ) 8 ವ (ಕ ಫ) 9 ಕ ಫ ಪ್ರತಿಗಳಲ್ಲಿಲ್ಲ

ಏಣಿಗಳಂ ಚಕಿತಪಿನಿ
ದ್ರಾಣವಿಲೋಚನವಯಸ್ಯೆಯರನಿಸು[1]ವೆಸಕಂ[1]
ಮಾಣಿಸುವವೊಲಿನಿಯರ ಸ
ಪ್ರಾಣತೆಯಂ ತೆಗೆವರಪ್ಪಿ ಶಬರಿಯರಗಡೊಳ್ ೩೯

ತಕ್ಕಿಸಲೆ ತಕ್ಕ ಶೋ[2]ಭೆ[2]ಗೆ
ಪಕ್ಕಾದೊಡಮರಸನಲ್ಲಿ ಪುಗಲೊಲ್ಲದೊಡಂ
ಪಕ್ಕಣಮಂ ಬಲ್ಪಿಂದಂ
ಪೊ[3]ಕ್ಕವ್ರ ನಿ[3]ಯಮಿಸುವರಾರೊ ಕಣ್ಣುಂ ಮನಮಂ ೪೦

ಅಂತನೇಕಾತಿಶಯನಿಚಯಮುಮನೇಕಮಣಿಶಿಲಾಸಮೂಹನಿಚಯಮುಮನೇಕಾನೋಕಹ ಕುಹರಗಹನಗುಹಾಗಹ್ವರಾವಗಾಹಗೇಹಮುಮನೇಕವಿ[4]ಷ್ಕಿ[4]ರನಿಕರ ಪತತ್ರಪಾತಪ್ರಭೂತಪವನಪ್ರೇಂಖೋಳಿತಲತಾಪಲ್ಲವಸಮೂಹಮುಮನೇಕ ಮೃಗ ಜಾತಿಸಹಜಾತಿಸ್ನೇಹಸಾಹಸಕ್ರೀಡಾವಿಹಾರವೈರಸ್ಥಾನಮುಮನೇಕ ವನಚರೀ [5]ವಿನೋದವಿಧಿ[5]ನಿಧಾನಮುಮಪ್ಪ ವಿಂಧ್ಯಾಚಳಮಂ ತಮ್ಮ ತಿರ್ವರುಮತಿಕೌತುಕದಿಂ ನೋಡುತ್ತುಮಲ್ಲಿಗಲ್ಲಿಗೆ ನಿಂದು ಮಾತಾಡುತ್ತುಂ ಮತ್ತಮದಱ ತಳ್ವಲ ಪುಲ್ವಟ್ಟೆ ವಿಡಿದು ಪೋಗಿ ಪೆರ್ಬಟ್ಟೆ[6]ಗೆ[6]ಗೊಂಡು ಕಿಱುದಂತರಮಂ ಕೞಿ ಪೋಗೆ—

ವಿಟಪಾಗ್ರಾಂಕುರಲಿಖ್ಯಮಾನಮದವದ್ದಿಕ್ಕುಂಭಿಕುಂಭಸ್ಫುಟೋ
ತ್ಕಟಮಂ ತುಂಗಶಿಖಾಸಹಸ್ರವಿ[7]ಚ[7]ರಚ್ಚಂದ್ರಾರ್ಕಸಂಚಾರಸಂ
ಕಟಮಂ ಭೀಮತಮಸ್ತಮಾಳಮಳಿನಚ್ಛಾಯಾವವತ್ಕ್ರೋಟ[8]ರಾ[8]
ವಟಮಂ ಕಂಡನಖಂಡಪರ್ಣವಟಮಂ ಸೌಂದರ್ಯಸಂಕ್ರಂದನಂ

ಮತ್ತಮದು ಮೊದಲ್ಗೊಂಬುಗಳಿನಿೞಿದಿಳೆಯೊಳ್ ಬಿೞ್ದು ಬೇರೂಱಿ ಬೆಳೆದ ಬೀೞಲ್ಗಳೊಂದೊಂದನೊತ್ತಿ ಪತ್ತಿಸುತ್ತಿ ಸಂದಣಿಸಿ ನೆಲದಗಲವನೆಡೆಗೊಂಡು ಮೊದಲ್ಗಿಡಿಸಲ್ ಮೊದಲ್ಗೊಂಡಂತಿರ್ದ ಮೊದಲೊಳ್ ಮೊದಲಿಂ ಕವಲ್ತು, ಕೊರ್ಬಿ ಬೂದಮೇಱಿ ಬೆಳೆದು ಬೆ[9]ಳಗಾ[9]ಯ ಬಣ್ಣಮಾಗಿ [10]ಮಿಳಿಸುತ್ತಿಂಗಮಗ್ಗಳಮಾಗಿ[10] ಮುಗಿ[11]ಲಂ[11] ನೆಱುಸ್ಸೈಕನೆ ಬೆಳ್ವೊಡುದ್ದಮೆ[12]ಬ್ಬತ್ತೆ[12]ಂಬಂತೆಯುಂ, ಮೇರೆಯಿಲ್ಲದ ದೆಸೆಗಳಂ ಮರಸೆ ಮಾಱುಟ್ಟು ನೋಟ್ಟಂತೆಯುಂ, ನೀಳ್ಪವರಿದಪ್ತಂಬಾಯ್ವಳಿ ಗೊಂಬುಗಳೊಳ್ ಬಾದುಗ್ಗೈದು ಬಳೆದು ಮುಗಿಲಂ ಮುಟ್ಟಿ ಮಗುಳ್ವಂತೆ ನಸುಬಾಗಿ ನಿಂದ[13] ಕೀೞ್ಗೊ[13]ಂಬುಗಳೊಳಂ, ಕೀೞ್ಗೊಂಬುಗಳ ಕೀೞಲೆ ಕೂರ್ಪೇಱುಗಳಂ ಕ[14]ತ್ತ್ರ[14]ರಯಂತೆ ಕೊಱೆದು ಕೊಳೆ ಪರಿದು ಸಿಲ್ಕಿದ ಬಿಸುಗದಿರ್ಗಳಂತಿರ್ದ ಬೀೞಲ್ಗಳೊಳಂ,

---

[1] ವಯಸಂ (ಫ) [2] ಕೆ (ಕ) [3] ಕ್ಕನಿ (ಕ) [4] ಕಿ (ಕ ಫ) [5] ವೀಣಾಧ್ವನಿ ನಿಧಿ (ಫ) [6] ಯಂ ಕೂಡಿ (ಕ ಫ) [7] ಸ (ಫ) [8] ಠಂ (ಫ) [9] ಳೆದ ಕಾ (ಕ ಫ) [10] ಫ ಪ್ರತಿಯಲ್ಲಿಲ್ಲ [11] ಲಾ (ಕ ಫ) [12] ಯ್ದ ರೆಂ (ಕ ಫ) [13] ಮೇಲ್ಗೊಂ (ಱ) [14] ಳ್ತ (ಫ)

ನೆಲ್ಗಳೊಳಮಣ್ಣಿಲೇಱ[1]ಲಾ[1]ಱದಂತಿರೂದಿ ಬಿಟ್ಟಂತುದ್ದವಾದ ತುದಿಗೊಂಬುಗಳೊಳಂ ಪಾವ್ರಗೆತ್ತು ಪತ್ತುವ ಮುಂಗುಲಿಗಳಂತೆ ಬಾಲಮಂ ಬಿದಿರುತ್ತೆ ಮಣಿಕುವರೆದಡರ್ವ ತುದಿಗೊಂಬುಗಳ ಕೊನೆಯೊಳ್ ಕವಲ್ತು ಪಾಲ್ವಱಿಯೆ ಬಲ್ಪಲಾದ ಕಿಱುಗೊಂಬುಗಳೊಳಂ, ಕಿಱುಗೊಂಬುಗಳೊಳ್ ತುಱುಗಿ ಪಸುರ್ವೊನ್ನ ಬಣ್ಣವಾದ ಪಣ್ಣೆಲೆಗಳೊಳಂ, ಪಣ್ಣೆಲೆಗಳಂ ಪಿಂದಿಕ್ಕಿ ಪುದಿದು ಪಚ್ಚೆಯ ದಳಮಂ ದಳಂಬಿಡಿದು ಕಡಿದು ಮಾಡಿದಂತಿರ್ದ ಪಚ್ಚೆಲೆಗಳೊಳಂ, ಪಚ್ಚೆಲೆಯ ಸುಟಿಯೊಳಡಸಿ ಪೊಚ್ಚ ಪೊಸಪವಳದ ಮುಗುಳಂತಿರ್ದ ಪಣ್ಗಳೊಳಂ, ಪಣ್ಗೆ ಪಾಯ್ದು ಪೊಯ್ದು ಸೆಳೆಗೊಂಬಿಂಗೆ ಸೂಱ್ ಪುರ್ಬಸಿಕ್ಕಿ ಪಲ್ಲಂತೆಱೆವ ಪುಲ್ಗೊಡಗಂಗಳೊಳಂ, ಪುಲ್ಗೊಡಗಂಗಳುಗುರ್ ತಾಗೆ ಸೊನೆವಿಟ್ಟು ಮಿಳಿರ್ದು ಮೊ[2]ಲಗಿ[2]ಪಿಯ ಬಣ್ಣಮಪ್ಪ ಸುಣ್ಣೆಲೆಗಳೊಳಂ, ಸುಣ್ಣೆಲೆಯ ತೊಂಗಲ ನಡುವೆ ಮೂಡಿ ತೋಱುವ [3]ಕೋಟಿಯಾರೆಯಂತೆ[3] ಕೋಮಳವಾದ ಕಳಿಕೆಗಳೊಳಂ, ಮಾಣಿಕದಿಂ ಸಮೆದ ಮರದಂತೆ ಸೊಗಯಿಸಿದುದಂತು ಮಲ್ಲದೆಯುಂ—

ಅಳವಿಗಟಿದಾ ಮಹೀಜದ
ಬಳವಿಗೆ ತಾಯಾದ ತೋರವೇರೊಂದೆ ರಸಾ
ತಳಮನೊ[4]ಡೆದ್ವರ್[4] ಬಳೆದವೊ
ಲಿಳೆಯಂ ತಳೆದಿರ್ದ ನಾಗನೊಪ್ಪಮನೀಗುಂ ೪೨

ಅದಱ ತುದಿಗೋಡ ಪಣ್ಣಂ
ವಿಧುವ [5]ಮೃ[5]ಗಂ ಮೇದು ಪಿಕ್ಕೆಯಿಕ್ಕಿದ ಬೀಜಂ
[6]ಸುಧೆ[6]ಯಿಂದೆ ಮೊಳೆತೊಡಾಯ್ತು[7]ದ
ಱು[7]ದರದ ವಟವೃಕ್ಷಮೆನಿಪುದಾ ವಟವೃಕ್ಷಂ ೪೩

ಆಲಮನಳುರ್ವ ದವಾನಲ
ನಾಲದ ತಣ್ಣೆಲೊಳಾಲಿ ಕೋಡೆ ತದೀಯ
ಜ್ವಾಲೆ ಸುಡಲಾಱದಿರ್ದವೊ
ಲಾಲದೆ ತಳತಳಿಸುತಿರ್ದುವೆಳದಳಿರ್ದುಱುಗಲ್ ೪೪

ತೀನೆರ್ದೊಡುರ್ದೆ ಕರಟಮ
ನಾನೆ[8]ಗಳೊಱೆದುಗುವ ಪಾಲ್ ಜಿಗಲ್ತಿರೆ[8] ಪತ್ತಿ
ರ್ದಾನಸೆಸೆದುದೊ ಬಿದಿ ಗಿರಿಗಳ
ನಾನಿಸಿದವೊಲೆಂದುವೊಱಗದಂತಾ ವಟಮಂ ೪೫

[1] ದಾ (ಫ) [2] ದಲ್ಗಿ (ಕ ಫ) [3] ಕೊಳಿಯಾರಂತೆ (ಕ) [4] ದೆದುರ್ಚಿ (ಖ ಗ)
[5] ಏು (ಖ ಗ) [6] ಸೊದೆ (ಫ) [7] ವನು (ಗ) [8] ಗಳಾನೊಱೆವ ಪಾಲ್ಗಳಿಂದಂ (ಗ)

ಎನೆ ಸೊಗಯಿಪುದಗ್ರ ನ್ಯಗ್ರೋಧದ ತಣ್ಣೆೞಲೊಳ್—

ಆಲದ ಪಣ್ಣ ಬಣ್ಣದ ಧರಂ ಪೊಳೆದೊಪ್ಪುವ ಮಿಂಚುವೋಲ್ ಬೆಡಂ
ಗೋಲಗಿಸುತ್ತುಮಿರ್ಪ [1]ಸಿ[1]ಡುಗಣ್ಣೆಳವಚ್ಚೆಯ ಮೆಯ್ಯಬಣ್ಣಮು
ನ್ಮೀಲಿಪ ಭೂಷಣಾಂಶು ನವರತ್ನಮಹಾಮಕುಟಂ ಚತುರ್ಭುಜಂ
ಲೀಲೆಯನೀಯೆ ನಿಂದನಘಯಕ್ಷನನೀಕ್ಷಿಸಿದಂ ಕುಮಾರಕಂ ೪೬

ಅಂತೀಕ್ಷಿಸಿ ಯಕ್ಷನಂ ತ್ರಿಃಪ್ರದಕ್ಷಿಣಂಗೆಯ್ದು ಮುಂದೆ ನಿಂದು ಕೆಯ್ಗಳಂ ಮುಗಿದು—

[2]ರಕ್ಷ ಯಕ್ಷ ಜಿನಶಾಸನರಕ್ಷಾ
ದಕ್ಷ ದಕ್ಷಿಣ ಗುಣಪ್ರಿಯ ವಿಘ್ನಾತ್
ಈಕ್ಷಣೀಯಶುಭಲಕ್ಷಣ ಲಕ್ಷ್ಮೀಂ
ಯಕ್ಷ ರಕ್ಷ ಮಮ ವಾಙ್ಮಯಮೂರ್ತೇ

ಅಂತನಘಯಕ್ಷನಂ ತನಗೆ ವರದನಪ್ಪಂತು ಸಜ್ಜನಸಂಸ್ತುತಂ ಸ್ತುತಿಗೆಯ್ದು ಮರದ ತಣ್ಣೆೞಲೊಳ್ ತಳಿರಂ ಪಾಸಿ ವಿಶ್ರಮಿಸಿ ತಪನತಾಪಮಂ ಕಳೆದು ಸ್ಮರಪರಿತಾಪಮಂ ಪೆರ್ಚಿಸುವ ಪಾದಪಚ್ಛಾಯೆಯೊಳ್ ನಿಲಲೊಲ್ಲದಲ್ಲಿಂ ತಳರ್ದು ತಳಿರ್ಗೊಂಬಂ ತಡೆವಿಡಿದು ವಯಸ್ಯನುಮಾ ನವವಯೋವಯಸ್ಯನುಂ ಪಯಣಂಬೋಗಿ—

ತ್ರಿದಶೇಂದ್ರಾರ್ಚಿತಚಂದ್ರಕಾಂತಜಿನಬಿಂಬವ್ರಾತಪಾದೋದಯಾ
ಸ್ಪದೆಯಂ ಪಾವನಜೀವನಪ್ರಸವೆಯಂ ಪಾಪೋಗ್ರತಾಪೋಚ್ಛ್ಯ
ಚ್ಛಿದೆಯಂ [3]ತುಂಗ[3]ತರಂಗಪುಣ್ಯಪವಮಾನಸ್ಪರ್ಶೆಯಂ ದೇವಶೈ
ಲದ[4]ತಾಡೊಳ್[4] ಪರಿಗೊಂಡ ಗಂಧನದಿಯಂ ಕಂಡಂ ಮಹೀಮಂಡನಂ ೪೭

ಆ ಮಹಾನದಿಯ ಮಹಿಮೆಯಂ ಪೇೞ್ವೊಡೆ ಚತುರ್ಯೋಜನೋತ್ಸೇಧದೊಳಂ ದ್ವಿಯೋಜನಾಯತದೊಳಂ ಏಕಯೋಜನವಿಸ್ತಾರದೊಳಮಳವಟ್ಟು ಮಳಯಜಕರ್ಪೂರರೇಣುವಂ ರಾಸಿಗೆಯ್ದು ಹಿಮಕರ್ದಮಮಂ ಮಿದಿದು ಮುದ್ದೆಮಾಡಿ ಗೋಡೆಯೇಱಿಸಿ ಬೆಳ್ತಿಗೆಮಿಂಚಿನಿಂ ಮಿಂಚಿಟ್ಟು ಮುಕ್ತಿವಧುವರೊಳ್ ಮದುವೆನಿಲ್ವ ಜಿನವರರ್ಗೆ ಜಳಜಭವನೆ ಜಗಲಿಯಿಕ್ಕಿದಂತೆಯುಂ, ಪಾಲ್ಕಡಲೆ ಬಡಬಾನಳನಿಂ ಬೆಂದಾಱಿ ಬೆಟ್ಟಿತಾಗಿ ಬೆಟ್ಟಾದಂತೆಯುಂ, ಜೀಬಲ್ವಿಟ್ಟು ಬೆಳ್ದಿಂಗಳ್ ಇಳೆಯೊಳ್ ಬೇರೂಱಿ ಬ[5]ಳ್ವ[5]ಳ್ ಬಳೆದಂತೆಯುಂ, [6]ಬಗೆ[6]ಗೊಳಿಸುವ ಬೆಳ್ಳಿವೆಟ್ಟದಂತಿರ್ದ ಪಳಿಕಿನ ಬೆಟ್ಟಮೆ ಬ[7]ಟಿ[7]ವೆಟ್ಟಮಾಗೆ ಬಳಸಿದ ಕಾಂಚನಪಂಜರತ್ನ ಕೂಟಕೋಟಿಗಳೆ ಕೋಂಟೆಯಾಗೆ ನೆಲಸಿ ನಿಂದನಿಂದಿತನಿರ್ಮಳಪ್ರಭಾಪಟಲಪಿಹಿತ[8]ಕಕುಭ್ಕು[8]ಹರಂಗಳುಂ, ವದನ

[1] ನ (ಗ ಘ) [2] ಅ (ಕ ಘ) [3] ರಾಗ (ಕ ಗ) ಗಾಂಗ (ಖ) [4] ರಾರೋತ್ (ಕ) ಶಾರೋತ್ (ಘ) [5] ಲ್ವಳಾಗಿ (ಕ) ಲ್ವಲಾಗಿ (ಘ) [6] ಬೆಳೆ (ಘ) [7] ಳ್ವ (ಕ ಘ) [8] ಕುಕುಪ್ಸು (ಕ ಘ)

ಧವಳದೀಧಿತಿಪ್ರವಾಹವಿಧು ವಿಧೂಕೃತದಿನಕೃದ್ಬಿಂಬಂಗಳುಂ, ಸಕಳಸುರಾಸುರ ಸಿದ್ಧ ಗಂಧರ್ವಖೇಚರಕಿನ್ನರ[1]ಪನ್ನಗ[1]ಪತಿಸಹಸ್ರಮಣಿಮಕುಟ ಕೋಟಿಕಾಂತಿ ವಿಮಳಜಳ ಸೇಕಸಂತತಾಂಕುರಿತಚರಣನಖಕಿರಣಂಗಳಪ್ಪ ಸಂಖ್ಯಾತ ಚಂದ್ರಕಾಂತ ಜಿನಬಿಂಬ ಕದಂಬ [2]ಪಙ್ಕ್ತಿಗಳ ದಕ್ಷಿಣ[2] ಪ್ರದೇಶಮನಲಂಕರಿಸಿರ್ದ ನಳಿನನಾಭಿಯೆಂಬ ನಳಿನಾಕರದ ಕೋಡಿಯೊಳ್ ಪುಟ್ಟಿ ಪುಟಂನೆಗೆದು ಪಟು ಪ್ರವಾಹನಿವಹದಿಂ ನಿಬಿಡತೆಯುಂ ಬಿಡಿದು ಕಳೆವಂತೆಯುಂ ಪಾವನತೆಯುಂ ಪೊಯ್ದು ಕೊಳ್ವಂತೆಯುಂ, ತೀರ್ಥಕರ ಪರಮದೇವರ ಪುಣ್ಯಪಾದಪಙ್ಕ್ತಿಯೊಳ್ ಪಾಯ್ದು ಬಿಟ್ಟವಱಿಯೊಳ್ ವಿದ್ಯಾಧರಿಯರರ್ಚಿಸೆ ಬಳಿನೊಟ್ಟಿ ಜೆಟ್ಟಾಪ ವಿಮಳಮಳಯಜ ಕುಂಕುಮಕರ್ಪೂರ ಕುಸುಮಮಾಲೆಗಳನೆಪೆದು ಪಱಿದು ಪರಿಮಳದೊಳ್ ಪೊರೆದು ತಬ್ಬಿ ಬಿಳಿಬಿರದಿಂ ಧರಣಿಗಿಳಿತಂದುದಱಿಂ ತೀರ್ಥತಿಳಕೆಯುಂ ಗಂಧನದಿಯುಂ ಮಹೀಮಂದಾರಮಾಲೆಯುಮೆಂಬನ್ವ[3]ರ್ಥಾಭಿ[3]ನಾಮಂಗಳಂ ಪಡೆವಂತೆ ಪಡೆದು—

ಜಿನಬಿಂಬವ್ರಾತ[4]ದಂಶುದ್ಯು[4]ತಿಯೊ ನಖನಿಕಾಯೇಂದುಬಿಂಬಪ್ರಭಾಸ್ಯಂ
ದನಮೋ ಶ್ರೀಪಾದಪುಣ್ಯಾಕ್ರಮತತಿ[5]ಯೊ[5] ಸದ್ವಿಭಾವಮಂ ಪೊರ್ದದತ್ತಂ
ಬಿನೆಗಂ ನೈರ್ಮಲ್ಯದಿಂ ಶೀತಲತೆಯಿನಘವಿಚ್ಛೇದಸಾಮರ್ಥ್ಯದಿಂ ಪೆಂ
ಪಿನ ಬಿಣ್ಪಂ ಪೊತ್ತ ಗಂಧಾಪಗೆಯ ಮಹಿಮೆಯಂ ಬಣ್ಣಿಸಲ್ ಬಲ್ಲನಾವಂ ೪೮

ಮತ್ತಮಧುಮದೋನ್ಮತ್ತತೆಯಿನೋಲೆದು ನಲಿದಾಡುವ ಸುರಕಾಂತೆಯರ ಸೋರ್ಮುಡಿಗಳಿಂ ಸುರಿದ ಸುರಭಿಯ ಸಂಪಗೆಯ ಸಿಂಧುವಾರದ ಮಂದಾರದ ಪಾರಿಜಾತದ ಪೊರೆಮಿಡುವ ಬಿತ್ತುಪೂಗಳ ಕೇಸರದ ಕಿಸುಪ್ಪವಿವೆರಸುಕೊಳ್ವ ಕೋ[6]ಟ್ಗಂಪಿ[6]ನಿಂ ಕದಡುಗೊಂಡು ಹರಿಚಂದನರಸಪ್ರವಾಹದಂತೆ ಪರಿವ ಪೂರಂಗಳೊಳಂ; ನೀರೊಳ್ ನೋರ್ದ ನೀರಜದ ಬಂಡಮುಂಡು ಬೆಂಡುನೆಗೆದ ಮೀನ್ಗಳ ಮುಗುಳ್ದ ಕಣ್ಗಳಾಗೆ, ತುಱುಗಿ ನೆಗೆದ ತುಂತುರ್ವನಿಗಳ್ ಪುಳಕಂಗಳಾಗೆ, ಮಜ್ಜನಂಬುಗುವ ಬಿಂಬಾಧರೆಯರ ತೋರಮೊಲೆಗಳಂ ತೆರೆಗಳೆಂಬ ತೋಳ್ಗಳಿಂ ತಕ್ಕೈಸಿಕೊಳ್ವ ತಣ್ಪಡುಗಳೊಳಂ; ಅ[7]ರ್ಚ[7]ಕೊಳ್ವ ಮದಕರಿಗಳ ಮದಕರ್ದಮದ ಕೂಟದಿಂ ಕರ್ಗಿಕೊಂಡು ನಿಬಮಳಿನತೆಯಂ ಕಳೆಯಲೆಂದು ಕಾಳಿಂದಿಯೆ ಬಂದವಗಾಹಂಗೆಯ್ಯುತಿರ್ದ ಮಹಾಪ್ರವಾಹಂಗಳೊಳಂ; ಕೇಸರಿಗಳಂ ಪಿಡಿದು ಪು[8]ಡುಕು[8]ನೀ[9]ರೊಳದ್ದು[9]ವಂತೆ ಸುರಕರಿಗಳುಡಿದೀಡಾಡಿದ ತೀರಘೋರುಹಂಗಳೊಳದಳಿಗಳ್ ನೆದೆದು ಪರಿದು ತ್ರಿಜಗನೆ ತಿರುಗಿಸುತ್ತಿಸುವುದು ಸುಟಿಗೊಂಡರ್ಮವ ಸುಬಗ[10]ರ[10]ಳೊಳಂ; ಕಡುಗಡಲ ನಡುವಣೊಡ್ಡುಂಗಲ್ಗಳಂ ಯಕ್ಷನಾರಿಯರ್ ನೀರ್ನೀನೆ ನಸುಬೆಮರ್ತು ಪಳಂಚಿ ತೊಳಪ ತೋಳ್ಗಳ್ಗಳಿಯುಂ ಬಿಸವಲ್ಲಿಯೆಗೆತ್ತು, ಕರ್ಮುಂಕುವ ಕಳಹಂಸಂಗಳೊಳಂ; ಆ ಕರ್ಮು[11]ಂಕುವಂ[11] ನವನಖಕ್ಷತನೆಗೆತ್ತು ರಕ್ತಕಟಾಕ್ಷದಿಂ ಕನಲ್ದೀಕ್ಷಿ

---

1 ಕ ಘ ಪ್ರತಿಗಳಲ್ಲಿಲ್ಲ 2 ದಂಪತಿಗಳು ದಕ್ಷಿಣ (ಗ) 3 ರ್ಥ (ಖ ಗ) 4 ದಿಂಸಧ್ರು (ಕ) ದಂಶುವ್ರ (ಖ ಗ) 5 ಯೆ (ಘ) 6 ಳ್ಗಂಟಿ (ಕ) 7 ಚ್ಚ (ಘ) 8 ಡಿತೆ (ಕ) 9 ರರ್ಮ (ಕ) 10 ಗೊಳಂ (ಘ) 11 ಕಂ ಕುಡಿದು (ಕ ಘ)

ನುಪ ಯಕ್ಷವಲ್ಲಭರ ಮೆಯ್ಯಬಸುಬಿಂ ತೊಱೆದುಬಿದಂತೆ ನೀರ ನಡುವಣ ಸಿಕತಿತಳ ಳಂಗಳೊಳಂ; ಮೂಡಿ ಮುಡಿದ್ಯಾಡುವ ಕಿನ್ನರಕನ್ನೆಯರ ಕೆಂಪಡರ್ದ ಕಣ್ಗಳೊಡನೆ[1] ಮ[1]ಗೆ [2]ಪೊ[2]ಲದಿರ್ಪುದು ಪರಿಭವಮೆಂಬಂತಿರಾಕೆಗಳ ಕುಚಕುಂಕುಮಂಗಳೊಳ್ ಪೊರೆದ ಪಸಿನೀರೊಳ್ ಪೊರಳ್ದು [3]ಪೊರೆ[3]ದರುಣತೆಯನಾಗುವನಾಡಿ ಬೆಡಂಗಿನಿಂ ಬಾಡೊದಲಾದ ಬಾಳೆಪಿನಾಸ್ಗಳೊಳಂ; ಪರಸ್ಪರಪಾತದಿಂ ತೆರಳ್ದು ಶಾಗುವ ತೆರೆ[4]ಗಳ ಪೊತ್ತಕ್ಕೆ[4] ತೆಕ್ಕೆಗೊಂಡಾರ್ವಂತಿರಿರ್ತ್ತಡಿವಿಡಿದು ಘೋರಿಸಲುಱಿವ ಸಾರಸಕಳಹಂಸ ಕ್ರೌಂಚ ಚಕೋರ ಚಕ್ರವಾಕಾದಿಪ[5]ಕ್ಷಿ[5]ರಸಿಕರಂಗಳೊಳಂ; ತೆರೆನೊಯ್ಲಿನಿಂ ತೆರಳ್ದು ತಡಿಗೆ ಸಾರ್ದ ಫೇನಪಿಂಡಂ[6]ಗಳಂ[6] ಹಂಸೆಯು ಹಿಂಡುಗೆತ್ತು ಕೂಜಿಸಿ ಕೆಲಕ್ಕೆ ಸಾರ್ದು ತುಂಡದಿಂ ತುಡುಂಕುವ ಬಾಳಮರಾಳಂಗಳೊಳಂ; ತಲೆ[7]ಮು[7]ಟ್ಟಿ ತೊಲಗದೆಯ್ತಂ[8]ದ ಕಟ್ಟಲೆ[8]ಪೊಲೆಯನೊಲ್ದು ಮುಟ್ಟಿದ ಪೊಲೆಯಂ ತೊಳೆದು ಕಳೆಯಲೆಂದು ತಾರಾಗಣಂ ಗಳ್ ಶುಚಿಸ್ನಾನಕ್ಕೆ ಪೊಕ್ಕಂತೆ ಪುದಿದು ಕಮನೀಯಮಾದ ಕಮಲಕುಮುದ ಕುವಲಯ ಕಲ್ಹಾರಕುಳಂಗಳೊಳಂ; ರವಿಕಿರಣಾಕಾತರತೆಯಿಂ ಕಟ್ಟಲೆ [9]ನೀರನೋಡಿ[9] ಪೊಕ್ಕಂತಿರ್ದ [10]ಕಮ್ಮ[10]ಡುಗಳೊಳ್ ಘುಡುಂಘುಜಿದಾಡುವ [11]ಬಿಜ್ಜೋದರಿಯ[11]ರ ಮೊಲೆಗೊಡಂಗಳ [12]ತೋಡು[12]ಗಳೊಳ್ ತೊಡೆದ ತಮ್ಮ ಮೆಯ್ಯ ಕುಂಕುಮಪಂಕಂ ಪೋಕುಮೆಂದು ನೀರಂ ಪುಗಲೊಲ್ಲದೆ ನೆರೆದು ತಡಿಯೊಳ್ ತೆರಂಬಡಿದು ಕುಳ್ಳಿ ರ್ದಂತಿರ್ದ ಚಕ್ಕವಕ್ಕಿಯ ಪೋಣರ್ಗಳೊಳಂ; ಮನೋಹರಮೆನಿಸಿ ಬೆ[13]ಳ್ಳಿವ[13] ಬೆಳಸುಂ ಗಂ[14]†[14]ಪಿನ ಪೊಂಪುಟಿಯುನಿಂಬಿನ ಕಣೆಯುಂ ತಂಪಿನ ತವರುಂ ನೈರ್ಮಲ್ಯದ ನಿರ್ವಾಣಸೀಮೆಯುಂ ಪರಭಾಗದ ಪರಿವರಿಯುಂ ಪಾಪಕ್ಷಯದ ರೂಪಪ[15]ರಾವರ್ತ[15]ಮುಮೆನಿಸಿರ್ದುದು. ಅಂತುಮಲ್ಲದೆಯುಂ—

ಅವಗಾಹಂಗೆಯ್ದು ಗಂಧದ್ವಿಪಚಯಮುಚಲಾಪೀಕಮುಂ ನೀಳ್ಪಿರೇ
ಜವನಂ ಶ್ರೀ ಕೃಷ್ಣನಂ ಚಂದಿರಮಣಿ[16]ನಿಸ್ರ[16]ತಾಂಭಃಪ್ಲವಂ ಪೆರ್ಚನೋಲಾ
ಡುವ ದಿವ್ಯಸ್ತ್ರೀಸಮೂಹಂ ಸಿರಿಯ ನೆರವಿಯುಂ ಪೋಲೆ ತಾನೊಂದು ದುಗ್ಧಾ
ರ್ಣವಮೆಂಬೀ ಮಿಕ್ಕ ಮಾತಂ ಕಿಱಿದೆನಿಸುವುದಾ ಸಿಂಧುಶುಭ್ರಾಂಬುಶೋಭಂ ೪೯

ಆ ಪುಣ್ಯತೀರ್ಥಮಂ ಪರಾರ್ಥತೀರ್ಥತಾಪಸಂ ಚೆಲ್ವಿನ ನೀಮೆಯಂ ಸ್ತುತಿಸ ಬಯ್ಕೆಯುಂ ಕಾಣ್ಬಂತೆ ಕಂಡು ಕೆಯ್ಗಳಂ ಮುಗಿದು—

ಸಮಸ್ತರಜಸಾಂ ದ್ವಿಷಂ ಸಕಲತಾಪತೃಷ್ಣಾಮುಷಂ
ಸಮೃದ್ಧಶುಭದರ್ಶಿನಿಂ ಘನಸಪಾಪನಸ್ಪರ್ಶಿನಿಂ
ಮುಮುಕ್ಷುಗಣಸೇವಿತಾಂ ವಿಮಲಕೌಮುದೀಕೋಮಳಾಂ
ನಮಾಮಿ ಸುರಸಿಂಧುಗಾಮುದಯದಾಯಿಕಾರ್ತಸ್ಯಗಾಂ

---

1 ಮೆ (ಕ ಘ) 2 ಸೋ (ಕ ಘ) 3 ಪೊಳೆ (ಕ) ಪೋ (ಖ ಗ) 4 ಪಗ ಪೊತ್ತರ್ಕ್ಕೆ (ಕ) 5 ಕಿ (ಘ) 6 ಗಳೊಳಂ (ಕ ಘ) 7 ಮು (ಕ) 8 ದುಮರ್ಕ (ಕ) ದುತರ್ಕ (ಘ) 9 ನಿನ್ನಡಿ (ಘ) 10 ಕಂಮ (ಕ ಘ) 11 ಬಿಂಬಾಧರೆ (ಘ) 12 ತೊಡಿಗೆ (ಘ) 13 ಳ್ಳಿನ (ಘ) 14 ವಿಸುಳ (ಕ) ವಿಪಾಸುಳ (ಘ) 15 ರಾರ್ಥ (ಕ) 16 ವಿಶ್ರ (ಕ ಘ)

ಕೇಳೀಭವನವಾದ ಮಾಧವೀಮಂದಿರಂಗಳುಮಂ ನೋಡುತ್ತುಂ ವಿಸ್ಮಯವಿರಚಿತರವರಿರ್ಬರುಮೊರ್ಬರೊರ್ಬರೊಳ್ ನುಡಿವುದನುೞಿದು ನಡೆಯೆ ನಡೆಯೆ ; ತದುದ್ಯಾನದ ನಟ್ಟನಡುವೆ—

ಚರಿತಮನೋದುವ ದೇವಿಯ
ಬಿರುದಂ ಪಾಡುವ ವಿನೇಯರಲ್ಲದರಂ ಜ
ಪ್ಪರಿಸಿ ಪುಗಲ್ ಪುಗಲೆನುತಿ
ರ್ಪರಗಿಳಿಗಳಿನಳಿಯ ಬಳಗದಿಂ ಪಿಕರವದಿಂ ೨೩೩

ಮಿಗೆ ನಯವೇಱಿ ಬಂದ ಪಲವಂದದ ಕೆಂದಳಿರಿಂ ಕವಲ್ತ ಕೊಂ
ಬುಗಳ ಪೊದಳ್ಕೆಯಿಂ ಬೆರಕೆವೂಗಳನಿಟ್ಟೆಡೆಯಾದ ಬಣ್ಣವ
ಣ್ಣಿಗೆಯ ಫಲಂಗಳಿಂ[1]ದೆ ನೆಳೆಗೊಂ[1]ಡಿನ ಬಳ್ವೆಱೆವೊತ್ತ ಮೆಲ್ಲಮೆ
ಲ್ಲಗೆ ನುಡಿಗೊಳ್ವ ಮೆಲ್ಲೆಲರಿನೊಪ್ಪುವ ಕೋಮಳಕಲ್ಪವೃಕ್ಷದಾ ೨೩೪

ಮೊದಲಿದು ಬೇಡಿದ ವರಗಳ
ಮೊದಲಿದು ಬಯಸಿದ ಫಲಂಗಳನುನ್ನತಿಕೆಯ ಬಾ
ಳ್ಮೊದಲಿದು ಬೆಡಂಗುಮೂಡಿದ
ಮೊದಲಿದು ತಾಂ ಮೊದಲೊಳೆಸಿಸಿ ಮಿಸುಗುವ ಮೊದಲೊಳ್ ೨೩೫

ನೆಱೆದ ಮಗನೇಱಿ ಸಿಂಗದ
ಮೆಱೆಯಂ ಕರಮೊಪ್ಪಿ ತೋಱಲವ[2]ನಪ್ಪಿಂ[2] ನೇ
ರ್ಗಿಱಿಯ ಮಗಂ ಪನೆ[3]ನಗೆ[3]ಗಳ
ಕಿಱುವೊ[4]ಳ[4]ಯೆನೆ ನಗುತೆ ನೋಂಕಿ [5]ನೋಗಿಲೊ[5]ಳಿಸೆಯಲ್ ೨೩೬

ತೊಳಗುವ ವಜ್ರದೋಲೆ ಪೊಸಮುತ್ತಿನ ಲಂಬಣ[6]ಮಾಯ್ದ[6] ಮಾಣಿಕಂ
ಗಳ ಮಿಸುಪ್ಪೆಸರಂ ಪಸಿಯ ನೇತ್ರದ ಬಲ್ನಿಱಿ ತೋರ್ಪ ಮಿಂಚುವ
ಲ್ಗಳ ಬೆಳಗುಳ್ಳ ಬಾಯ್ದೆಱೆ ಬಱಲ್ತೊಡಿ [7]ನಾಂ[7]ದಿನ ಬೊಟ್ಟು ಚೆಲ್ವಿನ
ಗ್ಗಳಿಕೆಯನೀಯೆ ಕಣ್ಗೆಸೆವ ಯಕ್ಷಿಯನಬ್ಜದಳಾಯತಾಕ್ಷಿಯಂ ೨೩೭

ಅಂತು ಕವಿತಾವಿಲಾಸಂ ಕಂಡು ಬಲಂಗೊಂಡು ಮುಂದೆ ನಿಂದು ಮುಕುಳಿತ ಕರಕಮಲನಾಗಿ—

ಜಂಬೋ[9]ಷ್ಟಿ ಮೇ[8] ಮಹಾಕಾವ್ಯಂ ಕಂಬುಕಂಠಿ ತ[9]ವಾ[9]ಜ್ಞಯಾ
ಚುಂಬಿ[10]ತಂ ದೇಹಿ[10] ಸೌಭಾಗ್ಯಮಂಬಿಕೇ ಜಗದಂಬಿಕೇ

---

[1] ವಿಸುಳಿಗಂ (ಕ ಫ) [2] ನಿಂದಂ (ಗ ಫ) [3] ಗೊನೆ (ಕ) [4] ನೆ (ಕ) [5] ನೋಂಕಿನೊ (ಕ) [6] ಮಯ್ದು (ಕ ಫ) [7] ಸಾ (ಕ ಫ) [8] ಷ್ಟಮೆ (ಕ) ಷ್ಠಂ ವ್ಯೋ (ಫ) [9] ದಾ (ಫ) [10] ತಾಂ ದೇವಿ (ಕ ಫ) ತಾದ್ದೇಹಿ (ಗ)

ಎಂದಂಬಿಕೆಯಂ ಬೇಡಿ ವರಂಬಡೆದು ಕವಿರಾಜಮಲ್ಲನಲ್ಲಿಂ ತಳರ್ದು ಪೋತರೆ—

ತಪದೆಸಕದಿಂದೆ ಪಿಂಛಾ
ತಪತ್ರಮಂಬರದೊಳಿರ್ದುದೆನೆ ಯತಿಪತಿಯಾ
ತಪದೊಳೆ ಕೆಯ್ಯಿಕ್ಕಿರೆ ಸೋ
ಗೆ ಪ[1]ಱಪಿದುದು ಪಾಱಿ ಪಾಱಿ[1]ಪೀಲಿಯ ಪೊದಱಂ ೫೮

ಮರಮೊದಲೊಳ್ ನಿಂದ ಯತೀ
ಶ್ವರನಂ ಪೂಗೊಂಚಲಿಂದೆ ಪೂಜಿಸಿ ಪಲವುಂ
ಸರಸಫಲದಿಂದಮರ್ಚಿಸಿ
ಚರಣಂಗಳನೊತ್ತು[2]ತಿರ್ಪ ಕಪಿಚಪಲಂಗಳ್[2] ೫೯

ಜಿನಮುನಿಸಮುದಾಯಂಗಳ್
ವನಚರ್ಯಾಮಾರ್ಗದಿಂದೆ ಬರೆ ಬಟ್ಟೆಗಳೊಳ್
ಘನ[3]ಮಾಗಿ ಪರೆ[3]ದ ಪೂಗಳ
ನನುನಯದಿಂದುಡುಗಿ ಕ[4]ಳೆಯು[4]ತಿರ್ದುದು ಪವನಂ ೬೦

ಪ್ರತಿಮಾಯೋಗ[5]ದೊಳೊ[5]ಪ್ಪುವ
ಯತಿಪತಿಗಳ ಕುರುಳ ಬಂಬಲೊಳ್ ಚಳಶಾಖಾ
ತತಿ ತೂಗಿ ತೊಡರೆ ಬಿಡಿಸಿದು
ದತಿಸಂಭ್ರಮದಿಂದಮೆಯ್ದಿ ಮರ್ಕಟನಿಕರಂ ೬೧

ತಾಱಿ ತಪದಿಂದೆ ಮೆಯ್ಮಲ
ವೇಱಿದ ತಪಸಿಯನೆ ಕೊರ[6]ಡು[6]ಗೆತ್ತವಯವದಿಂ
ಮಾಱುದ್ದಿ ಕೊಳ್ವ ಮಱಿಯಂ
[7]ಮೋ[7]ಱಯಿಸೇಂ ಹರಿದು ಹರಿಣಿ ನಡೆನೂಂಕಿದುದೋ ೬೨

ಅವೆಲ್ಲಮನಾನಂದದಿಂ ನಿಂದು ನೋಡುತುಂ ನ್ಯಾಡ್ಯಾಡಿಯಲ್ಲದ ತೀರ್ಥ ಸಾಮರ್ಥ್ಯಮಂ ಸಮರ್ಥಿಸುತುಂ ಮಹಾಮುನಿಗಳ ಮಹಿಮೆಯಂ ಮನದೆಗೊಳುತ್ತುಂ ಮನುನೀತಿ[8]ಮಾರ್ಗಮಂ ನೊಪ್ಪಾದ[8] ಮಾರ್ಗಂಬಿಡಿದು ನಡೆಯೆ ನಡೆಯೆ—

ಜಳದಿಂದಂ ನಾಂದು ಕಾಶ್ಮೀರದ ಪರಿಮಳದೊಳ್ ತೊಯ್ದು ಶಾಲ್ಯಕ್ಷತೌಘಂಗಳ ಕಂಪಂ ಕೊಂಡು ಮಂದಾರದ ಪೊಸನೊನಡಂ ಪೊತ್ತು ದಿವ್ಯಾನ್ನಗಂಧಂಗಳನಾಂತುದ್ದೀಪಿಕಾಸೌರಭದೊಳೊದವಿ ಧೂಪೋ[9]ದ್ಧ[9]ತಾಮೋ[10]ದಿ[10]ಪುಣ್ಯಾನಿಳ[11]ನಂದೆ[11]ಯ್ತಂದುದಾಗಳ್ ಸುರಸಫಲಸುಧಾವಾಸಿತಂ ವಾಸತೀಯಂ ೬೩

---

[1] ಸರಸಿ ತಳುವಾರಿ ವಾರಿ (ಕ) [2] ತಿರ್ದುವತಿ ಕಪಿ ಕೆಲವುಂ (ಗ ಘ) [3] ವಾರಿ ಪತ್ತಿದ (ಘ)
[4] ಳವು (ಕ ಘ) [5] ದಿನೊ (ಕ ಘ) [6] ಡೆ (ಕ ಘ) [7] ಮೋ (ಕ) [8] ಕ ಪ್ರತಿಯಲ್ಲಿಲ್ಲ
[9] ತ್ಥಿ (ಕ) [10] ದ (ಕ) [11] ನೊಂದೆ (ಕ) ನೊಳ್ದೆ (ಘ)

ಇಂದ್ರಕೂಟ

ಅದನಱಿದಾ ಪುಣ್ಯಪವನಸ್ಪರ್ಶದಿಂ ಪಿರಿದು[1]ಮಾಡಿದ[1] ಪರಮಭಕ್ತಿಯಿಂ ಭವ್ಯನಿರ್ವಾಣಂ ಭಾಳಭೂಷಿತಕರಕಮಳಮುಕುಳಿತನಾಗಿ ಮಕರಂದಂಬೆರಸು ಬರೆ; ದೇವಗಿರಿಯೆ ಪಶ್ಚಿಮಪ್ರಾಕಾರಮಾಗೆ, ಗಂಧಾಕರೋದ್ಯಾನ[2]ಮೆ ಜಾದ್ವೇಲಿ[2]ಯಾಗೆ, ಗಂಧನದಿಯೆ ಪರಿಖಾವಳಯಮಾಗೆ—

ಚರಿತ ಪುರಾಣಮನೋದು
ತ್ತಿರೆ ಪಂಡಿತ ಕೀರನಿಖಿಳ ಶುಕಪಿಕ ನಿಕರಂ
ಪರಿವೇಷ್ಟಿಸಿಕೊಂಡಿರ್ದು್ದು
ಭರದಿಂ ಕೇಳುತ್ತೆ ಚೂತಶಾಖಾಂತರದೊಳ್ ೬೪

ಪತಿತ ರವಿರುಚಿಗೆ ಫಣಿಫಣ
ತತಿಯಂ ಕವಿದೆ[3]ತ್ತಿ[3] ಬಣ್ಣಮಂ ಬಸದ ಪಸು
ರ್ಪತಿ[4]ಸೈಸೆ[4]ಪಾರ್ಶ್ವದೇವ
ಪ್ರತಿಮೆಯವೊಲ್ನಿಂದ ಯತಿಗೆ ಪತಿ ಪ್ರೊಡವಟ್ಟಂ ೬೫

ಕನಕಪ್ರಾಕಾರದೋಜಿರ್ಜಳದ ಪರಪಿನೊಳ್ ಚಂದ್ರಸೂರ್ಯೋಪಲಸ್ತಂ
ಭನವಾನಸ್ತಂಭರುಙ್ನೀರದ ತೀಗಡಲೊಳ್ ರತ್ನಕೂಟಪ್ರಭಾಜೀ
ವನಸಿಂಧುಸ್ರೋತದೊಳ್ ತೇಂಕಿಸು[5]ತುಮೆಳೆಯನತ್ತರ್ದುತುಂ[5] ವ್ಯೋಮಮಂದಿ
ಗ್ವನಿತಾಸೇಕಕ್ಕೆ ನೀರಾಟಮನೊದವಿಸುತುಂ ಚೆಲ್ವನಾಯ್ತಿಂದ್ರ ಕೂಟಂ ೬೬

ಮಂಗಳಮಾಗಳುಂ ನೆಲಸಿದಾ ಜಿನಗೇಹದ ಪಂಚರತ್ನ ಕೂ
ಟಂಗಳ ತಳ್ತ ಮೇಚಕಮರೀಚಿಲತಾಳಿಯ ಪರ್ವಿನಿಂ ನಭೋ
ರಂಗಮ[6]ದೊ[6]ಪ್ಪಿ ತೋಱಿದುದು ಪದ್ಮಜನಾ ಜಿನಮಂದಿರಕ್ಕಮು
ತ್ತುಂಗವಿಚಿತ್ರ[7]ವಸ್ತ್ರಮಯಮಂಟಪಮಂ[7] ಸಮೆದಂತೆ ಸಂತತಂ ೬೭

ನೆರೆದು ನಿರಂತರಂ ಜಿನನಿಕೇತನಮಂ ಬಲಗೊಂಡು ಬರ್ಪ ಖೇ
ಚರಿಯರ ಚಾರುಹಾಸಮುಖಮಂಡಲಮುಂ ಕರದೀಪಮಾಲಿಕಾ
ವಿರಚನೆಯುಂ ವಿಳಾಸದಿದಿರ್ಗೊಳ್ಪುವು ಕಾಂಚನಶೈಲಮಂ ಸುಧಾ
ಕಿರಣಸಹಸ್ರಮುಂ ತರಳತಾರೆಗಳುಂ ಬಲಗೊಳ್ವ ಶೋಭೆಯುಂ ೬೮

ತರತರದಿಂ ಜಿನಾಲಯದ ಪೊಂಗಳಸಂಗಳೊಳೊಪ್ಪಮಪ್ಪಿನಂ
ವಿಚರನೆಗೆಯ್ದ ಕೆಂಬರಲ ಮುತ್ತಿನ ನೀಲದ ನೀ[8]ಳ್ದ[8] [9]ನಿಂದ ಮೂ
ವೆರಕೆಯ ಕಾಂತಿಗಳ್ ತೊಳಗುತಿರ್ದುವು ತೀರ್ಥಮಹಾ ಪ್ರ[9]ಭಾವ[9]ದಿಂ
ನೆರೆದುವು ಪೊಂಬಿಸಿಲ್ ಶಶಿಕರಾವಳಿ ಕತ್ತಲೆಯೆಂಬಿವೆಂಬಿನಂ ೬೯

---

[1] ಮಾಱಿದ (ಕ) ನೂಱಿದ (ಗ) [2] ಮೆಂಬಾಳ್ವೇರಿ (ಘ) [3] ತ್ತ (ಘ) [4] ಶಯ್ಯೆ (ಘ) [5] ತೆ ಮಳೆಯನತ್ತರ್ . . . (ಕ) ತೆ ಯೇಳಿಯನತ್ತಧ್ವತಂ (ಘ) [6] ನೊ (ಗ) [7] ಚಿತ್ರಮಯಮಂದಿರಮಂ (ಗ ಘ) [8] ಳ್ಕ (ಗ) [9] ವಾಹ (ಗ)

ಪೊಳೆವ ಬಿಸಿಲ್ಗೆ ಬೆಳ್ವಸೆಳದಿಂಗಳ ಕಾಂತಿಗೆ ಕೆಂಪನಿತ್ತು ಕ
ಣ್ಗೊಳಿಸುವ ಮೌಕ್ತಿಕಧ್ವಜಮರೀಚಿಗಳಿಂದೆ ಸಹಸ್ರಕಾಂಚನೋ
ಜ್ಜ್ವಳಕಳಶಂಗಳಿಂದಮಿರುಳುಂ ಪಗಲುಂ ತಡವಿಕ್ಕೆ ಕೈರವಂ
ಗಳ ಕಮಲಂಗಳುಳ್ಳಲರ್ವುದಂ ತಡವಿಕ್ಕುವುದಾ ಜಿನಾಲಯಂ ೭೦

ತಮಮಂ ತಲೆಯನೆತ್ತದಂತು ಮಸುಳ್ವಂತು ಸೂರ್ಯೇಂದುಗಳ್
ಸಮಸ್ತಮಣಿಕೂಟಕೋಟಿಗಳ ಕಾಂತಿಗಳ್ ಸಂತತಂ
ನಿಮಿರ್ಕೆವಡೆದೊಪ್ಪೆ ಕುಂಜಕುಮುದೋತ್ಸವಂ ಮಾಡುಗುಂ
ವಿಮಿಶ್ರದಿ[1]ನ[1]ರಾತ್ರಿಭೇದಸಮನಾ ಜಿನಾವಾಸದೊಳ್ ೭೧

ಬಿರಿ[2]ಯು[2]ದ ಮಲ್ಲಿಗೆ [3]ಗೆ[3]ಮುಗುಳ್ಗಳ
ಸರಿವಡೆ ಕೊಳ್ವಂತೆ ಶಿಖರದಳ್ಳೇಱುಗಳಿಂ
ಬಿರಿದು [4]ಬಿಡುತಿರ್ಪ[4] ಮುಗಿಲಿಂ
ಸುರಿವುವು ಜಿನಗೃಹದ ಮೇಗೆ ಮುತ್ತಿನ ಸರಿಗಳ್ ೭೨

ಕುಳಗಿರಿಕುಳಮಂ [5]ಕೋ[5]ಱೆದಂ
ಮುಳಿಸಿಂ ಹರಿಯೆಂಬರಱಿಯದವರದ[6]ನುಮನಾ[6]
ಕುಳಿಸದೊಳೆ ಕೆ[7]ಡೆ[7]ದು ನಮೆದಂ
ಬಳೆದಿವನೆನೆ [8]ತೊಳವು[8]ವಲ್ಲಿ ಜಿನನಿಳಯಂಗಳ್ ೭೩

ಜಿನನಿಳಯಮನಾರಾಧಿಸಿ
ಯನಿಮಿಷಚಾಪಂಗಳಧ್ರುವೋದಯಮಂ ಮೊ
ಟ್ಟನೆ [9]ತೋಱೆ[9] ನಿಂದುವೆನಿಸಿದು
ವನೇಕಮಣಿಕೂಟಕೋಟಿ [10]ಜಿನನಿಳ[10]ಯಂಗಳ್ ೭೪

ನೀಳಶಿಖರಾಂಶುಜಾಳದ
ಕಾಳದ ಕಟ್ಟಲೆಯೊಳಿಂದು ಕಣ್ಗೆಟ್ಟು ಜಿನೇಂ
ದ್ರಾಲಯದೊಳೆ ನಿಂದಂತೆವೊ
ಲಾಲೋಕಿಸೆ ಚಂದ್ರಶಾಲೆ ಸೋಲಮನೀಗುಂ ೭೫

[11]ಪಸಿವಂ ಪರಿವುದನುಟಿದುವೊ
ಲಸದೃಶಜಿನಮಹಿಮೆಯಿಂದೆ ಹಸಲೆಗಳೆಡೆಯಿಂ[11]
ಬಸದಿಯ ಪಜ್ಜೆಯ ಮಾಡದ
ಪಸುರ್ವೆಳಗನೆ ಸೆಳೆವುವಲ್ಲಿ ಮುಗ್ಧಮೃಗಂಗಳ್ ೭೬

---

[1] ವ (ಕ ಘ) [2] ಕ ಪ್ರತಿಯಲ್ಲಿಲ್ಲ [3] ಯ (ಕ) [4] ತ (ಕಗ) [5] ತೊ ರ(ಗ ಘ)
[6] ನುಪನಾ (ಕ) ನವನಾ (ಘ) [7] ರೆ (ಕ) [8] ಪೊಳೆವು (ಖ) [9] ಮಾಡಿ (ಕ ಗ ಘ)
[10] ರುಚಿನಿಳ (ಕ) ರುಚಿನಿಚ (ಗ ಘ) [11] ಹಸಿಯಂ ಹಱಿವುದ . . . ಹಸಲೆಯನುಟಿದಾ (ಕ ಘ)

ಜಿನನಾಥನಿತ್ಯನಿಳಯದ
ಕನಕಕನತ್ಕಲಶದಗ್ರದೊಳ್ ಕಣ್ಗೆಸೆಗುಂ
ಜನವಿನುತಧರ್ಮಚಕ್ರಮಿ
ದೆನೆ ಮಧ್ಯಂದಿನದೊಳೆಸೆವ ಭಾಸ್ಕರಬಿಂಬಂ ೭೭



[1]ಶ್ರೀ[1]ಜಿನಮಂದಿರಮಂ ಸುರ
ರಾಜನ ಬೆಸದಿಂದೆ ಸಮೆದನೆಸೆ ಧನಪತಿ ನಾ
ನಾಜಿಹ್ವೆಯುಳ್ಳೊಡೇಂ ಫಣಿ
ರಾಜನುಮಾರ್ತಪನೆ ಪೊಗಬಲೇಕಪ್ರತಿಭಂ ೭೮

ಆ ವಸತಿಯ ಸಿರಿಯಂ ಜಿನ
ದೇವಂಗಾಳಾಗಿ ಪೇಳ್ತೆನಮಂ ತೋಱಲ್
ಕಾವನೆ ಋತು[2]ತ[2]ತಿಸಹಿತಂ
ಕಾವಂ ಕೆಯ್ಯಿಂದಮಿಟಿಪನಂಬಂ ಬಿಲ್ಲಂ ೭೯

[3]ಎನಿಪ[3] ಪೊಗಪ್ತಗಂ ಸೆಗಪ್ತಗಂ ನೆಲೆಯಾಗಿ ಸಕಳತ್ರಿಭುವನಸಾರಲಕ್ಷ್ಮಿಗೆ ನೆಲೆಯಾದಿಂದ್ರಕೂಟಜಿನಾಲಯುಮಂ ಗುಣಗಣಾಲಯನೆಯ್ದೆವಂದು ಮುಕ್ತಿಕಾಮಿನೀಕ್ರೀಡಾನೀಡಮೆನಿಸಿದ ಬಾಗಿಲ್ವಾಡಮುಮಂ ಸಕಳಮಂಗಳಾಕಾರಮೆನಿಸಿದ ಮಕರತೋರಣಮುಮಂ ಮನಸಿಜನನಿಱದು ನಿಱಿಸಿದ ವಿಜಯಸ್ತಂಭಮೆನಿಸಿದ ಮಾನಸ್ತಂಭಮುಮಂ ನೋಡುತ್ತುಂ ಬಂದು—

ಪ್ರಾಕಾರಮನಾ ಲೋಕ
ಪ್ರಾಕಾರಂ ಪೊಕ್ಕು [4]ಪೊಕ್ಕ[4]ಪೋಲ್ ತ್ರಿಭುವನಪು
ಣ್ಯಾಕರಮಂ ಸಕಳಸುಖ
ಕ್ಯಾಕರನಾದಂ ಕೃತಾರ್ಥನುನ್ನತಸಿಳಯಂ ೮೦

ಅಂತು ಪೊಕ್ಕು ಫಲಭರದಿನ[5]ಲ್ಲಾ[5]ಡುವ ಬಳ್ಳಿವಸದ ಜಾಡ್ನಲ[6]ದಿಂ[6] ತೆರಳ್ದು ತೆರೆ[7]ಗ[7]ಟ್ಟುವ ಕ[8]ರ್ಮ[8]ಡುವಿನಂತಿರ್ದ ಮರಕತದ ಕುಟ್ಟಿಮಮುಮಂ, ಕುಟ್ಟಿಮದೊಳ್ ಮಾರ್ಪೊಳೆವ ಪಣ್ಗಳಂ ಪಣ್ಗಳೆಗೆತ್ತು ಪಾಯ್ದು ತಾಗಿ ಕಲ್ಲಂ ತಾಗಿದ [9]ಮಿ[9]ಟ್ಟೆಯಂತೆ ಮಗುಳ್ದು ಪಾಱಿಪೋಗಿ ಪೂಗೊಂಚ[10]ಲೊಳ್[10] ಮಗುಳೆ ಮಗುಳ್ದ [11]ರಗಿ[11]ಳಿಗಳುಮಂ, [12]ಗಿಳಿಗಳ ನೆಟಲ್ಗಳನೆಳೆಯೊಳ್ಪರಿವ ಗಿಳಿಗಳ್ಗೆತ್ತು[12] ಪರಿದ ಗಿಳಿಗೆತ್ತು ಪರಿದು ಪಿಡಿದು ಸಿಗ್ಗಾಗಿ ಸುತ್ತಲುಂ ನೋಡಿ ನಸುನಗುವಂತಿರ್ಪ ಚಿತ್ರಕೆಗಳ ನಗೆಮೊಗಕ್ಕೆ ನಾಣ್ಚಿ ಮುದ್ದುಮೊಗಮಂ ಬಾಗುವ ಮನುಜವನಿತೆಯರುಮಂ, ಮನುಜವನಿತೆಯರಲತಿಗೆಯಡಿಪಜ್ಜೆಯನಲದರ್ ಕೆಂದಾವರೆಗೆತ್ತು ಮುಸುಱುವ ಮಱಿ

[1] ಆ (ಕಫ) [2] ಸ (ಫ) [3] ಎಂಬ (ಕ) [4] ಪೋಗು (ಫ) [5] ಳ್ಯಾ (ಕ)
[6] ಳಿಂ (ಕಫ) [7] ಗು (ಫ) [8] ಮ್ಮ (ಕಫ) [9] ಮಿಂ (ಕಖ) [10] ಲ್ಗಳೊಳು (ಕಫ)
[11] ಳಿ (ಖಗ) ಫ ಪ್ರತಿಯಲ್ಲಿಲ್ಲ [12] ಮೃಗಾಳಿಗೆ ಮೇಗಿಟಿಪೆಳನೆಲ್ಗಳೆಳೆಯೊಳ್ (ಖಗ)

ದುಂಬಿಗಳುಮಂ, ಮಱಿದುಂಬಿಗಳಿಂಚರಂಗಳನಾಲಿಸಿ ಸೋಲ್ತು ಬೆಱಗಾಗಿರ್ದ ಸಾಲಭಂಜಿಕೆಗಳುಮಂ, ಸಾಲಭಂಜಿಕೆ[1]ಗಳೋಳಿಯಿಂ[1] ಪಾಱುವಂತಿರ್ಪ ಸಿಱಿಯ ಸೆಱಗಂ ಸೆಳೆ[2]ಯಲ್[2] ಸಾರ್ವ ಚಪಳಕಪಿಗಳಂ ಕಂಡು ಭಯಂಗೊಂಡು ಬೆಮರ್ತು ಬಿಂದು ಬಿಡುವಂತಿರ್ಪ ಮುತ್ತಿನ ಪುತ್ತಳಿಗಳುಮಂ, ಪುತ್ತಳಿಗಳ್ ಬಾಜಿಸುವಂತಿರ್ಪ ಬೆರಲಂ ಪತ್ತಿಸಿದ ಬೀಣೆಯ ತಂ[3]ತ್ರಿ[3]ಗಳಂ ಗಾಳಿ ತಾಗೆ ಸೆಗೆವ ನುಣ್ಚರಕ್ಕೆ ಸೋಲ್ತ ಮೃಗಾಳಿಗಳಂತೆ ಸೊಗಯಿಸುವ ಮೃಗಾವಳಿಗಳುಮಂ, ಮೃಗಾವಳಿಗೆ ಮೇಪಂ ಸೂಸುವಂತೆ ಪಸುರ್ವೆಳಗಂ ಸೂಸುವ ಮರಕತಕಪೋತಂಗಳುಮಂ, ಕಪೋತಪಾಲಿಕೆಗಳೊಳ್ ಪಂತಿಗೊಂಡ ಕೃತ್ರಿಮಖಗಾವಳಿಗಳೊಳಗೆ ದನಿಗೆ[4]ಯ್ದುಡಗಲಾಱದಂತಿರ್ದ[4] ಪಾರಾವತಂಗಳುಮಂ, ಪಾರಾವತಂಗಳ ಪಕ್ಷಾನಿಳನಿನಲ್ಲಾಡುವಂತೆ ಲಲಿತ[5]ಹಾರ[5] ಲತಾವಳಿಗಳುಮಂ, ಲತಾವಳಿಗಳ ಕೇಸಡಿ[6]ಗಳ್[6] ಕೆಂಪಿನಿಂ ಪೊಸದಳಿರಂ ದಯೆಗೆಯ್ದಂ[7]ತಿರ್ಪ[7] ದಿಶಾಪ್ರತಿಮೆಗಳುಮಂ, ದಿಶಾಪ್ರತಿಮೆಗಳಂ ಮುಗುಳ್ನಗೆಯ ಮುಗುಳ್ಗಳಿಸರ್ಚಿಸುವ ಕೃತಕಚಾಮರಗ್ರಾಹಿಣಿಯರುಮಂ, ಚಾಮರಗ್ರಾಹಿಣಿಯರ ತೀವಿದ ಕುಚಕಲಶಮಂ ತಾವು ಪೋ[8]ಲ್ತೆ[8]ವೆಂದವಱ ಸಂದೆಗಮಂ ಕಳೆವಂತೆ ಕೆಲದೊಳ್ ತೊಳಗುವ ಕಳಧೌತಕಲಶಂಗಳುಮಂ, ಕಳಶದ ಬಾಯ ಕೆಂದಳಿರ್ಗಳಂತೆಯುಂ ಪೊಂಬಟ್ಟೆಯಂ ಸೂಸಕಂಗಟ್ಟಿದಂತೆಯುಂ ಸುತ್ತಲುಂ ತೆತ್ತಿಸಿದ ಪೊನ್ನ ಜೊಂಜೆಗಳಂತೆ ಬಂಬಲ್ಗೊಂಡು ಬಱಲ್ದು ಪೊಳೆವ ಬೆಳಗಿನ ಗೊಂಚಲ್ಗಳಂ [9]ಬೆಳಗಿನ ಗೊಂಚಲ್ಗಳಿಂ ಕಾಂತೀಕೃತ[9] ಪ್ರಾಸಾದಂಗಳಂತಿರ್ಪ ಪ್ರಾಸಾದಂಗಳುಮಂ—ಪ್ರತಿದೀರ್ಘವಿಕಸಿತವಿಲೋಚನಪುಂಡರೀಕನುಂ, ತೋಷತುಷಾರವರ್ಷಿತವದನಚಂದ್ರ[10]ನುಮಾಗಿ[10] ಚಂದ್ರೋದಯಮನವಲೋಕಿಸುತ್ತುಂ ಬಂದು, ಮುಂದೊಂದೆಡೆಯೊಳಮೃತವೊಸರ್ದಂತೆಯುಂ, ಹಿಮಮಂ ಪೊಯ್ದಂತೆಯುಂ ಬೆಳ್ದಿಂಗಳ[11]ಗೊಂಚಲ್ಗಳಂ[11] ಪಸೆಯಿಟ್ಟುಕೊಂಡಂತೆಯುಂ, ಮುತ್ತಿನ ಬೆಳಗಂ ಬಱಿಕೆಯ್ದುಕೊಂಡಂತೆಯುಂ, ಪಳಿಕಿನ ಕಾಂತಿಯಂ ಪಿಡಿದುಕೊಂಡಂತೆಯುಂ, ಕಾಂತೆಯರ ಕಣ್ಬೆಳಗನೊಱಗಿಕೊಂಡಂತೆಯುಂ, ವೈಡೂರ್ಯದ ಬಣ್ಣಮಂ [12]ಬಾ[12]ರ್ದುಕೊಂಡಂತೆಯುಂ ತೊಳಗುತ್ತಿರ್ದ ತಿಳಿಗೊಳನಂ ಕಂಡು, [13]+[13]ಧೌತಕರಚರಣಕಮಳನಾಗಿ—

ಅಪ್ಪು ಕಣಿಸಿದುವು ಕಂಪಿನ
ಕುಪ್ಪಿಗೆಗಳೆಸಲ್ಕೆ ಕರಮೆ ಕಣ್ಗೆಸೆದು ಬೆಳ
ಪುರ್[14]ಪ್ಪ[14]ಳಮನಾಯ್ದು[15]ಕೊಂಡು ಬೆ[15]
ಳಪ್ಪ ಸರೋವರದಿನವನಿಪತಿ ಪೊಱಮಟ್ಟಂ ೮೧

[1] ಗಳ ಗಾಳಿಯಿಂ (ಕ ಖ ಗ) [2] ಯೆ (ಖ ಫ) [3] ತ್ರ (ಕ ಫ) [4] ಗೆಯ್ದುಡಗಲಱಿಯಲಾ ದಂತಿರ್ಪ (ಕ) ಯ್ದೊಡಲ್ವಱಿಯಲ್ವಾ (ಗ) [5] ವಾದ (ಕ) [6] ಯ (ಕ ಫ) [7] ಕ ಫ ಪ್ರತಿಗಳಲಿಲ್ಲ [8] ಲ್ತೆ (ಖ ಗ) [9] ಳಿಂ ಕಾಂತೀಕೃತ (ಖ) ಬೆಳಗಿನ ಗೊಂಚಲ್ಗಳಕಾಂತಿ ಕೃತಕ (ಗ) [10] ಗ ಪ್ರತಿಯಲ್ಲಿಲ್ಲ [11] ಕ ಫ ಪ್ರತಿಯಲ್ಲಿಲ್ಲ [12] ಸಾ (ಕ) [13] ಕನಂ (ಫ) [14] ಪು (ಫ) [15] ಕೊಯ್ದು ತೊಳಪ್ಪ (ಗ) ತೊಯ್ದು. . . (ಫ)

ಅಂತು ಪೂಗಳಂ ಕೊಂಡು ಪದ್ಮವಸದಿಂ ಪೊಱಮಟ್ಟು [1]ಸುರಭಿ[1]ಶೃಂಗಾರಸೌರಭಮಾನಾತ್ರಿಭುವನಪತಿಭವನಮಂ ತ್ರಿಃಪ್ರದಕ್ಷಿಣಂಗೆಯ್ದು—

ಅಮೃತಶ್ರೀಕೃತಿಮೋಹಮಮಂ ಸಕಲ[2]ವಿದ್ಯಾಮೋದ[2]ಮಂದಪ್ರವಾ
ಹಮನುನ್ಮೀಲಿತವಾಹಮಂ ವರವಚೋಮಾಂಗಲ್ಯಶೃಂಗಾರಗೇ
ಹಮನಾ ಶ್ರೀಜಿನಗೇಹಮಂ ಪದೆಪಿನಿಂದಂ ಪೊಕ್ಕು ರಾಜೇಂದ್ರನಾ
ಥಮುಖಾಲೋಕನಜಾತಪುಣ್ಯತಿಲಕಂ ವಾಗ್ವಲ್ಲಕೀವೈಣಿಕಂ ೮೨

ಅಂತು ಪುಗುವಾಗಳ್—

ಎಳವೆಳಗಿನ ತಣ್ಬೆಳಗಿನ
ತಳಿರ್ವೆಳಗಿನ [3]ಬೆಳ್ಳಿವೆಳಗಿನೊಳ್ವೆಳಗಿನ [4]ಬ
ಳ್ವೆ[4]ಳಗಿನ [5]ಬೆ[5]ಳಗದ ಬಳಸೆನೆ
ತೊಳತೊಳತೊಳಗಿದುದು ಮೂರ್ತಿ ಚಂದ್ರಪ್ರಭನಾ ೮೩

[6]ಜನನಾ[6] ಭಿಷೇಕಮಾನದೊ
ಳನಿಮಿ[7]ಷಕರಿ[7] ತನ್ನನಾಂತು ಬಱಿಯಂ ಬಿಳಿದಾ
ಯ್ತೆನೆ ವಾಣೀಸ್ಮಿತಧವಳನ
ಮನಮಂ ಬೆಳಗಿದ್ದುದು ಮೂರ್ತಿ ಚಂದ್ರಪ್ರಭನಾ ೮೪

ಪಳಿಕಿನ ರುಚಿಯೊಳ್ ಮಿಂದವೊ
ಲೆಳಮುತ್ತಿನ ಕಾಂತಿಯಿಂದೆ ನುಣ್ಪಿಕ್ಕಿದವೋಲ್
ಮಳಯಜದೊಳ್ ಮುಳುಗಿದವೋಲ್
ತೊಳತೊಳತೊಳಗಿದುದು ಮೂರ್ತಿ ಚಂದ್ರಪ್ರಭನಾ ೮೫

ತಳಿವಂತೆ ಪುಣ್ಯಚಯಮಂ
ತುಳುಂಕುವಂತೆಱಗಿದವರ್ಗೆ [8]ಶಿವ[8]ಸುಖಮಂ ನಿ
ರ್ಮಳತೆಯನೊಪ್ಪಿಸುವಂತಿರೆ
ತೊಳತೊಳತೊಳಗಿದುದು ಮೂರ್ತಿ ಚಂದ್ರಪ್ರಭನಾ ೮೬

ಸೆಳೆವಂತೆ ಸಿರಿಯ ಪೊಳಪಂ
ಕಳೆಯಿತ್ತೆಂಬಂತೆ ಶಿವನ ನಗೆಯಂ [9]ಹೈಮಾ[9]
ಚಳದೇಶವ ನಗುವಂತಿರೆ
ತೊಳತೊಳತೊಳಗಿದುದು ಮೂರ್ತಿ ಚಂದ್ರಪ್ರಭನಾ ೮೭

---

1 ಶುಭ (ಘ) 2 ದಿವ್ಯಾಮೋಹ (ಕ) ವ್ಯಾ . . . (ಘ) 3 ಬ (ಕ ಘ) 4 ಬೆಳ್ವೆ (ಕ ಘ) 5 ಬೆ (ಗ) 6 ಜನಗಾ (ಕ) ಜನಪಾ (ಖ ಗ) ಜನನಾ (ಘ) 7 ತತಿ (ಖ ಗ) 8 ಬಹು (ಕ ಗ) 9 ಹರ್ಮ್ಯಾ (ಕಘ)

ಅನುದಿನಮಮೃತಶ್ರೀ ತ
ನ್ನನೆ ಭಾವಿಸಿ ವಿಶದೆಯಾದಳೆನೆ ಬೆಳಗುವ ಸೂ
ತನಮೌಕ್ತಿಕಮಣಿಧವಳನ
ಮನಮಂ ಬೆಳಗಿದುದು ಮೂರ್ತಿ ಚಂದ್ರಪ್ರಭನಾ ೮೮

ಅನುದಿನಮೊಸೆದೀಕ್ಷಿಸಿ ತ
ನ್ನನೆ ಸುರಲಲನೆಯುರ ಲೋಚನಾವಳಿ ಬಿಳಿದಾ
ಯ್ತೆನೆ ಪೊಳೆದು ಕುಮುದಧವಳನ
ಮನಮಂ ಬೆಳಗಿದುದು ಮೂರ್ತಿ ಚಂದ್ರಪ್ರಭನಾ ೮೯

ಸಿರಿಯ ತವರಮೃತದಾಗರ
ವರಮೌಕ್ತಿಕರುಚಿಯು ಪೆತ್ತ ತಂದೆಯಿದೆಂಬಂ
ತಿರೆ ಬೆಳಗಿಂ ಪಾಲ್ಗಡಲಂ
ಸುರಿದುದು ಕರಮೆಸೆವ ಸಿರಿಮೊಗಂ ಜಿನಪತಿಯಾ ೯೦

ಪವಳದ ಕುಡಿವೆರ[1]ಸಮೃತಾ[1]
ರ್ಣವ[2]ದೊಳ್[2] ಪೊಱಮಡುವ ಚಂದ್ರನಂತಿರೆ ತೀವಿ
ರ್ದವಯವ[3]ಮರೀಚಿಯೊಳ್[3] ಪ
ಲ್ಲವಾಧರಂ ತೊಳಗಿದತ್ತು ಜಿನಮುಖಚಂದ್ರಂ ೯೧

ತ್ರಿಭುವನವಿಭವಕ್ಕೇಕ
ಪ್ರಭುವೆಂಬುದನೆಯ್ದೆ ಸೂಚಿಸಂತಿರೆ ಚಂದ್ರ
ಪ್ರಭಜಿನಪತಿಗೊಪ್ಪಿರ್ದುವು
ಶುಭದಚ್ಛತ್ರತ್ರಯಂಗಳತಿಧವಳಂಗಳ್ ೯೨

ಜಿನಮುಖಚಂದ್ರಿಕೆಯಿಂದಂ
ಪನಿಗಳನುಗುಳ್ವಂತೆ ಚಂದ್ರಕಾಂತದ ಕೊಡೆಗ
ಳ್ಗನಸುಂ ಸೊಗಯಿಸಿದುವು ಮು
ತ್ತಿನ ಸೂಸಕ[4]ದೊಳಗೆ[4] ಸೂಸುತುಂ ಕಿಱುವೆಳಗಂ ೯೩

ತನುರುಚಿರರುಚಿಗಳಂ ಪಾ
ಲ್ಗೊನಲೆಂದಾಸೆಯೊಳೆ ಸಾರ್ದ ಹಂಸಾವಳಿಯೆಂ
ಬಿನೆ[5]ಮೆ[5]ಸೆದು ಪೊಳೆಯುತಿರ್ದುವು
ಜಿನಪತಿಯಿಕ್ಕೆಲದೊಳನು[6]ಳ[6]ಚಾಮರ[7]ತತಿ[7]ಗಳ್ ೯೪

---

[1] ಸು ಸುಧಾ (ಘ) [2] ದಿಂ (ಘ) [3] ದ ರುಚಿಯೊಳಂ (ಕ) [4] ದೊಳ (ಘ)
[5] ಮೊ (ಕ) [6] ರ (ಕ) [7] ಯುಗ (ಘ)

ಜಿನಪನನೋಲಗಿಸಿಯೆ ಸುರ
ಘನುವುಂ ಮಿಂಚುಗಳುಮಧ್ರುವ್ರೋದಯಮಂ ಮೊ
ಟ್ಟನೆ ಮಾಡಿದುವೆನೆ ಮಣಿಕಾಂ
ಚನಮಯಭಾಮಂಡಳಪ್ರಭಾವಳಿಯೆಸೆಗುಂ ೯೫

[1]ಬ್ರಂ[1]ಹಿಮವಚ್ಚಳಲಕ್ಷ್ಮಿ[2]ಯ[2]
ಸಿಂಹಂಗಳನಂತಬಳನ ಪಾದಾಂತಿಕದೊಳ್
ಸಂಹತಿಗೊಂಡಿರ್ದಪುವೆನೆ
ಸಿಂಹಾಸನಮೆಸೆದುದಮಳಮಣಿ[3]ಖಚಿತಂಗಳ್[3] ೯೬

ಅಂತನಂತಶೋಭಾಸ್ಪದಮಾದ ಪರಮೇಶ್ವರನಂ ಜೀಗಿನ ಜೆಟ್ಟಮುಂ, ಪಾಂಡುರತೆಯ ಪಿಂಡಮುಂ, ಪುಣ್ಯದ ಪುಂಜಮುಂ, ಗುಣದ ಕಣಿಯುಂ, ಕರುಣದ ಕರುವಂ, ಸೌಖ್ಯದ ರಾಶಿಯುಂ, ರಸಾಯನದ ಕಡಲುಂ, ಶಾಂತಿಯ ಸುಧಾ ಸಮುದ್ರದ ಸೋರೆವಿಂಡಂ ನಯನಾನಂದನಮುಂ ಕಾಣ್ಬಂತೆ ಕಂಡು ಸಿರಿಯಂ ಬರಂಬಡೆಯಲೆಂದು ಪೊಡಮಡುವಂತೆ ಶ್ರೀಪಾದಪದ್ಮಂಗಳಂ ಪದ್ಮದ ಪೂಗಳಿಂ ಪೂಜಿಸಿ, ಶಾಂತಿತೀರ್ಥದೊಳ್ ಮು[4]ಱುಂಕು[4]ವಂತೆ ಪಾದಪೀಠದೊಳ್ ಮಱುಗಿ, ಪಿರಿದುಂ ಪೊತ್ತುಂ ಪೊತ್ತ ಪುಣ್ಯದ ಪೊಱೆಯನೆತ್ತಲಾಱದಂ[5]ತಿರ್ದು[5] ತಲೆಯೊಳ್ ಕೆಯ್ಯನಿಟ್ಟು ನಖಾಂಶುಗಳೆತ್ತಿದಂತೆ ತಾನುಮೆರ್ದಪಾರ ಸುಖಸ್ವರೂಪನ ರೂಪಾತಿಶಯನಿರೀಕ್ಷಣಚ್ಛಲದಿಂ ರುಚಿಸುಧಾರಸಮಂ ನೇತ್ರಯಂತ್ರದಿಂ ತೆಗೆದು ಕುಡಿದು ತಣ್ಣನೆ ತಣಿದಂತೆ ಚಿತ್ತಂ ಕುಳಿ[6]ರ್ಕೋಡೆ[6] ತಲೆಗಾವುದೆಂದು ತೋರ್ಪಂತೆ ಮೌಳಿಮಿಳಿತನಿಮೀಳಿತಕರಕಮಲನಾಗಿ—

ಶ್ರೀಪಾದಾಗ್ರ ಭು[7]ವಿ[7] ಪ್ರಣಾಮನಿಪುಣಾ ಯಸ್ಯೇಶ್ವ[8]ರ ಸ್ಯಾದ[8]ರಾ
ದೈಂದ್ರೀಭಾವ[9]ತ ತಿಸ್ತ[9]ಹಸ್ರನಯ[10]ನಾ[10]ಪ್ರೀತಿಪ್ರಬೋಧಾಮಳಾ
ಮಾಮಾಂ ದೇವಿ ವಿಹಾಯ ಗಚ್ಛ ವರ[11]ದಾಕ್ಷ್ವಾ[11]ಪೀತಿ ಘಾತದ್ವಿಪ
ಶ್ಚಂದ್ರಸ್ಯೇವ ಕುಮುದ್ವತೀ[12]ಶ[12] ಭಗವಾನ್ ಚಂದ್ರಪ್ರಭಃ ಪಾತುವಃ

ಎಂದೆಂದಿಂದ್ರವಂದ್ಯನಭಿ[13]ಷ್ಟು[13]ತಿಗೆಯ್ದು ಅಭೀಷ್ಟಫಲಮಂ ಪಡೆದು ಕಡಲ ತಡಿಯ ಚೈತ್ರದಂತೆಯುಂ, ಅರಸನ ಕೆಲದ ಮಂತ್ರಿಯಂತೆಯುಂ, ಉಪಾಧ್ಯಾಯನ ಕೆಲದ ಶಿಷ್ಯನಂತೆಯುಂ, ಚಂದ್ರನ ಪೊರೆಯ ಬುಧನಂತೆಯುಂ, ಸಮ್ಯಜ್ಞಾನದ ಪೊರೆಯ ದರ್ಶನದಂತೆಯುಂ, ಅನುಮಾನದ ಪತ್ತುಗೆಯ ಪ್ರತ್ಯಕ್ಷದಂತೆಯುಂ, ನಿಧಿಯ ಸನ್ನಿಧಿಯುಪನಿಧಿಯಂತೆಯುಂ, ಆ ಸಮಸ್ತಗುಣನಿಧಿಯಭ್ಯರ್ಣದೊಳಭಿರಾಮತೆಯನಪ್ಪುಕೆಯ್ದು ಬರೆ; ನವಪದಾರ್ಥಮಂ ಕಾಣ್ಬವರ್ಗೆ ಕಣ್ಗಳಿವರಂ ಕಂಡಪರೆ ಭವಮೆಂಬ

[1] ಬಂ (ಖ ಗ) ಖಳ (ಘ) [2] ಗೆ (ಕ ಘ) [3] ಗಣಖಚಿತಂ (ಘ) [4] ಱುಗು (ಕ ಘ) [5] ತಟ್ಟಿ (ಗ) [6] ಕೋ (ಖ ಗ) [7] ತಿ (ಕ) [8] ರತ್ನಂಧರಾ (ಗ) [9] ತಿತತ್ತ (ಕ) ವಿತತತ್ತ (ಗ) ತನುಸ್ಸ (ಘ) [10] ನ (ಗ) [11] ದಕ್ಷಾ (ಗ) ದಕ್ಷಾ (ಘ) [12] ಸ (ಗ ಘ) [13] ಸ್ತು (ಕ ಘ)

ಕಡಲ ಕಡೆಯಂ ಕಂಡಪರಿವರಿಂದಮಿಂದ್ರನ ಸಿರಿಯಾರಂ ಸಾರದಿವರ್ಗೆಱಗಿದವರಿ ಲೋಕಮನೆಱಗಿಸುವರಿವರತ್ತಣಿನಿತ್ತಮಪದವೇೞ್ವಪೂರ್ದಿವರ ಕೇಸಡಿಗಳ್ ಕರ್ಮ[1]ದು ರಿತ[1]ಕರಿಕೇಸರಿಗಳಿವರೊಳ್ ಸಕಲಶ್ರುತಮುಂ ಪೊತ್ತಗೆಯಕ್ಕರದಂತೆ ಪತ್ತಿ ನಿಂದು ವೆನಿಪ ಪೆಂಪಂ ಪಡೆದು ತಾರಾಗಣದ ನಡುವಣ ಕಳಾಧರನಂತೆ ಸಕಲಮುನಿಗಣಧರರ ನಡುವೆ—

ಮಿಂಚಂ ಪೋಲ್ತಿರ್ದುದುದ್ವೃತ್ತಕಬ್ಧಧವಳದಂತಾಂಶುವಾಚಾರ್ಯಚಿಹ್ನಂ
ಕುಂಚಂ ಪೋಲ್ತಿರ್ದುದಾಖಂಡಲದೃಢಧನುವಂ ಪೊಣ್ಮೆ ಪೋಲ್ತಿರ್ದುದಾಶೋ
ದಂಚದ್ವ್ಯಾಖ್ಯಾನಮಾದಂ ಮೊೞಗನಮಳಧರ್ಮಾಮೃತೋದ್ಧಾಮಧಾರಾ
ಮುಂಚದ್ವಕ್ತ್ರಂ ಮುನೀಂದ್ರಂ ಜಳದಸಮಯಮಂ ಕೂಡೆ ಪೋಲ್ತಿರ್ದನಾಗಳ್ ೯೭

ಅಡಿಗೆಱಪ ಜನಕ್ಕಾಗಳ್
ಕುಡಲೆ ಸಹಸ್ರಾಕ್ಷಲಕ್ಷ್ಮಿಯುಂ ಮುನಿ ಕಯ್ಯೊಳ್
ಪಿಡಿದಿರ್ಪಂತೆವೊಲೆಸೆದ
ತ್ರಿಡಿದೊಪ್ಪುವ ಕಣ್ಣ ಪಿರಿಯ ಪೀಲಿಯ ಕುಂಚಂ ೯೮

ತೊಳಗಿದುದು ಯತಿಯ ಕೆಲದೊಳ್
ಪಳುಕಿನ ಗುಂಡಿಗೆ ತದೀಯಪದಯುಗಸೇವಾ
ಫಳದಿಂ ತನ್ನಯ ಕುಂದಂ
ಕಳಂಕಮಂ ಪತ್ತು[2]ವಿ[2]ಟ್ಟ ವಿಧುಬಿಂಬದವೋಲ್ ೯೯

ಅಮರ್ದಿರೆ ನೇಱಿದ ಲಂಬೂ
ಷಮೆ ಬಾಲಂ ತವಣೆ ಕೋಲೆ ಕಾಲ್ಗಳಿವೆನೆ ಬೀ
ೞ್ವಮೃತಮನೆಱೆಯುತ್ತಿರ್ದುದು
ವಿಮಳಶ್ರುತಕಾಮಧೇನು ಮುನಿಪುಂಗವನಾ ೧೦೦

ಕಣ್ಮಲೆದಂ ಮುನಿ ಮನಮುಂ
ನುಣ್ಮಗಿಲೊಳ್ಪೊರೆಯಿಸಿಸಿಸು ತೋಱುವ ರವಿವೋಲ್
ಉಣ್ಮಿದ ಮಲದಿಂ ನಸುವೊಱ
ಪೊಣ್ಮೆ ತಪಸ್ತಪ್ತಕಾಯಕನಕದ್ಯುತಿಗಳ್ ೧೦೧

ಅಂತಿರ್ದ ಜ್ಞಾನಸಿಂಧುಗಳೆಂಬ ಭಟ್ಟಾರಕರ್ಗೆ ಸಮುದ್ರಕ್ಕೆ ಮುಗಿಲೆಱಗು ವಂತೆ ತಾವರೆಗೆ ತುಂಬಿಯೆಱಗುವಂತೆ ನಿಧಾನಕ್ಕೆ ದೀಪವರ್ತಿಯೆಱಗುವಂತೆ ಲೋಸಿಂಗೆ ಮನಮೆಱಗುವಂತೆ ಭಕ್ತಿಯಿಂದಮೆಱಗಿ—

---

[1] ಘ ನಲ್ಲಿಲ್ಲ [2] ಗೆ (ಘ)

ನಮೋಸ್ತು ನಮತಾಂ ಕಾಮಧೇನವೇ ಮುನಿಭಾನವೇ
ಅನಿಮಿತ್ತಾಯ ಭವ್ಯಾನಾಂ ಬಂಧವೇ ಬೋಧಸಿಂದವೇ

ಎಂದು [1]ವಂ[1]ದಿಸಿ ಚಿಂತಾಮಣಿ ವಂದಿಸುವುದುಮಾ ಮುನಿವೃಂದಾರಕಂ ಧರ್ಮ ವೃದ್ಧಿ ಪುರಸ್ಸರಂ—

[2]ಲಕ್ಷ್ಮ್ಯಾಃ ಶ್ರಿ[2] ಪದಂ ನಿಧಿರಸಾವಮೃತಸ್ಯಧಾತೋ
ರತ್ನತ್ರಯಸ್ಯ ಭುವನತ್ರಿತಯಸ್ಯಸೀಮಾ
ಚಂದ್ರೋದಯಾಯ ಸುಕವೀಶ್ವರಶೇಖರಾಯ
ದೇಯಾಚ್ಚುಭಂಸಿರವಧಿರ್ಜಿನಬೋಧಸಿಂಧುಃ

ಎಂದೀಯೆ ತಚ್ಚರಣಾ[3]ರ್ಪಿ[3]ತ ಪುಷ್ಪಮಾಲೆವೆರಸು—

ಪದೆಪಿಂ ಸೌಂದರ್ಯಸಂಕ್ರಂದನಸ[4]ಧಿಕತೆ[4]ಯಂ ವಿಶ್ವವಿದ್ಯಾವಿನೋ[5]ದಂ
ನಿಧಿ[5]ಯಂ ಶೃಂಗಾರಕಾರಾಗೃಹಸಮುಳತೆಯಂ ರೂಪಕಂದರ್ಪದೇವಂ
ಮುದಮಂ ಸಂಗೀತಗಂಗಾಧರಸ[6]ಮುಳತೆ[6]ಯಂ ನಿತ್ಯಚಂದ್ರೋದಯಂ ಸಂ
ಪದಮಂ ಕೊಳ್ವಂತೆ ಕೊಂಡಂ ಮುನಿಯ ಪರಕೆಯಂ ಕಾವ್ಯಕರ್ಣಾವತಂಸಂ ೧೦೨

ಗದ್ಯ

ಇದು ವಿದಿತಪ್ರಬಂಧವನವಿಹಾರಪಂಡಿತಪರಮಜಿನಚರಣರಮ್ಯ ಹರ್ಮ್ಯಾಚಳೋಚ್ಚಳಿತ
ನಖಮಯೂಖಮಂದಾಕಿನೀಮಜ್ಜನಾಸಕ್ತಸಂತತೋತ್ಸಿಕ್ತದಾನಾಮೋದಮುದಿತ
ಬುಧಮಧುಕರಪ್ರಕರ ಕವಿರಾಜಕುಂಜರವಿರಚಿತಮಪ್ಪ ಲೀಲಾವತೀ
ಮಹಾ ಪ್ರಬಂಧದೊಳ್ ಇಂದ್ರಕೂಟಜಿನಾಲಯವರ್ಣನಂ
ಅಷ್ಟಮಾಶ್ವಾಸಂ

[1] ಬಂ (ಖಗ) [2] ಅಕ್ಷ್ಮಾ (ಘ) [3] ರ್ಚಿ (ಕ ಘ) [4] ದಿತತಿ (ಖ ಗ)
[5] ದಾಕ್ಷ್ಯದ (ಕ) [6] ನುಪಮೆ (ಕ)

# ನವಮಾಶ್ವಾಸಂ

ಶ್ರೀವರನಾ ಜಿನನಿಳಯದೊ
ಳಾವ್ರೊತ್ತುಂ ತಳರದಾ ಮುನೀಶ್ವರಪದರಾ
ಜೀವಮನೋಲಗಿಸುತ್ತುಂ
ಭಾವಕನಿಕರಂ ಕೃತಾರ್ಥನಿರೆ ಕೆಲದಿವಸಂ ೧

ನೀಳಲ ಕಂಪನೊಟ್ಟಿ ನಳಿನಂಗಳನಳ್ಕಿಸಿ ಬೆಳ್ಮುಗಿಲ್ಗಳಂ
ತೂಳಮನೆತ್ತು[1]ವಂತೆಪೆದು[1] ಸೋಗೆಯ ಪೀಲಿಯ ಬೇರನೆತ್ತಿ ಹಂ
ಸಾಳಿಯ ತುಪ್ಪುಬಂ ತುಟಿದು ಪಕ್ಷಿಮದಿಂ ಬಡವಾಗಿ ಬರ್ಪ ಮೆ
[2]ಲ್ಾಗ[2]ಳಿಯನೊತ್ತಿ ತೀಡಿದುದು ಮೂಡಣ ಗಾಳಿ ಹಿಮಪ್ರ[3]ವೇ[3]ಶದೊಳ್ ೨

ಇಂದಾ[4]ರಂ[4] ಕುಳಿರ್ದಪ್ಪುದಿಂದು ಪಗಲುಂ ಮೆಯ್ಕೋಡಿತಿಂ[5]ದೊ[5]ಳ್ಪಿಸಿಲ್
ನಾಂದಂತಿರ್ದಪುದಿಂದು ಪಾಲ ಬಸಿಱುಂ ಬಂದಂತಿರಂದಿಂತು ನೀರ್
ಪೊಂದಿತ್ತಿಂ[6]ದರೆ[6]ಜಾವಮಾಯ್ತು ಮು[7]ಗಿ[7]ದತ್ತಿಲ್ಲುತ್ಪಳಂ ಪಂಕಜಂ
ಕುಂದಿತ್ತಿಂದೆಲೆ ಪೊಕ್ಕುದಕ್ಕುವಿಳೆಯೊಳ್ ಹೇಮಂತ[8]ಮೇ ಮಂತ[8]ಣಂ ೩

ಕರಿಣೀಪೇಚಕಮಂ ತುಡುಂಕದೆ ವನೇಭಂ ಕಾಮುಕರ್ ಕಾಮಿನೀ
ಪರಿರಂಭಸ್ಪೃಹರಾಸೆಗೆಯ್ಯರೆ ರತವ್ಯಾಪಾರಮಂ ಪುಲ್ಲೆಯುಂ
ಹರಿಣಂಗಳ್ ನಡೆನೋಡಲೊಲ್ಲವೆ ಹಿಮವ್ಯಾ[9]ಪಾರ[9]ದಿಂ ಬಿಲ್ಗೆ ಕೆ
ಯ್ವುರಲೇನಾಱನೊ ಪೂವಿಸಂಬು ತನಗಿಲ್ಲಾ[10]ಗಿ[10]ರ್ದನೋ ಮನ್ಮಥಂ ೪

ಬಂದೆ ಕುಂದಮುಲರ್ದತ್ತು ಗಾಳಿಗೊ
ಲ್ದೊಂದಿತೊಂದೆ ಗುಣತು[11]ಧ್ವಗ[11]ವ್ರಜ
ಕ್ಕೊಂದೆ ಮಗ್ಗುಲಮುರ್ದತ್ತು ಪೊತ್ತಡ
ರ್ದೊಂದೆ ಬೆಳ್ಳಿ ಬೆಳಗಿತ್ತು ವಾಗಿಯೊಳ್ ೫

ಮುಗಿಯೆ ಕರದ ಕಂಜಂ ವಾಜಿಗಳ್ ಸುರ್ಕೆ ಸೂತಂ
ಸುಗಿದು ಪೆಬವನಾದಂತೈಕಿಲಿಂ ಪೆರ್ಸರಂಗಳ್
ತೆಗೆಯೆ ರಥದ ಕೀಲಂ ಕಿ[12]ಬ್ಬಿತ್ತು[12] ಪೊತ್ತಿಕ್ಕೆ ಕಣ್ಗೊಳ್
ಪುಗೆ ಪೊಗೆ ರವಿ ಸಾರ್ತಂದೂದುವಂ ಪೋಪ ಕಿಚ್ಚಂ ೬

---

[1] ವಂತ. . . (ಕ) ತಂ ತಳಿತು (ಫ) [2] ಯ್ಾಗ (ಕ ಫ) [3] ದೇ (ಕ ಫ) [4] ದಂ (ಫ) [5] ದ (ಕ ಫ) [6] ಬರಿ (ಫ) [7] ರಿ (ಫ) [8] ಮಂ. . . (ಕ)ಮಂ ಮತ್ತ (ಫ) [9] ಘಾತ (ಕ) [10] ದಿ (ಫ) [11] ದ್ವನ (ಕ) [12] ತ್ತು (ಖ ಗ)

ತುಹಿನಂ ತಾಗುಗುಮಂಭೋ
ರುಹಮಂ ಕರಗತಮನೆಂದು ಕೊಂಡಾಡುವವೋ
ಲಹಿಮಕರಂ ಪೊಡೆಯಿಸುವಂ
ದಹನಾಶೆಗೆ ರಥಮನರುಣನಿಂ ದಿಸಮುಖದೊಳ್ ೭

[1]ಮಾ[1]ಸರಮೆನೆ ಪಾರದದಿಂ
ಪೂಸಿದವೋಲ್ ಪೊಸ್ನ ಮುಕುರಮಂ ಹಿಮಲಿಪ್ತಂ
ನೇಸಱ ಬಿಂಬಂ ತಿಂಗಳ
ಕೂಸಿಸವೋಲ್ ಕೋಡುತಿ[2]ರ್ದು[2]ದಂದಿನ ದಿಸದೊಳ್ ೮

ಚಳಿಗಳ್ಕಿ ಕಱುಯ ಪೊಸಕಂ
ಬಳಿಯಂ ಮುಸುಕಿದವೊಲಗ್ನಿಯುಪ[3]ಗ[3]ತ[4]ತಾ[4]ರ್ಣಾ
ನಳರಾಶಿಯೆಸೆದುವಂತ
ರ್ಜ್ವಳದುಲ್ಮುಕಮೊಟ್ಟೆ ಪೋಗೆ ಪಥಿಕರ್ ಪಥದೊಳ್ ೯

ಬಿಸಿಲೆಂದು ಸಾರ್ದು ಕೊಂಜಿನ
ಕಿಸಲಯಮಂ ಕೂ[5]ಂಚೆ[5] ಸಲು[6]ಗೆ[6] ಸುರಿವೆಲೆಯ ಹಿಮ
ಪ್ರಸರದೊಳೆ ನಾಂದುದೇಂ ಲಂ
ಘಿಸಲಾರ್ತುದೆ[7]ಕೋಡಸೋ[7]ಡಿ ತುಹಿನಾಗಮದೊಳ್ ೧೦

ಕೊಂಕೊಳಲೆಗಳಡಿಯಿಟ್ಟು ಕು
ಱುಂಕಿದ[8]ಸಱು[8]ಗೆಱುಯ ಮೀನುಮಂ ಮಿಡಿಚೆಯುಮಂ
ಸಂಕಮೆನೆ ಕಾ[9]ಯ್ತುವೊಲ್ಬೆ[9]
ೞ್ಕಂಕಿಗಳಂ ಪೊತ್ತುವದಱ ತಟರುಹತ[10]ತಿಗಳ್[10] ೧೧

ಕೊಂಕೊಳಲೆ ಕೊಳಲೆ ನಡೆಯಲೊ
ಡಂ ಕೆಸಱುನಿಸುಟಿಯೆ ಸುಟಿಯೆ ನೀರ್ಮುಳುಗಿದ ಮೀ
ನಂ ಕಳಲೆ ಕಳಲೆ ಚಂಚುವು
ಟಂ ಕರ್ದುಕಿದ ಜಗುಳೆ ಜಗುಳೆ ಸಾರ್ದತ್ತು ಬಕಂ ೧೨

ತಡಿವಿಡಿದು ನಡೆದು ಮೆಲ್ಲಗೆ
[11]ತಡಾಗಜಳ[11]ದೊಳಗೆ ಪೊಳೆವ ನಿಜಚಂಚುಗಳಂ
ಮಿಡುಕುವ ಮೀಸ್ಗೆ ತ್ತೊಡರಿಸಿ
ತುಡುಕಿದುವಡಿಗಡಿಗೆ ಬಾಳಬಗ[12]ಸಂತತಿ[12]ಗಳ್ ೧೩

---

[1] ಧೂ (ಫ) [2] ರ್ಪು (ಕ ಫ) [3] ರ (ಕ) [4] ಕ (ಕ) [5] ಬ (ಕ ಫ) [6] ೧ (ಕ ಫ) [7] ಕೊಂಡಕೋ (ಫ) [8] ವರು (ಕ) [9] ಯ್ತು ಕೊಳ್ಬೆ (ಖ ಗ) [10] ರು . . . (ಕ) ತಿಯೊಳ್ (ಫ) [11] ಮಡುಗುಜಲ (ಫ) [12] ನಿಕರಂ (ಕ ಫ)

ಕೊಳಗಳೊಳಗಿಂದೆ ಪೊಱಮ
ಟ್ಟೆಳವಿಸಿಲಂ ಕಾ[1]ಯು[1]ತಿರ್ದುವಾವೆಗಳೆಳೆಮೀನ್
ಪೊಳೆದೊಡಮೊಳಪುಗದಿರ್ದುವು
ಜಳಾಶಯಪ್ರಾಂತದೊಳ್ ಬಕೋಟಕುಟುಂಬಂ ೧೪

ಖಂಡಿಸೆ ಬಿಸಕಳಿಕೆಗಳಂ
ತುಂಡಂ ಕುತ್ತಿಱಿಯೆ ಬಿದಿರ್ದು ಬಳ್ಕಿಸಿ ತಲೆಯಂ
ಕೊಂಡೋಡಿ ತೊಡೆದುಕೊಂಡುವು
ಮಂಡಳಿಸಿದ ಪಕ್ಕದಲ್ಲಿ ಕಳಹಂಸಂಗಳ್ ೧೫

ಮಱಿದುಂಬಿಗಳಂಬುರುಹದ
ಸಱುಗಂಪಿಂ ಬಳೆದುಮವಱ ಸಿರಿ ತೊಲಗಲೊಡಂ
ಮಱೆ[2]ದೆ[2]ಱಗಿ ನೋಡ[3]ದು[3]ತ್ಪಲ
ಕೆಱಗಿದುವು ವಿಜಾತಿಯಲ್ಲಿ ಗುಣಮಱಸುವುದೇ ೧೬

ನೆನೆಯ[4]ಲೊ[4]ಡಮೆತ್ತಿ ಮನದೊಳ್
ತನಿಗಿರ್ಚಂ ಹಿಮಮನೋಡಿಸುವ ನವಯುವತೀ
ಸ್ತನಭರಮಂ ತೆಗೆದಪ್ಪಿದ
ಮನುಜ[5]ರ[5]ದೇನಱಿವುದರಿದೆ ಮಾಗೆಯ ಮೂಗಂ ೧೭

ನಡುಗುತ್ತುಂ ನೆನೆದಂತೆ ವಲ್ಲಭೆಯರಂ ತಡ್ಕೈಸುವರ್ ತಾವೆ ತ
ಮ್ಮೊಡಲಂ, ಮೆಯ್ಯ್ನವಿರುರ್ಚೆ ತಮ್ಮಧರಮಂ ತಾಮೀಱ್ದು ದಂತಾಗ್ರದಿಂ
ಪಿಡಿವರ್, ಪಾಂಥರೆನಲ್ಕೆ ತ[6]ಳ್ತು ತರುಣೀ[6]ಸೋಷ್ಣಸ್ತನದ್ವಂದ್ವಮಂ
ಬಿಡಲೇನಾರ್ಪರೆ ಪುಣ್ಯವಂತರಧಿಪರ್ ತಾಮಂತೆ ಹೇಮಂತದೊಳ್

ನಂದುವ ಪುಲ್ಲ ಕಿಚ್ಚಿನೊಳೆ ಕಪ್ಪಡಮಂ ಪರಿದಿಕ್ಕಿ ಪಾಂಥನುಃ
ಪೆಂದಿರದೂದೆ ಪೊಣ್ಮೆ ಪೊಗೆ ಕಣ್ಣೊಳಗಂ ಪುಗೆ ಬಾಷ್ಪ[7]ಬಿಂದು[7] ಜೀ
ಱ್ತಂದು ತದಗ್ನಿಯಃಂ ನದಿಪಿದತ್ತ್ರಕಟಾತನ ಬೆನ್ನ ಕಪ್ಪಡಂ
ಬೆಂದುದು ಬಂದುದಾಗಳೆ ಹಿಮಾನಿಳನಿಂತುಟು [8]ಪಾಂಥರು[8]ಬ್ಬಸಂ

ಪೊಸಪುಲ್ಲೊಳ್ ಕಿಚ್ಚನಿಟ್ಟೊದಿದೊಡುರಿದುರಿ ಕೂರ್ಚಾಗ್ರಮಂ [9]ಪತ್ರೆ[9]ಕೆಯ್ಯಿಂ
ಪೊಸೆದುಂ ವಸ್ತ್ರಾಗ್ರದಿಂ ಮೋದಿಯುಮುಗುಳ್ವಡೆಯಿಂ ಮೊಕ್ಕಳಂ ನಾಂದಿಯುಂ ನಂ
ದಿಸಲೆಂತುಂ ಪಾಂಥನಂ[10]ದಾ[10]ಱದೆ ನಡುಮಡುವಂ ಪೋಗಿ ಬಿರ್ದೈಕಿಲಿಂ ಕಂ
ಪಿಸುತಿರ್ದಂ ಪುಲ್ಲ ಕಿರ್ಚುಂ ಪೊಲೆಯನ ಕೆಳೆಯುಂ ಮಾಡದಾವಂಗೆ ಕೇಡಂ ೨೦

---

[1] ವು (ಕ ಫ) [2] ದೊ (ಕ) [3] ಲು (ಕ) [4] ದೊ (ಫ) [5] ನ (ಕ) [6] ತ್ತರುಣಿಯಂ (ಫ) [7] ವಾರಿ (ಫ) [8] ಪಾಪದುರ್ಬಿನಿಂ (ಕ) [9] ಕರ್ಚೆ (ಕ ಫ) [10] ತಾ (ಕ)

ತಳಿರೊಳ್ ಮುಚ್ಚಿಟ್ಟು ಕೂಸಂ ಶಬರಿ ತೆಗೆದು ನಿಶ್ಚೇಷ್ಟಮಾಗಿರ್ದೊಡಂ ಕಣ್ಗಳ ನೀರಂ ತೀವಿ ಬೇಗಂ ತೊಡೆದು ಹಿಮಕಣಾನೀಕಮಂ ತೇಂಕುದಾಣಂಗಳನಂಟಂಟೆಲ್ಲಿಯುಂ ಕಾಣದೆ ಹರಣಮಸತ್ಯುಷ್ಣ[1]ದಿಂ[1] ಸುಯ್ಯೆ ಸುಯ್ಯಿಂದೆಳಗೂಸೆಚ್ಚತ್ತು ಕಾವ್ದಾವೆನೆ ತೊಱೆದ ಕುಚಾಗ್ರಂಗಳಂ ಸೀಡುತಿರ್ದಳ್ ೨೧

ಜಡನೆಂದಜನಂ ನುಡಿವರ
ನುಡಿಗಕ್ಕೆ ಶುಭೋದಯಂ ಸ್ವಜನಕಾಂಬುಜಮಂ
ಕಿಡಿಸುವ ಶಿಶಿರಾಗಮಮಂ
ಪಡೆದಪನಿನ್ನವು ವಿವೇಕವಿಕಳತೆಯೊಳವೆ ೨೨

ಕಮಳಿನಿಯ ಸಿರಿಯನಿನನ
ಸ್ತಮಿಸಲೊಡಂ ಕವರೆ ಶಿಶಿರರಾಜಂ ಪಿರಿದುಂ
ತಮಗುತ್ಸವಮಾದಂತಿರೆ
ಕುಮುದಂಗಳ್ ಪಳಚನಲರ್ದುವಬ್ಜದ ಕೆಲದೊಳ್ ೨೩

ಗಿರಿಗಳ್ ಜಂಗಮವಪುಗಳ್
ಸಿರದೊಳ್ ಸಸಿದರಲೆಯಂತೆ ಮುಸುಱಿದ ಮಂಜಿಂ
ನರೆಯಂ ಪೊತ್ತವೊಲಿರ್ದುವು
ನಿರವಸ್ಥಿತದಶನಘನಗುಹಾಮುಖತತಿ[2]ಗ[2]ಳ್ ೨೪

ಕೃತಶೀಘ್ರಸ್ನಾನಮುನ್ನರ್ತನವಿಕೃತಕರಾಕೃಷ್ಟವಸ್ತ್ರಾಂ[3]ತರಂ[3] ವಿಸ್ತೃತದರ್ಭಂ, ಗದ್ಗದೋಚ್ಚಾರಿತಜಪಮುಪಸಂಜಾತರೋಮಾಂಚಮಾಕುಂಚಿತಗಾತ್ರಂ ವಹ್ನಿಸಂದೀಪನಪಟು [4]ಪಟುರ[4]ಕ್ತೇಕ್ಷಣಂ, ನೀರತೀರಸ್ಥಿತಮಿರ್ದತ್ತಂದು ವೈಭಾತಿಕವಿಧಿವಿಹಿತಾಮೋಘಮಾಘಂ ದ್ವಿಜೌಘಂ ೨೫

ಸರಸೀತೀರಂಗಳೊಳ್, ಬೆಟ್ಟಿಱಿಗಳ ತಡಿಯೊಳ್, ಸಿಂಧುಕೂಲಂಗಳೊಳ್
ಶೀಕರಮುಂ ನೀಹಾರಮುಂ ಮುತ್ತಿನ ಮಿಱುಪನಣಂ ಮೆತ್ತಿದಂತೊಪ್ಪೆ ಮೆಯ್ಯೊಳ್
ಪರಮಾತ್ಮಧ್ಯಾನವಹ್ನಿಜ್ವಳಿತರಚಳಿತರ್ ಜೈನಯೋಗೀಶ್ವರರ್ ಭಾ
ಸ್ಕರಪಾ[5]ತೋ[5]ತ್ಥಾನವೇಳಾವಿಹಿತನಿಯಮದಿಂದಂದು ಕೆಯ್ಯಿಕ್ಕಿ ನಿಂದರ್

ಸರಸೀವಾರ್ಬಿಂದು[6]ವಂ[6] ಪೊತ್ತಡಕಿ ಗಡಣದಿಂ ಗಾಳಿಗಳ್ ಪಾಯ್ದು ಪೊಯ್ಯು
ತ್ತಿರೆ ನೀಹಾರಾಂಬು[7]ವ[7]ಲ್ಲಲ್ಲುಗುತಿರೆ ಪುಳಕಸ್ಪಂದಶೂನ್ಯಂಗಳಪ್ರ
ಸ್ಫುರಿತಂಗಳ್ ಬೆಳ್ವಾಸಂಗಳೊಳಚಳಶಿಲಾಸ್ತಂಭಸಂಘಾತಮೆಂಬಂ
ತಿರೆ ಕೆಯ್ಯಿಕ್ಕಿರ್ದ ಯೋಗೀಶ್ವರವರವಪುಗಳ್ ಕಾವುವಕ್ಕೆಮ್ಮನೆಂದುಂ ೨೭

---

[1] ಮಂ (ಕ) [2] ಯೊ (ಘ) [3] ಚಳಂ (ಕ) [4] ವಟುದ (ಕ) [5] ದೋ (ಕ ಘ)
[6] ಗಳ್ (ಘ) [7] ವೆ (ಕ ಘ)

ಅಂತು ಬಂದ ಹೇಮಂತ[1]ಶಿಶಿರ[1]ಂಗಳಿಂ ಯಶೋಮರುನ್ನದಿಯ ಹಿಮವಂತನೆಂತಾನುಮಂತರ್ಜ್ವಳದನಂಗದಹನನತಿಕ್ರಮಿಸಿ ಮಿಸುಗುವಿಂದ್ರಕೂಟಜಿನಾಲಯದಿಂ ತಳರ್ದು ದೇವಗಿರಿಗೆ ಬಂದು ಜಿನಬಿಂಬಕದಂಬಕಮಂ ವಂದಿಸಿ—

ವಿತರತು ಧೃತಿಮನವರತಂ ವಿತತಶುಭಸ್ಫುರಮಹೀಧರೋ ಮಹ್ಯಂ
ಧೃತಜಿನಬಿಂಬಕದಂಬಂ ಸತಾಮಿವಾತ್ಯುಜ್ವಲಶ್ಚೇತಃ

ಎಂದು ದೇವಗಿರಿಯಂ ಸ್ತುತಿಸಿ ಬಲದೊಳಿಕ್ಕಿ ಪೋಪಂಗಾ ಗಿರಿಯ ಲತೆಯ ಕುಡಿಗಳಡ್ಡಂಬಾಯ್ದೀ ಗಿರಿಯ ತರುಶಾಖೆಗಳಸಡುರ್ವುವೀ ಗಿರಿಯ ನಿರ್ಜರಜಲಶೀಕರನಿಕರಂಗಳಾ ಗಿರಿಯ ಸೂರ್ಯಮಣಿಶಿಖಿಕಣಂಗಳಂ [2]ನೆ[2]ದಿಪುವಾ ಗಿ[3]ರಿಯ ಮಣಿಮರೀಚಿಗಳಾ[3]ಗಿರಿಗುಹೆಯ ತಿಮಿರಂಗಳನಳಱುಸುವುದೀ ಗಿರಿಯ ಮುಗಿಲ್ಗಾ ಗಿರಿಯ ನೆ[4]ವಿ[4]ಲ್ಗಳಾಡುವುವೆನಿಸಿ—

ತೊಳಗಿದುದಂಬರಕ್ಕೊಗೆದು ಪಚ್ಚೆಯ ಕಾಂತಿ ಪಸುರ್ತ ಪಲ್ಲವಾ
ವಳಿಯೆನೆ ವಜ್ರಕಾಂತಿ ನನೆಯುರ್ಬೆನೆ ಮೌಕ್ತಿಕಕಾಂತಿ ಪುಷ್ಪಸಂ
ಕುಳಮೆನೆ, ನೀಳಕಾಂತಿ ಮಱಿದುಂಬಿಯ ಪಿಂಡೆನೆ, ಶೋಣಕಾಂತಿ ಕೆಂ
ದಳಿರೆನೆ ನಾಕದಿಂದಿಟಿವ ನಂದನದಂತೆ ಮಯೂಖನಿರ್ಝರಂ

ಆ ಮಯೂಖನಿರ್ಝರಮೆಂಬ ರತ್ನಶೈಲಮಂ ಶಿಲಾಮಣಿಸುರ[5]†[6]ಶೈಲನಾ ದೇವಶೈಲಮಹೀಪಾಲನ ಮಾಣಿಕದ ಮಲಗೆಂದೇ ಬಗೆಯುತ್ತುಮೆಯ್ದಿವರೆ—

ಜ್ವಳದರ್ಕಗ್ರಾವಮಂ ತಿಗ್ಮಕರನಮಳಮಾಣಿಕ್ಯಸಂತಾನಮಂ ನಿ
ರ್ಮಳ ಜಾತಿ ಜ್ಯೋತಿ[6]ರಾ[6]ಘಂ ಮೃಗಮೊಱಗಿದ ಚಂದ್ರಾಶ್ಮಮಂ ಚಂದ್ರಬಿಂಬಂ
ಪೊಳೆಯುತ್ತುಂ ಪೋಲೆ ನೀಳಾಚಳಮನಡಕಿಲಿಟ್ಟಂತೆ ತೋರ್ಕುಂ ತದುಚ್ಚಾ
ಚಳಚೂಡಾ ಚಕ್ರದೊಳ್ ಚುಂಬಿತಜಲಧರದಿವ್ಯಾಪಗವ್ಯೋಮಮೆಂದುಂ ೨೯

ನೀಳದ ಸರಿಗೆತ್ತೆಱಗಿದ
ಬಾಳಮಯೂರಿಗಳನೆತ್ತಿ ನೆಗೆವುವು ನಗದೊಳ್
ಗಾಳಿ ಕೊಳೆ ತಳರ್ವ ಜಳಧರ
ಜಾಳಂ ಕೆಳೆತನಕೆ [7]ಮೆಚ್ಚಿ[7] ಕೊಂಡಾಡುವವೋಲ್ ೩೦

ಮುತ್ತುವ ಮುಗಿಲಿಂದುಗುವೆಳ
ಮುತ್ತುಂ ಕಿಸುಗಲ್ಲುಮಲ್ಲಿ ಬನಗಟ್ಟಲೆ ಪ
ರ್ಬುತ್ತಿರೆ ಖಚರರ್ ಬೆಳಗಿನ
ಬಿತ್ತುಗಳಂ ತಳಿದ ತೆಱದೆ ತೊಳಗಿದುವದಱೊಳ್ ೩೧

---

[1] ಶೀತಂ (ಘ) [2] ನಂ (ಕ ಘ) [3] ಸೂರ್ಯಮಣಿ ಶಿಖಿಕಣಂಗಳನಂದಿಪುನಾ (ಘ)
[4] ಡು (ಘ) [5] ಶ್ನ (ಘ) [6] ತಾ (ಕ) [7] ಚುಂಬಿ (ಕ)

ಸೋಗೆಯ ಸೋಕ[1]ಕ್ಕಿಂದುಂ[1]
ಪೋಗ[2]ದ[2] ಬಹುರತ್ನರುಚಿರ[3]ರು[3]ಚಿ ಸುರಚಾಪ
ಶ್ರೀಗಂ ಬಯಸಿರ್ಪಂತೆವೊ
ಲಾಗಳುಮಗಲವು ಮುಗಿಲ್ಗಳಾ ನಗತಟಮಂ ೩೨

ಬಣಗಿಸುವರ್ಕಂಗಗಿದೊಂ
ದಣೆಯರಮೊಂದೆವನಿವಿಡುವ ಮುಗಿಲಿಂ ಮುಸುಱಿ
[4]ದರ್[4]ಣೆಯ [5]ಮ[5]ಱುವೊಕ್ಕ [6]ದು[6]ರ್ವಾ
ರಣಮೆನೆ ಮರಕ್ತದ ಕಲ್ಗಳೊಪ್ಪಿದುವದಱೊಳ್ ೩೩

ನೀಳದ ಕೋಡುಂಗಲ್ಗಳ
ಲೋಳದ್ಯುತಿ ಮುಸುಱೆ ಮುಸುಳೆ ಮೇಗಣೆಸಿಂ ತಾ
ರಾಳಿಯ [7]ಹಾರಿಯ[7] ಬಟ್ಟೆಗೆ
ಶೈಳಂ ಬ[8]ರ[8]ತೊ[9]ಲ[9]ಗಿದಂತೆ ಕೆಲದೊಳ್ ತೋರ್ಕುಂ ೩೪

ಕತ್ತುರಿಮಿಗಗಳ ಮಗಮುಗಿ
ಸುತ್ತುಂ ಸೊವಡೆರ್ದ ಪಕ್ಕೆದಾಣದ ಪುಲ್ಲಂ
[10]ಮುತ್ತಿದ[10] ಮದಾಳಿ ಚೆಲ್ವಂ
ಮುತ್ತಿದು[11]ದ[11]ಗತಟದೊಳೊಗೆದ ತೃಣಮಣಿಗಣ[12]ದಿಂ[12] ೩೫

ಪರಿದಡರ್ದ ಪಂಚರತ್ನದ
ಮರೀಚಿಯಿಂ ನೀಳ್ದ ಪಳಿಕಿನೊಡ್ಡುಂಗಲ್ಗಳ್
[13]ಬ[13]ರೆದಿರ್ದ ಭಿತ್ತಿಯಂತಿರೆ
ಬರಮಂ ಕುಡುವುವು ನಿರೀಕ್ಷಣಕ್ಕಗತಟದೊಳ್ ೩೬

ಕೋಡಿಸುವ ಚಂದ್ರಕಾಂತದ
ಕೋಡುಂಗಲ್ಗಳಿನೊಸರ್ತ ರಸದ ಪೊನಲ್ಗಳ್
ಸೇಡುವಡೆ ಕವಿಯೆ ಗಿರಿಗೆಡೆ
ಯಾಡುವ ವಿಧು ನಾಂದು ಸನೆದು ಹಿಮಕರನಾದಂ ೩೭

ಪೂಗೊಯ್ವ ಖಚರಿ ಶಿಖರದ
ಪೂಗಿಡು[14]ಗಳ್[14] ಕೊಂಬಿನಲ್ಲಿ ತೊಡರ್ದಿರೆ ಮಿಾನ್ಗಳ್
ಪೂಗೆತ್ತು ತುಡುಂಕುವಳೆನ
ಲಾ ಗಿರಿಯುನ್ನ[15]ತಿಯ[15]ನಿನ್ನದೇಸಂ ಪೊಗಳ್ವಂ ೩೮

---

1 ಕ್ಕೈಲರುಂ (ಘ) 2 ದು (ಘ) 3 ಶು (ಘ) 4 ದೊರ್ (ಕ ಘ) 5 ನು (ಘ) 6 ದೂ (ಕ ಘ) 7 ಹರಿತಕ (ಗ) . . . ತ (ಘ) 8 ರೆ (ಕ) 9 ಡ (ಘ) 10 ಸುತ್ತುವ (ಕ) 11 ವ (ಘ) 12 ಮಂ (ಘ) 13 ಪ (ಘ) 14 ವಿನ (ಘ) 15 ತಮ (ಖ ಗ)

ಅಪ್ಪಿದೊಡಗಶಿಖರದ ಕೊಳ
ದುಪ್ಪಳಮಂ ಕಂಪು[1]ವ[1]ತ್ತಿ ಪಾಯ್ವಳಿತತಿ ತಾ
ನಪ್ಪುದಿದೆನ್ನದೆ ಮಱೆದುಮಿ
ದಪ್ಪೊಡೆ ಕಱೆಯೆನ್ನೆ ನಿಂದುಬಿಂಬದ ಕುಱುಪಂ ೩೯

ಕಱೆದಾಲಿವರಲ್ಗನಣೆ
ದೆಱಪ ಮುಗಿಲ್ದುಱುಗಲೆಸೆದುವಗಶಿಖರಂ ತ
ಳ್ತಿಱಿಯೆ ಸುರಿದುಡುಗಳಂ ಪಱಿ
ವಱಿದೊಯ್ಯನೆ ಬೀಟ್ವ ಗಗನಭಂಗಂಗಳವೊಲ್ ೪೦

ಮಱೆದು ಗಿರಿತಟದೊಳೆಲ್ಲಿಯು
[2]ಮೊ[2]ಱಗಲೊಡಂ ಪೊರೆದು ಪೊನ್ನ ರಜದಿಂ ಮೆಯ್ಗಳ್
ಮಿಱುಮಿಱಿನೆ ಮಿಱುಗೆ ಪೊಸಪೊ
ಮ್ಮಱಿಯಂತಿರೆ ಪರೆವುವಲ್ಲಿ ಹರಿಣಗಣಂಗಳ್ ೪೧

ಗಡಣದೊಡ[3]ನೆಱಗಿ[3] ಮುಗಿಲೊ[4]ಡೆ[4]
ದೊಡೆ ಪೆಱಗಿರಲಗಿದು ಗಗನಚರಿಯರ್ ಬಿನದಂ
ಬಡೆದು ಗಿರಿಶಿಖರದಿಂದಂ
ಕುಡುಮಿಂಚಂ ಪಿಡಿದು ಬಿಟ್ಟವೋಲ್ ಪೊಳೆದೊಗೆವರ್ ೪೨

ಅಂತೆಸೆಪ ಗಿರಿಯಿಂ ದೇವಗಿರಿಗೆ ಗೊಂದಣ[5]ದೆ [8]ಪಾಱುವ ವಿಯಚ್ಚರೀವಿಯಚ್ಚರರ ಕಟಿದ ಪೂಮಾಲೆಗಳಿನಿಸ್ಸುಗುವ ಕುಸುಮರಸದ ಸೊನೆಯಿಂ ನಾಂದು ಪರಮಾನಂದದಿಂ ನಿಂದು ಮಕರಂದಸುಂ ಗುಣಮಕರಂದಮಧುಕರಸುಂ ಆಗಳ್ ವೇಗಂ ನೋಡುತ್ತುಂ ನಡೆಯೆ ನಡೆಯೆ—

[6]ಮಾ[6]ಸಹಮೆಲ್ಲಿಯುಂ ನೆರೆವ ಖೇಚರದಂಪತಿಗಳ್ಗೆ ಕಂತು ಕೈ
ವೀಸಲೊಡಂ ತಿರ[7]ಸ್ಕ[7]ರಿಣಿಯಪ್ಪುವು ಬಾಯ್ದೆಱೆ[8]ಯೊ[8]ತ್ತೆ ವಾರಿಯಂ
ಸೂಸುವ ವಾರಿಯಂತ್ರಚಯಮಪ್ಪುವು ಚಿತ್ತಜತಾಪಮೆತ್ತೆ ನೀ
ರ್ವಾಸುಗಳಪ್ಪುವೀ ನಗಶನೀಲಮಣಿಪ್ರಭನೀರದಾದಿಗಳ್ ೪೩

ಬಾಡಿದ ಮಾಲೆವೂವೊಡೆದು ಸೂಸಿದ ಕೈವಳೆ ಘರ್ಮಗಂಧದಿ
ಪೋರ್ಡದ ಸುಯ್ಯೆಲರ್ ಸುರತಸೌರಭಮಂ ಬಲವರ್ಪ ತುಂಬಿಯ
ಬ್ಬಾಡಿದ ತಂಬುಲಂ ಕೆದಱಿ ಪೋದಲವಾರ್ಸಿನ ಕುಂಕುಮಂ ರತ
ಕ್ರೀಡೆಯನೆಯ್ದೆ ಸೂಚಿಸುವುವಲ್ಲಿಯ ಚೂತಲತಾಗೃಹಂಗಳೊಳ್ ೪೪

[1] ಪ (ಕ ಘ) [2] ಮೆ (ಘ) [3] ನೇಱಿ (ಘ) [4] ಗೆ (ಘ) [5] ದಿಂ (ಕ ಘ)
[6] ಧೂ (ಘ) [7] ಲ್ಕ (ಘ) [8] ಬ (ಕ ಘ)

ತಳೆದು ಪೆಗಲ್ಗಳಿಂದೆ ವಿಪರೀತರತಶ್ರಮಂದಿರೆ ಪಾಱಲಾ
ರ್ಪಳವಟಿದಿರ್ದ ಖೇಚರಿಯರಂ ನಖಜಕ್ಷತದಿಂದೆ ಬಾಸುಡೆ
ರ್ದೊಳುದೊಡೆಯಂ ಕಟಾಕ್ಷದೊಳೆ ಮೆಯ್ಮಱದೀಕ್ಷಿಸುತುಂ ನಿಜಾ[1]ಲಯಾ
ವ[1]ಳಿಗಳ ಬಟ್ಟೆದಪ್ಪಿ ಮಿಗೆ ಪಾಱುವರೀ ಗಿರಿಯೊಳ್ ನಭಶ್ಚರರ್ ೪೫

ಸವಿ ಸಮನಾಗೆ ಸು[2]ತ್ತಿ[2]ಟಿದ ತೋಳ್ ಸ[3]ತ[3]ವಾ[4]ದೆರ್ದೆಯಿಂ[4]ಪಲಂಪಸ
ಪ್ಪುವ ಬಗೆ ಬೀಗಿ ಬಾಯೊಳಗೆ [5]ಸಿಲ್ಕಿ[5]ದ ಬಾಯ್ ಬೆಱಗಾದ ಬೇರ್ಗೆ ನೋ
ಡುವ ಜವವೋಡಿದಚ್ಚರತದಚ್ಚುಡಿದಂತಿರೆ ಕಾಮಸೌಖ್ಯದಿಂ
ನವೆದವೊಲಿರ್ಪುವಲ್ಲಿ ಗಗನೇಚರದಂಪತಿಗಳ್ ರತಾಂತದೊಳ್ ೪೬

ಮುಳಿದು ಕನಲ್ದ[6]ಗಲ್ಲಿ[6]ಸಿಯರಂ ಬರೆದಂಗಜಮೋಹದಿಂ ಶಿಳಾ
ಫಳಕಮನಪ್ಪಿ ಮೆಯ್ಯ ಬೆಮರಿಂದಮೆ ನಲ್ಲರ ಮೆಯ್ಯನಾವಗಂ
ತೊಳೆದವೊಲಾಗಿ ಪೋಗೆ ಮಗುಳ್ದೀಕ್ಷಿಸಿ ಕಾಣದೆ ಮಾಣದಂತದುಂ
ಮುಳಿದೆಲೆ ಪೋದುದೆಂದಱದಪರಾ ಗಿರಿಯೊಳ್ ಸುರಸಿದ್ಧಮುಗ್ಧೆಯರ್ ೪೭

ತರಳತಟಿಲ್ಲೋಚನದಿಂ
ಗಿರಿಗೆಱಗುವ ಮುಗಿಲ ನೋಡಿ ಮಿಗೆ ನಾಣ್ಚಿ ಕಂಪಿಂ
ಪುರುಷಾಯಿತದಿಂ ಪ್ರಿಯರೊಳ್
ನೆರೆವ ನಭಶ್ಚರಿಯರಗಿದು ಪಾಱುವರಿದಱೊಳ್ ೪೮

ಸುರತಶ್ರಮದಿಂ ಪಾಱುವ
ಭರಮಿರ್ಕೀರಡಿಯನಿಡಲುಮಳವಿಲ್ಲದೆ ಖೇ
ಚರವರಮಿಥುನಂಗಳ್ ಭೂ
ಚರ[7]ವರ[7]ಮಿಥುನಂಗ[8]ಳಾ[8]ದುವೀ ಗಿ[9]ರಿವರ[9]ದೊಳ್ ೪೯

ಬೆರಸದಿರೆ ನಣ್ಪಿನಿಂ ಕಿ
ನ್ನರಿಯಿಂಚರದೊಡನೆ ತನ್ನ ಕಿನ್ನರಿಯ ನರಂ
ಬೆರಲಂ ಮಿಡಿಯದೆ ಮಱೆದುಂ
ಬೆರಲಿಂ ಮಿಡಿದಪರೆ ಕಿನ್ನರರ್ ಕಿನ್ನರಿಯಂ

ನಸುನೋಂಕಿ ಪಾಡಿ ಕಿನ್ನರಿ
ರಸಮೊಸರ್ವಿನಮೊಸರ್ವ ಬೆಮರ ಬೆರಲ್ಪನಿಯಿಂ ತ
ಣ್ಣಸಗೊಂಡ ತಂತಿಗಳನಾ
ಱಸುವರ್ ಬಿಸುಸುಯ್ದು ಕಿನ್ನರರ್ ಬೀಣೆಗಳಂ ೫೧

---

[1] ಳಿಯಾದ (ಖ ಗ) [2] ತ್ತ (ಕಘ) [3] ರ (ಘ) [4] ರ್ದೆರೆಯಂ (ಘ) [5] ಸೇಱ (ಘ)
[6] ರಲ್ಲಿ (ಖ ಗ) [7] ಘ ಪ್ರತಿಯಲ್ಲಿಲ್ಲ [8] ಳವೊಲಾ (ಘ) [9] ತಟ (ಘ)

ಪರಿಭವಿಸೆ ತಮ್ಮ ನೀ ಕಿ
ನ್ನರಿಯರ ದನಿ ಮೂಗುವಟ್ಟ ಕೋಕಿಲೆ ಮಧುಚೂ
ತರಸಾಸ್ವಾದನಮುದದಿಂ
ಕರೆವುವು ಕಡುಸೋರ್ಕಿದವರ್ಗೆ ಲಜ್ಜೆಗಳೊಳವೆ ೫೨

ಎಂದು ಪಾಱಿ ಪೋಪ ನವೀನವಿದ್ಯಾಧ[1]ರಿಯರ[1]ನೀಕ್ಷಿಸುತ್ತುಂ ವಿವೇಕ ವಿದ್ಯಾಧರನಾ ಭೂಧರನಿತಂಬಮಂ ನಿಜಮನೋಹರೀಪಯೋಧರನಿತಂಬಮಂ ಮುಟ್ಟುವಂತೆ ಮುಟ್ಟಿ ಪರಮಾನಂದಮಂದಮಾನಸನಾಗಿ ಮುಂದೆ ಮಂದೈಸಿದ ಮಾಣಿಕವಟ್ಟದ ಬೆಳಗುದೊಱೆಯೊಳ್ ಪಱಿಗೋಲಂತೆ ಪರಿವ ಕರಿಯ ಮುಗಿಲ್ಗಳನೇಱಿಸಿ ಭೂಚರ ತರುಣಿಯರ್ಗೆ ಗಗನಗಮನಮನಭ್ಯಾಸಂಗೆಯ್ಸುವ ಗಗನೇಚರಚತುರೆಯರುಮಂ, ಜಲಕ್ರೀಡೆಯಾಡಿ ಪೋದ ಕಿನ್ನರ ಕನ್ನೆಯರ ಕುಚಮಲಯಜದಿಂ ಬೆಳರ್ವಟ್ಟು ತೆರೆಗಟ್ಟಿದ ತಿಳಿಗೊಳಂಗಳುಮಂ, ಪಳಿಕಿನ ಪಾಸಱೆಗೆತ್ತು ಪಾಱಿ ಬಂದೆಱಗಿದ ಕಮಳಮನಗೆಯಿಡುವಂತೆ ಕಾಲನಿಟ್ಟಗಿದು ನೆಗೆದು ಕೆಲದ ಮುತ್ತಿನ ಪಡು[2]ಸೆಳೆ[2]ಗಳೊಳ್[3]ಮುಡಿಯ ಮುಗುಳ್[3]ನೀಡಾಡಿಯವತರಿಸುವ ವಿದಗ್ಧವಿದ್ಯಾಧರಿಯರುಮಂ, ಬಱಿದೆ ಮುಳಿದು ಪಾಱುಗೆಯ್ತದಿಂ ಕಣ್ದಪ್ಪಿ ಪಾಱಿ ರತ್ನಭಿತ್ತಿಗಳೊಳ್ ಪರಿವ ತಮ್ಮ ನೆಬಲ ಬಟಿಯನುಟಿಯದೆ ಪರಿದೋಪರ್ ಪಿಡಿಯೆ ಪಿಡಿದಂತೆ ಸಿಂದ ನೆಬಲ್ಗಳ ಕಾಲ ಮೇಲೆ ಕವಿದು ಬಿಟ್ಟಚ್ಚಿಗಂಗೊಳ್ವಿಚ್ಚೆಗಾಜರ ಕಣ್ಣಂ ಮುಚ್ಚುವ ಧೂರ್ತವಿಯಚ್ಚರಿಯರುಮಂ, ಆತ್ಮನಾಥನುಟ್ಟುದಂ ಸೆಳೆದು ಕಳೆಯೆ ಕೆಲದ ಮುಗಿಲನುಟ್ಟುಕೊಳಲ್ಪೋಪ ಮುಗ್ಧನಭಶ್ಚರಿಯರುಮಂ, ಕೇಳೀಕಲಹದಿಂದುಟಿದ ನೀಱೆಯನಱಿಸಿ ಮುಗಿಲ ಮಱೆಯೊಳ್ ಪೊಳೆವೆಳಮಿಂಚನಪ್ಪುವ ಕಾಮಾಂಧಖಚ[4]ರ[4]ರುಮಂ, ಮುನಿದು ಪೋದ ಮನಃಪ್ರಿಯರುನ್ನತಮಣಿಗಂಡಶೈಲಮನೇಱಿ [5]ಕೊ[5]ರಲಂ ನೀಡಿ ನೋಡೆ ನಸುದೋರ್ಪ ಕುಂಕುಮಾಂಕಿತಮುಖಮಂಡಲಮಂ ಮೂಡುವ ಚಂದ್ರಮಂಡಲಮೆ ಗೆ[6]ತ್ತು ಸು[6]ಗಿದು ಪಾಱುವ ಕಾಮಾರ್ತ ಖೇಚರರುಮಂ, ಒರ್ವನಪ್ಪಿ ಮದನಮೂರ್ಛೆಯನಿಕ್ಕಿ ಮತ್ತೊರ್ವನಂ ಚುಂಬಿಸುವ ಗಂಧರ್ವಗಣಿಕೆಯರುಮಂ, ಭುಜಲತೆಯಂ ಸೆ[7]ಮ್ಮಿ[7]ದ [8]ಭು[8]ಜಗಂಗೆ ನಿಜಾನುರಾಗಮನನುಕರಿಸುವ ನೆವದಿನಿಂದು ಕಾಂತದ ಕೇರ್ಗಳೊಳ್ ಪೊಳೆವಾತನ ನೆಬಲಂ ನಲಿದಪ್ಪಿ ಚುಂಬಿಸಿ ಪತಿಯ ಪೊರೆಯೊಳ್ ಪರಪುರುಷಪರಿಷ್ವಂಗಮಂ ದ್ವಿಗುಣಿಸುವಂತೆಯುಂ ನಿಜಸ್ವಭಾವಮನವಂಗೆ ತೋರ್ಪಂತೆಯುಮಿರ್ಪ ಕಿಂಪುರುಷವೇಶ್ಯೆಯರುಮಂ, ನೀಳರುಚಿಯ ಡಾಳಮಂ ಪೊಕ್ಕಗಲ್ದು ಪೋಗಿ ಮಣಿಶಿಲೆಯೊಳ್ ಮಾರ್ಪೊಳೆವ ತನ್ನ ನೆಬಲನಿನಿಯಳ್ಗೆತ್ತು ಚುಂಬಿಸುವ ಚಕ್ರವಾಕಂಗೆ ಪುರುಡಿಸಿ ಪರಿತಂದು ಚರಣಪ್ರಹಾರಮನೀವ ಚಕ್ರವಾಕಿಗಳುಮಂ, ಸುರಸುಂದರಿಯರ್ [9]ಸೆಂದು[9]ರಮಂ ತೀದ ಪಚ್ಚೆಯ ಕಿಗ್ಗಲ್ಗಳಂ ಗಿಳಿಗಳ್ಗೆತ್ತು ಸಾರ್ವ ಸಾರಿಕೆಗಳುಮಂ, ಸಿದ್ಧಸೀಮಂತಿನಿಯರ ಸೋರ್ಮುಡಿ ವಿಡೂರ

[1] ರರ (ಕ) [2] ಸಿಲೆ (ಘ) [3] ಕುಡಿಯಲರ (ಘ) [4] ರಿಯ (ಘ) [5] ಕಾದ (ಘ)
[6] ತ್ತ (ಕ ಘ) [7] ರ್ಪಿಸಿ (ಘ) [8] ಬೊ (ಕ) [9] ಸಿಂಧು (ಕ ಘ)

ಗ್ರಾವದೊಳ್ ಪತ್ತುವ ಪಾವಿನಂದದಿಂ ಪ್ರತಿಬಿಂಬಿಸೆ ಬಂದು [1]ಪಿ[1]ಡಿದು ಕರ್ದುಂಕುವ ಕಳಾಪಿಗಳುಮಂ, ಸುರತಸುರಭಿಗಳಪ್ಪಂಜರಚರಿಯರ ಬೆಮರ್ವನಿಯಂ ಸುಂಗಿ ಮುಗಿಲ ಪನಿಗೆ ಮೊಗಸಲಾಱದಿರ್ಪ ಚಾದಗೆಗಳುಮಂ, ಮನುಜವನಿತೆಯರ ನಡೆಯನಟ್ಟಿವಟ್ಟು ನೋಡಿ ತಾಮುಮಲತಗೆಯೊಳಡಿಯೂಡಿ ನಡೆಗಲ್ತ ವಿಯಚ್ಚರಿಯರ ಪಜ್ಜಳಿಪ ಪಜ್ಜೆಗಳಿಂ ಕೆಂದಾವರೆಗೊಳಂಗಳಂತಿರ್ಪ ನೀಳಮಣಿಶಿಳಾತಳಕ್ಕೆ ಘೋ[2]ರೆಂದೆ[2]ಱಗುವ ಕೊಳರ್ವಕ್ಕಿಗಳುಮಂ, ಕಂಠನಾಳಮನಾಡಿಸುತ್ತುಮಿಕ್ಕೆಲಸನಲಸದವಲೋಕಿಸಿ ಕಿಸುಗಲ್ಲ [3]ಸೆಱೆ[3]ಯಂ [4]ಸರಿ[4]ಗೆಯ್ದು ರಾಜಾವರ್ತಕ್ಕೆ ಜೀವಂಬೊಯ್ದಂತಿರ್ದ ಜೀವಕ ಮಿಥುನಂಗಳುಮಂ, ವಜ್ರವೇದಿಕೆಯೊಳ್ ವಿದ್ಯಾಧರಿಯರ ವದನಬಿಂಬಂಗಳನಂಬುಜಂಗಳ್‌ಗೆತ್ತು ಬಂಡಿಸಿ ಕನಲ್ವ ಕಳಹಂಸಂಗಳುಮಂ, ಚಂದ್ರಕಾಂತದ ಬೆಳಗಂ ಬೆಳ್ದಿಂಗಳೆಂದೆ ಕಾದುಕೊಂಡಿರ್ಪ ಚಕೋರಿಗಳುಮಂ, ಕಪ್ಪುರದಿಱುಂಬುಗಳೊಳ್ ಬೆರಸಿ ನೂಸಿ ಕರಗಿ ತಮ್ಮ ನಱುಪುವಾಲಿವರಲ್ಗಳಿಂ ಪೊಂಬಣ್ಣದ ಗಂಧಮೂಷಕಂಗಳ್ ತೋಡಿದ ಪೊನ್ನರಜದ ಕುಪ್ಪೆಗಳುಮಂ, ಉರ್ವಿ ಜೀಬ್ಬ[5]ಪೆಱದರ[5]ಯಿಂ ಬಿಱುದು ಬಾಯ್ದೆಱೆದ ತುಱುಲೊಳ್-ಮಾಣಿಕದ ಪಗವಂ ತೆ[6]ಗೆ[6]ವಂ[7]ತೆ[7] ಕುಳ್ಳಿರ್ಪ ಮದ[8]ಸ[8]ನಿವಾರಣನಾ ದ್ರೇವಿಯನಾರಾಧಿಸುತಿರ್ಪ ವಿದ್ಯುಲ್ಲೇಖೆಯುಂ ಚಂದ್ರಲೇಖೆಯುಮೆಂಬ ವಿದ್ಯಾಧರಿಯರ್ ಕಂಡು ಪಾಡಿವಡ ಪೆಱೆಯಂ ಕಂಡಂತೆಱಗಿ ಪೊಡೆಮಟ್ಟಲ್ಲಿಗೆ ಸಮೀಪದೊಳಿರ್ದ ಚಂದ್ರಕಾಂತಗುಹಾಗೇಹಕೊಡಗೊಂಡು ಪೋಗಿ ಪಿರಿದುಮೊಸೆದಭ್ಯಾಗತ ಪ್ರತಿಪತ್ತಿಯಂ ಕುಡೆ ಕೈಕೊಂ[9]ಡು ಬಂದಾ[9] ದೇವತೆಯ ಮುಂದಣುತ್ತರಂಗಳೊಳ್ ಬರೆದಿರ್ದ ಸಿದ್ಧಾದೇಶಮು[10]ನೋದಿ[10] ನೋಡಿ ಮಱುದೆವಸಂ [11]†[11]ಕೃಷ್ಣ ಚತುರ್ದಶಿಯಾಗೆ—

ಆರಾಧಿಸಿದಂ ದೇವಿಯ
ನಾ ರಾತ್ರಿಯೊಳಮಳಗಂಧಪುಷ್ಪಾ[12]ದಿ[12]ಗಳಿಂ
ಭೋರೆನವಟಯಿಸೆ ಖಚರಕು
ಮಾರಿಯರುಂ ಕೆಳೆಯನುಂ ಕಳಾರ್ಣವತೀರಂ ೨೪೩

ಆಗಳ್ ಗರ್ಜಿಸಿ ಪಾಯ್ವ ಪುಲಿಗಳುಮಂ, [13]ಕೊ[13]ಂದು ತಿಂಬ ಕುಕ್ಕುಟಸರ್ಪಂಗಳುಮಂ, ನೀಟ್ದು ಪರಪುವ ಸಿಂಗಂಗಳುಮಂ, [14]ತೀಡಿ[14]ಯುಗಿವ ನೀಟ್ನಾಯ್ಗಳುಮಂ, ನುಂಗಿಯುಗುಳ್ವಜಗರಂಗಳುಮಂ, ಸುಯ್ವ ಪಾವಂ ಪೊಯ್ವ ಸಾಧಕರುಮಂ, ಬೊಬ್ಬಿಱಿವ ಭೂತಂಗಳುಮಂ, ಬಾಯ್ದೆಱೆವ ಬೇತಾಳಂಗಳುಮಂ, ಬಿಸುನೆತ್ತರಂ ಪಾರ್ವ ಕಾಳರಕ್ಕಸಿಯರುಮಂ, ಜೆಟ್ಟಿಮನಿಕ್ಕುವ ಜಟ್ಟಿಗ[15]ರು[15]ಮಂ, ಪೊಟ್ಟೆಯೊಳ್ ಬಾಯಂ ತೆಱೆವ ಪೂತನಿಯರುಮಂ, ಉರಿಯನುಗುಟ್ವ ಕಾಮುಕರುಮಂ, ಪೊಡೆವ

---

[1] ಕು (ಕ ಘ) [2] ರನೆ (ಕ ಘ) [3] ಸರಿ (ಕ) [4] ಸೆರೆ (ಕ ಘ) [5] ಪೇರಡವಿ (ಕ ಘ) [6] ರ (ಕ ಘ) [7] ತೇರಿ (ಕ ಘ) [8] ಕಘ ಗಳಲ್ಲಿಲ್ಲ [9] ಡಾ (ಖ ಗ) [10] ಖ ಗ ಘ ಪ್ರತಿಗಳಲ್ಲಿಲ್ಲ [11] ಸಂ (ಕ) [12] ಳಿ (ಕ) [13] ಕೊಱೆ (ಘ) [14] ತಿದಿ (ಕ ಘ) [15] ಳು (ಖ ಗ)

ಸಿಡಿಲಂ ಕಱಿವ ಕಾರ್ಮುಗಿಲ್ಗಳನೇನೆಂದಱಿಯದೆ ತನ್ನನೆ ತಾನಱಿ[1]ದಗುರ್ವಿಸುವ ವಿಗುರ್ವಣೆಯುಂ ಬಗೆಯದೆ ಶ್ರೀಪಾರ್ಶ್ವಭಟ್ಟಾರಕರನೆ ಬಗೆದು ಕುಳಸಗದಂತನಾಕುಳನಾಗಿ, ಕೆಯ್ಯಿಕ್ಕಿರ್ದಭಿಮಾನಮೇರುವಿಂಗೆ ಕ್ಷಣಕ್ಕೆ ಮುಕ್ತಿ ಕುಚಮುಕ್ತಾಮಣಿಯುಪ್ಪುದನಱಿದೀ ಕಾಲದೊಳ್ ಕರ್ಮಕ್ಷಯಮಾಗೆ ಪರಮಾಗಮಕ್ಕೆ ಪುಗಿಪೊ[2]ರ್ದ[2]ದೆಂದು ಬೆಚ್ಚಿದಂತೆ ಚಕ್ರೇಶ್ವರಿ ಘೋರೋಪಸರ್ಗಮಂ ಪಿಂಗಿಸಿ ಪ್ರತ್ಯಕ್ಷೆಯಾಗಿ ಕೆಯ್ಯೆತ್ತುವುದೆಂದು ಕಯ್ಯೊಡ್ಡಿ ಬೇಡಿಕೊಂಡ ಪಂಡಿತರ್ ಕಂಡೊಡೆ ಕಾಳಾವಲೋಕಿನೀಪ್ರಭಾವಂ ಕಿಡುಗುವೆಂದು ಕುಡದೆ—

ಪಡೆದಂ ಸಿದ್ಧರಸದ ಪೊಂ
ಗೊಡಸುಮನಾಗಾಮಿಕಾಲಮೂರ್ತಿಗೆ ಮಣಿಗ
ನ್ನಡಿಯೆನೆ ತೋರ್ಪಕ್ಕರವೆಡೆ
ಯುಡುಗದ ಕಾಳಾವಲೋಕಿನೀಫಳಕಮುಮಂ ೫೪

ಅಂತು ಪಡೆದು ಕವಿಚಕ್ರವರ್ತಿಯಾ ಚಕ್ರೇಶ್ವರಿಯ ಭವನದಿಂ ಬೆಳಗಾಗಲೊಡನೆ ಪೊಱಮಡುವಾಗಳ್ ಕಾಲ ತೊಡರ[3] ಕೊರಲ ವೇಷ[5]ದ ಕೊಯ್ದುರದ ಕಡಿದ ಬೆರಲ ಮೊಗದರಿಸಿನದ ಕೊಱೆದ ಮೂಗಿನ ವಿಡಂಬಮೆ ತೊಡವಾಗೆ ಸಪ್ತವ್ಯಸನದಿಂ ಸವೆದಂತೆ ಬರ್ಪ ಬಯಲ ಭಟ್ಟರುಂ, ಕೌಂಕುಟಿ ಸಿವಡಿಯ ಕೆಲದಡಪದ ಪಿಡಿದ ಕೊಡೆಯ ಪಟಾಟೋಪದಾಡಂಬರಮಗುರ್ವುವಡೆಯೆ ಲೋಕದ ಕಥೆಯುಂ ಕಬ್ಬಮುಂ ಮಾತುಂ ಬಾಯ್ವೆಣ್ಣೆಯಾಗೆ ಧೂರ್ತವೃತ್ತಿಯೆ ದಾಟಿಯಾಗೆ ಬಳೆದು ಕೈವಾರಕ್ಕೆ ಕಾದಿ ಕ[4]ಲಿ[4]ಯುಮೋದಿ ಪಡೆದೆತ್ತಿಸಿದ ಬಿರುದುಂ ಬೆರಸು ಬರ್ಪೊಳಕ್ಕರಿಗರುಂ ಬಳಸಿ ಬರೆ—

ಪಟಿಯ ಝುಟಂಬಮುಜ್ಜಳಿಪ ಮುದ್ರಿಕೆ ಬಣ್ಣದ ಸೀರೆ ಹೇಮಶೃಂ
ಖಳೆ ಮಣಿಮಾಳೆ ದೂ[5]ಳೆ[5]ಯದ ಕಂಕಣಮಿಟ್ಟ ತ್ರಿಪುಂಡ್ರವಣ್ಪು ತೋ
ಳ್ವಳೆ ತಲೆಸುತ್ತು ಪಲ್ಲವದ ಸತ್ತಿಗೆ ಕೀರ್ತಿಪತಾಕೆ ತನ್ನೊ[6]ಳೊ
ಳ್ಪ[6]ಳವಡೆ ಬಂದನಂದು ಗಜಭಟ್ಟ[7]ನೆನಿಪ್ಪನಪೂರ್ವ[7]ವಿಭ್ರಮಂ ೫೫

ಅಂತು ಬಂದು ಶುಭೋದಯಮೆಂದು ಮುಂದೆ ನಿಂದು—

ಶ್ರೀಮ[8]ನ್ಮಾ[8]ನಾವತಾರೋ ವಿತರಣತರುಣಾಃ [9]ಪ್ರಾಜ್ಯ[9]ಶೈಲಾವತಾರಃ
ಕೀರ್ತಿಃ ಕಾಮಾವತಾರೋ ವಿಭವಸುಮನಸೋ ಗಂಧಗರ್ಭಾವತಾರಃ
ಬುದ್ಧೋ ರೂಪಾವತಾರೋ ಗುಣಮಯವಪುಷಃ ಪೂರ್ಣಜೀವಾವತಾರಃ
[10]ಕಸ್ತೇ ಕಂಥಾ[10]ವತಾರೋ ಜಯತಿ ಬುಧಪತಿರ್ಬಾಣಭಾಗ್ಯಾವತಾರಃ ೫೬

---

[1] ಯ (ಘ) [2] ರ್ದುವು (ಘ) [3] ಕಾಲದೇಶ (ಘ) [4] ೦ (ಕ) [5] ವೆ (ಕ ಘ)
[6] ಳಾಳ್ದ (ಕ ಘ) [7] ನಪೂರ್ವನಚಿಂತ್ಯ (ಘ) [8] ನ್ಮಾ (ಘ) [9] ಪಾಶ್ಚ (ಕ ಘ)
[10] ಕಾಂತ. . . (ಕ) ಕಾಂತ ಕಾಂತಾ (ಘ)

ಯಜ್ಜನ್ಮಶ್ರೀವಿವೇಕಪ್ರಣಯಗುಣಲಸತ್ಕೋಕಯೋಸ್ಸುಪ್ರಭಾತಂ
ಯತ್ಕೀರ್ತಿಸ್ಸೂರಿಜೇತೋಮೃದುಕರಮಣಿಸೌಖ್ಯಶ್ರುತೇಶ್ಚಂದ್ರಮೂರ್ತಿಃ
ಯದ್ಭಾಗಂ ಬೋಧನಾಥಸ್ಸುಕವಿಮಣಿಜನೇಃ ಕಾವ್ಯವೈಡೂರ್ಯಸೂ[1]ತಿಃ[1]
ಸೋಯಂ ಸೌಜನ್ಯಸಿಂಧುರ್ಜ[2]ಯ[2]ತಿ ವಿಜಯತೇ ಕಾವ್ಯಕರ್ಣಾವತಂಸಃ ೫೭

ಆಗಾಸೇಣಿಂ[3]ದ[3]ಮಾಹಿಂದಸಿವಿಸಸಿಯಣಾಂ ಮೇ[4]ರಣೋಪಾಯರಂಭಂ[4]
ಕಿಂಭೇದಂ ಬಂಧಕಂಪಂ ಪಸವಸಿಹಿಯಯೇ ರಾಹುಣೋ ಹೋಸಿದಂಕೋ
ಯೆಂಕೇ ಹಿಂಸೋ ಜಸೇಹಿಂ ಣಯುವಯಣಸು[5]ತಾ[5]ಸಂಭಮೋ ಹಿಂಗುಣೇಹಿ
ಝುಣಂ ಜಾಯಂ ಪಿಜಾಯೇ ಜಯುಯಿ ಜಯುಯಿ ವಣ್ಣೋ [6]ಪಿ[6]ಚಂದೋ
ಕವೀಂದೋ ೫೮

ವಿಹಾಯ ವಿಷ್ಣು[7]ಧಾತಾರೌ[7] ನೇಮಿಚಂದ್ರೇಣ ಸಂಗ[8]ತೇ[8]
ಶ್ರೀವಾಚೌ ಶಂಭುರಾಲೋಕ್ಯ ದೇಹಾರ್ಧೇಕೃತ ಪಾರ್ವತೀಂ ೫೯

ಎಂದೋದಿದಕ್ಕರಿಗಂಗೆ ವಿತರಣಮುಗ್ಧಂ ಮಕರಂದ[9]ನಿಂ[9] ಸಿದ್ಧರಸಂದೀವಿದ ಪೊಂಗೊಡಸಂ ಕುಡಿಸಿ—

ಪುದಿದ ಭವದ್ಯಶೋವಿಶದಸಿದ್ಧರಸಂ ಸಲೆ ಸೋಂಕೆ ನಿತ್ಯಮಾ
ಡುದು ದೆಸೆ ಕಾಂಚನಾದ್ರಿಯೆನಿಸಿತ್ತು ಸುರಾದ್ರಿ ಸುವರ್ಣವರ್ಣಮಾ
ದುದು ರವಿರಶ್ಮಿ ತನ್ನ ಸಮಮಾಯ್ತೆನೆ ಚಂದ್ರಿಕೆ ಪೇೞ್ ಪರಾರ್ಥಮ
ಪ್ಪುದು ಪಿರಿದಾಯ್ತು ನೀಂ ಪಡೆದ ಸಿದ್ಧರಸಂ ಕವಿರಾಜಕುಂಜರಾ ೬೦

ಎಂದು ಪೊಗೞ್ದಕ್ಕರಿಗಂ ಪೋಗೆ ಕಂದರ್ಪದೇವನಾ ಮಯೂಖಸಿರ್ಝರಗಿರಿಯ ಮನೋಹರತೆಗಮಾ ವಿದ್ಯುಲ್ಲೇಖೆಯುಂ ಚಂದ್ರಲೇಖೆಯುಂ ಮಾೞ್ಪ ನಿರುಪಾಧಿ ವಿಶುದ್ಧಬಂಧುಕೃತ್ಯಕ್ಕಮಾ ನಿಜಾಂತರಂ[10]ಗ[10]ಲಗ್ನಸ್ಮರವೈಶ್ವಾನರ ಪ್ರಶಮಕರ ಶಿಶಿರೋಪಚಾರಕ್ಕೆ ನೆೞೆವ ನವನಂದನವನಾಭಿನವಕುಸುಮಕಿಸಲಯಚ್ಛಾಯಾಚ್ಛ ಜಳಜಳರುಹನಿವಹಬಹಳಿಕೆಗಮಗಲಲಾಱದಲ್ಲಿಯುಂ ಕೆಲದಿವಸಂ ವಿವಿಧವಿಹಾರವಿನೋದ ಮನೊದವಿಸುತಿರ್ಪಿನಮಾತನ ಮಾನಸಾನಳನನುದ್ದುಮುರಿಪುವಂತೆ—

ಉಗುಡೆ ಮದಾಳಿ ನೆಯ್ದಿಲ ಮಧುದ್ರವಮಂ ಮನದೊಳ್ ಪಿಕಂ ಸರಂ
ದೆಗೆಯೆ ಸರಂಗಳುಂ ಶಿಶಿರಮಂ ಬಿಸಿಲಾಯ್ದು ಕುೞುಂಕೆ ಮೆಲ್ಲನ
ಲ್ಲುಗೆ ಕಟಿವಂದ ಕುಂದದಲರ್ಗಳ್ ಗಿಳಿತತ್ತಿಯನಿಕ್ಕಿ ಪಕ್ಕಮಂ
ನೆಗೆ[11]ದೆ[11]ಲೆದೊಂಗಲೊಳ್ ತೊಡೆಯೆ ತೀಡಿದುದೊಯ್ಯನೆ ದಕ್ಷಿಣಾನಿಳಂ ೬೧

---

[1] ತೇಃ (ಕ ಫ) [2] ಗ (ಕ ಫ) [3] ಚ (ಕ ಫ) [4] ರುಣೋಸಾಯರುಂ ಚ (ಕ)
[5] ಹಾ (ಕ) [6] ವಿ (ಕ ಫ) [7] ವಾತಾರ್ರಾ (ಫ) [8] ತಿಂ (ಕ ಫ) [9] ನ ಕೈಯ (ಫ)
[10] ಗಾವ (ಫ) [11] ದೊ (ಕ ಫ)

ತದ್ರುಕು [1]ತಳಿರ್ತು[1]ದಿಕ್ಕಿದುದು ಪಾದರಿ ಪಣ್ಣೆಲೆಯಂ ನಯಕ್ಕೆ ಬಂ
ದುದು ಲತೆವಾಗಿ ತೂಗಿದುದು ಪೂಗುಡಿಯಿಟ್ಟದಿರ್ಮುತ್ತೆ ಮೂಡಿ ಮು
ತ್ತಿದ ಮುಗುಳೊಪ್ಪಿ ತೋಱಿದುವಶೋಕೆಯ ಕೆಂದಳಿರುರ್ಚುತಿರ್ದುವೊ
ತ್ತಿದುವೆಲೆ ಗಂಟಸೊತ್ತವಿ[2]ಸಿ[2] ಕೋರಕಮಂ ನವಕರ್ಣಿಕಾರ[3]ಕಂ[3]

ಸಿರಿಸದ [4]ಕೇಸರಂ[4] ಮುಱಿಯೆ ಪಾಯ್ದುದು ತೂಱುವ ತಂಬಿ ಮಾವು ಪೀ
ವರಮೆನೆ ಸೂಸಿದತ್ತು ಬಿರಿದಂಕುರಮಂ ಕಿಱುಗೊಂಬುಕೊಂಬಿನೊಳ್
ಸುರಯಿ ಮುಗುಳ್ತು ಮುಂಚಿದುದು ಕೇದೆಸಪೊಳ್ [5]ಕಳಿ[5]ವಂಡನುತ್ಪಳಂ
ಸುರಿದೆಸಟಿಕ್ಕಿದತ್ತು ಶಿಶಿರಾತ್ಯಯಚೈತ್ರನವಪ್ರವೇಶದೊಳ್ ೬೩

ಶ್ರೀ ತೊಱೆದುತ್ಪ[6]ಲಾವಳಿಯ[6]ನಂಬುಜದೊಳ್ ನಿಲೆ ಮೊಲ್ಲೆಯುಂ ಕರಂ
ಜೀತಿರೆ ಕೂರ್ತರೆಂಬ ಪೊಣರ್ವಕ್ಕಿಗಳೋತೊಡಗೂಡೆ ಶೀತಕಾ
ಲಾತಿಶಯೇಂದುವಸ್ತಮಿಸೆ ಮಾಸರಮಾದುದು ಸಂಜೆಯೆಂಬಿನಂ
ಚೂತವನಂ ತಳಿರ್ತುದು ನವೋದಯದೊಳ್ ಮಧುಮಾಸಮಿತ್ರನಾ ೬೪

ಪೊರೆವಿಡೆ ಸೋಂಕಿ ತೆಂಕಣೆಲರೂದಲೊಡಂ ಸ್ಮರದಗ್ಧಭೂಜಮಂ
ಕುರಿಸಿರೆ ಚಿತ್ತಜಸ್ಮನ ಲಸದ್ಭುಜಶಾಖೆಯೊ[7]ಳೀ[7]ಕೆ ವೀರಮಂ
ಕುರಿಸದೆ,ಬೇಟಮಂ ಬಳೆದು ಬಾಳ್ವ ಜನಂಗಳ ಚಿತ್ತಬೀಜಮಂ
ಕುರಿಸದೆ ಚೂತಮೊಂದೆ ಪೊಸತಂಕುರಿಸಿತ್ತೆ ವಸಂತಮಾಸದೊಳ್ ೬೫

ಕೊಸರಸೆ[8]ಕಾ[8]ರ್ದ ಕೋಗಿಲೆಯ ಸತ್ತಸರಂ ಪೊಸತಾಗಿ ಪುಟ್ಟಿತೆಂ
ಬಿನಿತೆ ಬನಂಗಳೊಳ್ ಕೊಸರ್ವ ಕನ್ನಡವಕ್ಕಿಯ ನಾದಮೆತ್ತ,ರು
ದ್ರನ ಮುನಿಸಿಂದೆ ಬೆಂದತನುವುಂ ಮಱುವುಟ್ಟಿಗನಾದನಂದು ಮಾ
ವಿನ ಕಳಿಕಾರಸಂ ನವಸುಧಾರಸಮಲ್ಲವೆ ಚೈತ್ರಮಾಸದೊಳ್ ೬೬

ಕಲಿಕೆ ಕವಲ್ತುಮೂಡಿದುದು ಮಾಮರದೊಳ್, ಬನದೊಳ್ ಪೊರಳ್ದು ಸಾ
ಯಲೆ ಪೊಲಗೆಟ್ಟು ಪೊಕ್ಕುದು ವಿಯೋಗಿಮೃಗಾವಳಿ,ಕೊಲ್ವುದೆಂದು ಮು
ನ್ನಲಿಯದೆ ಕೊಂಬುಗೊಂಡುಲಿದ ಕೋಗಿಲೆ ಕರ್ಬಿನ ಬಿಲ್ದೆ ಕೂರ್ತ[9]ಕ
ರ್ಜಿಳಿಸಸೆಗೊಪ್ಪನಿಂ ಕರೆವವೊಲ್ ಕರೆದತ್ತು ವಸಂತಮಾಸದೊಳ್ ೬೭

ಚಂಚುವಿಘಾತಜಾತವಿಳಸದ್ವಿವರಂ ಸಹಕಾರಕೋರಕಂ
ಬಂಚದ ಭಂಗಿಯೊಳ್ ಬಿರಸೆ ಸೂಸೆ ರಸಂ ಮೊಗಮಿಟ್ಟು ರಾಗದಿಂ
ಪಂಚಮದಿಂಚರಂ ನಿಮಿರೆ ಪಂಚ[10]ಸ[10]ರಂ ಭಯದಿಂದೆ ಕೇಳ್ದು ರೋ
ಮಾಂಚಮನಾಂತು ಮೆಚ್ಚುತಿರೆ ಕೇಳಿಸಿದಂ ಕಳಕಂಠವಾಂತಿಕಂ

---

[1] ತೊವಲ್ತು (ಕ) [2] ಲ (ಕ ಘ) [3] ವಂ (ಕ) [4] ಕೋರಕಂ (ಘ) [5] ತನಿ (ಘ)
[6] ಳಾಕರಮು (ಕ ಘ) [7] ಳೀ (ಖ ಗ) [8] ಸಾ (ಖ ಗ) [9] ಕಬ್ಬಿನ (ಕ) ಕಾವನೆ (ಘ)
[10] ತ್ಸ (ಘ)

ತಳಿರಂ ತಾಳ್ದಿ ಬಬಲ್ದು ಪೊತ್ತು ನನೆಯಂ ಪೂಗೊಂಚಲಂ ಪೇಱಿ ಬ
ಳ್ಳೆಸಲ್ಲಾಡುವ ಭೃಂಗಕೋಕಿಳಶುಕವ್ರಾತಂಗಳಿಂ ಬಳ್ಕುವೀ
ಸೆಳೆಗೊಂಬುಂ ಕೊನೆಗೊಂಬುಮೆಂತು ಫಳಭಾರಕ್ಕಾರ್ಪುವೆಂದಾಂತವೋ
ಲೆಳಮಾವಂ ಮಳಯಾನಿಳಂ ಬ[1]ಳ[1]ಸಿಕೊಂಡಿರ್ದತ್ತು ಚೈತ್ರಾದಿಯೊಳ್ ೧೯

ಗಿಳಿ ತಳಿರಂ,ಮುದಂ ಮುಗುಳ್ದ ಕೋಗಿಲೆ ಕೋರಕಮಂ,ಮದಾಳಿಪೂ
ಗಳನೆರೆಗರ್ಚಿ ಪಾಱಿದುವು ನೂತನಮಂ ನವವಸ್ತು ಜಾತಮಂ
ಬಳೆದೊಲವಿಂದಮೋಲಗಿಸಿ ಬಂದ ಬಸಂತದ ಸೊಂಪನತ್ತಿಯಿಂ
ತಳೆದಱಪಲ್ಕೆ ಪೋಪ ವನಪಾಲಕರಂತೆ ಮನೋಜರಾಜನಾ ೨೦

ನನೆಯ ಪುಣುಂಬುಮಂ ಮುಗುಳ[2]ನಿಟ್ಟಿ[2]ಯುಮಂ ಮಱಿದುಂಬಿ ಪಾಯ್ದ ಪೂ
ವಿನ ಕವಲಂಬುಮಂ ತೊಡದ ಮುನ್ನಮೆ ಮನ್ಮಥನುರ್ಚಿ ಬಂದಮಾ
ವಿನ ಮುಗುಳ್ವೆತ್ತ ಮಲ್ಲಿಗೆಯ ಪೂತದಿಮುರ್ತ್ತೆಯ ಕಂಪೆ ಕಂಪಮಂ
ಕೊನರಿಸಿ ಕೊಂದು ಕೂಗಿಡುವು ತಾಗಿ ವಿಯೋಗಿಗಳಂ ವಸಂತದೊಳ್ ೨೧

ಪೂಗಣೆಗೆತ್ತಿದಂತೆ ಪೊಗರಂ ಪೊಸಗಾಡಿಗೆಗೂಡಿದಂತೆ ಚೆ
ಲ್ವಾಗಿ ವಿಲೋಚನಕ್ಕೆ ವಿರಹಾನಳನಿಂ ಮಸಿವಣ್ಣಮಾಗಿ ಬಂ
ದೇಗಿ ವಿಯೋಗಿಚಿತ್ತತತಿ ಕಾಮಶರಾಂಘ್ರಿಯೊಳಿರ್ದಂತೆ ಪಾ
ಯ್ದೋಗರಗಂಪನುಂಡುವೆಳಮಾವಿನ ಪೂವಿನೊಳುನ್ಮದಾಳಿಗಳ್ ೨೨

ತಾವರೆ ನೂಂಕುವಂತೆ ಮಧುಬಿಂದುವನಂದು ವಿಕಾಸವಾರ್ಧಿಯೊಳ್
ನೀವರನೆತ್ತುವಂತೆ ತೆರೆಗಳ್ ಮೊದಲೊಳ್ ಮುಗುಳೊತ್ತುವಂತೆ ಶಾ
ಖಾವಳಿ ಕಾಮಿನೀಜನದ ವಕ್ತ್ರವಳಿತ್ರಯಬಾಹುಮೂಲದೊಳ್
ತೀವಿ ಮಡಲ್ತು ಸೂಸಿದುವು ಮಂಜರಿಗಳ್ ನವಘರ್ಮಬಿಂದು[3]ವಾ[3] ೨೩

ಮುನ್ನ[4]ಮೆ[4] ಬಿಮರ್ತ್ತ ಮುತ್ತಿನ
ಕನ್ನಡಿ[5]ವೋ[5]ಲ್ ತೊಳಪ ತರುಣಿಯರ ವದನಂಗಳ್
ಮನ್ನಿಸದೆ ಸೆಳೆದುಕೊಂಡುವು
ಚೆನ್ನಂ ರೋಹಿಣಿಯನಪ್ಪಿದಮೃತದ್ಯುತಿ[6]ಯಾ[6] ೨೪

ಎಲೆಯಿಕ್ಕಿದಂತೆ ಪೊರೆವಿಡೆ
ಸುಲಿದೆಲೆಗರ್ಪಲ್ಲಿ ಪಲ್ಲವಂ ಪುಟ್ಟಿದವೋಲ್
ಜಲಜಲನೆ ಕೆಂಪನುಗುಳ್ದುವು
ಲಲಿತಲತಾಂಗಿಯರ ಪಳಚನೆಸೆವಧರಂಗಳ್ ೨೫

---

[1] ಯ (ಫ) [2] ಮಿಟ್ಟಿ (ಕ ಫ) [3] ವಂ (ಕ) ಗಳ್ (ಫ) [4] ನೆ (ಕ) [5] ಯೋ (ಕ ಫ) [6] ಯೋಲ್ (ಫ)

ಪಳಚನೆ ಪೊಳೆವೆಳವೆಂಡಿರ
ಬಿಳಿ[1]ಯಲರ್ಗ[1]ಣ್ಣವರ ಚೆಲ್ವನೆಳಕುಟಿಗೊಂಡಂ
ತೆ[2]ಳ[2]ರ್ದು ತೊಳಗಿದುವು ಕುಮುದಂ
ಗಳ ಸಿರಿಯೋಸರಿಸಿದತ್ತು ಶಿಶಿರಾಂತ್ಯಯದೊಳ್ ೭೬

ಅವ[3]ತರಿ[3]ಸಿ ತಾಮ್ರಮಂಜರಿ
ಕಿವಿಯಂ ತೀವುತ್ತೆ ಪರ್ಚುವಂತಳಿಗಣಿಕಾ
ರವಮನದೇಂ ತಳೆದುದೊ [4]ಕೇ
ಳ್ವ[4]ವೊಲಬಲಾಜನದ ಮಾನಮದಮಂ ಮಧುವೋಲ್ ೭೭

ವಾಸಿಸಿತು ಘರ್ಮಗಂ[5]ಡ[5]ಜ
ಳಾಸವಮಂ ಸೇದೆವಟ್ಟವೋಲ್ ವನಿತಾಕ
ರ್ಣಾಸಕ್ತಮಧುಪಕಬಳಿತ
ಕೇಸರಸುಕುಮಾರಶಿ[6]ರೀಷ[6]ಸ್ತಬಕಂ ೭೮

[7]ಪ[7]ಜ್ಜಳಿಸಿದಮೃತಜಳಧಿಯ
ಸಜ್ಜೆಗೆವಂದಿಂದುಲೇಖೆವೋಲ್ ಸುಲಲಿತಯೋ
ಪಿಜ್ಜನತತಿ ಸಾಯಂತನ
ಮಜ್ಜನದಿಂ ವಿಮಳ[8]ಮಳಯಜಸ್ಥಾ[8]ಸಕದಿಂ ೭೯

ಮಲ್ಲಿಗೆಮುಗುಳಿಂ ತಳಿ[9]ರಂ[9]
ಮೆಲ್ಲಗೆ ಮುಸುಕಿದವೊಲಂಗನೆಯರಧರಲಸ
ತ್ಪಲ್ಲವಮಂ ಸುಲಿಪಲ್ಲಿಂ
ದಲ್ಲುಗುವೆಳವೆಳಗಿಸಿಂದದೇಂ ಮುಸುಕಿದರೋ ೮೦

ಬಗೆವುಗೆ ತೊಡೆ[10]ದ[10]ರ್ ಕುಡಿಮಿಂ
ಚುಗಳಿಂ ನೀರಂಜಿಪಂತೆ ನೀರಜಮುಖಿಯರ್
ಮಿಗೆ ಕುಂಕುಮದಣ್ಪಿಂ ಸಂ
ಪಗೆವಣ್ಣಂ[11] ಮುಗುಳ್ದ[11] ಮೆಯ್ಗಳೊಳ್ ಮಳಯಜಮಂ ೮೧

ಅಲ್ಲಿಂ ಮುನ್ನಮೆ—

ಸೂಂಕಿತರೆ ತೇರ [12]ಸೂಂಕು[12]ವ
ತೆಂಕಣೆಲರ್ ಬರ್ಪನಂತೆ ಭಯಮುತ್ತವೊಲೇ
ಣಾಂಕನೆಡದೊಲಗಿ ಬರುತಿರೆ
ಪಂಕಜಸಖನುತ್ತರಾಯಣಕ್ಕೇಱಿದಂ ೮೨

---

[1] ಯಿಳೆಗಂ (ಕ) [2] ಳು (ಘ) [3] ತಂ (ಕ ಘ) [4] ಕೆಳದಿ (ಘ) [5] ಧ (ಘ)
[6] ರಿಶೀರ್ಷ (ಕ ಘ) [7] ಉ (ಕ ಘ) [8] . . . ಪ (ಕ) ಜಯಜಳಸ್ಥಾಪ (ಘ) [9] ರಂ (ಕ ಘ)
[10] ಯ (ಕ) [11] ವುಗುಬ್ದ (ಕ) [12] ಸೂಡು (ಕ)

ಕರಮೊತ್ತಿ ಕುತ್ತಿ ಖರಕರ
ಕಿರಣಂಗಳ್ ಪೊಸೆಯೆ ಪುಟ್ಟಿದಗ್ನಿಕಣಂಗಳ್
ಕರಗಿಸಿದುವು ಪೊರೆಯೆತ್ತಿದು
ವುರುಪಿದುವರ್ಕಾಶ್ಮದಲ್ಲಿ ಪತ್ತಿದ ಹಿಮಮಂ ೮೩

ಮೀಂಗಳ್ ಮಿಗೆ ಮೋಕ್ಷ[1]ಸ್ನಾ[1]
ನಂಗುಡುವವೊಲೊಡನೆ [2]ಮುಱುಗೆ[2] ತಾನುಗುಱ್ದುದು ಮುಂ
ನುಂಗಿದ ದಿನಕರನಂ ಮಿಗೆ
ಪಿಂಗುತ್ತುಂ ರಾತ್ರಿರಾಹು ಶಿಶಿ[3]ರಾ[3]ತ್ಯಯದೊಳ್ ೮೪

[4]ಘ[4]ರವಸದೆ ಕವಿವ ಖರಕರ
ಕಿರಣಂಗಳ್ಗಳ್ಕಿ ಪುಲ್ಗಳಂ ಕರ್ಚಿದವೋ
ಲರುಣಿತತುಷಾರಜಳಶೀ
ಕರಮೆಸೆ ಪನಿ ಪುಲ್ಲ ಪನಿಗಳಲುಗಿದುವೆಲರಿಂ ೮೫

ಸೊಪ್ಪು ಸೊವಡಾಗ[5]ದೆ[5]ಸಮಸ
ಲ್ಪಪ್ಪ[6]ದೆ[6] ಮೊಗಮಿರಿದು ಕಾರ್ದು ಚಪ್ಪಲರ್ವಿನೆಗಂ
ಸಿಪ್ಪಿಟ್ಟು ಕರೆದು ಕೊಂಡುವು
[7]ಸಪ್ಪದಮು[7]ಪ್ಪಿದಿನೊಱೆವ ಸಱುಪಂಡುಗಳಂ ೮೬

ಶ್ರೀ ಪದ್ಮದೊಳೊದವೆ ಮನ
ಸ್ತಾಪಂ ಪುಟ್ಟಿದುದೊ ತಮಗೆ ರುಜೆಯಾಯ್ತೊ ದಿ[8]ವಾ
ಸ್ವಾ[8]ಪದಿನೆನೆ ನಯಮಿೞಿದವೊ
ಲೊಪ್ಪಿದುವು ಮಧುಪ್ರವೇಶದೊಳ್ ಕುಮುದಂಗಳ್ ೮೭

ಪೊಸೆಯಿಸಿ ನಸುಮುಸುಪೇಱಿದ
ಬಿಸಿಲಿಱಿಯೆ ಬೆಮರ್ತು ಬಿಂದುಬಿಡುವವೊಲೆಸಮುಂ
ಪೊಸಮುಗುಳಂ [9]ಪೊತ್ತೆ[9]ಸೆದುದು
ವಸಂತದೂತಿಕೆ ವಸಂತಮಾಸದ ಮೊದಲೊಳ್ ೮೮

ಅಂತುಮಲ್ಲದೆ—

ನೀರಸಮಾದೆಲೆಯುಂ ಸಲೆ
ಸ್ಫುರಿಸದಿವೆ ಸೂಂಕಿ ಕಳೆದುವೆನೆ ಕಳಿಕೆಗಳುಂ
ಕೋರಕದ ತುಱುಗಲುಂ ಸಹ
ಕಾರದ ಕೊಂಬುಗಳೊಳೊಡೆದದೇಂ ಮೂಡಿದುವೋ ೮೯

---

[1] ಸ್ಥಾ (ಕ) [2] ಮುಗುಳೆ (ಕ ಘ) [3] ರಾಂ (ಕ) [4] ಗ (ಕ) [5] ಲೆ (ಘ)
[6] ಡಿ (ಘ) [7] ಸಪ್ಪಾದು (ಕ) ಉಪ್ಪಾದು (ಘ) [8] ವಸ್ತ್ರಾ (ಘ) [9] ಪೋಲ್ತೆ (ಘ)

ನಳನಳಿಸಿ ಮೊಗಸಿ ಪೊರೆವಿ[1]ಡು
ವೆ[1]ಳಗೆಂಪಂ ತಳೆದ ಪಸುರನಾಳ್ದಂಕುರದಿಂ
ದೆಳದಳಿರಿಂ[2] ನಿಱು[2]ದಳಿರಿಂ
ಸೆಳೆಗೊಂಬುಗಳೊಱಗೆ ತುಱುಗಿ ಬಂದುದು ಚೂತಂ ೯೦

ಅಸಿಯ ಬಿರಿ[3]ಲ್ಗೊ[3]ನೆ ಗೊಂಬಿಂ
ಪೊಸ[4]ದಳಿ[4]ರೆನೆ ಚೂತಲತಿಕೆಯೆಳದಳಿರ್ದಳದೊಳ್
[5]ಮಿ[5]ಸುಪಲರ ಗೊಂಚಲೊಳ್ ಕ
ಣ್ಗೆಸೆದಿರ್ದುವು ಕಾಮಚಾಮರಗ್ರಾಹಿಣಿ[6]ಯೋ[6]ಲ್ ೯೧

ಕೊನರಾಱೆ ಪೊತ್ತೆ ಕಿಡ್ದೊಂ
ಬಿನೊಳನಿಲನಿಸೊ[7]ಲೆದ[7] ಕೊಂಬುಗೆಯ್ಯಿಂ ಪೊಸವೂ
ವಿನ ಪುಡಿಯನೊಟ್ಟಿ ಕೊಂಡ
ತ್ರಸಂಗಕರಿಧೂಳಿಮದಕೆ ಬಂದವೊಲಾಮ್ರಂ ೯೨

ಅಳಿ ಬಳಸೆ ಸೊನೆಯ ಕಂಪಂ
ಬಳೆದೊಟ್ಟವೊಲೆಸೆವ [8]ಸರಳ[8] ಶಾಖಾಭುಜದೊ
ಳ್ದಳಿರೊಳ್ ಗಳಪುವ ಗಿಳಿಯಿಂ
ಗಿಳಿಯೋದಿಸುವಂತೆ ಚೂತಲತೆ ಕರಮೆಸೆಗುಂ ೯೩

ಮಾವಿನ ಸೆಳೆಗೊಂಬುಗಳೊಳ್
ಪೂವಿನ ಗೊಂಚಲ್ಗಳೆಸೆದುವಳಿಗಳ ಬಳಸಿಂ
ಭಾವಿಸಿ[9]ಮಧು[9]ವಲರ್ಗಣೆಯಿಂ
ತೀವಿದ ತೂಣೀರದಂತೆ ಪುಷ್ಪಾಯುಧನಾ ೯೪

ಅಲರ್ಗೊಂಚಲೊಂದು ಪಕ್ಕದೊ
ಳಳಿವೆರಸಿರೆ ಕಳಿಕೆಯೊಂದು[10] ಪಕ್ಕ[10] ದೊಳಿರೆ ತ
[11]ಳ್ತಲುಪ ಸೆ[11]ಳೆಗೊಂಬು ಮಿಸುಕಿದು
ವಲರ್ಗಣೆಯಂ[12] ಗುಱು[12]ಯಸಿಟ್ಟವೋಲ್ ತೋಮರದಿಂ ೯೫

ಪರಿಚುಂಬಿಸಿ ನವಕಳಿಕಾ
ಧರರಸಮಂ ಪೀಱೆ ಪರಭೃತಂ ಚೂತಲತಾ
ತರುಣಿಗೆಸೆದತ್ತು ಶಾಖಾ
ಕರಕಂಪಂ ತಸ್ನಿನಾದನಿಭಸೀತ್ಕಾರಂ ೯೬

---

[1] ಡಿದೆ (ಫ) [2] ನೆಱೆ (ಫ) [3] ಲ್ಗೊ (ಕ) [4] ಗೊನೆ (ಫ) [5] ಕಿ (ಫ) [6] ವೋ (ಖ ಗ) [7] ಗೆವ (ಕ ಫ) [8] ತಳಿರ (ಕ ಖ ಗ) [9] ಸಿದು (ಫ) [10] ಸ (ಕ) [11] ಳರುಪಸೆ (ಖ ಗ) [12] ಗಿರಿ (ಫ)

ಚಳ ಶಾಖಾದಳಹತಿ ಕರ
ತಳತಾಳಮನಿಟ[1]ಸೆ ವಿರು[1]ಪದಳಿಕುಳ ವಳಯಾ
ಕುಳ ಕೋಕಿಳಕಳರವದಿಂ
ಗಳಿಸೋವಬಲೆಯವೊಲಾಮ್ರಲತೆ ಕರಮೆಸೆಗುಂ ೯೭

ಒಡೆದಲರ ನಡುವೆ ಮಿಡಿ ಪೊಱ
ಮಡೆ ಸಿಡಿಮಿಡಿಗೊಂಡು ಪಸಿದು ಪೊಸಬಂಡಸುಣಲ್
ಪಡೆಯದೆ ಸವಿಗಂಡುದು ಮಾ
ಮಿಡಿಯಂ ಕಡಿದೊಸರ್ವ ಸುರಭಿರಸಮಂ ಭೃಂಗಂ ೯೮

ಮಿಡುಕುವ ವಿಯೋಗಿಯೆರ್ದೆಯಂ
ನಡೆಗೊಂಡಲರ್ಗಣೆಗಳ[2]ಲ[2]ಸಿ ಬಲ್ಮಿಟ್ಟಿಗಳಂ
ಪಡೆದು[3]ಕಿ[3]ಡುವಂತೆ ಕಂತುಗೆ
ಪಡೆದುವು ಮಿಡಿಯಂ ಮಡಲ್ತ ಮಾವಿನ ಪೂಗಳ್ ೯೯

ತರಳಜಳಬಿಂದು ಸಿಪ್ಪಿನ
ಪೊರೆಯೊಳ್ ಮುತ್ತಾದುದೆರ್ಕೆ ಬಿರಿಮುಗುಳಿಂದು
ಬ್ಬರಿಪ ಮಧುಬಿಂದು ಪಚ್ಚೆಯ
[4]ಸರಲಾ[4]ಯ್ತೆನೆ ಮಿಡಿಗಳೊಗೆದುವಿಮ್ಮಾವುಗಳೊಳ್ ೧೦೦

ಬಿರಯಿಯೆರ್ದೆ ಬಿರಿಯೆ ಭರದಿಂ
ಬಿರಿಮುಗುಳಿಂದೆಚ್ಚು[5] ಕೂಗಿ[5] ಬಾಗುವಿಸಂ ಮಾ
ಮರದೊಳ್[6]ಮಿ[6]ಡಿಯುಬ್ಬ[7]ರಿ[7]ಸಿರೆ
ಬಿರಲಂ ಮಿಡಿದವರ ಮಿಟ್ಟಿದೊಟ್ಟಂ ಮದಸಂ ೧೦೧

ಅಲರ್ವೆರಸೆಲುಗುವ ತಳಿರೊ[8]ಳ್
ಕಲಸಿದ ಮಾಂಗಾಯ್ಗೆ ಪಾಯ್ದು ಮಧುಮಾಸದೊಳ
ಗ್ಗಲಿಸಿದ ನಲವಿಂ ತಳಿರು
ಯ್ಯಲಾಡಿದುವು ಗಿಳಿಯು ಮಱಿಯುಮೆಳಗೋಗಿಲೆಯುಂ ೧೦೨

ಪಸರಿಸು ಚೂತ [9]ಕಟ್ಟ[9] ಗುಡಿಯಂ ಪೊಸಮಲ್ಲಿಗೆಗಾಯ್ತು ನೂತನ
ಪ್ರಸವವಿಭೂತಿ ನಿಸ್ಸರಸಿಗೆಂದೆಡೆವೇೞ್ವವೊಲತ್ತಣಿಂದೆ ಬಂ
ದೊಸದಳಿಕಾಂತೆಯೇಂ ಸೆಳೆದುದೊಂದೆ ನವೀನದಳೋತ್ತರೀಯಮಂ
ಪೊಸಯಿಸಿ ಸೂಱೆಗೊಂಡುದಲರ್ಗಂಪುಗಳಂ ಸಹಕಾರಕಾಂತನಾ ೧೦೩

[1] ಸೆವಿಡು (ಕ) ಪೆವಿಧು (ಘ) [2] ರ (ಘ) [3] ಕು (ಘ) [4] ಪರಳಾ (ಘ) [5] ಪೂಗೆ (ಕಘ) [6] ಕಿ (ಕ ಘ) [7] ಗಿ (ಘ) [8] ಳೆಗುವೆಸೆಯೊ (ಕ) [9] ಬಟ್ಟ (ಘ)

ಪಿರಿದುಮಸಂಗಸಾ[1]ದರಿಸಿ[1] ತಮ್ಮನೆ ಕೂರ್ಗಣೆ ಮಾಡೆ ಸಲ್ಲರಂ
ಬಿರಯಿಗಳಂ ಮನಂಬಿರಿಯೆ ತಾಗಿ ಕರಂ ಬಿರಿವಂತೆ ಬೇಗದಿಂ
ಬಿರಯಿಯ ಚಿತ್ತಮಂ ಪಿ[2]ರಿ[2]ದು ನುಂಗಲೆ ಬಾಯ್ದೆಱೆವಂದ[3]ದಿಂದಮೇಂ[3]
ಬಿರಿದುವೊ ತೋರಮಲ್ಲಿಗೆಗಳಬ್ಬರಮಾಗಿ ವಸಂತಮಾಸದೊಳ್ ೧೦೪

ಪಸುರೊಳ್[4]ಸೋ[4]ಱೆ ಬೆಳ್ಪು ಬಳೆಯುತ್ತಿರೆ ತೆಂಕಣಗಾಳಿಯಿಂ ಸಡಿ
ಲ್ಪಸು[5]ಪೋರೆ[5]ಯಾಗೆ ಸಂಜನಿತಕಾಮಶಿಲೀಮುಖಪಾತದಿಂ [6]ರಸ[6]ಂ
ಪೊಸತು ಪೊಡೞ್ದು ಪೊಣ್ಮೆ ವಿರಹಾತುರೆಯಂತೆವೊಲೇಂ ಸುಗಂಧನಿ
ಶ್ವಸಿತಮನೆತ್ತಿತೋ ಬಿರಿದ ಮಲ್ಲಿಗೆ ಬಂದ ವಸಂತಮಾಸದೊಳ್ ೧೦೫

ಎತ್ತಿದ ಮುರಜಮನೆಳಮಾ
ವೆತ್ತಿದವೋಲ್ ತಳಿರ ಪುದುವಿನೊಳ್ ಮಧುವಿಸರಂ
ಮತ್ತೆನಿ[7]ಸಿರೆ[7] ಬೆಳ್ದಿಂಗಳ
ಬಿತ್ತಂ ಕಟ್ಟಿದವೊಲಿಡಿದ ಮಲ್ಲಿಗೆಮುಗುಳ್ಗಳ್ ೧೦೬

ಎಳವೆಂಡಿರ ಕಡೆಗಣ್ಗಳ
ಬೆಳಗಂ ಸ್ಮರನುರುಳಿಗೆಯ್ದೊಡವು ಚಪಳತೆಯಿಂ
ಕಳಕಳಿಸಿ ನಗುವವೋಲಳಿ
ಗಳ ರುತಿವೆರಸಿರ್ದುವಲರ್ದ ಪೊಸಮಲ್ಲಿಗೆಗಳ್ ೧೦೭

ಬಿರಯಿಗೆ ತೆಗೆಬಗೆ ಕಂಪುಗೆ
ಬಿರಿದುದು ಮಲ್ಲಿಗೆ ಮರಲ್ದು ಪುಗೆ ಮಧು[8]ಮಾಸಂ
ಕುರುಳ [8]ಮುಗುಳ್ಗೆ ಕಂಪಿನ
ಕರಡಿಗೆ ವನಸಿರಿ[9]ಗೆ[9] ಸರಿಗೆ ಬಗರಗೆ ಮಧು[10]ವಾ[10] ೧೦೮

ಬಸನ್ತಿಗೆಯರೊಸಗೆಮುತ್ತಿನ
ಹಸಿತಂ ಬೆಳ್ಪೆಳಗಿನುರುಳಿ ಬೆಳ್ದಿಂಗಳ ಬೆ
ಳ್ಪಸದನಮೆನ[11]ಲೇಂ[11] ಬಿರಿದುದೊ
ಪೊಸಮಲ್ಲಿಗೆ [12]ಜ[12]ಸದ [13]ಬಿಱ್ತು[13] ಕುಸುಮಾಯುಧನಾ ೧೦೯

ಮಲ್ಲಿಗೆಯನೊಲಿಸುವಳಿಪಿಂ-
ಮೆಲ್ಲನೆ ಪೂವಾದುದೆನಿಸಿ ಮಾವಿನ ಕೊನರಿಂ
ದಲ್ಲುಗುವ ಸೊನೆಯಿನೇಂ ಕಂ
ಕೆಲ್ಲಿ ಕರಂ ನಾಂದು ನ[14]ನೆ[14]ದು ಮಗಮಗಿಸಿದುದೋ ೧೧೦

---

1 ವ ಸಿರಿ (ಖ ಗ) 2 ಡಿ (ಕ ಫ) 3 ದಿನೇಂ (ಖ ಗ) 4 ಸಾ (ಫ) 5 ವಶ್ರೀ (ಫ) 6 ಸರಂ (ಕ) 7 ಸದೆ (ಕಫ) 8 ರಹಸಂಕರಿಸಿದ (ಫ) 9 ಯ (ಕಫ) 10 ವಂ (ಕ) ಪಂ (ಫ) 11 ಸುಂ (ಕ ಫ) 12 ರ (ಫ) 13 ಮುತ್ತು (ಕ) ಬಿತ್ತು (ಫ) 14 ಗೆ (ಖ ಗ)

ಫುಲ್ಲಶರಶಿಖಿಯ ಪೊಗೆಯೆನೆ
ಪಲ್ಲವಿಸಿದಶೋಕೆಯಿಂದೆ [1]ಪು[1]ಗೆ ಬಂದಳಿಗಳ್
ಮಲ್ಲಿಗೆಯಲರ್ಗಣ್ಗ[2]ಳಿಸಲ
ಲ[2]ಲ್ಲೊಕ್ಕುವು ಬಾಷ್ಪಬಿಂದುವೆನೆ ನವಮಧುಗಳ್ ೧೧೧

ಆನೆ ಮದನಂಗೆ ಪೊಸಮದ
ದಾನೆ ಜಗದ್ವಿಜಯಿಗೆಂದು ಮುಡಿಗಿಕ್ಕುವವೋ
ಲೇನಿಕ್ಕಿದುದೊ ವಸಂತಾ
ಸ್ಥಾನಿಕೆಯೊಳ್ ಪಾಟಳದ್ರು ಜಟಚ್ಛದಮಂ ೧೧೨

ಬರುತುಮೆ ಬಸಂತಕಾಂತಂ
ಬರಸೆಳೆಯೆ [3]ಸ[3]ಡಿಲ್ದವೋಲ್ ಜರಚ್ಛದನಂ ಬೀ
ಟ್ಸರೆ ತ[4]ನ್ನ ಯು[4] ಮೆಯ್ಯಿಂ ಪಾ
ದರಿ[5]ಪೊಸೆ[5]ಯಿಸಿತೊಡನೆ ಕುಸುಮಗುಚ್ಛೋತ್ಕರದಿಂ ೧೧೩

ಪಾದರಿಗೆ ಪುಷ್ಪವತಿಗೊಳ
ಗಾದುದುಮಲ್ಲದೆ ಮುಗುಳ್ದು ಚಂಡಾಳಿಕೆಯೊಳ್
ಪೋದ ಪೊಲೆಗಲಸಿದಂತಿರೆ
[6]ನಾ[6]ದುದು ಸಂಪಗೆ ಸುಗಂಧದಿಂ ಮಧುಕರಸಂ ೧೧೪

ರತಿಯ ಬುಬ್ಬುಲ್ಮುಡಿಗಾಕೆಯ
ಪತಿಯ ತುಱುಂಬಿಂಗೆ ಮಧುವೆ ಮೀಸಲ್ಗಡದಂ
ಚತುರತೆಯಿನಲ್ಲದಂದಳಿ
ವಿತತಿಗಳೇಕೆಱಗವಲರ್ದ ನವಚಂಪಕದೊಳ್ ೧೧೫

ತೋರಿದುವಾದ ಮಲ್ಲಿಗೆಯ ಮೊಗ್ಗೆಗಳೊಳ್ ವೊಗವೂಱು ಬಿ[7]ಟ್ಟು[7]ಘೋ
ಘೋರ್ಱರೆನೆ ಪಾಯ್ದು ಬಂಡಿನೊಳೆ ಬಿಂ[8]ಡೊ[8]ಗೆದೊಯ್ಯನೆ ತೆಂಬೆಲರ್ ತ್ರೀಱಂ
ದೀರಿದು[9]ವಾದೆಱಂಕೆಗಳನೆತ್ತಿ [10]ಮುಗುಳ್ತರೆ[10] ಬೀಸಿಕೊಂಡೆಲ
[11]ಸೀರ್ಱ[11]ರ[12]ಸೆ[12]ರಲ್ದು ಕಾಱು ಕಡಲಟ್ಟುವ ಮತ್ತಮಧುವ್ರತಾ[13]ಳಿ[13]ಗಳ್ ೧೧೬

ಆಸವಮುಂಡು ಮೆಯ್ಮಱೆದ ನಂದನಲಕ್ಷ್ಮಿಯ ವಕ್ತ್ರಮುಕ್ತನಿ
ಶ್ವಾಸವೆನಿಪ್ಪ ತೆಂಕಣೆಲರೆತ್ತುವ ತನ್ನ ವಿಭಿನ್ನಕುಟ್ಮಳಾ
ಗ್ರಾಸವಗಂಧದಿಂ ಕಳಿಯೆ ಸೊರ್ಕಿಸಿತೀ ಜಗಮಂ ಸುಗಂಧನಿ
ಶ್ವಾಸಿತಕೌಸುಮಾಸವಕುಳಂ ವಕುಳಂ ಮುಕುಳಂ ವಸಂತದೊಳ್ ೧೧೭

---

[1] ವಿ(ಖ ಗ) [2] ಳಿನಲರ (ಖ ಗ) [3] ಸಿ (ಕ ಘ) [4] ನ್ನಂ (ಕ) [5] ವುದ (ಘ)
[6] ಸೋ (ಕ) ಪೋ (ಘ) [7] ದ್ರ್ಱ (ಕ ಖ ಗ) [8] ದೊ (ಘ) [9] ರಳ್ದೀರದ (ಕ ಘ)
[10] ಮುಗುಳ್ತಿರೆ (ಖ ಗ) ಮಗುಳೆತ್ತಿ (ಘ) [11] ಗಿಱೀ (ಖ) [12] ಸೊ (ಕ) [13] ದಿ (ಖ ಗ)

ಪುದಿದ ಪರಾಗಮಂ ಪರಪಿಯುಂ [1]ಪೊ[1]ರೆಯೆತ್ತಿಯುಮೊತ್ತಿ ಪೊನ್ನ ಬ
ಣ್ಣದ ನವಕರ್ಣಿಕಾರಕುಸುಮಕ್ಕೆಱಗಿರ್ದ ಮದಾಳಿ ಕಂಪುಗಾ
ಣದೆ ಕಟಿದತ್ತು ಪೆಣ್ಣ ಪೊಸ ರೂಪಿನ ಪಾಪೆಗೆ ಪಾಸಿ ಬಿರ್ದ ಬ
ಡ್ಡೊದವಿಸಿದಿಂಪುಗಾಣದಟಲಿಂ ಪೆಱಪಿಂಗುವ ಕೇಳ[2]ಸಂ[2]ದದಿಂ ೧೧೮

ಎಂಬ ಪೊಗಪ್ತೆಗಳುಂಬಮಾಗಿ—

ವಿಕಸತ್ಪುಷ್ಪಾಟ್ಟಹಾಸಂ ಸ್ಮಿತಕುಸುಮರಜೋಭಸ್ಮವಿಭ್ರಾಜಿ ಮಾದ್ಯ
ತ್ಪಿಕನಾದಂ,ಭೃಂಗಸಿದ್ಧಾಂಜನರಸಘುಟಿಕಂ,ಪಲ್ಲವೋದ್ಯಜ್ಜಟಂ, ಕ
ಯ್ಯ ಕಪಾಲಂ ಚಂದ್ರಬಿಂಬಂ ತನಗೆನೆ ಜಗತೀಚಕ್ರಮಂ ಚೈತ್ರಕಾಪಾ
ಲಿಕನೆಂಬಂ ಬಂದದೇಂ ಮೋಹಿಸಿದನೊ ಮಧುಬಿಂದೂದ್ವಮದ್ಗಂಧವಾಹಂ ೧೧೯

ಅಂತು ಮದನದಹನಕ್ಕುದ್ದೀಪನವಾಗಿ ಬಂದ ಬಸಂತದೊಳ್ ಕೋಗಿಲೆಯ ಸರಮಂ ಕೇಳಲಾಱದಂತೆ [3]ಪೂ[3]ವಿನ ಕಂಪಂ ಕೊಳಲ್ ತಳೆಯದಂತೆ ಸುರಭಿಪವನನ ಸೋಂಕಂ ಸೈರಿಸದಂತೆ ಬಂದ ಬಸಂತನ ಬನಮಂ ನೋಡಲಂಜಿದಂತೆ ಮಾನಸ ಮದನಂ ಮದನಮೂರ್ಚ್ಛಾಪರವಶತೆಯಿಂ ಪಗಲುಮಿರುಳುಂ ಕಟಿಯುತ್ತುಮಿರೆ—

ಅತ್ತಲಸವಸದೆ ವಾಸವ
ದತ್ತೆ ಗುಣಪ್ರಿಯನ ರೂಪನಿರುಳುಂ ಪಗಲುಂ
ಚಿತ್ತದೊಳೆ ಬಗೆದು ಭಾವಿಸಿ
ಚಿತ್ರಜತಾಪದೊಳೆ ತರುಣಿ ಕಡುಬಡವಾದಳ್ ೧೨೦

ಅವಟಿಗೆಯವಾದ ವಿರಹದೊ
ಳವರ್ಗಳ ಪಸೆಗಳೊಳೆ ಪೊರಬ್ಬುಟ್ಟಳ್ ಭಾವೋ
ದ್ಭವಸೆ[4]ಡೆ[4]ಯುಡುಗದೆ ಕಾ[5]ಯ್ದಿ ಸೆ[5]
ತವದಂಬು[6]ಗು[6]ಡಾಗಿ ಬಿರ್ದವೋಲ್ ಬಸವಟಿದಳ್ ೧೨೧

ನಾಟುವ ಸನೆಗಣೆ ಚಿತ್ತಮ
ನಾಟವಿಟಂಬರಿಸಿ ಸೆಸೆಪುದಿಂ ಪೊಸವೇಟಂ
ಕೋಟಿ ತೆಱನಾಗೆ ಕಾಮಿನಿ
ಜ್ಯೋಟದ ಕಥೆಗಳನೆ ಕೇಳಲ[7]ಟ್ಟಿಗೆ[7]ಯಾಡದಳ್ ೧೨೨

ಅಗಿ[8]ವೆರ್ದೆ[8]ಯೊಳಿಡಿದ ಸನೆಯಂ
ಬುಗಳಿಡಿದವೊಲುಗಿದು ಬಿ[9]ಗೆ[9]ದು ಬಗೆಯುಡೆ ಜಸುಪಂ
ಮೊಗಸೆ ಮಱಿದುಂಬಿ ಮಿಗೆ ಕ
ಮ್ಮಗೆ ಸುಯ್ಯುಳ ಕುಡಿ ಸಿಮಿರ್ಕೆಗೊಂಡುವು ವಧುವಾ ೧೨೩

[1] ಬ (ಘ) [2] ದಂ (ಕ) [3] ವಾ (ಕ ಘ) [4] ದೆ (ಕ) [5] ಯ್ದಿಸಿ (ಖ ಗ) ಯ್ದಿಸ (ಘ) [6] ಗೂ (ಕ ಘ) ಗ (ಗ) [7] ತ್ತಿಗೆ (ಘ) [8] ದೆಡೆ (ಕ) [9] ಗ (ಕ)

ಕಾಮನೆ ಕೃತಾಂತನೊಪ್ಪುವ
ಕೌಮುದಿಯೆ ಕನಲ್ವ ಬಿಸುವಿಸಿಲ್ ನಿದ್ರೆಯೆ ಚಿಂ
ತಾಮಣಿ ಚಿಂತೆಯೆ ಸಖಿಯಾ
ಯ್ತಾ[1]ಮಹಿಳೆ[1]ಗೆ ಮನದೊಳಾಗೆ ಮಾನವಮದನಂ ೧೨೪

ಅಸಿಯಳ ಸಣ್ಣನಪ್ಪ ನಡುವೊಪ್ಪುವಿನಂ ಮಿಗೆ ಸಣ್ಣಮಾಗೆ ಬಿ
[2]ಳ್ಪ[2]ನೆಯೆ ಮುಖೇಂದುಮಂಡಳಕೆ ಮೆಯ್ ಮಱುಗುತ್ತಿರೆ ಚಿತ್ತಜಾಗ್ನಿದ
ೀಪ್ತಿ ನೆ ಬಲಿದಂತೆ ಕರ್ಕಶಕುಚಂ ಬಡವಾಗದೆ ತಾನೆ ತೋಱಿ ಬೇ
ಱಸದಳಮಾಯ್ತು ಚೆಲ್ವು ಕಮಳಾಸ್ಯೆಗೆ ಕಾಮಕಳಾವತಾರದೊಳ್ ೧೨೫

ಪೊನತಳಿರಿಂದೆ ಬೀಸಿ ಕಳೆದಂತಿರೆ ಕಾಂತೆಯ ಕಾಯಕಾಂತಿಯಂ
ಬಿಸುಡೆ ಪಸುರ್ಪು ಸೂಸಿ[3] ಮಳಯೋದ್ಭವಮಂ ಸಲೆ ಪೂವಿನೊಳ್ ಪೊ[4]ರ[4]
ಳ್ದಸದಳಮಾಗೆ ಮಾಡಿದವೊಲುಜ್ವಳಮಪ್ಪೆಳವೆಲ್ಪು ಪೊರ್ದೆ ಮೆ
ಯ್ಮಸೆದನಮಾಸ್ತ್ರನೊಪ್ಪುವಸಿಯಂತಸಿಯಾದುದನಂಗತಾಪದಿಂ ೧೨೬

ಕದಪಿನೊಳಿಟ್ಟ ಕೆಯ್ಯ ಪೊಸ ಪ[5]ಜ್ಜೆ[5]ಯನಂಗನ ಪೊಯ್ದ ಬಾಸುಬಂ
ದದಿನಿರೆ ಪೂವಿನೊಳ್ ಪೊರಳೆ ಪತ್ತಿದ ಪೂಗಳೆ ಕೊಂಡ ಕಾಮಬಾ
ಣದ ದೊರೆಯಾಗೆ ಮೆಯ್ಯ ಮಳಯೋದ್ಭವದಣ್ಪುಗಳೇಱ ಬಾಯೊಳಿ
ಕ್ಕಿದ ಕವಳಂಬೊಲಾಗೆ ಲಲಿತಾಂಗಿ ಬಳಲ್ವಳನಂಗತಾಪದಿಂ ೧೨೭

ಹಾರಮೆ ಭೂಷಣಂ ಮಳಯಜಾತಮೆ ಮೆ[6]ಯ್ಗೆ[6]ಸೆವಣ್ಪು ಸಾರಕ
ರ್ಪೂರಮೆ ತಂಬುಲಂ ತಳಿರ ಜೊಂಪಮೆ ಬಾಸ್ಪನೆ ಕಲ್ಪನಾಮೃತಾ
ಹಾರಮೆ ಜೀವನಂ,ಸಲಿಲಕೇಳಿಯೆ ಕೇಳಿ ನವಪ್ರವಾಳನಂ
ಸ್ತಾರಮೆ ಸಜ್ಜೆಯಾಯ್ತು ತರಳಾಕ್ಷಿಗೆ ತದ್ವಿರಹಾತಿರೇಕದೊಳ್ ೧೨೮

ಸಕೃದಾಯಾತಾ[7]ರ್ಧ[7]ನಿದ್ರಂ ಕ್ಷಣಮುಕುಳಿತನೇತ್ರೋತ್ಪಳಂ ನಿರ್ನಿಮೇಷಾ
ಧಿಕಪೂಸ್ತ್ಯಾಲೋಕಮಪ್ರಸ್ತುತಪರಿಮಿತವಾಚಂ ವೃಥೋತ್ಥಾನಯಾನೋ
ತ್ಸುಕಚಿತ್ತಂ ಮೂಕವೀಣಾಪ್ರ[8]ಯುತ[8]ದರಶಿರಃಕಂಪನಂ ದೂರವಿಚ್ಛಿ
ನ್ನಕಥಾಹೂಂಕಾರಮೇಂ ಶೋಭಿಸಿದುದೊ ತರುಣೀಚೇಷ್ಟಿತಂ ಮೋಹಮುಗ್ಧಂ ೧೨೯

ಬಿಸುಸುಯ್ ಮೆಯ್ವೆರ್ಚೆಯುಂ ಕಂದಿರದಧರಲಸತ್ಪಲ್ಲವಂ ಕಾಯ್ದ ಕಣ್ಣೀ
ರೆಸಱೊಳ[9]ತ್ತ[9]ಳ್ಕಾಡೆಯುಂ ಬಾಡದ ನಯನಯುಗೇಂದೀವರಂ ಚಿತ್ತಜಾಗ್ನಿ
ಪ್ರಸರಂ ತಳ್ತಿರ್ದೆಯುಂ ಸೀಯದ ಗುರುಕುಚಕೋಕದ್ವಯಂ ಶೋಭಿಕುಂ ಸೂ
ಚಿಸುವಂತಾ ಕಾಮಿನೀದುರ್ಧರವಿರಹತಪಃಪ್ರೌಢಸಾಮರ್ಥ್ಯದುರ್ಬಂ ೧೩೦

---

[1] ವಿಕೆ (ಕ) [2] ಳ್ಪೆ (ಖ ಗ) [3] ಡಿಪಕರ್ಪೂಪೂ (ಗ) [4] ದ (ಗ) [5] ಜ್ಜೆ (ಖ)
[6] ಯ್ಗೆ (ಕ) [7] ದ್ರ್ಧ (ಕ) [8] ಙಯ (ಕ) [9] ಮು (ಘ)

ಮೊಲೆ[1]ಗಳೊಳಿ[1]ಕ್ಕಲ್ಬದ್ದ ವಿಶಾಳದಳಂಗಳನಾಳ್ದು ನೀಳ್ದ ಕ
ಣ್ಮಲರ್ಗಳೊಳೊತ್ತಲುತ್ಪಳದ ನಿಟ್ಟೆಸಟಂ, ಕುಚಕುಂಭಮಧ್ಯದೊಳ್
ಸಲಿಸಲೆ ಶಂಕೆಯಿಂದಸಿಯ ಬಾಳಮೃಣಾಳಮನಾವ ದೀರ್ಘಿಕಾ
ಜಲದೊಳಮೆಯ್ದೆ ಪೊಕ್ಕ[2]ರ[2]ಸಿ ಕಾಣದೆ[3]ಕಾ[3]ಯ್ದುದು ತತ್ಸಖೀಜನಂ ೧೩೧

ನೀರೂಡುವಂತೆ ಮದನನ
ಕೂರಸಿಯುಂ ಚುಯ್ಯೆನುತ್ತೆ ಪೊಗೆ ಪಾಯ್ವಿನೆಗಂ
ನೀರೇಜವನದೊಳರ್ದುವ
ಬೋರಂತಿರೆ ವಿರಹದಹನದಗ್ಧೆಯರವಳಂ ೧೩೨

ಸವನಂ ಸವನಂ ಕೃತಕಂ
ಜವನಂ ಜವನಂತೆ ವನಿತೆಗಾಯ್ತು, ಕೊಲಲ್, ಬ
ರ್ಪವನಂ ಪವನಂ ಪೋಲ್ತುದು
ದವನಂ ದವನಂತೆ ವಿ[4]ಷಮ[4]ಮಾಯ್ತನವರತಂ ೧೩೩

ಸುರಿವುವು ಕಣ್ಬನಿಗಳ್ ಪುಗೆ
ಪರಮಾಣುವಿನನಿತು ರಜಮುಮವಳಶ್ರುಜಳಂ
ಸುರಿವುದು ಚಿತ್ರಮೆ ಸುಟಿಯು
ತ್ತಿರೆ ಪೊಕ್ಕಭಿಮಾನಮಂದರಂ ಕಣ್ಬೊಣರೊಳ್ ೧೩೪

ಅಂತಳವಿಗಟಿದ ಲೀಲಾವತಿಯ ವಿರಹಮುಮನಸಕಳಿದ ವಸಂತಸಮಯಮುಮಂ ಕಂಡು ಕಾಳೋರಗಂ ಕೊಂಡವರ್ಗೆ ನಂಜಿನ ಮಡೆ ಕೊಂಡಂತಾದುದೆಂದು ಭಯಂಗೊಂಡು ವಾಸವದತ್ತೆಯ್ಕುಸಖಿಯ್ಕುಲೀಯದೆ ಕಳಾವತಿಯೇಕಾಂತದೊಳ್ ಪೇೞ್ವುದು ಮಂತೆಗೆಯ್ವೆನೆಂದು ವನವಸಂದಪ್ಪದೆ ಚೂತಪ್ರಿಯಂ ಮೊದಲಾಗಿ ಗಿಳಿಗಳುಮಂ[5]ಚೂತಪ್ರಿಯೆ[5]ಮೊದಲಾದ ತುಂಬಿಗಳುಮಂ ವನವಿಪಂಚಿ ಮೊದಲಾದ ಕೋಗಿಲೆಗಳುಮಂ ಆಗಳೆ ಕರೆದು ಕಳಿಪಿ—

ಅರಗಿಳಿ ಕರ್ಚಿ ಪಾಱಿದೊಡೆ ಕೆಂದಳಿರಂ, ಮಱಿದುಂಬಿ ಪೂವಿನೊಳ್
ಪೊರೆದೊಡೆ ಕೋಕಿಳಂ ಕಳಿಕೆಗರ್ಚಿ ಕಳಸ್ವನದಿಂದಮೊರ್ಮೆಯುಂ
ಕರೆದೊಡೆ ತಳ್ತು ಬಂದ ತಳಿರುಯ್ಯಲನೇಱಿ ವಸಂತರಾಗದಿಂ
ತರುಣಿಯರಾಡಿ ಪಾಡಿದೊಡೆ ಪೂಸಿದೊಡಂ[6]ಹರಿ[6]ಚಂದನಂಗಳಂ ೧೩೫

[7]ಪೂ[7]ವಿನ ಕಂಪನೆತ್ತಿದೊಡೆ ತೆಂಕಣ ಗಾಳಿ ವಿಳಾಸಿನೀಜನಂ
[8]ಮಾ[8]ವಿನ ಗೊಂಚಲಂ ಕಿವಿಯೊಳಿಟ್ಟೊಡೆ ಬಂದುದು ಸುಗ್ಗಿ[9]ಜೆಂದವಂ[9]
ಸಾವಿನಮೆಚ್ಚಪಂ ಜಿರಯಿಯಂ ಸ್ಮರನೆಂದೊಡೆ ದಂಡಮುಂಟು ಲೀ
ಲಾವತಿಯಾಣೆಯೆಂದು ಕಳಭಾಷಿಣಿ ಸಾಱಿಸಿದಳ್[10]ಪ್ರಮೋದದಿಂ[10] ೧೩೬

---

[1] ಯೊಳಗಿ (ಫ) [2] ಲ (ಖ ಗ) [3] ಪೊ (ಕ) [4] ಪಿನ (ಕ ಫ) [5] ಕುಸುಮ ಕುಂತಳೆ (ಕ)
[6] ನವ (ಫ) [7] ಮಾ (ಫ) [8] ಪೂ (ಫ) [9] ಜೊನ್ನಕಂ (ಫ) [10] ಧರಿತ್ರಿಯೊಳ್ (ಕ ಫ)

ಅಂತು ಸಾಱೆಯುಂ ಸಾಱಿ ಕೊಲ್ವ ಮಾವು[1]ರಿ[1]ಗಂಗೆ ದೋಷಮಿಲ್ಲೆಂಬಂತೆ ಜಯವೊಡೆದಿಸುವ ವಿಷಮಶರನ [2]ಶರ[2]ಪ್ರಹಾರದಿಂ ಕಿಡಿವಿಟ್ಟಂತೆಯುಂ, ಸಂಕಲ್ಪ ಕಾಷ್ಠದಿಂ ಪೊತ್ತಿದಂತೆಯುಂ, ಚಿಂತಾನಳನಿಸುರಿದಂತೆಯುಂ, ಅರಿದೆನಿಸಿ ಸಖೀಜನಂ ಮಾಳ್ಪ ಶಿಶಿರೋಪಚಾರದಿಂದಮುಮಾಱದೆ ಮೀಱಿ ವಿಷವಹ್ನಿಯಂತಿರಾವರಿಸುವ ವಿರಹವಹ್ನಿಯಿಂ ಕಿಚ್ಚಿನೊಳ್ ಬಿರ್ದ ಕೀಡಿಯಂತೆ ಕಱಗಿ ಕೊರಗುವ ಕಾಂತೆಯನೇಕಾಂತದೊಳ್ ಕಳಾವತಿಯಿಂತೆಂದಳ್—

ಇಂಗಿತಮಱಿವರ್ ಬಲ್ಲರ್
ಭಂಗಿಗಳಂ ಕೆಳದಿ ನಿನಗೆ ಪಿರಿದುಂ ಕೂರ್ಪರ್
ಪಿಂಗಿಸಿದಪರೆಂತುಂ ನಿ
ಸ್ನಂಗಜವೇದನೆಯನೀ ನಿಜಪ್ರಿಯಸಖಿಯರ್ ೧೩೭

ಆದೊಡಮೊಂದನೆಂಬೆನೆ ಸಖೀ ಬಱಿದೇಕೆ ಸಖೀಜನಕ್ಕೆ ಪಂ
ಗಾದಪೆಯಾಗದಾರ ದೆಸೆಯಿಂದಮುಮಪ್ಪೊಡೆ ದೈವಯೋಗದಿಂ
ದಾದಪುದಾರಿದಂ ಮೊದಲೊ[3]ಳಂ [3]ಸಮಕಟ್ಟಿದರಿಲ್ಲಿ ಸಂದೆಗಂ
[4]ಗೋ[4]ದಿರವೇಡ ದೈವಬಲಮುಳ್ಳವರ್ಗಾಗದುದುಂಟೆ ಲೋಕದೊಳ್ ೧೩೮

ಅನುಪಮಕೀರ್ತಿಕಾಂತನ ಮನೋಹರರೂಪನ ಮಾನಮೇರುಶೈ
ಲನ ಕಮನೀಯನಾಯಕನ ಸಜ್ಜನಸೇವ್ಯನ ಸೂಕ್ತಿಕರ್ಣಪೂ
ರನ ಸಹಜಪ್ರಮೋದನ ಕಳಾರ್ಣವತೀ[5]ರ್ಣ[5]ನ ಕೋಮಳಸ್ವಭಾ
ವನ ಕವಿರಾಜಮಲ್ಲನ ವಿ[6]ನೀ[6]ತನ ನೂತನದಾನಧೀರ[7]ನಾ[7] ೧೩೯

ಇದು ವಿದಿತ ವಿವಿಧಪ್ರಬಂಧ ವನವಿಹಾರಪರಿಣತ ಪರಮಜಿನಚರಣರಮ್ಯ [8]ಹೈಮಾ[8]ಚಳೋಚ್ಚಳಿತ
ನಖಮಯೂಖ ಮಂದಾಕಿನೀ[9]ಮಜ್ಜನಾ[9]ಸಕ್ತ ಸಂತತೋತ್ಸಿಕ್ತ ದಾನಾವೋದಮುದಿತ
ಬುಧಮಧುಕರ ಪ್ರಕರ ಕವಿರಾಜಕುಂಜರ ನೇಮಿಚಂದ್ರ ವಿರಚಿತಮಪ್ಪ
ಲೀಲಾವತೀ ಮಹಾಪ್ರಬಂಧದೊಳ್ ವಸಂತಸಮಯ ವರ್ಣನಂ
ನವಮಾಶ್ವಾಸಂ

---

[1] ಲಿ (ಕ ಫ) [2] ರಸನ (ಕ) [3] ಳಾ (ಕ) [4] ಗಾ (ಕ ಫ) [5] ರ (ಖ ಗ)
[6] ನೂ (ಫ) [7] ನಂ (ಕ ಫ) [8] ಹರ್ಮ್ಯಾ (ಕ ಫ) [9] ಖ ಗ ಪ್ರತಿಗಳಲ್ಲಿಲ್ಲ

## ದಶಮಾಶ್ವಾಸಂ

ಶ್ರೀವಿನಯವಿಳಾಸನ ಕೈ
ದಾವರೆಯುಮಂ ಸಿರಿಯ ಸೈಪು ತನಗುಳ್ಳೊಡಮೇಂ
ದೈವದಿನಮುಖಮದಿಲ್ಲದೊ
ಡಾವಳ್ಗಂ[1]ಪಿಡಿವೃದರಿದು[1] ಪಂಕಜವದನೇ

ಕಿನ್ನರಖಚರಸುರಾಸುರ
ಪನ್ನಗಪೂಜಿತೆಯೆನಿಪ್ಪ ಪದ್ಮಾವತಿಯಂ
ಸನ್ನಿಹಿತೆಯನಾರಾಧಿಸು
ನೀನ್ನೆರವೊಡೆ ಮನದೊಳಿರ್ದ ಮಹಿಮಾರ್ಣವನೊಳ್

ನೀನುಮಾದೇವಿಯ ಪಸಾಯದಣುಗಿನ ಕೂಸಪ್ಪುದಱಿಂ ನಿನ್ನವಸ್ಥೆಯಂ ಕಂಡು ಕಡೆಗಣಿಸಲಱಿಯದಿನ್ನೆವರಂ ನಿನ್ನಿಯನಂ ತನ್ನ ಸಾಮರ್ಥ್ಯದಿಂದಿಲ್ಲಿಗೆ ಬರಿಸುವುದುಂ ದೊರೆಕೊಳ್ವುದೆಂದು ಪೇೞ್ದ ಸಖಿಯ ಮಾತು ಮನಃಪ್ರಿಯಸಂತೆ ಮನಂಬುಗೆ ಪೋಗಿ ದೈವಮೆ[2] ದಯಿ[3]ತನಾದಂತೆ ಶಿಶಿರೋಪಚಾರಕ್ಕಂ ದೇವತಾಪೂಜೋಪಚಾರಕ್ಕಂ ಏಕಾಸ್ಪದಮಾದ ಕುಸುಮಪುರದ ಪೊಱವೊಟಲ ವಸಂತಕರೋದ್ಯಾನದ ನಡುವೆ ವಸಂತಲಕ್ಷ್ಮಿಯಿರ್ಪಂತೆ ನೆಲಸಿ ನಿಂದ ಪದ್ಮಾವತಿಯುಂ ಲೀಲಾವತಿ [5]ಬಲ[5]ಂಗೊಂಡು ಪಿಡಿವೂವನೀಡಾಡಿ ನಿಜಪ್ರತಿಬಿಂಬದೊಳ್ ಮುಂಡಾಡುವಂತೆ ಮಣಿ[4]†[4] ಪೀಠದೊಳ್ ಪೆಱೆಸೊಸಲನಿಟ್ಟು ಪೊಡೆವಟ್ಟು ಕೆಯ್ಗಳಂ ಮುಗಿದು [5]ಮುಂದೆಸಿಂದು[5]--

ಸೋಪಾಗಕೆಱೆಯಳಿಂದೀವರ[6]ಲೋಚ[6]ನೆ
ದೇವಸ್ತ್ರೀ [7]ಚಿಕು[7]ರಪರಿವೃತಪಾದೆ ಪ
ದ್ಮಾವತಿ ವರದೆಯೆಮಗಕ್ಕೆ

ಎಂದು—

ಕತ್ತುರಿಯ ಸಾರವಣೆ ಬಿಡು
ಮುತ್ತಿನ ಕಡೆ ಕಂಪುವಿಡುವ ಕಪ್ಪುರವುಡಿಯಿಂ
ದೊತ್ತಿದ ಲತೆ ಪೂವಟ್ಟೆಯಿ
ಸೊತ್ತಿರಿಸಿದ ಬಂಧವೆಸೆಯೆ ದೇವಿಯ ಗೃಹದೊಳ್

[1] ದಿಳಿದೆ . . . (ಕ ಗ) ಪಡೆದದೀಽದೆ (ಘ) [2] ದೈವ (ಕ) [3] ಬೆಸ (ಕ) [4] ಮಯ (ಘ) [5] ಘ ಪ್ರತಿಯಲ್ಲಿಲ್ಲ [6] ಲಾಂಛ (ಕ ಗ) [7] ಚತು ( ಗ)

ಮನಱಿದು ನವಗರ್ಭಿಣಿಯಂತೆ ಬಯಕೆಗೂಡಿ ಬೇಸಗೆದೊಱೆಯಂತೆ ತಣ್ಣೀರ ಪಱಿಯುಡುಗೆ ಕಲಿಯಿಂ ಶರಗ್ರಸ್ತ ಧೀರುವಿನಂತಿರೆರ್ದೆಯಟ್ಟಿ ಮೆಟ್ಟಿ ತೀವ್ರ ಜ್ವರಮಂ ತಂಪುಗಿಯ್ವಂತೆ ಸಂತಾಪನೊಳ್[1]ಸಾ[1]ರೆ ಸೊಗಸಿನ ಪದ್ಮದಂತೆ ಮೊಗ್ಗಮಲರೆ ಅಮರ್ದಿನೊಟ್ಟಿದ ನೆಯ್ದಿಲಂತೆ ನಯನಕಾಂತಿಯಿಂ ನಯವೇಱಿ ಮಗುಟ್ಟಿದ ದೀಪ ಕಳಿಕೆಯಂತೆ ಕೊರ್ವಿ ಕಾರ್ಗಾಲದ ನವಿಲಂತೆ ನಲಿದು ಸುಗ್ಗಿಯ ಕೋಗಿಲೆಯಂತೆ ರಾಗಿಸಿ ಪಗಲ ಮೊಗಂಗಂಡ ಚಕ್ರವಕ್ಕಿಯಂತೆ ಸಂ[2]ತಾಪ[2]ದಂತಮನುಸಿಯ್ದು ಸಿಂ[3]ಗ[3]ರಂಗೆಯ್ವಳಂತಿರಾನಂದಂಬಡೆದೆನೆಂದು ಮೇಳಕ್ಕಾರ್ತಿಯಂತಿರಾಳಿಗುಸಿರ್ದು ಮೀಸಲ್ವೆಣ್ ವರಂತೆ ದೇವತೆಗೆ ಪೊಡೆಮಟ್ಟು ಸ್ವಾರಿವದಂತೆ ನೆಲೆಮಾಡಕೆ ಪೋಗಿ ಕಾಲೂರ ಸೂಳೆಯಂತೆ ರಜನಿಯ ಬರವಂ ಪಾರುತ್ತುಮಿರ್ಪನಮಸ್ತಗಿರಿಶಿಖರಮೆಂಬ ಸಂಕೇತ ಸದನಕ್ಕೆ—

ಬಿಸುಪಿಂದಂ ಸೋಂಕಿ ಬಾಡಿ ಬಿಲನೊಣಗಿಸುತುಂ ಮೆಯ್ಯನೀಡಾಡಿ ಮೆಯ್ಗಂ
ದಿಸುತುಂ ತಾರಾಪ್ರಸೂನಂಗಳನೆಳವಿ ನವೀನಪ್ರವಾಳಂಗಳಂ ಬಾ
ಡಿಸುತುಂ ಕೈಗುತ್ತಿಕೊಂಡುರ್ಕಿಸುತುಮಖಿಳತೋಯಂಗಳಂ ತದ್ವಿಯೋಗಾ
ವಸಿತಂ ಬರ್ಪಂತೆ ಬಂದಾಜಿವನಸಗತಸಂಧ್ಯಾಪ್ರಸಂಗಂಪತಂಗಂ

ಪೊಡುವ ಕುದುರೆ ಬಿಸಂಗೊಂ
ಡೋಡುವ ತೇಗೊಂದೆ ಗಾಲಿ[4]ಯೆಸಪಂ[4] ಬಿಟವಂ
ಕೇಡಿಸ್ಥಲಸಿದೊಡಕ್ಕುಮೆ
ನೋಡಿರೆ ರವಿ ಕೆಡೆದನಸ್ತಗಿರಿಮಸ್ತಕದೊಳ್ ೧೭

ಸೋಂಕೆ ಕರಗುತ್ತೆ ನಂಜೆ ಕ
ರಂ ಕಡುಪಿನೊಳಪ್ಪೆ ನೆಗೆದ ರೋಮಾಂಚಂಗಳ್
ನೂಂಕೆ ಕಳೆದಂತೆ ಕೆಡೆದಂ
ಪಂಕಜಸಖನಾಗಳಪರಜಳನಿಧಿಜಳದೊಳ್ ೧೮

ಪರಿಣತದಿನಶಿರದಂತಿರೆ
ಖರಕಿರಣಂ ಕಾಲಚಕ್ರಹತಿಯಿಂ ಕೆಡೆಯಲ್
ಸುರಿದು ಪರೆದರುಣಜಲದಂ
ತಿರೆ ಪಸರಿಸುತಿರ್ದುದಪರಸಂಧ್ಯಾರಾಗಂ ೧೯

ಅಂತುಮಲ್ಲದೆ—

ಅಂಬರಮಣಿ ಮುಬುಗಿದ[5]ನಿಂ[5]
ತುಂಬುವಿನಂ ಹಿಮಕರಾಂಶುಗಳ್ ಪತ್ತುವವೆಂ
ದಂಬರಮಂ ಪೊದೆಯಲ್ ಪೀ
ತಾಂಬರಮಂ ತೆಗೆದನೆನಿಪೆ ಸಂಧ್ಯಾರಾಗಂ ೨೦

---

[1] ಸೊ (ಕ) [2] ತಸ (ಗ) [3] ಗಾ (ಕ) [4] ಪೊಣೆವಂ (ಕ) [5] ನೆನೆ (ಕ)

ಅಲ್ಲಿಂ ಬಳಿಯಂ—

ಕಿಸುಸಂಜೆ ಕಿಡ್ತು ಪೋಲ್ ಪೊ
ತ್ತೆ ಸುರತಸಂಕೇತನಮನಂದು ನಂದಿಸಲಿಂದ್ರಂ
ಬೆಸಸಿದ ನೀಲಾಂಭೋಧರ
ನಿಸರಮಿದೆನೆ ಮೂಡ ಮೂಡುತಿರ್ದುದು ತಿಮಿರಂ ೨೧

ಬಯಲೊಳ್ ತಕ್ಕಂಗೆ ಪೇೞ್ದು ಕಕ್ಕದೆ ಕುಲವಧುವೋಲ್ ಕಱಱಲೆಂದುಜ್ಜ್ವಲಿಸೀ
ಶಯನೀಯಶ್ರೀಯನಂದಾ ವರುಣಶರಣಮಂ ರತ್ನದೀಪಪ್ರಭಾಸಂ
ಜಯಮಂ ಕೈಸನ್ನೆಗೆಯ್ಯುತ್ತಿನನೊಳವುಗೆ ಬೆಂಬೆನ್ನನುದ್ಘೃತರಾಗ್ರೋ
ದಯಿ ಸಂಧ್ಯಾದೇವಿಯುಂ ಪೊಕ್ಕವೊಲಡಗಿದಳೇನೆಂಬೆನಾಶ್ಚರ್ಯದುರ್ಬಂ ೨೨

ಪೊಕ್ಕ ಪುಗಿಲೊಳೆ ಪೊಸಲ್ವರಿ
ದೊಕ್ಕೆಱೆಯುದ ನೆತ್ತರಂತೆ ಸಂಜೆ ಕರಂ ಕೈ
ಮಿಕ್ಕೊಕ್ಕದವೆ ರಾತ್ರಿರಾಕ್ಷಸಿ
ನಕ್ಕದಳೆನೆ ಮಾಯಮಾದುದಂತಾ ಕ್ಷಣದೊಳ್ ೨೩

ಓಸರಿಸೆ ಸಂಜೆ ಜವನಿಕೆ
ಯೋಸರಿಸಿದ ತೆಱದೆ ರಾತ್ರಿನರ್ತಕಿ ಪುಗುತುಂ
ಸೂಸಿದ ಪುಷ್ಪಾಂಜಳಿಯೆನೆ
ಭಾಸಿಸಿದುವು ಗಗನರಂಗ[1]ದೊಳ್[1] ತಾರಗೆಗಳ್ ೨೪

ಇಸಿಸಿಸಿಸೆಳಗಬ್ಬಲಿಯುಮ
ದಿಸಿಸಿಸಿಸಿಟಿವೆಳಗುಮೊಡನೆ ಕಲಸಿರೆ ಕದಡಿ
ತ್ತೆಸಸುಂ ಪ್ರದೋಷಮುಹಿಷಸಿ
ನೆಸಿಸಿದುದು ದಿಗಂತಸೇತುಭುವನತಟಾಕಂ ೨೫

ಅಂಗಂಗಳ್ ನಸುದೆಱೆಯೆ ದಿ
ಗಂಗನೆಯರ ಮೇಲೆ ಕವಿದ[2]ತೆಳ್ಗಬ್ಬ[2]ಲಿ ಜೆ
ಲ್ಲಿಂಗುಟ್ಟ ಕರಿಯ ಕಾಗಿನ
ಭಂಗಿಯನನುಕರಿಸುತಿರ್ದುದಂತಾ ಕ್ಷಣದೊಳ್ ೨೬

ದಿವಿಜೇಂದ್ರೇಭಪ್ರಭೇದಂ ದಹನಬಹಳಧೂಮಂ ಯಮೋಜ್ಜ್ವರ್ಬಲಾಯು
ಜ್ಜ್ವಲಿಕಂ ಕ್ರವ್ಯಾದಕಾಯದ್ಯುತಿ ವರುಣಗ್ರಹಸ್ಥಾಸ್ನು ಕೃಷ್ಣಪ್ರಕಾಶಂ
[3]ಪ್ರ[3]ವನೋದ್ಧೃತ್ಕೃಷ್ಣಸಾರಪ್ರಭೆ ಧನದಪುರೀನೀಳಶಾಳಾಂಶುಜಾಳಂ
ಭವಕಂಠಚ್ಛಾಯೆ ಪರ್ವಿತ್ತೆನೆ ದೆಸೆದೆಸೆಯಂ ಮರ್ಬು ಪರ್ವಿತ್ತಗುರ್ಬಿಂ ೨೭

---

[1] ಮಂ (ಕ) [2] ತುಳುಗತ್ತ (ಕ) [3] ಸ (ಕ)

ಭಗಣಲತಾಂತಸಂತತಿಗೆ [1]ಪಾಯ್ವ ವಸೇ[1]ಜವಸಂ
ಪುಗಿಯೆ ಮರಲ್ದು ಬಿಟ್ಟು ಬಿಸುಟಿಪ್ಪ ಮದಶ್ರಮಮಂ
ದಿಗಿಭದ ಕರ್ಣತಾಳಕಗಿದೞ್ಗಿಳಿಜಾಳದ ಪೋಲ್
ಗಗನದೊಳುರ್ವಿಯೊಳ್[2]ನೆಱೆಯೆ[2] ಪರ್ವಿದುದಂದು ತಮಂ ೨೮

ದೆಸೆಯಿದು ಭೂವಲಯಮಿದಾ
ಗಸಮಿದು ತಾನೆಂಬ ಭೇದಮಿಲ್ಲೆನೆ ತಮಮಂ
ಬ್ಬಿಸಿದುದು ಜಗಮಂ ಕೃಷ್ಣಂ
ಬಸಿಱೊಳಗಿಟ್ಟಂತೆ ರಜನಿಚರಭಯದಿಂದಂ ೨೯

ಮತ್ತಮಿನಿಸಾನುಂ ಬೇಗದಿಂ—

ಉಡುಪತಿ ಪತಿ ಪಿಂತನೆ ಬಂ
ದಡಸಿ ಮುಸುಂಕಿರ್ದ ತಿಮಿರನೀಳಾಂಬರಮಂ
ಪಿಡಿಯೆ ಭಯಮುತ್ತಪೋಲ್ ಬಿ
ಳ್ಪಡರ್ದುದು ವದನಕ್ಕೆ ಪೂರ್ವದಿಗ್ಬಂಧಕಿಯಾ ೩೦

ಊದಿದ ಸುಟ್ಟುರೆಯುದಯತ
ಟೋದಿತವನದಿಂದೆ ಸುತ್ತಿ ಸುಟಿದೆತ್ತಿದ ಪೊಂ
ಗೇದಗೆಯ ದೂಳಿಯೆನೆ ಚೆ
ಲ್ವಾದುದು ನೆಗೆದಮೃತಕರನ ಕರನಿಕರಂಗಳ್ ೩೧

ಅಲ್ಲಿಂಬಱಿಯಂ—

ಶಿರದೊಳ್ ತಾರಾಕ[3]ಪಾಲಂ[3] ಪೊಳೆಯೆ ಕರಜಟಾಜೂಟಮಿಂಬಾಗೆ ಜ್ಯೋತ್ಸ್ನಂ,
ಸುರಸಿಂಧುಸ್ರೋತಮಂ ಪೋಲ್ತಿರೆ ತೊಲಗೆ ತಮೋರಾಕ್ಷಸಂ, ಚರ್ಮಚಿತ್ರಾಂ
ಬರಖಂಡಂ ಕೂಡೆ, ಕಾಮಂ ಕರಮುರಿವಿನೆಗಂ ಮಂಡಳಂಗೊಂಡು ಪರ್ಬು
ತ್ತಿರೆ ಸಂಧ್ಯಾರಾಗನೇತ್ರಾನಲನುದಯಿಸಿದಂ ಚಂದ್ರಚಂದ್ರಾರ್ಧಚೂಡಂ ೩೨

ಆಗಳ್ ಚತುರಚತುರಿಕಾಪ್ರಶ್ನೋತ್ತರಂಗಳ್ ನೆಗಳ್ದುವದೆಂತೆನೆ—

ಯುವತೀನೇತ್ರೋತ್ಪಲಂ ಮುಂತಲರೆ ಕುವಲಯಂ ಪಿಂತೆ ಚೇತಶ್ಚಕೋರೀ
ನಿವಹಂ ಮುಂತಾ ಚಕೋರಪ್ರತತಿ ನಲಿಯೆ ಪಿಂತುರ್ಬೆ ಭೂಲೋಕರಾಗಾರ್ಣವ
ಮೆಲ್ಲಂ ಮುಂತೆ ಪಿಂತರ್ಣವಮೊಗೆವುದಿದೇಂ ರೋಹಿಣೀಮಾನಸಮುಕ್ತ
ಪ್ರವಿಲಗ್ನಾಪಾಂಗರಕ್ತದ್ಯುತಿಲಳಿತಲಸಚ್ಚಂದ್ರಿ[4]ಕಾ[4]ಚಂದ್ರಬಿಂಬಂ ೩೩

[1] ಪೊಯ್ವನೆ (ಘ) [2] ಪುದಿದು (ಘ) [3] ಳಾಪಂ (ಗ) ವಾಳಂ (ಘ) [4] ಕಂ (ಘ)

ಪಿರಿದುಂ ಲೀಲಾವತೀದೇವಿ[1]ಯು[1] ನಿಜವದನಜ್ಯೋತ್ಸ್ನೆಯಂ ಕೊಳ್ಳೆ ನಾಸೆಂ
ದುರಿಯಂ ತ್ರಿಪ್ಯೈಸಿ ದಿವ್ಯಂಬಿಡಿವವೊಲುದಯಾವಸ್ಥೆಯೊಳ್ ಸಂಜೆಗೆಂಪಾ
ವರಿಸಿತ್ತಲ್ಲಿಂ ಬಟಿಕ್ಕೇಟಿಡಿ ನಡೆದದನೀಡ್ರಾಡಿ ನಿಂದಂತೆ ಬೆಳ್ಪು
ಬ್ಬರಿಸಿತ್ತಲ್ಲಿಂ ಬಟಿಕ್ಕೇನೆಸೆದುದೊ ಶಶಿಯೊಳ್ ಸೋಲ್ತು ಬೆಂದಂತೆ ಚಿಹ್ನಂ ೩೪

ಇದು ನಾನಾಕೈರವೌಘಸ್ಮಿತದಿನೊದ[2]ವಿ[2]ತೋ, ಕ್ಷೀರವಾರಾಶಿಪೂರಂ
ಪುದಿಯಲ್ ಪೆರ್ಚಿತ್ತೊ, ಚಿತ್ರೋ[3]ತ್ಸ[3]ವಕರತರುಣೀಲೋಚನಜ್ಯೋತ್ಸ್ನೆಯಿಂ
ಕೊರ್ಬಿದುದೋ ಪೇಡೆಂಬವೋಲೊರ್ಮೊದಲೆ ಕವಿದ ಚಂದ್ರಾತಪಸ್ರೋತದೊಳ್ ತೀ
ವಿದುದಾದಂ[4] ತೇಂಕಿದಂತಿ[4]ರ್ದುದು ಸಕಲದಿಶಾವ್ಯೋಮಭೂಮಿಪ್ರತಾನಂ ೩೫

ಅಂತು ಪಸರಿಸಿದ ಪೊಸವೆಳ್ದಿಂಗಳ್ಗೆ ಪಸದ್ರನಮೆನಿಸಿ ಪಸದನಂಗೆಯ್ದು—

ನಸುಬಿರಿದಚ್ಚ ಮಲ್ಲಿಗೆಯ ಸೂರ್ಮುಡಿಯಿಂ, ಸಿರಿಗಂದದಣ್ಪಿನಿಂ
ಮಿಸುಗುವ ಮುತ್ತಿನಾಭರಣದಿಂ ಸುಲಿಪಲ್ಗಳ ಸೂಸುವೆಳ್ಪಿನಿಂ
ದೆಸೆವ ದುಕೂಲದೊಂದುಡೆಯಿನಂದಮೃತಾಂಶುಮರೀಚಿಯಿಂದೆ ನಿ
ರ್ಮಿಸಿದವೊಲೊಪ್ಪಿದಳ್ ಧವಳಲೋಚನೆ ವಾಸವದತ್ತೆ ದೇಸ್ಸೆಯಿಂ ೩೬

ಮಸೆದೆಳಮಿಂಚೊ ರಂಜಿಸಿದ ರತ್ನಶಲಾಕೆಯೊ ಕಾಮದೇವನ
ರ್ಚಿಸಿದಲರಂಬೊ ಪೂತ ಲತೆಯೋ ನನೆಯೇಱು ಮಡಲ್ತ ಮಾವೊ ಸು
ಣ್ಣಿಸಿದಮೃತಾಂಶುಲೇಖೆಯೊ ವಿಲೋ[5]ಚ[5]ನಮಿಟ್ಟ ಸಜೀವಚಿತ್ರವೋ
ಪೊಸನನೆದೊಟ್ಟ ಪದ್ಮಿನಿಯೊ ಕೈಗೆಯೆ ಕಣ್ಗೆಸೆದಿರ್ದ ಕಾಂತೆಯೋ ೩೭

ಅಂತು ಕೊರ್ಬಿಂಬ ಕಿಟ್ಟಮುದುರೆ, ಪಸುರ್ವಣ್ಣವೆಂಬ ಕಾಳಿಕೆ ಕಟಲೆ, ವಿರಹಾಗ್ನಿಯಿಂ ಕಾಯ್ಸಿ, ಕುಸುಮಕಾಂಡದಿಂ ಪೊಯ್ದು, ನೀರ್ದಳಿಪದಿಂ ನೀರೂಡಿ, ತಳಿರಿಂ ತೊಡೆದು, ಬೆಳ್ದಿಂಗಳಿಂ ಪುಳಿಗರ್ಚಿ, ಕುಸುಮಶಯನಶಾಣದೊಳ್ ಪೊಸವೆಳ್ಪು ಪಸರಿಸಿ ಕುಸುಮಶರನೆ ಮಿಸುಗೆ ಮಸೆದಸಿಯಂತಿರೆಸೆವಸಿಯ ಮೆಯ್ಗೆ ಮೆಯ್ಸಿರಿಯಾದ ಬೆಳ್ಪಸದಿಂ ತುಹಿನಕರಕಾಂತಿ ಕವಿದ ಕುಮುದಿನಿಯಂತೆ ಕಣ್ಗೆವಂದು ಕೆಳದಿಯರ್ ವೆರಸು ದೇವಿಯ ವರಮಂ ತಿಳಿಪಲ್ [6]ಚಾ[6]ಂದಳವೇಱುವಂತೆ ಮಾಡಮನೇಱಿ ಮಿಂಚಿಂ ಕಡೆದಂತೆ ಕಣ್ ಕೋರೈಸೆಯುಂ ಕಿರ್ಚಂ ಪುಗುವಂತೆ ಮೆಯ್ಯುಗುರ್ಚಿಸೆಯುಂ ಕಾದಲನೊಳ್ ಕೂಡುವಾಸೆಯಿಂ ಮಸಂಬಲ್ದಿದು ಬೆಳ್ದಿಂಗಳೊಳ್ ಪೊಕ್ಕು ಪರಾಂಗಣದೊಳ್ ಪೊಚ್ಚಪೊಸವಡಿಯಿಂ ಪಚ್ಚವಡಿಸಿದ ಹಂಸತೂಳತಳ್ಪಮಂ ಸಿರಿ ಸಿತಸರಸಿಜದ ಸಜ್ಜೆಗೇಱುವಂತೇಱಿದ ಬೇಗ[7]ದಿಂ[7] ಕೆಳದಿಯರಂ ಕೆಯ್ದುದಿಂದಮೆ ಕಳಿಪಿ—

---

[1] ಗೆ (ಕ) [2] ಗಿ (ಕ) [3] ದ್ಭ (ಕ) [4] ತಂಕಿಸುತ್ತಿ (ಘ) [5] ಕ (ಕ) [6] ಕಘಗಳಲ್ಲಿ ಲ್ಲ
[7] ದೊಳ್ (ಕಘ)



ದೂತೀಪ್ರೇಷಣಕೃತಸಂ
ಕೇತಾದಿ[1]ಗ[1]ಳೊಂದುಮಿಲ್ಲ ಸಲ್ಲಸ ಬರವಿಂ
ಗಾ ತರುಣಿ [2]ಪಾ[2]ರ್ದಳಾಪ್ತರ
ಮಾತುಗಳಂ ಸಂಚಿದವರ್ಗೆ ಸಂದೆಯಮುಂಟೇ

ಅಂತು ಪಾರುತ್ತುಮಿರ್ದು ಚಕೋರಿಗಳಂ ಚೆಲ್ಲಮಾಡಿಸುವಂತೆ ನವಚಂದ್ರಿಕೆಯ ಸೋಲಗಿಸುವಂತೆ ಮೆಯ್ಯುಸಿಕ್ಕಿದಾರಮಣಿಯಮೃತಕರಬಿಂಬಮನವಲೋಕಿಸುತ್ತು ಮಿನ್ನಿಯನಂ ಮನದೊಳ್ ಭಾವಿಸುತ್ತುಮಿರೆಯಿರೆ—

ಮೃಗಮದದೊಳ್ ಪೊರಳ್ದು, ಪೊಸಸಾಸವದೊದ್ದೆಯೊಳದ್ದು ಬಿದ್ದು ಮ
ಲ್ಲಿಗೆಯ ಪರಾಗದೊಳ್ ಪೊರೆದು ಕಪ್ಪುರದೊಳ್ ಸುಟಿಗೊಳ್ಳ ಧೂಪದೊ
ಳ್ಪೊಗೆಗಳನೆತ್ತಿ ಪೂವಲಿಗೆ ಪಾಯ್ದು ಮದಾಳಿಯ ಜಾಯ ಕಂಪನಾ
ವಗಮೆಡೆ ಸೂಱೆಗೊಂಡೆಸಗಿತಿಮ್ಮ[3]ಗೆ[3] ಕಮ್ಮ[4]ಗೆ[4] ಮಂದಮಾರುತಂ

ಸ್ತನಚೇಲಾಂಶುಕಭಾರಮಂ ಸೆಳೆಯುತುಂ ರೋಮಾಂಚಮಂ ಮೆಯ್ಯೊಳೊಳ್
[5]ಮೊ[5]ಸಸುತ್ತುಂ, ಕುರುಳಂ ಚಲಂದೆಗೆಯುತುಂ, ಶೃಂಗಾರಸಾರಸ್ಮಿತಾ
ನನಪಂಕೇಜದ ಕಂಪನೀಟ್ಟುಕೊಳುತುಂ ಮಂದಾನಿಳಂ ಸೋಂಕೆ ತ
ನ್ನಿನಿಯಂ ಬಂದಮರ್ದಪ್ಪಿದಂತೆ [6]ಸುಖ[6]ದಿಂ ಕಣ್ಗೆಯ್ದಳಿರ್ಪನ್ನೆಗಂ ೪೦

ಅಂತು ಮಯೂಖಿಸಿರ್ದುರಗಿರಿಯೊಳ್ ಹಿಮಕರಕಿರಣಂ[7]ಗಳ[7]ಕೋಟಿಂ ಕಾಯ್ದು ರವಿಕಾಂತದೊಳ್ಗಿರ್ಚಿಸಂತೆ—

ಅತ್ತುರ್ವೀಪಾಲಕಂಗುರ್ವಿದ ಮದನಮಹಾತಾಪಮಂ ಕಾಣುತುಂ[8]ಜಿ
ಕ್ಕುತ್ತಂ[8]ಘೋಜಾಕರಕ್ಕಂಬುಜದಲಗಳಸಾಯಲ್ಕೆ ಪೋದಂ ಪ್ರಭಾಸೋ
ಜ್ಜೈತ್ರಂ ತನ್ಮಂತ್ರಿಪುತ್ರಂ [9]ಪೆಱ[9]ಗಪರಪಯೋರಾಶಿ[10]ಘೋಷಪ್ರಭಂ[10] ಪೊ
ಣ್ಮಿತ್ತಾಗಳ್ ರತ್ನಕೂಟಾದ್ರಿಯೊಳಜಿತಜಿನ[11]ಸ್ಥಾ[11]ನಭೇರೀನಿನಾದಂ ೪೧

ಅದಂ ಕೇಳ್ದು ಕಾರಮೊಬಗಂ ಕೇಳ್ದ ನವಿಲಂ[12]ತೆಯಾ[12]ನಂದಿಸಿ, ನಂದೀಶ್ವರಪರ್ವ ಪೂಜಾನಿರ್ವೃತ್ತನಮೆಂದಱಿದು ಪೂಜಾವಲೋಕನೋತ್ಸು[13]ಕೆಯು[13]ರಾಗಿ ರಾಗದಿನಾ ಚಂದ್ರಲೇಖೆಯುಂ ವಿದ್ಯುಲ್ಲೇಖೆಯುಂ ಪೋಗಲುದ್ಯೋಗಂಗೆಯ್ದು ಪೂಗಣೆಯ ಪುಣ್ಣೇನೆಯಿಂ ಪೊರಳ್ದು ಮೂರ್ಛೆವೋದ ಮಹೀಪತಿಯಂ ಕಂಡು ಏಕಾಕಿಯನೇಕೀಡಾಡಿ ಪೋಪಮೆಂದು ಪರ್ಣಲಘುವಿದ್ಯೆಯಿಂದೆತ್ತಿಕೊಳಿಸಿ—

---

1 ಯೊ (ಕ) 2 ಪೊ (ಕ) 3 ನೆ (ಕ) 4 ನೆ (ಕ) 5 ತೊ (ಖಗ) 6 ಸೊಕ (ಘ) 7 ಳಿಂಬ (ಕಘ) 8 ಮುಂತಂತಂ (ಘ) 9 ಪೊ (ಖಗ) 10 ನಿರ್ಘೋಷಮುಂ (ಘ) 11 ಸ್ನಾ (ಕಖ) 12 ತಾ (ಕಘ) 13 ಕ (ಖ)

ಭರದಿಂದೆ ಪಾಱಿ ಪೋಗು
ತ್ತಿರವಿಂದ್ರಾಸನೆಯರಾ ಸಿತಂಜಿನಿಯಿರ್ದಾ
ಸಿರಿಮಂಚದೊಳವನಿಪನಂ
ಕರತಳದಿಂ ಬಿದ್ದೆಬ್ಬಿಂಧಪಿಹಾಪಾಡಿಸಿದರ್ ೪೨

ಅಂತು ಬಾಳಮರಾಳಿ ಪವಡಿಸಿದ ಪುಳಿನತಲದೊಳ್ ರಾಜಹಂಸನಸೀಡಾಡಿ ಪೋಪಂತಿರಾಕೆ ಪವಡಿಸಿದ ಸಜ್ಜೆಯೊಳರಸನನಾ ವಿದ್ಯೆಯಿಂ ಪೆಲ್ಲಸೀಡಾಡಿ ಪೋಪುದು ಮಾ[1]ಸಪ್ಪುಳಂದೆ[1] ಘೋಂಕನೆಬ್ಬಿ—

ವನಿತೆ ಮುರಿದೇಡೆ ಕುಚಚಂ
ದನಶೀತಳಸೇಕದಿಂದಮೆಬ್ಬಿತ್ತನೊ ತ
ಣ್ಣನೆ ತೀಡುವೆಲರಿನೆಬ್ಬಿ
ತ್ತನೊ ಪೇಡೆನೆ ನೃಪತಿ ಮೂರ್ಛೆಯಿಂದೆಬ್ಬಿತ್ತಂ ೪೩

ಅಂತೊಡನೆಬ್ಬಿತ್ತು ಬೆರ್ಚಿ ಘೋಂಕನೆ ನಿಡುಮಿಡುಕನೆ ಕಂಡು ತಳವೆಳಗಾಗಿ ತಲ್ಲಣಿಸಿ ತನುವೆಲ್ಲಮುಂ ಪರ್ವುವಂತಿರೆರ್ದೆ ಪವ್ವನೆ ಪಾಱಿ ತೆಗೆಯಲುಂ ಪಡೆಯದೆ ಮೆಯ್ಮೆಯ್ಯನೊಱಸೆ ಬೆರಸಿ ಕುಳ್ಳಿರ್ದು ಮರುಳ್ಮಸಗಿದಂತೆ—

ಒರ್ಬೊರ್ವರ ಕೊರಲಿಂ ಮಣಿ
ಹಾರಮುಮಂ ತೆಗೆದು ಮುಗುಳ ಮಾಲೆಯುಮಂ ಚೇ
ತೋರಾಗರಸದೆ ಮೆಯ್ಮಱೆ
ದೋರ್ಬೊರ್ವರ ಕೊರಲೊಳಿಕ್ಕಿದರ್ ಸಂಭ್ರಮದಿಂ ೪೪

ಪದೆದಾಲಿಂಗಿ[2]ಸುವ[2]ಂತೆ ಮೋಹರಸದಿಂ[3]ಪಂ ಸೂಸುವಂತೊಂದನೊಂ
ದಿದಿರ್ಗೊಳ್ವಂತೆ ಕಡಂಗಿ ತಮ್ಮೊಳಿನಸುಂ ಗ[3]ಂಟಿ[3]ಕ್ಕುವಂತಾಗಲು
ಣ್ಮಿದ ಲಜ್ಜಾಂಬುವನೀಂಟುವಂತೆ ಹೃದಯಂ ಕೋಡೊಳ್ವೋಯ್ತು ಕೈಕೊಳ್ವುದೆಂ
ದೊದವಿಂ ಕೈಗುಡುವಂತೆ ಕಣ್ಗೊಳಲವಿಂ ಮೇಲ್ವಾಯ್ದುವೋರೊ[4]ರ್ವರೊಳ್[4] ೪೫

ಆಗಳಗ್ಗಲಿಸಿದ ವಿಸ್ಮಯರಸತರಂಗದೊಳಂತರಂಗಂ ಮುೞುಂಗೆ ಪೊ[5]ದೆ[5]ಯಲ್ ಪಡೆಯದಂತೆ ಕಾಯಂ ಕಂ[6]ಪ[6]ಮಾಗೆ, ಸೋಂಕಿನ [7]ಸುಖ[7]ದಿಂ ಸೊರ್ಕಿದಂತೆ ತುಂಬು[8]ಗಣ್ಣಾ[8]ಯೆ, ಕಾಮಜ್ವರಂ ಬಿಡುವಂತೆ ಬಿಂದುವಿಡೆ, ಪರಸ್ಪರ ಸ್ಪರ್ಶನ ಲೋಲುಪ್ತಿಯಿಂ ಮನಮೆ ತನುವಾದುದನಱಿಪುವಂತೆ ನಯನಾಯಸ್ಕಾಂತಸಂದರ್ಶನದಿಂ ಮುನ್ನಮೊಳಗೆ ಸಿಲ್ಕಿದ ನನೆಯ ಪುಣಂಬುಗಳ [9]ತ[9]ಪ್ಪು ತೆಱೆದು ಪೊಱಮಡುವಂತೆ ಮೆಯ್ಯನಿರ್ಮೊ[10]ಗ[10]ಸೆ, ಕನಸಿನ ಸೋಲಮಂ ಕೊನರಿಸುವ ಕಣ್ಸೋಲಮುಮಂ,

[1] ಸೊಪ್ಪುಳಿಂಗೆ (ಕ ಫ) [2] ಸಿದಂ (ಫ) [3] ದಿ (ಫ) [4] ರ್ಬರಂ (ಫ) [5] ಡೆ (ಕ ಫ)
[6] ಭ (ಕ ಗ) [7] ಸೋಲ (ಫ) [8] ಕಂಬಾ (ಕ ಫ) ಕಂಪಾ (ಗ) [9] ಗ (ಫ) [10] ನ (ಫ)

ಎಮೆಯಿಕ್ಕಲ್ ಮಱೆಯಿಸುವಂತೋರ್ದೊರ್ವರನೊಡಲೊಳ್[1]ಪಸಿ[1] ಕ್ಕೊಳಲ್ಕೆ ಕಡಂಗಿಸುವ ಕಡ್ಡವಣೆಯುಂ, ಮನಮ[2]ನನುವಿ[2]ನಲಾಱದಂತೆಯುಸಿರ್ ಮಿಟ್ಟಿಗೊಳಿಸುವ ಸವಿಯುಂ, ಮೇಲ್ವಾಯಲ್ ಮಸಗಿಸುವಸವಸಮುಮಸುತ್ತೆ ಸೋಲ್ತುಂ ತಣಿಯದೆ ತಲ್ಲಳಿಸಿ ತಳ್ಕಂಕುಗುಟ್ಟುವಳುಕೆಯುಮಿರ್ದ ರೂಪನಿರ್ದಂತಿರೆರ್ದೆಯಂ ಕುದಿಯಿಸಲ್ ಕುಡಂಗುವ ಕಡುಪಂ ನುಂಗಿ ನೀಗುರ್ಚಿಯಿಸಲ್ ಪಡೆವ ಬಸನದ ಪಸಿವುಂ [3]ಬಿ[3]ಗಿದು ಪುಗಲನುವಿಸುವ ಲವಲವಿಕೆಯುಂ, ಕ್ರೂಡಿ ಕರಗಿಸಲ್ ಕಾ[4]ಯ್ವರ[4] ಕಾಯ್ಪುಂ ಬೆರಸಿ ಬೆಚ್ಚಂತಿರಲ್ ಬಯಸುವ ಬಗೆಯುಂ, ಪತ್ತಿ ಪಣ್ದಿದಣಿಯಿಸುವಳಿಪುಂ ಅಳವಿಗಳಿಯೆ; ಸರ್ವಾಂಗದೊಳಂ ಸುಸಿಲ ಸವಿಯಂ [5]ತ್ರ[5]ವಿಸದ ತವಕಮನನುಭವಿಸಿ ಸಸುಸೋಂಕಿನೊಳಂ ಮೆಯ್ಮೆಯ್ಯೊಳ್ ಪತ್ತಿದಂತೆ ಮನಂ ಮನದೊಳ್ ಸಿಲ್ಕಿದಂತೆ ಕಣ್ [6]ಕಣ್ಣೊ[6]ಳ್ ತೊಡರ್ದಂತೆ ಮದನ ಮಂತ್ರವಾದಿ ಗಾತ್ರಸ್ತಂಭಂಗೆಯ್ದಂತಿರೆ ಮಿಡುಕದೆ ಮನಮಂ ಸೂಱೆಗೊಂಡುದರ್ಕೆ ಕಣ್ಣಾಳಿಗಮಂ ಕಾದುವಂತೆಯುಮಿರ್ಬರುಮೋರೊರ್ವರಿಂಪನೆ ಸವಿನೋಟ್ಪಂತೆಯುಂ ಸ್ವಪ್ನಾನುಭೂತರೂಪಾತಿಶಯದಿಂದ ಮತ್ತತಿಶಯಮಾದ ರೂಪಾಕೃತಿಕೌತುಕಪ್ರತಿಪತ್ತಿಯುಮಂ ಪ್ರೀತಿಯುಮಂ ಪೊಸಪೊಸತು ಮಾಡೆ ತಮ್ಮ ತಿರ್ಬರಂಗಲತೆಗಳೊಳ್ ತೊಡರ್ದ ಬಗೆಯಂ ತೆಗೆಯಲಾಱದೆ ನೀಡುಂ ಭಾವಿಸಿ ನೋಡುವಾಗಳ್—

ಕುಸುಮಾಸ್ತ್ರೋದಯದಿಂ ಬೆಳರ್ತೆನಿಯಸಂಗಚ್ಛಾಯೆ ತಳ್ತಂತೆ ಮೆ
ಯ್ಬೆಸುಪಿಂ ಬೆಂದು ಕರಂಗಿದಂತಿರೆರ್ದೆಯಂ ನಟ್ಟುರ್ಚೆ ರಕ್ತಾಂಬುವಂ
ಬ್ಬಸಿವಂತುಬ್ಬಸಮಾದ ಕಣ್ಬೊಣರ ಬೆಳ್ಪುಂ ಕರ್ಪುರಮೋಳ್ಪಂಪುಮೀಂ
ಪೊಸತಾಗಿರ್ದುವು ನೋಟ್ಪ ಕಾಯ್ಪುಡುಗದಿರ್ದಂಭೋಜಪತ್ರಾಕ್ಷಿಯಾ ೪೬

ಅಂತುಮಲ್ಲದೆ—

ಅಲವರಿಸಿ ನೋಡಿದಳ್ [7]ಕೋ
ಮಲೆ[7] ಕಣ್ಗೊಳ್ ಮೂಱು[8] ವರ್ಣಮೆಸೆದಿರೆ ಕರ್ಣ
ಯ್ದಿಲ ಕಿಸುನೆಯ್ದಿಲ ಬೆಳ್ನೆ
ಯ್ದಿಲ ಪೂವಿಂ ಮೋದುವಂತೆ ಚಂದ್ರೋದಯ[9]ಮಂ[9] ೪೭

ಪೊಸಮುತ್ತಂ ತೊಟ್ಟಪ್ಪೋಲ್ ಪೊಣ್ಮುವ ಬೆಮರ್ವನಿಯಿಂ ತಳ್ತ ರೋಮಾಂಚದುರ್ವಿಂ
ಪಸಮುಸ್ನೇಹಾಕುಳಾಲೋಕ[10]ದಿನಿಸೆವ ಲಸದ[10]ಂಧನಿಶ್ವಾಸದಿಂ ಕಂ
ಪಿಸುತುಂ ಕಣ್ಗೊಪ್ಪಿದಳ್ ಕುಟ್ಮ[11]ದ[11]ಳ ಕ[12]ಳ[12]ಕಾಪುಷ್ಪಚಾರಂ ಕರಂ ಶೋ
ಭಿಸುವನ್ನಂ ಬಂಬಿಲರ್ ತೂಗುವ ಪೊಸಲತೆಪ್ಪೋಲ್ ಕಾಂತೆ ಕಣ್ಣೋಲದಿಂದಂ ೪೮

---

[1] ಡಂಗಿಸಿ (ಕ) [2] ಪವಿಸ (ಗ) [3] ಬ (ಫ) [4] ಯದ (ಕ ಫ) [5] ಸ (ಫ) [6] ಕಂಭೊ (ಕ) [7] ಕಣ್ಗೊಳ್ (ಫ) [8] ಬಣ್ಣ (ಕ ಫ) [9] ನಂ (ಕ ಫ) [10] ನಲಸಲೆಸಲ್ಲಂ (ಕ) ನಲಸ . . . (ಖ) [11] ಕು (ಗ ಫ) [12] ದಿ (ಫ)

ಮಿಗೆ ಜಾಣೆಂ ಪದ್ಮಜಂ ಮಾ[1]ಡೆ[1]ಯುಮನತನುವೆ [2]ಕೈವೀ[2]ಸಿದಂ ಮತ್ತೆಸಲ್ ಕಾಂ
ತೆಗೆ ಸೋಲಂ ಶೋಭೆಯಂ ಸೂರ್ಮಡಿಸಿದುದುದಿತಸ್ವೇದಸೋತ್ಕರ್ಷಲಾವ
ಣ್ಯಾಗುಣಂ ಬೇಱೊಂದು ಚೆಲ್ವಂ ತನು[3]ಸವ[3]ಪುಳಕೋದ್ಭೇ[4]ದಿ ಬೇಱೊಂ[4]ದು ಚೆಲ್ವಂ
ನಗೆಗಣ್ ಬೇಱೊಂದು ಚೆಲ್ವಂ ಪ್ರಹಸಿತವದನಂ ಬೇಱೆ ಬೇಱೊಂದು ಚೆಲ್ವಂ ೪೯

ಆಗಳಗುಳದೆ ನಿಧಾನಂಗಂಡಂತೆಯುಂ, ಓದದೆ ಚದುರಾದಂತೆಯುಂ, ದಾವಾಗ್ನಿಯೊಳ್ ಬೇವಂಗಕಾಲವರ್ಷಮಾದಂತೆಯುಂ, ವಿಷಮವಿಷವಿಷೋದಿತಂಗಾಕಸ್ಮಿಕಸುಧಾಸೇಕಂ ಸಮನಿಸಿದಂತೆಯುಂ, ಆನಂದಕಂದಳಿತಹೃದಯನುಂ ವಿಸ್ಮಯವಿ[5]ಸ್ಮೃ[5]ತಶರೀರನುಮಾಗಿ—

ಬೀಸುವವೊಲ್ [6]ಬೆ[6]ಳ್ನಿಯ್ದಿಲ
ಬಾಸಿಗದಿಂ ಮಳಯಜಾಂಬುವಂ ಸೂಸುವವೋಲ್
ಬೀಸತ್ತಿನಿಯಳನರಸಂ
ಬಾಸಣಿಸಿದನಲಸ ಲಸಿತಲೋಚನರುಚಿಯಿಂ ೫೦

ಅಂತಿರ್ಬರುಮೋರೊರ್ವರನೊಱಲ್ದು ನೋಡುತ್ತುಮಿರ್ದು—

ಕನಸಿನೊಳೆ ಕಂಡ ರೂಪಂ
ಮನದೊಳ್ ಮಗುಳ್ದಾ[7]ದಮಱುಸುವಂತಿರೆಯುಂ[7] ಭೋಂ
ಕನೆ ಮೂರ್ಛೆವೋದರೇಕೆಯೊ
ಮನಸಂದೊಂದಿದರ [8]ಸುಖಮ[8]ಸಜನೆಡೆಗಡಿವಂ ೫೧

ಪೂವಿಂ ಪೊಯೆ ಹಮ್ಮೈಸುವ
ದಾವುದೊ ಸುಕುಮಾರವೃತ್ತಿ ಪೆಣ್ಣೆಂದಾ ಲೀ
ಲಾವತಿ ನಲ್ಲಂ ನಯನೇಂ
ದೀವರದಿಂ ಪೊಡೆ ಸೇದೆವಟ್ಟಂತಿರ್ದಳ್ ೫೨

ಅದಲ್ಲದೆಯುಂ—

ಬಲ್ಲುಲನಲ್ಲದೀಯಲೆಯುತಿರ್ದುದು ತೆಂಕಣಗಾಳಿ ಕಾಮನೀ
ಕೊಲ್ಲನೆ ಚಂದ್ರನೀ ಕೊಱೆದು ತಿಂಬನೆ ನಿನ್ನೊಡಗೂಡವೇೞ್ಬು ನೀ
ನೊಲ್ಪುದು ನೋ[9]ಗ್ಗೆ ಕಾ[9]ಡುವುದು ಕಾವುದನಾಥೆಯನೆನ್ನನೆಂದವಳ್
ಕಾಲ್ವಿಡಿ[10]ವಂ[10]ತೆ ಮುಂ[11]ದೊ[11]ಱಗಿದಳ್ ಸುಖದಿಂ ಕಪಿತಾವಿಳಾಸನಾ ೫೩

---

[1] ಡಿ (ಘ) [2] ಕಣ್ಸೊತ್ತು (ಘ) [3] ವನೆ (ಕ) ನನೆ (ಗ) [4] ದ ಮಂತೊಂ (ಘ) [5] ಪ್ರು (ಗ) [6] ಒ (ಕ) [7] ಳ್ದಾಱಿಯಲ್ಕೆ ಪೋಪಂತಿರೆ (ಗ) [8] ಸಾವ (ಕ ಗ) [9] ಗ್ಗಿಕೂ (ಕ) ಲ್ದುಕೂ (ಗ) [10] ದಂ (ಘ) [11] ಶೊ (ಘ)

ಕನಸಿನೊಳೆ ಸುಟಿವಳಂ ನಾಂ
ನೆನಸಿಂಡಂ ನಂಬಿನೆಂದು [1]ಸೆಱೆಯಿರಿಸಲ್[1] ಲೋ
ಚನದಿಂದೆ ಕಟ್ಟಿ ತುಂಗ
ಸ್ತನಿಯಂ ಬರೆ ತೆಗೆಯಲಾಱದಂತೆ ಬೞಲ್ದಂ ೫೪

ಎನ್ನ[2]ದಿ[2]ದಾದೊಡೆ ನೆಱೆಯಲ್
ನಿನ್ನೊಳ್ [3]ಕರ[3]ಗುಗುವೆ ಎನುತುಮಂದೋರ್ವರ್ಗಂ
ನನ್ನಿ ನಿನ[4]ತೆಂದು[4] ಜೀವನ
ಮುನ್ನುಡಿ [5]ದಂತಿರ್ವ[5]ರೊಡನೆ ಮೂರ್ಛೆಗೆ ಸಂದರ್ ೫೫

ನೆರೆವೊಡೆ ಲಜ್ಜೆಯನಡ್ಡಂ
ಬರಿಸುವುದೆಮಗಿಂ[6]ತಿದೆ[6]ಂದು ಚೈತನ್ಯಮನ
ತ್ತಿರಿಸಿ ಬೆರಸುವವೊಲೋರೊ
ರ್ವರ ಮೇಲೆ ಮಲಂಗಿ ಮೆಲ್ಲನೊಱಗಿದರಾಗಳ್ ೫೬

ತಡೆದಿರ[7]ದಿಂದೀ[7]ಜೊನ್ನಂ
ಕಡುವಿಸಿಲವೊಲಪ್ಪ[8]ದವಗೆ[8] ನಿಜವಿರಹದೊಳೆಂ
ದೆಡೆಯುಡುಗದೆ ತೋಱುವವೋಲ್
ಬಿಡುತಂದುವು ಬೆಮರ್ಗಳವರ ಮೆಯ್ಗಳಿನಾಗಳ್ ೫೭

ನಡನಡ ನಡುಗುವಿನಂ ತನು,
ಮಿಡುಮಿಡು ಮಿಡುಕುವಿನಮೆರ್ದೆಯುಮಿಂತು ಮನೋಜಂ
ಕೆಡೆಯಿಸುವನೆಂದು ತೋರ್ಪವೊ
ಲೊಡನುಡುಗಿದುವಂಗವಗಿದುವೆರ್ದೆಮುಗುಳವರಾ ೫೮

ಅರಮೆ ಮುಗಿದಿರ್ದುವೋರೊ
ರ್ವರನೆರ್ದೆಯೊಳೆ ಪುಗಿಸಿ ಮುಚ್ಚಿದಂತಲರ್ಗಣ್ಗಳ್
ಕರಮೆ ಬೆಮರ್ತುವು ಬೆರಸಲ್
ಕರಗುವವೋಲ್ ಕೋಮಲಾಂಗಲತಿಕೆಗಳವರಾ ೫೯

ತಪ್ಪೇನೆಸೆದರೊ ಸುಣ್ಣೊಡೆ
ಯೊಳ್ಪೊಡೆ ಮೆಲ್ಲೆರ್ದೆಯೊಳೆರ್ದೆ ತೊಡಂಕಿರೆ ನಳಿತೋ
ಳೊಳ್ತೋಳ್ ನಗೆಮೊಗದೊಳ್ ಮೊಗ
ಮೇಲ್ಪ್ರ[9]ದಿರೆ[9] ಮೋಹದಿಂದಮಾ ಸ್ತ್ರೀಪುರುಷರ್ ೬೦

---

[1] ಮೆರ್ದೆಮನೆಯೊಳ್ (ಫ) [2] ನಿ (ಫ) [3] ಮಱು (ಕ ಗ ಫ) [4] ಗೆಂತು (ಫ) [5] ದಿತ್ತಂತಿರೆ (ಕ ಗ ಫ) [6] ತುಟಿಂ (ಫ) [7] ಲಿಂದಿನ (ಫ) . [8] ದಿವಗೆರ್ (ಕ) [9] ದವ್ರ (ಕ ಫ) 60 ನೆಯ ಪದ್ಯದಿಂದ 70 ರ ಗದ್ಯದವರೆಗೆ ಕ ಪ್ರತಿಯಲ್ಲಿ ಗ್ರಂಥಪಾತ

ಕುರುಳಿಂ ಕೋದವರಿರ್ದೆಗಳ
ಸರಿವಂತಿರೆ ಸಿಟ್ಟಸಿಡಿಯುಸನೆವಿಲ್ಲಿಡಿದಿ
ರ್ದರುಮನಿರದೊಂದೆ ಸರಲಿಂ
ದುರುಳೆಚ್ಚಸೊ ಮದನನಿನಿಸು ಮೋಹದಿನಾಗಳ್ ೬೧

ಮಱಿದೊಱಗಿದ ನಲ್ಲರ ಬಾ
ಯ್ದೆಱೆಯಿಂ ಪೊಱಮಡುವ ಪುಗುವ ನಱುಸುಯ್ಯಿಂದಂ
ಕಱು[1]ಯುತ್ತೊರ್ಬರ ಮೆಯ್ ಪೆ
ಯ್ಯೊಱೆ[1]ಯಿಂ ಪೊಱಮಡುವ ಪುಗುವ ಹರಣಮನಿಟಿಕುಂ ೬೨

ಕಾಮಿನಿಯ [2]ಶಿಥಿಲ[2]ಕಚಕಬ
ರೀಮೋಘದಿಸುದಿರ್ದ ಶೋರಮಲ್ಲಿಗೆಮುಗುಳ್ಗಳ್
ಕಾ[3]ಮ[3]ಪ್ರಳಯಂ ಕವಿತರೆ
ಪೂಮಡೆ ಸುರಿವಂತೆ ಸುರದುವಂಗದೊಳವರಾ ೬೩

ಅರಸನ ಕೊರಲೊಳ್ ತೊಡರ್ದಂ
ಬುರುಹಾಕ್ಷಿಯ ಕೇಶಪಾಶಮೇಂ ಪೋಲ್ತುದೊ ಚೆ
ಚ್ಚರಮಂತು ಮುಚ್ಚಿ ಪೋಪಂ
ತಿರೆ ಕಡುಪಿಂ ಕೊಂಡ ಕಾಮಕಾಳೋರಗನಂ ೬೪

ಸ್ಮರನಿಟ್ಟ ಸಿದಿಗೆಯಂತಿರೆ
ಸಿರಿಮಂಚಂ ಸ್ಮರಮಹಾಗ್ನಿಯಿಂ ಬೇವರನಾ
ಸ್ಮರಮೋ[4]ಹಮ್ಮೃತರ[4]ನಿರಿದಂ
ಕರದಂಡದಿನಿರಿದು ಸುಡುವವೊಲ್ ಸಸಿವೊಲೆಯಂ ೬೫

ಅರಸನುರದಲ್ಲಿ ನಾಂಟಿದ
ತರುಣಿಯ ಮಲಯ[5]ಜದ[5] ಕುಂಕುಮಾಂಕಿತಕುಚಮೇಂ
ಪರಿಭವಿಸಿತೊ ಕೆಡೆವಿಸಮಿರಿ
ದು ರಕ್ತದೊಳ್ ತೋಯ್ದ ಮದನರದನಿಯ ಕೊಂಬಂ

ಅನ್ನೆಗಮಿತ್ತಲವಲೋಕಿತತ್ರಿಲೋಕಪತಿಪೂಜೆಯರುಂ ನೀರಾಜಿತ ಜಿನಪತಿಚರಣೆ ಯರುಂ ಜಿನಸ್ನಾನಸುರಭಿಸಲಿಲಸಿಕ್ತಕುಂತಳ[6]ಲತಿ[6]ಕೆಯರುಂ ವಿಶುದ್ಧಸಿದ್ಧ ಶೇಷಾಕ್ಷತಕುಸುಮಸಂಕಾಶಿತ ಕೇಶಕಳಾಪೆಯರುಮಾಗಿ ಮಗುಳ್ದು ಬಂದಾ ವಿದ್ಯಾ ಧರಿಯರಾ ವಿದ್ಯೆಯಿಂ ವಿ[7]ಮುಗ್ಧ[7]ನಾಗಿರ್ದ ಕುಮಾರನಸಡರ್ದೆಳಲತೆಯಂ ಬಿಡಿಸಿ

[1] ತ್ತೋರೊರ್ಬರವೆಯ್ಯೊಱೆ (ಗ) [2] ಪಿಡಿದ (ಫ) [3] ಮಂ (ಗ) [4] ಹಾಮ್ಮೃತ (ಫ) [5] ರುಹ (ಫ) [6] ತಿಲ (ಖ) [7] ಮಗ್ನ (ಫ)

ಬಾಳಚೂತಮಂ ತರಿಸುವಂತಿರಾ ತರುಣಿಯ ತೊಡರ್ದಂಗಲತೆಯಂ ಬಿಡಿಸಿ ತರಿಸಿ ತುರಿ[1]ತ[1]ದಿಂ ಪೋಗಿ ಪೂಗೊ[2]ಯ್ವಂತೆ ಆ[2]ರಸಸುಮಂ ಖೇಚರಿಯುರುಮನಾ ಚಕ್ರೇಶ್ವರಿಯ ನಿಳಯದೊಳ್ ಕಾಣದೆ ಮಗುಳೆ ಕೋಳನ ತಡಿಗೆವಂದಾಕುಳನಾಗಿ ದಿಗವಳೋಕನಂಗೆಯ್ಯುತಿರ್ದ ಮಕರಂದನ ಮುಂದಣ ಚಂದ್ರಕಾಂತದ ಶಿಲಾತಲದೊಳೀಡಾಡಿ ನಿಜನಿವಾಸಕ್ಕೆ ಪೋದರನ್ನೆಗಮಿತ್ತಲ್—

ಎಲರಿಂದೆಚ್ಚತ್ತು ಲೀಲಾವತಿ ನಿಜಪತಿಯಂ ಮಂಚದೊಳ್ ಕಾಣದಾಗಳ್<br>
ಚಲೆಯಾದಳ್ ಮೂರ್ಛೆವೋದಳ್ ಮಱಿದಳೊಱಗಿದಳ್[3] ಕಂದಿದಳ್ ಕೋ<br>
ಟಲೆಗೊಂಡಳ್ ಸಾವುಗಂಡಳ್ ಕಳವಳಿಸಿದಳಾ ಸತ್ತಳಟ್ಟಳ್ ಬೆಮರ್ತಳ್<br>
ನೆಲೆಯಿಂದಂ ಬಿರ್ದಳಿರ್ದಳ್ ವಿರಹದುರಿಯ ಸಂತಾಪದಿಂ ಕಾಂತೆಯಾಗಳ್[3] ೭೭

ಅಚ್ಚನೆ ಬರ್ಪೆಲರ್ ಕುರುಳ ಕುಂಕುಮಧೂಳಿಯನೆತ್ತಿ ಸುತ್ತಲುಂ<br>
ಕೆಚ್ಚನೆಯಾದ ಕೌಮುದಿಯದೇನೆಸೆದಿರ್ದುದೊ ಬಾಲೆ ಬೇಸಱಂ<br>
ಬೆಚ್ಚನೆ ಸುಯ್ಯು ಬೆಂಕೆಯೊಳೆ ಬೆಂದವುದೆಂಬಿನಮಾಗಳಾಕೆಗಾ<br>
ದಚ್ಚಿಗ[4]ಮಂ[4]ತೆನಲ್ ತನುವನುರ್ಚಿಸದಿರ್ಕುಮೆ ಕಂತುಗಾದೊಡಂ ೭೮

ಬಿಸಿಲೆಂಬಂತಚ್ಚಬೆಳ್ದಿಂಗಳೆ ತರುಣಿಯ ಮೆಯ್ವೆಂಕೆಯಿಂ ಕಾಯೆ ಪತ್ತುಂ<br>
ದೆಸೆಯೆಲ್ಲಂ ಪೊತ್ತಿದತ್ತಿಂಗಡಲಿದು ಧರಿತ್ರೀತಳಂ ಕಾಯ್ದುದಾಗಳ್<br>
ಬೆಸನಕ್ಕೆಯ್ತಂದರ್ಪ ತನ್ವಂಗಿಯರದಿದಳಿರ್ಗಳ್ ಬೇಯೆ ಬಾಯ್ವತ್ತೆ ಮೆಯಾ ತಾ<br>
ಪಿಸೆ ಪೊಕ್ಕರ್ ಪದ್ಮದಂ ಪಂದಳಿರೊಳೊಱಗಿದರ್ ಮೇಲು[5]ದಂ[5] ಬೀಸಿಕೊಂಡರ್

ಕುದಿದುಕ್ಕುವ ಕಣ್ಣೀರಿನ<br>
ಬೊದವಿಂ ಸೈಗರ್ತೆದು ಬಿಡುವ ಬೆಮರಿಂ ನಡುಕಂ<br>
ಪದೆದಾ ಪಂಕಜಮುಖಿ ಕೂ<br>
ಬ್ಬುದಿಗೊಳ್ವಂತಿರ್ದಳತನುತಾಪಾನಳನಿಂ ೮೦

ಕಾಂತಸರೋರುಹವದನೆ ಲ<br>
ತಾಂತಶರಂ ಮುನ್ನಮೆಚ್ಚುದೆಯ್ದದವೋಲ್ ಪೆ<br>
ರ್ಚಿಂ ತೆಗೆ ನೆಱೆ ಏತಿರಲಿರ್ದೆ<br>
ಯಂ ತಪ್ಪಿಸುವಂತೆ ಕವಿದು ಕೆಡೆದ[6]ಸೆ[6]ದಿರ್ದಳ್

ಅಂತಾ ಬಾಲೆ ನೀರಿಂ ಪೊಱಗಿಕ್ಕಿದ ಬಾಳೆಯಂತೆ ಮಮ್ಮಲ ಮಱುಗಿ, ಧೂಪದೊಳ್ ಪೊಕ್ಕ ಪಾವಿನಂತೆ, ಬಿದಬಿದ ಬೆಂದಟ್ಟು ಪಟ್ಟ ಪುಲ್ಲೆಯಂತಿರ್ದ ಪಡಪಡ

[1] ಪ (ಫ) [2] ಯ್ದು ಬಂದ (ಫ) [3] ಕಳವಳಿಸಿದಳಾವಸತ್ತಳಬ್ಬಿಳ್ ಬೆಮರ್ತಳ್ ನೆಲದೊಳ್ ಬಿದ್ದಳ್ ಪೊರಬ್ದಳ್ ಮಱಿದಳೊಱಗಿ ದಳ್ ಕಂದಿದಳ್ಕಂದಿದಳ್ಕೋಟಲೆಗೊಂಡಳ್ ಸಾವುಗಂಡಳ್ ಮಱುಗಿದಳ್ಬೆರ್ಗೆಗೆಟ್ಟಳ್ಕನಲ್ದಳ್ ಬಱಲ್ದಳ್ (ಗ) [4] ವಿಂ (ಫ) [5] ದಿಂ (ಫ) [6] ಸು (ಫ)

ಪಾಯೆ ಬೇಸಗೆಯ ಬಿಸಿಲ್ [1]ಪತ್ತೆ[1] ಬಸವಳಿದೆಳವಕ್ಕಿಯಂತೆ ಗಂಟಲ್ ಮಿಡುಮಿಡು ಮಿಡುಕೆ; ಸೂರ್ಮೆಡಿ ಸುಡುವ ವಿರಹಪರಿತಾಪಕ್ಕೆ ಕಣ್ಗಳಿಡೆನಾಳ್ಕಱಿ[2]ಪೋದಂತೆ[2]ಯುಂ, ಪ್ರಾಣಂಗಳ್ ಪ್ರಳ್ಳಿ[3]ಪೋದಂತೆಯುಂ, ಜೀವಂ ಜೀವಿತೇಶ್ವರನನಱಸಲ್ ಪೋದಂತೆಯುಂ ಇಚ್ಚೆಯಳಿದು ಮುಚ್ಚೆವೋಗಿರ್ಪುದುಂ—ಕಳಾವತಿ ಮೊದಲಾದ ಕೆಳದಿಯರ್ ದೇವತಾ ಪ್ರಭಾವ[4]ಸೀ[4]ತಪ್ರಿಯಸಮಾಗಮಸುಖದಿಂದಿರ್ದ ಸಖಿಯಂ ನೋಡಲುತ್ಸುಕೆಯರಾಗಿ ರಾಗದಿಂ ಬರುತ್ತುಂ ಮುಂ[5]ತಿ[5]ರ್ದಳಂ ಕಂಡು ಸತ್ತಳೆಂದೇ ಬಗೆದು ಸುತ್ತಿ ಮುತ್ತಿ ಕಣ್ಬನಿಗಳಿಂ ಮುಂದುಗಾಣದೆ—

ಈಕೆಯ ಪುಣ್ಯಮೇಕೆ ಕಡೆಗಂಡುದೊ ಕರ್ಮಮೆ! [6]ಏವ್ಮ[6]ಚಿತ್ರದೊಳ್
ಶೋಕದ ಕಿಚ್ಚನೇಕೆಯೊ ತಗುಳ್ಚಿದೆಯ[7]ಬ್ಬ[7]ಱಸೊಕ್ಕು ದೇವಿಯುಂ
ತೇಕೆಯೊ ಮಾಡಿದಳ್ ಕರುಣದಿಂ ಕುಲದೇ[8]ವಿಯರ[8]ೇಕೆ ಕಾದ[9]ರಿ[9]
ಲ್ಲೀ ಕುಳರತ್ನಮಂ ಯುವತಿರತ್ನಮನೀ ಭುವನೈಕರತ್ನಮಂ ೭೨

ಅಲರ್ಗಣ್ಣಿಂ ಪೂವಿನಂಬಂ ನಸೆದನೊ ಮದನಂ ಕೊಂ[10]ಡು[10] ಮೇಣ್ ಪ್ರಾಣಮಂ ಕೋ
ಗಿಲೆಯೆಲ್ಲಂ ಕೊಂ[11]ದು[11] ಕೈಕೊಂಡುವೊ ಕಳರವಮಂ ವಕ್ತ್ರ ಚಂದ್ರಾಂಶುವಂ ಹೆಂ
ಗೊಲೆಯಿಂದಂ ಚಂದ್ರಮಂ ಕೊಂಡನೊ ಖಳನುಳಿದಂತೇಕೆ ಪೇಱ್ ನೋಡಳೇಕಿಂ
ತಿಲೆಗೇ ಮಾತಾಡಳೇಕೆಮ್ಮಯ ಸಖಿಮುಖದಿಂ ಹಾಸಮಂ ನೂಸಳೆಮ್ಮೊಳ್ ೭೩

ಎಂದು ನೊಂದು ಶೋಕಂಗೆಯ್ವುದರಮಂ ನೋದಿಕೊಳ್ವ ಕೆಳದಿಯರಂ ಕಳಾವತಿ ಯಿಂತೆಂದಳ್—

ಈದಯಿತೆ ಕಣ್ಣ ಮೊದಲಿಂ
ಪೋದುದು ಸಾಲದುದೆ ನೊಂದ ನಿಮ್ಮೆರ್ದೆಯಿಂದಂ
ಪೋದಪಳುರಮಂ ಕರದಿಂ
ನೋದದಿರಿಂ ನೋಟ್ಪಮಿನ್ನುಮುಸಿರಂ ಸಖಿಯಾ ೭೪

ಎಂಬುದುಮೆಲ್ಲರುಂ ನೀಡುಂ ನೋಡಿ ಜೀವಮಿನ್ನುಮುಂಟು, ಮನ್ನುಮಿಕ್ಕೇಕೆ ಶೋಕಿಸುವಿರೆಂಬಂತೆ ಮಿಡಿದು ಪಾಯ್ವ ಮೆಲ್ಲೆರ್ದೆಯಂ ಕಂಡಬಲ್ಲಸಳವತಿಸಿ ಹೃದಯಮಂ ಪದ್ಮುಳಂಗೆಯ್ಯು ನೆಲದೊಳಿರ್ದಳನೆತ್ತಿ ಪಾಸಿನೊಳ್ ಪಟ್ಟಿರಿಸಿ ತುಱಿಸಿದಿಂ ತಣ್ಣನಸದಾಲಿ ನೀರುಮನೆಲ್ಲರ ಬಿಜ್ಜಣಿಗೆಯುಮಂ ಕೊಂಡು ಕಣ್ಬನಿಗಳ್ ಕೂಡುಗು ಮೆಂದು ಬಸಿಸುಯರ್ ಬೆರಸುಗುಮೆಂದು ದುಕ್ಕದಿನ್ನಾನನಮನೋಸರಿಸಿ ಪೋಲೆ ಸೂಸುತ್ತುಮೊಲಿದು ಬೀಸುತ್ತುಂ ತಮ್ಮೊಳಿಂತೆಂ[12]ದ[12]ರ್—

[1] ತಪ್ಪೆ (ಫ) [2] ಗೆ (ಫ) [3] ಳ್ತೀರೊಡೆ (ಫ) [4] ಗೀ (ಫ) [5] ದಿ (ಖ)
[6] ಎಂಸು (ಫ) [7] ಕ್ಕ (ಫ) [8] ಯಿದೇ (ಫ) [9] ಳಿ (ಫ) [10] ದು (ಫ) [11] ಡು (ಕ)
[12] ಬ (ಕ)

ಸುರತಶ್ರಮಕೆಂದಿರಿಸಿದ
ಕರಗದ ತಣ್ಣೀರುಮಲರ ಬಿಜ್ಜಣಿಗೆಯುಮೀ
ತರುಣಿಯ ಮೋಹನತತಿಪರಿ
ಕರಮಾದುದು [1]ಬಿದಿಯ ಒಗೆಯ[1]ಸಾಹಸೋ ಮಿಗಿಲ್ಪಂ ೭೫

ಎಂದು—

ಎಲೆ ಮುಗ್ಧೆ ನಿನ್ನ ನೋಟಂ
ತೊಲಗಿದ ಕತದಿಂದೆ ಕರ್ಣಪೂರದ ಪೊಸನೆ
ಯ್ದಿಲನಿಂದು ಕಂಡೆವಲ್ಲದೊ
ಡಲರ್ಗಣ್ಗಳ ಕೆಯ್ಯೊಳಾರುಮೇಂ ಕಂಡಪರೇ ೭೬

ಲೀಳಾವತಿ[2] ಲೀಳಾವತಿ
ಬಾಳೆಯೆ ಬಂಧುಪ್ರಿಯೇ ನಿಜಪ್ರಿಯಸಖಿಯರ್[2]
ಕೇಳ ಕಳವಳದೊಳಱದಪ
ರಾಳೋಕಿಸು ತಂಗೆಯೆಂದು ಕರೆದರ್ ಕಿವಿಯೊಳ್ ೭೭

ಹರ‍್ಕಲಿಸಿತಂಗಲತೆಯೊಳ್[4]
ಹರಿಣಂ ಸುಯ್ ನಿಮಿರ್ದು ನಡೆದುದಱಯಮೆ ಕಿಱದೋ
ಸರಿಸಿದುದು ಪು[3]ರ್ವು ಕಿ[3]ಱದೊ
ತ್ತರಿಸಿದುದೆವೆದುಱಗಲಲರ್ದುವವಳಲರ್ಗಣ್ಗಳ್ ೭೮

ಅಂತು ಕಣ್ಗಳಂ ತೆಱೆದು ಕೆಳದಿಯರ ಮೊಗಮನಡರೆ ನೋಡುವುದು ಮಾಕೆಯಾ[5] ಕಳಾವತಿ ಕಣ್ಗಳಂ ತೊಡೆದು ತಲೆಯಂ [6]ಮೇಲೆ ತೆಗೆದು ತೊಡೆಯ ಮೇಲಿರಿಸಿ[6] ಕೊಂಡು ನೀರಂ ಕುಡಿತೆಕುಡಿತೆಯಿಂ ಕುಡಿಯಿಸಿ [7]ಕುದಿಪೆರ್ದೆಯೊಳ್ ಮಲಯಜಮನೊತ್ತಿ ತಳಿರ ಬಿಜ್ಜಣಿಗೆಯಿಂ ಬೀಸಿ ಬೞಲ್ಕೆಯಂ ಕಳೆದು ಮೆಯ್ವೆಱಯಿಂ ತದ್ವೃತ್ತಾಂತಮಂ ಬೆಸಗೊಳ್ವುದುಮಾಕೆಯಿಂತೆಂದಳ್—

ಇನಿಯನನನುಪಮನಂ ನೂ
ತನಚಂಪಕದಾಮಲಲಿತವಕ್ಷಃಸ್ಥಲನಂ
ಮನಸಂದು ಸೋಂಕಿ ಕುಳ್ಳಿ
ರ್ದನನಿಂದಾಂ ಕನಸಿನಲ್ಲಿ ಕಂಡೆಂ ಕೆಳದೀ ೭೯

ಎಂಬುದುಮಾಕೆಯಾಕೆಯ ಕೊರಲ ಚಂಪಕಮಾಲೆಯುಮಂ ಮುನ್ನಮಿಕ್ಕಿದ ಮುತ್ತಿ[8]ನ[8] ಸರಮಿಲ್ಲದುದುಮಂ ಕಂಡು, ಅನುಮಾನಿಸಿ, ಕನಸಲ್ಲೆಂದಱದು ಮಂದಸ್ಮಿತವದನೆಯಾಗಿ—

[1] ವಿಧಿಪನಾವ (ಗ) [2] ಬಂಧುಪ್ರಿಯೆ ಬಾಳೆ ನಿಜ ಪ್ರೀತಿಯಾದ ಸಖಿಯರು ಮೆಲ್ಲರ್ (ಫ)
[3] ರ್ಬನಿ (ಕ ಫ) [4] ಗೆ (ಫ) [5] ಯಂ (ಫ) [6] ತೊಡೆಯ ಮೇಲೆ ತೆಗೆದು (ಫ)
[7] ಕೆಡೆದೆ (ಫ) [8] ನೆಕ್ಕ (ಫ)

ಬಳೆಯೆ ಮುದಂ ನಿನ್ನ ಸಖೀ
ಕಳಾಪ್ತಿ[1]ಗಳ್ಗೊಗೆ[1]ದ ನಿಜಪಯೋಧರದೊಳ್ ತ
ಳ್ತಿಳಮಿಂಚಿನಂತೆ ತೊಳಪು
ಜ್ವಳ[2]ಮೌಕ್ತಿ[2]ಕದಾಮಮೆ[3]ತ್ತವೋಯ್ತು ಮೃಗಾ[3]ಕ್ಷೀ ೮೦

ಎಂಬುದುಮಾಕ್ಕೆಯ್ಯುಗಿದು ತಳವೆಳಗಾಗಿ ತುಂಬಿದ ಪೆಱೆಯಿನೊಱಗಿದನೆಯ್ದಿಲಂತೆ ಎಮೆದುಱುಗಲೆಱಗೆ ಕಳೆವರಿವ ಕಣ್ಗಳೆಸೆಯೆ ಕುಚಕಲಶದ ಚಂಪಕಮಾಲೆಯೊಳ್ ಮಲ್ಲಿಗೆಯ ಮುಗುಳ ಸರಮಂ ಬೆರಸುವಂತೆ [4]ಕಣ್ಣನೀರಿ[4]ಕ್ಕಿ ನೀಡುಂ ಭಾವಿಸಿ ನೋಡಿ–

ಮೊನಸಿದ ಮೆಯ್ಸವಿರಿಂದಾ
ನನಾಬ್ಜವಿಕಸನವಿಶೇಷದಿಂದದು ನಿಜನಾ
ಥನ ಕೊರಲ ಮಾಲೆಯೆಂಬುದ
ನನಿಬರ್ಗಂ ಪೇಟ್ದುಳುಸಿರಲಳ[5]ವ[5]ಲ್ಲದವೋಲ್ ೮೧

[6]ಕೊ[6]ರಗಿದವುದೆಂದು ತಳಿವಂ
ತಿರೆ ನೆಯ್ದಿಲಿನಮೃತರಸಮನಾ ಸಕಳಸುಧಾ
ಕರಮುಖಿ ಪೂವಿನ ಸರದೊಳ್
ಸುರಿದಳ್ ಬಾಷ್ಪಾಂಬುವಂ ವಿಲೋಲಾಕ್ಷಿಗಳಿಂ ೮೨

ಏವಣ್ಣಿಪೆನಾ ಸಂಪಗೆ
ಪೂವಿನ ಮಾಲೆಯೊಳೆ ಪಾಯ್ದು ಬಿರ್ದಿರ್ದುವು ಮೂ
ರ್ಛಾವೇಗಮನಾಳ್ದಂತೆವೊ
ಲಾ ವನಿತೆಯ ಮುಗ್ಧನಯನಷಟ್ಪದಯುಗಂಗಳ್ ೮೩

ಅಂತು ನೋಡುವಳಂ ಕಂಡು ಮನಂಗೊಂಡು ಕಳಾವತಿ ಮತ್ತಮಿಂತೆಂದಳ್: ಇಂದು ಪದ್ಮಾವತಿಯ ವರಮುಂ ನಿಜ[7]ಪತಿಯ[7] ಬರವುಂ ಬಲ್ಲವರ್ ಬರೆದಂತೆ ತ[8]ಪ್ಪಿದುದಿಲ್ಲೆಂತಪ್ಪೊಡಮಾದುದುಮಲ್ಲದಲ್ಲಿ ಮನಂ ಪಸಲ್ವೇಡ[8] ನೀನತಿಸ್ನಿಗ್ಧೆಯುಂ ಮುಗ್ಧೆಯುಮಪ್ಪುದಱಿಂ ನಿಜಪತಿಸ್ಪರ್ಶದತ್ತಮೂರ್ಛೆಯಿಂ ಮೆಯ್ಮಱೆದು ಕನಸೆಂದೇ ಬಗೆದೆ[9]ಯಾ ನಿನ್ನ ಮೊಂ[9]ದು ತೆಱದಿಂ ತೋಱಿದಪ್ಪೆನೆಂದಾಕೆಯನೆತ್ತಿ ಪಾಸಿನ ಪಜ್ಜವಡಿಕೆಯುಂ ನೋಡಿದಾಗಳ್–

ಕುದಿಯೆ ಬೆಮರ್ತುರ್ಜಪಜ್ಜಡದೊಳಚ್ಚೊತ್ತಿದಂತಿರೆ ಪತ್ತಿ ತೋಱುವೊ
ಳ್ಗದಪಿನ ಸೀಳ್ದ ತೋಳ ನತಪಾರ್ಶ್ವದ ಪರ್ಬುಗೆವೆತ್ತ ಬೆನ್ನ ಕೊ
ರ್ಬಿದ ಪೊಱವಾಱ ಪೆರ್ದೊಡೆಯ ಜಂಘೆಯ ಪಾದದ ಪಜ್ಜೆಯೆಯ್ದೆ ಮು
ಟ್ಟಿದ ಕೃಶಮಧ್ಯದೊಂದೆಡೆಯಿನೇನೆಸೆದಿರ್ದುದೊ ರಾಜಪುತ್ರನಾ ೮೪

[1] ಕಣ್ಗೊ (ಘ) [2] ಚಂಪ (ಕ ಘ) [3] ಲ್ಲಿಯದು ತರಳಾ (ಘ) [4] ಕಿಟ್ಗಣ್ಣಿ (ಘ) [5] ವಿ (ಕ) [6] ಕ (ಘ) [7] ಪ್ರಿಯನ (ಘ) [8] ಪಿಲ್ಲದುದಿಂತಪ್ಪೊಡವಾದುದುಂಪೋದುದುಮಲ್ಲದಿಲ್ಲಿ ಮನಂಪಸಲೆವಿ (ಗ ಘ) [9] ಯಿದು . . . (ಕ) ಯಿದು ನಿನ್ನ ನೊಂ (ಘ)

ಆದಂ ಕಂಡಾಕೆ ಪರಮಪಂಡಿತೆಯಪ್ಪುದಱಿಂದಾತನುಮತನುತಾಪ[1]ತಪ್ತ[1]ನಪ್ಪುದನನುಮಾನದಿಂದಱಿದು ಮೆಯ್ಪೆಂಕೆಯಿಂದೊಳಗು ಕಂದೆ ಕತ್ತುರಿಯ [2]ಪಳಿಕಿ[2]ನಂತೆ [3]ಪ್ರೀ[3]ಳಿಜೆರ್ದ ಜಂದನದಣ್ಪುವೆರಸು ಪತ್ತಿದ ಪರಿಮಳಮುಂ ಪರಪುವೀ ಬೆಮರ ಪಜ್ಜಳಿಸುವ ಪಜ್ಜೆ ನಿಜಮನಃಪ್ರಿಯನ ಪಜ್ಜೆಯಿದು ನಿನ್ನ ಮೆಯ್ಯಪಜ್ಜೆಯೆ ಮಲ್ಲಿಗೆಯ ಮರು[4]ಗ[4]ದ ಜೆರಕೆವಾಸಿಗಂ ನಿನ್ನಿನಿಯನ ತುಱುಂಬಿನ ಬಾಸಿಗಮಿವು ನಿನ್ನ ಮುಡಿಯ ಪೂಮಾಲೆಗಳಿಂದು ಬೇಱುವೇಱೆ ತೋಱಿ ನಿನ್ನ ಕೊರಲ ಪೂಮಾಲೆಯುಮೆಂತಕ್ಕೆ ತಡವಾಗಿ ತಡೆಯದೆ ಕೂಡುವುದನಱಿಪಿದಪ್ಪುದೆಂದು—

ನಿನ್ನನು ಕೊರಲ್ಗೆ ವಂದೊಡ
ಮಿನ್ನೆ[5]ಗಮು[5]ಚ್ಚಿ ಗ[6]ಮ[6]ದೇನೊ ಕೆಳದಿ ನಿಜೇಶಂ
ನಿನ್ನಯ ಕೊರಲೊಳ್ ಕೋ[7]ದೀ[7]
ಪೊನ್ನಂತಪ್ಪರಲ ಮಾಲೆ ಕಾದಪುದಲ್ತೇ ೮೫

ಜಳನೇಕಂ ಪೊಗೆ,ಜ್ಯೋತ್ಸ್ನೆ ಕೊರಗಿದ ನಸಿಗ್ಧಾಂದ್ರೋಽನಂ ರೋದಿಸುತಿ,
ರ್ಜಳಗೂಸಿಂಗ್ಧಾರ್ದ್ರಪಾತಂ,ಪಗಲ ಕುಮುದಿನೀಕಾನನಕ್ಕಂದುಮಿಂದುಂ
ಕಳಗೀತ್ರಂ ದುಃಖಿತ್ರಾತ್ತಂಗತನುತರುತಲಚ್ಛಾಯೆ ಮಾರ್ಗಶ್ರಮಪ್ಪಾ
ಕುಳಿತಂಗಾಶಾನುಬಂಧಂ ವಿರಹಿಗೆ ಪಿರಿದುಂ ಜೀವನಾಧಾರಮಲ್ತೇ ೮೬

ಎಂಬುದುಂ ಕೇಳದಿಯರವಳ ಮನಮನಾಱೆ ನುಡಿದು ಶಯನಸದನಕ್ಕೊಡಗೊಂಡು ಪೋದರನ್ನೆಗಮಿತ್ತಲ್—

ಕುಮುದಾಮೋದಮೆ ತೀಡೆ ಕೋಡುವೆಲರಿಂ ಪೆರ್ಚಿಂ ಪಯಸ್ಸಿಂ ವಿಷಣ್ಣಮುಖಂ ಮಾಡುವ ತಣ್ಪಿನಿಂ ತೊಲಗೆ ಮೂರ್ಛಾವೇಗಮಾಗಳ್ ಮಹೀರಮಣಂ ಕಾಣದೆ ಮುಂದೆ ಮುಗ್ಧಮುಖಿಯಂ ಬೇಸತ್ತು ದುಸ್ಸ್ವಪ್ನಮಂ ಕಂಡು ಮನಂಗುಂದಿದನಾರ್ಗೆ ಮಾಡದೊ ಮಹಾವ್ಯಾಮೋಹಮುಜ್ಜಾಸಮಂ ೮೭

ಅಳುರ್ವ ಸುಧಾಕರಂಗಗಿವ ಮೆಯ್ಯುಬಲಪ್ಪ ಬಿಸುರ್ಪ ಸಾಳ್ಪ ನೀರ್ದಳಿವ ಬಿಗುರ್ತುರ್ಪ ಬಾಯುಟಿವ ಸಂತಯಿಪಗ್ಗಳಮಾಗೆ ಸುಯ್ಪ [8]ಸು[8]ಯ್ಯೊಳಗಸು ಪೋದುದೆಂದೆರ್ದೆಯ ಸಣ್ಪ ವಿಷಾದವಿನೋದದಿಂದೆ ಕ[9]ಣ್ಣೊ[9]ಳಿ ಬೆಳಗಾದುದಂದು ನೃಪಸೂನುಗಮಾ ಸಚಿವಾಗ್ರಸೂನುಗಂ ೮೮

ಬೆಳಗಪ್ಪುದುಮಾಗಳ್ ತಾಂ
ಬೆಳಗಾಗಿಸಿದಂತೆ ತೊಳಗಿ ಬೆಳಗುವ ಮುಕ್ತಾ
ಫಳಹಾರಮನರಸನ ಕೊರ
ಲೊಳೆಸೆವುದಂ ಚತುರಸಚಿವತನಯಂ ಕಂಡಂ ೮೯

---

[1] ತಾಪಸ (ಫ) [2] ಪಳ್ಕಿ (ಗ) ಪುಣಿಬೆ (ಫ) [3] ಪ (ಗ) [4] ವ (ಕ ಫ) [5] ಮಗ (ಕ) [6] ವಾ (ಗ) ವಿ (ಫ) [7] ಟಿಯ (ಕ ಗ ಫ) [8] ಸ್ಸಿತೊ (ಕ ಗ) [9] ಣ್ಣೊ (ಗ ಫ)

ನವಲತೆಯಂ ಸುಧಾಕರಮರೀಚಿಗಳಾ ಮಣಿಹಾರಮಾಲೆಯಂ
ಧವಳಿಸಿ ನೀಳ್ದ ಬೆಳ್ವೆಳಗಿ[1]ನಿಂ[1] ಬಿರಿಯಲ್ ಸರಸೀರುಹಂಗಳೊ-
ಲ್ಲವೆ ಮುಗಿ[2]ಯು[2]ಲ್ ಸರೋವರದ ಕೈರವಮೊಲ್ಲವೆ ಸೋ[3]ಡ[3] ಕೂ[illegible]
ಲ್ಲವೆ ಪೂರ್ಣಾರ್ವಕ್ಕಿಗಳ್ ಪರೆಯಲೊಲ್ಲವೆ ಬಾಳಚಕೋರಮಾಲೆಗಳ್ [illegible] ೯೦

ಇನನುದಯಭೀತಿಯಿಂದ
ಸ್ತನಗಮನೆಯ್ದುಲ್ಕೆ ಪಡೆಯದುಡು[4]ಗಣಮುಂ[4] ಚಂ
ದ್ರನುಮಾ ಗಿರಿಗವತರಿಸಿದು
ದೆನಿಸಿದುವಾ ಹಾರಮುಂ ನೃಪೇಂದ್ರಾನನಮುಂ[illegible] ೯೧

ಅದಲ್ಲದೆಯುಂ—

ನೀಱುಸುರದೊಳ್ ಮನೋಜನ
ಪಾೞುಂಬಳೆಯೆನಿಸಿ ಮಲಯರುಹಪರಿ[illegible]
ಜೀಱುವ ಪುಳಕಾಂಕುರದ
ಕ್ಕೀೞುಂ ನಸು ಕಱಕ್ಕಱಾದ [illegible]ಮುಮಂ ೯೨

ಅಂತು ಕಂಡು ಮನಂ[illegible] ಮು[5]ತ್ಸಾಹಿ[5]ತಹೃದಯ[6]ನುಂ ವಿ[6]ದಾನಂದನುಂ
ವಿಗತವಿಷಾದನುಂ ದರ[illegible]ವದನವೈರಸ್ಯನುಮಾಗಿ ಮಕರಂದನಿಂತೆಂದಂ—

ಉಡುಗುತಿರ್ದ[illegible]ದುವೀ
ಯುಡುಗಳ[illegible]ದಮಂ
ಬಿಡದೆ ನಾ[illegible]ಜಕಂಠದೊಳ್
ತೊಡರ್ದ[illegible]ದೂರ್ಜಿತಾ ೯೩

[illegible]ರ[illegible]ತ್ತಿದವೋಲ್
ನಿರಂತರ[illegible]ಭಕ್ತ್ಯತಿಶಯದಿಂ
ಗುರು[illegible] ಪಿಡಿದುಂ
ಪರಿಣ[illegible]ಯೊಳೆಂಬುದಂ ಪ್ರಕಟಿಪವೋಲ್ ೯೪

[illegible]ದೊ[8]ಳಂ[8] ಕುಚ
ಭಾ[illegible] ಬಂದವೋಲ್ ನಿನ್ನ ವಿಶಾ
ಲೋ[illegible]ದೊಳ್ ತೊಳಗುವ
ನಾ[illegible]ಂದನಾಂಕಮೌಕ್ತಿಕಸರಾಯ್ತೋ ೯೫

---

1 [illegible] (ಘ) 2 ಸ (ಗ) 3 ಡು (ಕ) ಡೆ (ಖ) 4 ಸತಿಯುಂ (ಕ ಘ) ಪತಿಯುಂ
([illegible]) [illegible] (ಕ) ಚ್ಛ್ವಸಿ (ಗ) 6 ನು ವಿಸ (ಕ) ಸುವಿಷಾಪ (ಗ) 7 ಪ್ರೊ (ಕ ಗ)
8 [illegible] ([illegible]) [illegible]ಯ (ಘ)

ಎಂಬುದು ಮಾಸುಡಿಯೆ ಕೆಯ್ವಿಡಿದು ಸೆಗಳಿದಂತೆಯುಂ ವಿರಹದಹನದಾ[1]ಹ[1]ದಿಂ ಸಮಾಕೃಷ್ಟಶಿರೋಸಿಜಯನಾದಂತೆಯುಂ ಜೀವಂಬೊಯ್ದಂತೆಯುಂ ಮು[2]ಂ ಪ[2]ಟ್ಟು ಪ್ರಾಯಪ್ರಾ[illegible]ಗಿರ್ದ ಮಾನಸಮುದನಾ[illegible] ಶೀಲಾತ್ರಳದಿಂ ಘೋಂಕನೆದುಕ್ಕುಳ್ಳಿದು[illegible]ನಾ[illegible] ಕೋಮಳಮುಂ ಕಂಠಾಶ್ಲೇಷಕಮನೀಯ [3]ಪ್ರಾ[3]ಣಮುಮಪ್ಪ[illegible] ಹಾರಮಂ ಮನೋಹರಿಯ ಬಾಹುಲತಿಕೆಯಂ ಬಗೆವಂತೆ ಬಗೆದಾಕೆಯ ಮ[illegible]ಗುವಾಗಲತಿಸ್ಥೂಲತೆಯಿಂ ಪುಗಲಱಿಯದೆ ಪೆಱಗುಟಿದ ವಿರಹಪಾಂಡು [illegible]ತೆ ಪೇರುರದೊಳ್ ಪೊಳೆವ ಮಳಯಜಧವಳಕುಚಕಲಶಲಾಂಛನಮುಮ[illegible] ಪುಳಕಪ್ರಸ್ವೇದಪ್ರಸಾ[4]ದಿತ[4]ಶರೀರಂ ಹರ್ಷವಿಶೇಷವಿಕಸಿತವಿಲೋಚನಂ [5]ಪ್ರ[illegible]ದಂತೆ ನೀಡುಂ ಭಾವಿಸಿ ನೋಡಿ—

ಮಳಯಜಲಿಪ್ತಾಂಗಿ[illegible]
ಜ್ವಳಹಾರೆಯನಿಂದು ಕನಸಿನ[illegible]
ತಳಗತೆಯಂ ಕಂಡಂತಿರೆ
ಪೊಳೆದಪುದೆನ್ನಯ ಮನಕ್ಕೆ ಮತ[illegible] ೯೬

[6]ಎಂದರಸಂಗೆ ಮಕರಂದನೆಂದಂ[illegible]ಸ್ಸುಂ ಮೂರ್ಛೆದಿಳಿಪಲೆಂದು ನೀರ್ವೂಗಳಂ ಕೊಳಲೀ ಕೊಳಕ್ಕೆ ಆಂ[7] ಬ[illegible]ಯಾಗಿರ್ದ ನಿನ್ನನಾಬೇಚರಿಯರೆತ್ತಿಕೊಂಡು ಎತ್ತ[8]ಲಕ್ಕೆ[8] ಪೋದರ[illegible]ರಡಿಲ್ಲದೆ ನೆರೆದುದನೀಲಜ್ಜಣಮೆ ಪೇಟ್ದುಮಿಲ್ಲಿ ಸಂದೆಗಮೇವುದು? ಮ[illegible]ಗಂಧಮನನುಭವಿಸಿಯುಂ ಕುಸುಮದೊಳ್ ಸಂದೆಗಂಬಡುವಂತಕ್ಕುಂ ಆಕೆ ನಿನ[illegible]ವಿಪುಳಪುಳಕೋದ್ಭೇದಸ್ಫು[9]ಟಿತ[9]ಮಪ್ಪ ಕುಚಚಂದನಾಂಕಮಱಿವುಗುಂ [illegible]ಮೆಂಬುದನೀ ನಿಜಾಂ[10]ಗ ಲ[10]ಗ್ನತತ್ಸುಂದರೀಸುರಭಿಸ್ವೇದಮೆ ಪೇಟ್ದು[illegible]ದಿದು—

ಕೊಳದೊಳ್ ನೀರ್ವೂಗ[11]ಳಿಲ್ಲಂ[11]ಸಮೆದುವು ನಳಿನೀನಾ[illegible]ದುಮಿಲ್ಲೊಳ್ಳಿರುಂ ಮೆಲ್ಲೂವನಿನ್ನಾಂ ಪಡೆಯೆಸಱಿಸಿಯುಂ ಕಾಣೆನಿಂತೀ[illegible] ಗಳೊಳಿಂ[12]ತ[12]ತ್ಪುತ್ರಕಟಂ ನಿನ್ನಯ ವಿರಹಮುಮಾ ತೋರ್ಪು[illegible] ಮಳ[13]ಸಾ[13]ಂದ್ರೋದ್ಯಾನದಿಂದಲ್ಲಿಗೆ ತಡೆದಿರವೇಂ[14]ಪೋಪಮೇ[illegible] ೯೭

ಎಂದಲ್ಲಿಂದಮೆತ್ತಿ ಮುತ್ತಿನ ಸರಮಂ ತನ್ನ ಕೊರಲೊಳ್ [illegible]ದರಸಂಗೆ ಪೂವಿನ[15]ಗಿಕೆ[15]ಯಂ ತುಡಿಸಿ ಬಾಳಮೃಣಾಳಮುಮಂ ಬಾಹೆಯ ತಿರು[illegible]ಸುತ್ತಿ ಮುಂದಲೆಯೊಳ್ ಚಂದನದ[16]ಚಿ[16]ಗುರಂ ಸೆರ್ಕಿ ತಳಿರೆಸ್ಕವಡಮಂ [illegible]ಱಿಸಿ ಕೈಗೊಟ್ಟು ಮಯೂಖನಿರ್ಝರಗಿರಿಯಿಂದಮಿಟಿಪಿ ವಿರಹವಹ್ನಿ[illegible]ಾಗಿ

[1] ವಾನಳ (ಫ) [2] ನಮು (ಕ) [3] ಮಾನನಿಜ (ಕ ಗ ಫ) [4] ರಿ (ಖ) [5] ಸ[illegible]ನಾ (ಗ) [6] ಎಂದು ಮಕರಂದಂಗರಸನೆಂದೊಡಿನ್ನುಂ (ಗ) [7] ಪೋ (ಫ) [8] ಲ್ಕೆ (ಫ) [illegible] (ಫ) [10] ಲತೆ (ಕ) [11] ಳಿಂತುಂ (ಗ) [12] ದ (ಕ ಗ ಫ) [13] ಚಂ (ಕ) [14] ಪ[illegible] (ಫ) [15] ಗ (ಕ) ದುಗೆ (ಗ) [16] ತಿ (ಕ) [17] ತ (ಫ) [illegible]

ಮಾರ್ತಂಡನುದಯುಂಗೆಯ್ದು ಳುರದ ಮುನ್ನಮೆ ಮೆಲ್ಲಮೆಲ್ಲನೆ ನಡೆಯಿಸಿ ಕುಸುಮಪುರದ ಪೊಱವೊಱಲೊಳ್ ಪದ್ಮಾ[1]ವತೀನಿಳಯ[1]ಮಪ್ಪ ಕುಸುಮಾಕರೋದ್ಯಾನಮಂ[2]ಪುಗಿಸಿ[2]–

ತಳಿರೊಳ್ ವಲ್ಲೀಚಯಂ [3]ಚೆಲ್ಲು[3]ವ ಕುಸುಮರಜೋರಾಜಿ [4]ಪಿಷ್ಟಾ[4]ತಕಂ, ಸೀದರ್ಗಳಿಪಂ ಪುಷ್ಪದ್ರವಂ, ಪೂವಲಿ ನಿಪತಿತಪುಷ್ಪೋತ್ಕರಂ, ಪೂರ್ಣಕುಂಭಂ ಫಳಜಾಳಂ, ದರ್ಪಣಂ ಪೂಗೊ[5]ನೆ[5], ನಿಡುನನೆ ಸಾಮೋದಶೇಷಾಕ್ಷತಂ, ಮಂಗಳಗೀತಂ ಭೃಂಗನಾದಂ ತನಗೆನೆ ನಡೆದಂ ರೂಪಕಂದರ್ಪದೇವಂ

ಇದು ವಿದಿತವಿವಿಧಪ್ರಬಂಧವನವಿಹಾರಪರಿಣತ ಪರಮಜಿನಚರಣರಮ್ಯ [6]ಹೈಮಾ[6]ಚಲೋಚ್ಛಲಿತ ನಖಮಯೂಖಮಂದಾಕಿನೀಮಜ್ಜನಾಸಕ್ತ ಸಂತತೋತ್ಸಿಕ್ತದಾನಾಮೋದಮುದಿತಬುಧ ಮಧುಕರಪ್ರಕರ ಕವಿರಾಜಕುಂಜರ ನೇಮಿಚಂದ್ರ ವಿರಚಿತಮಪ್ಪ ಲೀಲಾವತಿಯೊಳ್ ನಾಯಿಕಾದರ್ಶನ ವರ್ಣನಂ ದಶಮಾಶ್ವಾಸಂ ಸಂಪೂರ್ಣಂ

1 ಕರೋದ್ಯಾನ (ಘ) 2 ಪೊಕ್ಕು (ಕ) 3 ಪಲ್ಲ (ಘ) 4 ಪಿಷ್ಟಾಂ (ಕ) 5 ಡೆ (ಕ)
6 ಹರ್ಮ್ಯ (ಕ ಘ)

# ನಾಯಿಕಾ ವಿರಹ ವರ್ಣನಂ

## ಏಕಾದಶಾಶ್ವಾಸಂ

ಶ್ರೀಕುಲತಿಲಕಂ ಸ್ಮಿತಪ
ದ್ಮಾಕರನಭಿಜಾತಸುರಭಿವಲ್ಲೀಲಾಸ್ಯಂ
ಮಾಕಂದಂ ಶುಭವ್ರತುಳನ
ಶೋಕಂ ವನದೊಳಗೆ ತೊಳಪುದೊಂದಚ್ಚರಿಯೇ ೧

ಮಲ್ಲಿಗೆಯಲ್ಲಿ ಪೂತ ಲತೆಯಲ್ಲಿ ಮುಗಿಲ್ಗ[1]ಡ[1]ವಲ್ಲಿ ಮಾಲತೀ
ವಲ್ಲರಿಯಲ್ಲಿ ಸೋಗೆಸವಿಲಲ್ಲಿ ಸುಗಂಧಸಮೀರನಲ್ಲಿ ಮಾ
ವಲ್ಲಿ ಮದಾಳಿಯಲ್ಲಿ ಗಿಳಿಯಲ್ಲಿ ಪಿಕಾವಳಿಯಲ್ಲಿ ಮಲ್ಲಿಕಾ
ರಲ್ಲಿ ಬಸಂತವಲ್ಲಿಮೆಸೆ ಕೊಲ್ಲದೆ ಕಾಮಿಯನಾವನಂ ವನಂ ೨

ಪೊಸದಳಿರುಟ್ಟು ದುಜ್ಜಳಿಸೆ ಸೋಲಿಸೆ ಪೀಲಿಯ ಕರ್ಣಪೂರಮಾ
[2]ಸಿ[2]ಸೆ ಸಮಫುಲ್ಲಕಂಕಣಮೊಡಂಬಡೆ ಕತ್ತುರಿಯಣ್ಪು ತೀವೆ ತೊ
ಟ್ಟಸುಕೆಯ ಪುಷ್ಪಮಂಜರಿಯ ಗುಂ[3]ಜಿ[3]ಯ ಭೂಷಣಮಂ ವನೇಚರೀ
ವಿಸರದ ವೇಷದಿಂದಮೊಸೆದಾಡುವರಾ ವನದೊಳ್ ಮೃಗಾಕ್ಷಿಯರ್ ೩

ಎನಿಪಾ ವನದೊಳ್ ವಿನಯವನವಸಂತಂ ವಸಂತನಂತೆ ಸಂತಸದಿಂ ಕಿಱುದಂತ ರಮುಂ ಬರುತ್ತುಮಿರೆ—

ಸೊನೆ ಸುರಿಯುತ್ತುಮಿರ್ದಪುದು ಕೆಂದಳಿರ್ಗೊಂಚಿನೊಳೀ ಬಱಲ್ದ [4]ಮಾ[4]
ವಿನ ಪೊಸಗೊಂಚಲೊಳ್ ಬಱುದೊಡಂಬೆಗಳಿರ್ಪುವೆ ಕಿಬ್ಬು ಸೊನೆಯುಂ
ವನಜಮರಲ್ಬುವೊಂದೆರಡು ಕೈರವಮೊಂದೆರಡೀಗಳೊಯ್ಯನೊ
ಯ್ಯನೆ ಮುಗಿಯುತ್ತುಮಿರ್ದಪುವು ಕೂಡೆ ಕಲಂಕಿದ ಪೂಗೊಳಂಗಳೊಳ್ ೪

ಅದಲ್ಲದೆಯುಂ—

ಪಿಡಿದೊಳ್ಗೊಂಚಿನ ಕಯ್ಯ ಕುಂಕುಮರಸಂ ವಕ್ತ್ರಾಂಬುಜಸ್ವೇದ[5]ಮಂ[5]
ತೊಡೆದೀಡಾಡಿದ ಪಲ್ಲವಂ, ಕುರವಕಸ್ಕಂಧಂಗಳೊಳ್ ಕೋರಕಂ
ಬಡೆದುದ್ಯತ್ಕುಚಕುಂಭದಗ್ಗೆ ಪೊಱಮಟ್ಟಂಭೋಜಷಂಡಂಗಳಿಂ
ನಡೆದಿರ್ಪಾಜಿದ ಗುಜ್ಜುವಜ್ಜೆಗಳಿವೇಸತ್ತ್ರಂ ಬೆಡಂಗಾದುವೋ ೫

[6]ಎಂದು[6] ಸುರಭಿಸಮಯೋಚಿತಕುಸುಮಾಪಚಯ ಪ್ರಕಾರಮಲ್ತೇ ನಾನುಮೊಂದು ನಿಮಿತ್ತಂ [7]ತರು[7]ಣೀಜನಂ ತರುಣಕಿಸಲಯಕುಸುಮಕುಮುದಕಮಳ

---

1 ಳ (ಗ) 2 ಗಿ (ಕ) ಳಿ (ಗ ಘ) 3 ಜೆ (ಗ) 4 ಪೂ (ಘ) 5 ಮುಂ (ಕ ಘ)
6 ಇ (ಘ) 7 ರಮ (ಘ)

ಮೃಣಾಳನಾಳಂಗಳನಾಯ್ದು ಕೊಂಡು ನಿಲ್ಲದೆ ಪೋದಂದವೆಂದು ಮಕರಂದಂ ಭಾವಿಸುತ್ತುಂ ಮತ್ತಮಿನಿಸಂತರಮಂ ನಡೆದು ನಿರವಿಸೆ—

ನನೆ ಮುಸಿವಣ್ಣಮಾದುವು ಮುಗುಳ್ ಮಿಗೆ ನೀದುವು ಬಂ[1]ಡು ನೋ[1]ರ್ದ ಪೂ
ವಿಸ ಪೊಸಗೊಂಚಲುಂ [2]ಕೊ[2]ರಗಿ ಪೋದುವು ಕೋರಕಪಲ್ಲವಂಗ[3]ಳುಂ
ಮೊ[3]ನೆ ಪೊಗೆಯುತ್ತುಮಿರ್ದಪುವು ಬೀಸುವೆಲರ್ ಬಿಸುಸುಯ್ಯನೆತ್ತಿ ನೋಂ
ಕಿನೊಳಳುರ್ದಪ್ಪುದೀ ಬನದೊಳಿರ್ದಪರಕ್ಕುಮಸಂಗತಾಪಸರ್ ೬

ಎಂದು ರಾತ್ರಿಸ್ವತ್ವಕಮುಮಂ ಭಾವಿಸುತ್ತುಮಿದು ಮದೀಯಮಯ[4]ಸ್ಯಂ ವ[4]ಲ್ಲಭಾವಿರಹವಹ್ನಿ ಪ[5]ಲಸಿ[5]ತಮಾಗಲೆವೇಳ್ಕುಮೆಂದುಮನುಮಾನಿಸುತ್ತುಮಾನಿ ಬನಕ್ಕೆ ಮನೋಜಜ್ವಾಲಾವಲೀಢನಂ ತಂದುದು ಬಿಟ್ಟಬೇಸಗೆಯಿಂ ಬೆಂದ ಬನಕ್ಕೆ ಕಾಳ್ಕಿಚ್ಚಂ ತಂದಂತಾದುದಿ[6]ಲ್ಲಿಗೀ ಸ್ಮ[6]ರಪರವಶಂ ಶಿಶಿರೋಪಚಾರಮಂ ಬಯಸಿ [7]ಬಂದುದು ಬಡಬಾಗ್ನಿಯು [7]ಕಡುಗೊರ್ಜ[8]ದ ಕ[8]ಡಲಲ್ಲಿಗೆ ನೀರಡಿಸಿ ಬಂದಂತಾದುದೆಂದು ಬಗೆಯೊಳೆ ನಗುತ್ತುಮರಸನಂ ಮಗುಳ್ಚಿ [9]ಪುಷ್ಪಪಲ್ಲವಪಯೋಜಾತ[9]ನಿಕುರುಂಬಮುಪ್ಪ ತದ್ವನಪ್ರದೇಶಕ್ಕೆ ಕೊಂಡುಪೋದಂ ಅಲ್ಲಿಯಲ್ಲಿಂ ಮುನ್ನಮೆ—

ಅತಿಮಾತ್ರಂ ಚಕ್ರವಾಕಂಗಳ ವಿರಹಮಹೋಗ್ರಾನಳಂ ತನ್ನ ಚೇತೋ
ಗತಮಾದಂತಾಗಳುರ್ಬಿರ್ದ ತನುವಿರಹದಿಂ ಬೇವಳಂ ತಂದು ಲೀಲಾ
ವತಿಯಂ ಪದ್ಮಾವತೀದೇವಿಯ ಪದ[10]ಕಮಲೋ[10]ಪಾಂತದೊಳ್ ನೂಂಕಿ ಬಾಷ್ಪ
ಪ್ಲುತನೇತ್ರಾಂಭೋಜೆಯರ್ ತತ್ಸಖಿಯರನಿಬರುಂ ಮೆಯ್ಯನೀಡಾಡಿ ನೀಡುಂ ೭

ದೇವಿ! ನೀನಪ್ಪೊ [11]ಡನವರತ[11]ವರಪ್ರಸಾದವರ್ಷಿಯುಮಮೋಘ ವಚನೆಯುಮೀಕೆಯುಂ ತ್ವಚ್ಚರಣೈಕಶರಣೆಯುಮು[12]ಕರು[12]ಣಾಕರುಣೋದ್ರೇಕಕಾರಣೆಯುಮಪ್ಪುದಱಿಂ ನೀನೀಕೆಯಂ ಕಾವುದೆಂದು ಪೇಳ್ವುದುಂ ಕೌಮುದಿನಿಗೆ ಕುಮುದಿನಿಯಂ ಕ[13]ಯ್ಯೊ[13]ಡೆವೇಳ್ವಂತಕ್ಕುಮಾದೊಡಂ [14]ನೀನ[14]ಂತೆ ಕಾಡಿ ಕೊಲ್ಲದೆ ನಲ್ಲನೊಳ್ ಕೂಡಿ ಕಾವುದೆಂದಾ ಪಾದಪೀಠದೊಳ್ ಪೊರಳ್ದು ಪರಕ್ತೆಯುಂ ನುಡಿದು ದೇವಿಯ ಮೆಯ್ಯ ಮಳಯಜಮಂ ಬಳಿದುಕೊಂ[15]ಡಬಲ[15]ಯುಂಗದೊಳ್ ತೊಡೆದು ಮಕುಟದ ಪೂವಂ ಮುಡಿಯೊಳ್ ಸಿಕ್ಕಿ [16]ರ[16]ಕ್ಷೆ ಗೊಟ್ಟಲ್ಲಿಂದಮೆತ್ತಿಕೊಂಡು ಪೋಗಿ ಪೊಸವೆಳ್ದಿಂಗಳಿಂ ಪೊಱಪೊಣ್ಮಿದ ಗೊಂಚಲ್ವನಿಗಳಿನಾಲಿಕಲ್ಲ ಜಗಲಿಯಂತಿರ್ದ ಚಂದ ಕಾಂತಶಿಲಾತ್ತಲದೊಳ್ ಕೆಳದಿಯನಿರಿಸಿ ಕಳಾವತಿಯನಿರವೇಳ್ದು ತತ್ಸಖೀನಿಕರಂ ಶಿಶಿರೋಪಚಾರಮಂ ಮಾಡಲ್ ಮನಗಿ ಮಿಸುಕಿ ಮಿಸುಗುವೆಳದಳಿರ್ಗಳುಮಂ [17]ಮಂಜರಿ[17]ಗಳುಮಂ ತಿಱಿದು ತರಲೆಂದು ಪೋಗಿ—

---

[1] ದುಸಾ (ಘ) [2] ಕ (ಕ) [3] ಳುಮ್ಮೆ (ಗ) [4] ಸ್ಯ (ಕ ಖ) [5] ರಹಿ(ಕ ಖ ಗ) [6] ಲ್ಲ ಮದೀಶ್ವರಂ (ಘ) [7] ಬಂದ ಬರವುಂ ಬಡವಾಗ್ನಿ (ಕ ಘ) ಬಂದ ಬರವುಂ ಬಡವಾಗಿ (ಗ) [8] ನಿರೂಪಹತ ಜಾಕರ (ಕ ಘ) ನಿರೂಪಹತ. . . ಧರ (ಗ) [9] ಘ ಪ್ರತಿಯಲ್ಲಿಲ್ಲ. [10] ಯುಗಳೋ (ಘ) [11] ಡೆ ನವರಸ (ಕ ಖ) [12] ಕಾರ (ಘ) [13] ಲಿ (ಕ) [14] ನಿನ್ನಿ (ಘ) [15] ಡು ಆ ಬಾಳೆ (ಘ) [16] ಕ್ಕೆ (ಘ) [17] ಮಣಲಿ (ಕ) ಮಣಿ (ಖ ಗ)

ಎಳದಳಿರಿಂದು ಕೊಂಬಿನೊಳೆ ಪಾಯ್ದೞಸೇಸಱ ಕಾಂತಿಗಳ್ಗೆ ಪೂ
ಗೊಳದೊಳಗಬ್ಜವೆಂ[1]ದಡಱೆ[1] ಮಾರ್ಪೊಳವಾತ್ತ ಮುಖಾಂಬುಜಕ್ಕೆ ಕೋ
ಮಳಬಿಸಕಾಂಡವೆಂದೆಸೆವ ತಮ್ಮಯ ತೋಳ ನೆಱಲ್ಗೆ ಕಯ್ಯನೊ
ಯ್ದೞಸಿ ಬಱಲ್ದರಾರ್ತಪಿ[2]ತ್ರತಾ[2]ಸಳದಗ್ಧೆಯರಲ್ಲಿ ಮುಗ್ಧೆಯರ್ ೮

ಮುಗಿವ ಕುಮುದಂಗಳಿಂ ಮಿಗೆ
ಮುಗಮುಗಿಸುವ ತನ್ನ ಬಾಯ ಕಂಪಿಂಗಳಿಗಳ್
ಮೊಗಸುತಿರೆ ತಿಱಿಯಲೀಯದೆ
ತಗುಳ್ದವೆಂದಗಿದು ತೆಗೆದಳೊರ್ವಳ್ ಕರಮಂ ೯

ಮತ್ತಮೊರ್ವಳ್—

ನೋಡಿ ನಸು ಬಿರ್ಚುವೆಸಱ್ಗಳೊ
ಳಾಡುವ ತುಂಬಿಗ[3]ಳ್[3] ದಸಿಗಳಿಂ[4]ದಂ ತನ್ನೊಳ್
ಕಾ[5]ಡಿ[5]ದುದೆಂದೇ[6] ತಿಱಿಯಲ್
ನೀಡಳೆ ಪಂಕಜಕೆ ಮುಗ್ಧೆ ಕರಪಂಕಜಮಂ ೧೦

ಅಂತೆಸೆವ ಮುಗ್ಧೆಯರುಮತಿಶಯವಿದಗ್ಧೆಯರು
ಮಲರ್ಗೊಳಗ[6]ಳೊಳ್[6] ಪೊಕ್ಕು ಬಿಸಲತೆಗಳಂ ಮಿಕ್ಕು
ಪಾವಸೆಗಳಂ ಪಱಿದು ನೀರ್ವೂಗಳಂ ತಿಱಿದು
ಕೊಳವೇರ್ಗಳಂ ಕಿೞ್ತು ಮೊಱೆವ ನೆವದಿಂದುೞ್ತು
ಮುಸುಱುವಳಿಯಂ [7]ಬ[7]ಡಿದು ಕಮಲದೆಲೆಗಳನುಡಿದು
ಕರೆಯುತಿರೆ ಕಡುಬೆರ್ಚಿಯಂಚೆಗೌಡಂ ಕರ್ಚಿ
ಯಡಿಗಳಂ ತಡವಿಟ್ಟು ಕೋಳದಿಂದೆ ಪೊಱಮಟ್ಟು
ಕೊಳ್ಳು ಬಕ್ಕಿನೆ ನಡೆದು ನೊಸಲ ಬೆಮರಂ ತೊಡೆದು
ಬಸಮಂ ತೊಱಲ್ದಂದು ತುದಿಗಾಲ್ಗ[8]ಳಿಂ[8] ನಿಂದು
ತೊಡೆ ನಡುಗೆ ನಡು ನಿಮಿರೆ ಕೊಂಬಿಂಗೆ ಕೆಯ್ನೀಕ್ಕಿ
ಬಿಟ್ಟಮುಡಿ ಬ[9]ರಿ[9]ಗೆ ವರೆ ಮುರಿದು ಲತೆಗೊಳವಕ್ಕಿ
ಮಧುವಿಂ ಕುರುಳ್ ನಾನೆ ಪೂಗೊನೆಗ[10]ಳಂತಾನೆ[10]
[11]ಮೊಲೆ[11]ಕಲಿಸೆ ಗೊಂಚಲೊಳು ಪೂಗುಡಿಗೆ ನಸುಬಾಗಿ
ಮೆಟ್ಟಿದೆಳಗೊಂಬಿನೊಳೆ ತಳಿರೊಗೆಯೆ ಕೆಯ್ನೀಡಿ
ಮಿಸುಗುವಸುಗೆಯ ತಳಿರ್ಗಳ ತಿಱಿದು ಪೊಱೆಮಾಡಿ
ಸೋಂಕೆ ನೆಗೆದಂಕುರಂಗಳ್ ತಾಗೆ ಕಡುನೊಂದು
ಸೀತ್ಕರಿಸಿ ಕರತಲದಿನೊರಸೆ ಮೊಲೆಗಳನಂದು

1 ದಿರದೆ (ಫ) 2 ರಹಾ (ಫ) 3 ಳ (ಕ ಫ) 4 ತನ್ನೊಳ್ ಮಾತಾ (ಗ ಫ) 5 ಡಪುದೆಂದೆ (ಕ ಗ ಫ) 6 ಳಂ (ಫ) 7 ಜ (ಫ) 8 ಳೊಳ್ (ಫ) 9 ದ (ಫ) 10 ಳಂತಾಗಿ (ಕ ಫ) 11 ಯೋಲ (ಗ)

ಕುರವಕದ ಕಳಿಕೆಗಳನುಡಿದುಡೆಗಳೊಳ್ [1]ಪತೆ[1]ಯ್ದು
ಜಲಜದಳದೊಳ್ ತೀವಿ ಪಸುರ್ನಸೆಯನಾಯ್ದಾಯ್ದು
ವಕುಳಕುಳದೊಳ್ [2]ಚೆಲ್ಲಿ ಪಲ್ಲ ಚ[2]ವಿಯಂ ಪ[3]ರಿ[3]ದು
ಬಿರಿಮುಗುಳ್ಗಳಂ ಕೊಯ್ದು ಬಾಡೆಯೆಲೆಯೊಳ್ ಸುರಿದು
ಕಱುಕ್ಕೆಯೆಸ[4]ಟಿಂ[4] ಕಮಳನಾಳದಿನವಂ ಸುತ್ತಿ
ಕಪ್ಪುರವರಂಗ[5]ಳೆಲೆಗಳ[5]ನುಗಿದು ಪೊರೆಯೆತ್ತಿ
ಪೊಳೆವ ಬಟ್ಟಲನೆಡದ ಕೆಯ್ಯೊಳೊಯ್ಯನೆ ಸಾರ್ಚಿ
ಪಚ್ಚೆಯ ಪರಲ್ಗಳಂದದ ಪಗಿನನಿರದುರ್ಚಿ
ತಳಿರ ಮೂಡೆಯೊಳೆ ಮಲ್ಲಿಗೆಯ ಮುಗುಳ್ಗಳನೊಟ್ಟಿ
ಮಿಕ್ಕ ಮುಗು[6]ಳಂ[6] ಮೇಲುದಿಂ ಮೊಟ್ಟೆಯಂ ಕಟ್ಟಿ
ಪೂಗೊಂಚಲಂ ಮುಱಿದು ಮೋೞಿಗೆಗಳಂ ಬಿಗಿದು
ತುಱು[7]ಗಿ[7] ಕೇದಗೆಪೂವನವಱ ನಡುವಂ ಬಿಗಿದು
ಕಮಳದುತ್ಪಳದ ಕಾವಿನ ಪೊಱೆಗಳಂ ಪೊತ್ತು
ಕುಚಭರದಿನೊಂದನಾಂತೊಂದಂ ಪೆಗಲ್ಗಿತ್ತು
ಚೂತ[8]ಪಲ್ಲವಚಂದನಂ[8]ಗಳಂ ತಡ್ಕೈಸಿ
ಬಿದ್ದ ಬಾಳಮುಮನೆಲೆಯುಮ[9]ನಾಯ್ದು[9] ತಡ್ಕೈಸಿ
ಸೋರ್ದ ಮುಡಿಗಳ್ ಸಡಿಲಿ ಬಿಡೆ ಬೆನ್ನನಪ್ಪಳಿಸೆ
ಕೊಡದನ್ನಮಪ್ಪ ಮೊಲೆಗಳ್ ಜಡಿಯೆ ನಡೆ[10]ಗಲ್ತಿಸಿ[10]
ಕುಸಿದ ಕೊರಲಿಂಬಾಗೆ ಘನನಿತಂಬಂ ಪೊಡರೆ
ಕಂಗಳೊಳ್ ಕೆಂಪಡರೆ ಕಾಲ್ ಬ[11]ಳೆ[11]ಯೆ ನಡು ನಳಿಯೆ
ಕಟಲುತುಂ ಬಟಲುತುಂ ದಡದಡಿಸಿ ನೀರಡಸಿ
ಸುಯ್ಯುತುಂ ಪೊಯ್ಯುತುಂ ನೀರ್ದಡಿಗೆ ಮರದಡಿಗೆ
ಸಾರುತುಂ ಮಾರುತಂ ನಸುವೀಸೆ ನೆಟಲಾಸೆ
ಕುಂದುತುಂ ಕಂದುತುಂ ಕುಸುಮಸುಕುಮಾರಿಯರ್
[12]ಸುಲಲಿತಾಕಾ[12]ರೆಯರ್ ಶಿಶಿರೋಪಚಾರಮಂ
ಕೆಳದಿಗುಪಚಾರಮಂ ಮಾಡುವುದ್ಯೋಗದಿಂ ಬಂದರತಿವೇಗದಿಂ ೧೧

ಅಂತು ಬರ್ಪಾಗಳ್—

ಮದಹಂಸೀನಾದಮಂ ಮೀಂಗಳನಮಳಜಳೌಘಂಗಳಂ ನೂಪುರೋದ್ಯನ್ಮೃದುನಾದಂ ಪ್ರಸ್ಫುರಲ್ಲೋಚನಮುಪಯುವಸಂಪೂರ್ಣಲಾವಣ್ಯಮಂದು[13]ಬ್ಬದೆಗಂ[13]ಬೋಲ್ತೊಪ್ಪೆ ಲೀಲಾವತಿಯ ವಿರಹಮಂ ಮಟ್ಗಿಸಲ್ ಬಂದ ಗಂಗಾನದಿ[14]ಬಂದಂ[14]ತೊಪ್ಪೆ ಬಂದಳ್ ಧವಳಕಮಳಮಂ ಕೊಂಡು ಕಂಜಾಸ್ಯೆಯೊರ್ವಳ್

[1] ಪೊ (ಫ) [2] ಪಲ್ಲ ಪಲ್ಲಚ್ಛ (ಫ) [3] ರೆ (ಫ) [4] ಬಂ (ಫ) [5] ಳಂ ತಿರುಳ (ಫ) [6] ಳ್ಗಳ (ಫ) [7] ಕಿ (ಫ) [8] ಚಂದನ ಪಲ್ಲವಂ (ಕ ಫ) [9] ನಗಿದು (ಕ ಫ) [10] ವಾಗ (ಕ ಖ) [11] ಳ(ಕ ಫ) [12] ಸಲ್ಲಲಿತತಾ (ಕ) [13] ಜ್ಬೇಗದಿ (ಕ) [14] ಬರ್ಪಂ (ಕ ಫ)

ಮತ್ತಮೊಬ್ಬಳ್—

ಅಮರ್ದಿರೆ ದುಕೂಲದುಳ್ಳುಡೆ
ಯಮಳ್ವ ಮಂಜಿನವೊಲೆಯ್ದೆ ಕೊರಗೆ ಮುಖಾಬ್ಜಂ
ಹಿಮಸಮಯಮಯಶ್ರೀವೊಲ್
ಕುಮುದಂಗಳನಾಂತು ಬರ್ಪಳೀಸೊಪ್ಪಿದಳೋ ೧೨

ಕಳವಿಳಸತ್ಕಳಾಪಿನಿಗೆ ಪೀನಪಯೋಧರಘೂರಿಭಾರಗು
ಜ್ಜ್ವಳಚಪಳಾಕ್ಷಿಗಾದುದು ಗಡಂಗಜತಾಪಮದೆಂತು ಸೈರಿಪಂ
ಮುಳಿಯದೆ ಪೇಟಿಮೆಂದಿರದೆ ಬರ್ಪ ಘನಾಗಮಲಕ್ಷ್ಮಿಯಂತೆ ಶೀ
ತಳ[1]ಕರ[1]ಕಾಂಬುವಾಹಿನಿ ಸರೋವರದಿಂ ಬರುತಿರ್ಪಳೊಪ್ಪಿದಳ್ ೧೩

ಸುರಭಿಶ್ವಸಿತಾಕುಳಿ ಮಧು
ಕರಕುಂತಳೆ ಮೃದುಳಪಾಣಿಪಲ್ಲವೆ ಲತೆಯುಂ
ತಿರೆ [2]ತನ್ವಿ[2] ಬರುತುಮೆಸೆದಳ್
ಬಿರಿಮುಗುಳಂ ಪೊತ್ತು ಕುಸಿಯುತುಂ ಮತ್ತೊರ್ವಳ್ ೧೪

ಜಳಿತಂ ವಕ್ಷೋಜಚಕ್ರದ್ವಯಮಮರ್ದಿರೆ ತುಳ್ಕಾಡೆ ಹಾರಾಂಶುನೀರಂ
ಸಳಿತೋಳಿಂಬೂರ್ಮಿಯಿಂ ತಾವರೆಯನುರದೆಗೊಂಡಂಜೆ ಮಂಜೀರಿಕಾಮಂ
ಬುಳನಾದಕ್ಕಾಗೆ ಜಿಸ್ನೊಳ್ ಕೇಳಿಯ ವಿರಹೋಗ್ರಾಗ್ನಿಯಂ ಮಟ್ಟಿಸಲ್ ಪೂ
ಗೊಳನಂ ತದ್ಕ್ಯಸಿ ತರ್ಪಂತಸದಳಮೆಸೆದಳ್ ಕಾಂತೆ ಮತ್ತೊರ್ವಳಾಗಳ್ ೧೫

ಅಂತು ಬಂದು ಸೌಂದರ್ಯಕ್ಕೆ ಸೆಣಸಿ ಬರ್ಪ ವಸಂತಲಕ್ಷ್ಮಿಯ ಸರ್ವಸ್ವಮಂ ಸೂಱೆ[3]ಗೊಳ್ವಂತೆ[3] ತಂದ ಬನದೊಡಮೆಯುಂ ಮುಂ[4]ದಿಡು[4]ವುದುಂ ಕಂಡು ಕಳಾವತಿ ಎನ್ನ ತಾಯ್ದಿರಾ ತಂ[5]ದಿ[5]ರೆಂದು ತಂದಿರಂತೆ ಬುಲ್ಕೆಯುಂ ಬಗೆಯದೆ ಸಂತಾಪಶಾಂತಿಕರಂಗಳಪ್ಪ ಪರಿಕರಂಗಳಂ ಕೈಗೆಯ್ಯೊಳಿಸಮೆದು ನಿಮ್ಮ ಕೇಳದಿಗೆ ತಡೆಯದೆ ತಣ್ಪುಗೆಯ್ವುಮೆಂಬುದುಮಾಕೆಗಳ್ ಪೆಸರ್ವೆಸರೊಳೆ ಕರೆದು—

ಮುರಿ ಬಾಸಿಗಮುಂ ಮುಗುಳ್ಗಳ
ಕರಡಿಗೆಯೊಳ್ ಪಿಂಡು ಸರಲಪಲ್ಲವರಸಮಂ
ವಿರಚಿಸು ತಳಿರಂ ಬಾಡೆಯು
ತಿರುಳೆಲೆಯಿಂದೆಲರಸಿಟ್ಟು ಬಿಜ್ಜಣಿಗೆಗ[6]ಳಂ[6] ೧೬

ಜಳಜಗಳಂ ತೊಳೆ ಮಳಯಜ
ಜಳದೆಳಗಳಿಕೆಗಳನದ್ದು ಹಿಮರಸದೊಳ್ ಶೀ
ತಳಿಕೆಗಳ ಮೇಲೆ ತೆಳ್ಳನೆ
ತಳಿ ಕೆಲದೊಳ್ ಕುಳಿರ್ವ ಶೀತಸಾರಾಂಬುಗಳಂ ೧೭

1 ಕೃತ (ಘ) 2 ನಾರಿ (ಗ) 3 ಗೆನುತರ್ಪಂತೆ (ಗ) ಗೊಂಡು ತರ್ಪಂತೆ (ಘ) 4 ದೊಟ್ಟು (ಗ) 5 ದ (ಕ) 6 ಳಂ (ಘ)

ಬೇಱುರಿಸ[1]ರಲಂ[1] ಪ[2]ದ್ರವ[2]ಡಿ
ಸಾಱುದ ಚಂದನಮನುದಕಯಂತ್ರ[3]ದ ಗಿಳಿ[3]ಯಂ
ಪಾಱಿಸು ದಿಕ್ಚಂದ್ರಿಕೆಯಂ
ಕಾಱಿಸು ಬಿಂದುಗಳನಿಮ್ಮ ಮಣಿಪುತ್ರಿಕೆಯಿಂ ೧೮

ಕಿಸುಗಲ್ಲ ಕಾಂತಿಯೆಂಬೆಳ
ಎಸಿಲಂ ಕುಡಿಯಿಸಿ ಚಕಚ್ಚಕೋರಿಗಳಿಂ ಕಾ
ಱುಸು ಬೆಳ್ದಿಂಗಳನಳಿಗಳ
ಮುಸುಂಬಿನಿಂ ಪನಿವ ಮಧುಗಳಂ ಪಿಡಿ ತಳಿರೊಳ್ ೧೯

ನನೆಯ ತೊಡವಂ ಮಾಡೀ ಪಂಕೇಜಪತ್ರಮನೊತ್ತು ಮಾ
ಎಸ ತಳಿ[4]ರುಮಂ ಪಾಸೀ ಪೂವಿಂದೆ ಪಚ್ಚಡಿಸುತ್ತುಮಾ
ವಿಸಕರಕರಂಗಳ್ ನೋಡಲ್ ಬಂದುತ್ಪಲಮಾಲೆಯಂ
ಪನಿಯಿಸದಿರೀ ಜ್ಯೋತ್ಸ್ನಾಜಾತಿಸ್ಮಿತಂಗಳನಬ್ಜದೊಳ್ ೨೦

ಸರಂದೆಗೆಯರಲ್ದ ಮಲ್ಲಿಗೆಯ ಪೂಗಳಂ ಬೇಗದಿಂ
ತರಂಬಿ[5]ಡಿ[5]ದ ಗಂಧತೋಯಕಲಶಂಗಳಂ ತಣ್ಪುಗೆಯ್
ಪೊರ[6]ಬ್ಬ[6] ಪಿರಿದಪ್ಪ ಕಪ್ಪುರದ ಧೂಳಿಯೊಳ್ ಪುಷ್ಪಚಾ
ಮರಂಗಳನಲರ್ಚು ಕೃತ್ರಿಮಸುಧಾಂಶುವಿಂ ನೆಯ್ದಿಲಂ ೨೧

ಅಂತುಮಲ್ಲದೆಯುಂ—

ನಾದಿಪಂ[7]ಚೆ[7]ಗೆ ಸರೋರುಹಮಂ ನೀ
ಡೋದುತಿರ್ಪ ಗಿಳಿಗೀಯುಗೆ ಪಣ್ಣಂ
[8]ಕಾದಿ[8] ಕೇಗುವ ನವಿಲ್ಗ ಪಿ[9]ವ್ಪೋಲಿಂ[9]
ಬಾಡುದಂ ಕುಡುಗೆ ನೆಯ್ದಿಲ ಕಾವಂ ೨೨

ಕರೆವ ಕೋಗಿಲೆಗಿಕ್ಕುಗೆ ಮಾವಿಸಂ
ಕುರವನೀಗಳೆ ಸೂಸುಗೆ ಪೂಗಳಂ
ಮೊರೆವ ತುಂಬಿಗೆ ತಾ[10]ಗಿ[10]ವ[11]ಜಾ[11]ಱುದಿಂ
ಎರಕೆ [12]ಬೆಚ್ಚಿ[12]ದಪಳ್ ಸಖಿ ಕಾಣಗೆ ೨೩

---

1 ಲರಂ (ಕ ಫ) 2 ಡವಿ (ಕ) 3 ದಿನಿರಿ (ಫ) 4 ರಪಾಸನೀ (ಕ) ರಪಾಂಗಿಂ (ಫ)
5 ಡ (ಕ) 6 ಳ್ದ (ಕ) 7 ಬ (ಕ ಫ) 8 ಕೋದು (ಕ) ಕಾದು (ಫ) 9 ದೋಱುಂ (ಫ)
10 ನಿ (ಕ ಫ) 11 ಱೂ (ಫ) 12 ಪೆರ್ಚಿ (ಫ)

ಎಂದು ಕೃತಪರಿಕರೆಯರಾಗಿ ಶಿಶಿರೋಪಚಾ[1]ರಮಂ[1] ಮಾಡುವಾಗಳ್—

ಪೊಸಪೂವನಿಱುಸಲಾಕೆಯ
ಬಿಸುಸುಯ್ಯಿಂ ಗರಿಲೆಸುರಿಯೆ ಸಂಭ್ರಮದಿಸದಂ
ಬಿಸುಟು ಸೆಱಗೊಂಡು ನಿಜಕರ
ಕಿಸಲಯಮಂ ಶಿಶಿರಜಲ[2]ದೊಳ್[2]ದ್ದಿದಳೊರ್ವಳ್ ೨೪

ನೀರಸದಂ ನೀರಡಸಿದ
ಕೀರಂ ನಸುದುಡುಕೆ ಬೇಯೆ ಚಂಚುಪುಟಂ ಕೀರ್
ಕೀರೆನುತ ಪೋಯ್ತು ಕೊಂಬಿನ
ಕೋರಕಮಂ ಕರ್ಚಿ ಸುಟ್ಟುದೆನ್ನದೊ ವಿರಹಂ ೨೫

ಮತ್ತಮೊರ್ವಳ್—

ತಂದಿಕ್ಕಿದರಾರ್ದ[3]ಯೊಳ್[3]
ಮಾಂದಳಿರಲ್ಲದುದನೆಂದು ಸುದತಿಯ [4]ಸು[4]ಯ್ಯಿಂ
ಕಂದಿದೊಡಬಳೆ ತಮಾಳದ
ಪಂದಳಿರೆಂದೆಡೆದು ಕಳೆದಳಾಮ್ರದ ತಳಿರಂ ೨೬

ಬಾಡಿದವುದೆಂದು ಮರಸಂ
ಸೂ[5]ಡುವ[5] ಬಾಸಿಗದ ಮೇಗೆ ತಳಿ[6]ವಂ[6]ತೊರ್ವಳ್
ಸೂಡಿರ್ದೆಳೆಯಳ ಮೆಯ್ಯೊಳ್
ಕೋಡುವ ತಿಳಿನೀರನಬಲೆ ತಳಿಯುತ್ತಿರ್ದಳ್ ೨೭

ಕೇಸುರಿಯನುಗುಳ್ದುದೋ ನಿ
ಶ್ವಾಸದಿ[7]ನಿ[7]ವಳಿರ್ದೆಯ ಮದನಶಿಖಿಯೆನೆ [8]ಕುಚ[8]ದೊಳ್
ಸೂಸಿದಶೋಕೆಯ ತಳಿರ್ಗಳ್
ಬೀಸುವ ಬಿಜ್ಜಣಿಗೆಯೆಲರಿನೇನಗ್ಗಳಮೋ ೨೮

ತರತರದೆ ತರಳಗುರುತರ
ಕರಕಾಂಬುಕಣಂಗಳಮರ್ದು[9]ವೆ[9]ಡೆಯೊಳ್ ಕಾಯ್ಪಿಂ
ಕರಗಿದುವೊ ಕೊರಲ ಮುತ್ತಿನ
ಸರಮೆನೆ ಸರಸಿರುಹಸರಲದಳ ಲೋಚನೆಯಾ ೨೯

---

[1] ರಂಗಳಂ (ಫ) [2] ದಿನ (ಖ ಗ) [3] ಯಂ (ಕ) [4] ಕ (ಕ) ಮೆ (ಫ) [5] ಡಿದ (ಫ)
[6] ರಂ (ಫ) [7] ನ (ಫ) [8] ಕೆಲ (ಕ) [9] ದೆ (ಫ)

ವಿರಹಶಿಖಿಯುಳುರೆ [1]ಜ[1]ಳಶೀ
ಕರನಿಕರಮೆ ಬಲಿ[2]ತ್ರ[2] ತೆಱದಿನಬಲೆಯ ಮೆಯ್ಯೊಳ್
ಕರಮೆಸೆದಿರ್ದುವು ಸಖಿಯರ್
ಕರತಳದಿಂ ತಳಿಯೆ ತೊಳಪ ಮುತ್ತಿನ ಮುಱುಗಳ್ ೩೦

ಅಳುರ್ದ ಪು[3]ವೆ[3]ಳವೆಱೆ ತಣ್ಣೆಲ
ಲಳುರ್ದ ಪುದಾನಳುರದಿರ್ಪುದೇನೆಂಬವೊಲಾ
ಕೆಳದಿಯರ ತಳಿವ ಶೀತಳ
ಜಳಮಳುರ್ದುದು ಕಾಯ್ದು ಕಾಯತಾಪದಿನವಳಾ ೩೧

ತರುಣಿಯ ವಿರಹಾನಳನಿಂ
ಕ[4]ರಿಂ[4]ಕು ತಗುಳ್ದಲರ ದೂಳಿ ದೂವೆಯ್ದು ತೆಱ[5]ಮೋ[5]
ಸರಿಸೆ ಮಿಸುಕಿದುವು [6]ಬೆಳುಪಿಂ
ದೊ[6]ರೆದಾವಗೆದೆಱೆದ ಕೊಡಗಳೆನೆ ಮೊಲೆಗೊಡಗಳ್ ೩೨

ಮಳಯಜಜಳಭರಶೀತಳ
ಕಳಶಮನೇಂ ಕುಚದೊಳೊತ್ತುತಿರ್ದಳೊ ಹೃದಯಾ
ನಳನೊಳಳವಟ್ಟು ತೋಱಲ್
[7]ಕಳ್[7]ನೇಱಿಸಿದಂತೆ ಕರ್ಕಶಾಶ್ಮಾಂತಿಕದೊಳ್ ೩೩

ತನ್ನಂ ಬೇಯಿಪ ಶಶಿಯಂ
ಪನ್ನತನೆಂದೆರ್ದೆಯ ಕಿಚ್ಚಿನೊಳ್ ತುಱುಕುವವೋಲ್
ಕನ್ನೆ ನವಚಂದ್ರಕಾಂತದ
ಕನ್ನಡಿಯಂ ಪೊತ್ತುವೆರ್ದೆಯೊಳೊತ್ತುತ್ತಿರ್ದಳ್ ೩೪

ಎನ್ನ ಕರಂಗಳಿಂದಿನಿತವಸ್ಥೆಗೆ ತಂದೆನಿವಳ್ಗೆ ಮಾಳ್ಪುದೇ
ನಿನ್ನೆನಗೀವು[8]ದೋ[8] ಬೆಸನನೀಗಳೆ ಕೊಂದಪೆನೆಂದು ಚಂದ್ರಮಂ
ಬಿನ್ನವಿಸಲ್ಕೆ ಚಿತ್ತಜನ ಸಾರ್ಕೆಗೆ ಬಂದವೊಲೊತ್ತಿಕೊತ್ತಿಕೊಳ್ವ ತ
ಣ್ಗನ್ನಡಿ ಕನ್ನೆಯುಳ್ಳೆರ್ದೆಯ ಬೆಂಕೆಯೊಳೇಂ ಕಡುಗಂದಿ ತೋಱತೋ ೩೫

ಸುಡು[9]ಪುಡಿ[9]ನಾಳಿಯರ್ ಶಳಿದ ನೀರ್ವನಿಗಳ್ ಜಿಸುಸುಯ್ಯ ಗಾಳಿಯಿಂ
ದೆಡೆಯೊಳೆ ಬತ್ತಿ ಬೇವೆರ್ದೆಯೊಳಂದೆರ್ದೆಯೊತ್ತುವ ಚಂದನದ್ರವಂ
ಸಡಿಲದೆ ನೀವ ಪೂವಸೆಯ ಪೆರ್ವೊಗೆಯಿಂ ಕಳಿತಪ್ಪ ಕಣ್ಣ ನೀ
ರ್ಗಡಲ್ಗೊಳಮಾಱದಾಯ್ತಬಲೆಯಂಗಜತಾಪಮದೇನೆಱುಂಬಮೋ ೩೬

[1] ಬ (ಕ) [2] ದ (ಕ ಗ) [3] ದೆ (ಕ ಘ) [4] ರು (ಕ ಘ) [5] ದೋ (ಕ ಘ) [6] ಬಿಸುಪಿಂ ಪೊ (ಘ) [7] ಮಲ (ಕ) [8] ದೀ (ಕ) [9] ಪುದಿ (ಖ) ಪಡೆ (ಘ)



ಒಂದು ಕದಂಪಿನೊಳ್ ಕರಮೆ ಕಂದಿದ ಚಂದನಸಾಂದ್ರಸಂಕದಿಂ
ದೊಂದು ಕದಂಪಿನೊಳ್ ಸಖಿಯರಾಗಡೆ ಪೊಯ್ದ ಹಿಮಾಂಬುಪೂರದಿಂ
ದೊಂದಿದ ಕಣ್ಣ ನೀರ ಕಡಲೇಂ ಕವಿತಂದು[1]ದೊ[1] ತಳ್ತುರಕ್ಕೆ ಕ
ಳಿಂದಿಯುಮಂ ಮರುಸ್ನದಿಯುಮಂ ತೆಗೆದಂತವಳಂಗತಾಪದಿಂ ೩೭

ಮೃಗಶಿಶುನೇತ್ರೆಯರ್ ತಳಿಯೆಯುಂ ತಿಳಿನೀರ್ಗಳಸಂಗತಾಪದಿಂ
ಪೊ[2]ಗೆ[2]ವ ಮೃಣಾಳಮಂಡನದ ಪೆಲ್ಪೊಗೆಯುಂ ಮಿಗೆ ಪೀ[3]ಲಿಗಣ್ಗ[3]ಳುಂ
ನೆಗಪಿದುವಕ್ಕುವಶ್ರುಗಳನಂಬಿನಮಂಬುಗಳಿಂದೆ ನಾಂ[4]ದು[4] ಸೋ
ಗೆಗಳಿನೆ [5]ಬೆ[5]ರ್ಚಿ ಬೀಸಿದುವು ದೀ[6]ಪ[6]ದ ಸೋಗೆಗಳಾ ಮೃಗಾಕ್ಷಿಯಂ ೩೮

ದರದಳಿತನವೋದ್ಯನ್ಮಲ್ಲಿಕಾಮಾಲೆಯಾ ಪಂ
ಕರುಹಮುಖಿಯ ಕಂಠಾಲಂಬಿಯಿಂಬಾದುದಾಗಳ್
ಸುರಭಿಸಲಿಲಸೇಕಸ್ಮೇರವಾರಾಂತರಂಗ
ಸ್ಫುರಿತಪಿಯಿನಸಲ್ವೋದಂತೆ ಮುಕ್ತೋರುಹಾರಂ ೩೯

ಪಣೆದೆತ್ತಂತೇಲ್ವ ಬಾಷ್ಪಾಂಬುವೊಳವಳ ಕುಚಂ ಬೇಗುಮೆಂದಾಗಳುಂ ಬಾ
ಪಣೆಸಿಟ್ಟಂತೊಟ್ಟಿದಂಭೋರುಹದೆಲೆಗಳೊಳಾಳೀಜನಂ ಸೂಸಿದಂಭಃ
ಕಣಜಾಲಂ ಕಂಪಿಸುತ್ತೊಪ್ಪಿದುವು ಹೃದಯತಾಪಾನಳಂ ತಮ್ಮ ಸೇಕ
ಕ್ಷಣದಿಂದಂ ಪೀರ್ಗುಮೆಂಬೀ ಭಯಮೆ ಬಳೆದವೋಲಿನ್ನದಾಶ್ಚರ್ಯಮುಂಟೇ ೪೦

ಸುದತಿಯ ಸುಯ್ಗಳಿಂ ಬನಮೆ ಬೆಂದುದು ಬೇಯದೊಡೇಕೆ ಕೆಚ್ಚನಾ
ದುದೊ ತನಿವಣ್ಗಳಂ ಸವಿದ ಕೀರದ ಚಂಚುವದೇಕೆ ಮೂಗುವ
ಟ್ಟುದೊ ಮಧು ಪೋಪುದುಂ ಕಳಿಕೆಗರ್ಚಿದ ಕೋಗಿಲೆಯೇಕೆ ಪಾಱಿ ಪೋ
ದುದೊ ಶಿಶಿರಾಂಬುಜಾಕರಕೆ ತುಂಬಿ ತುಡುಂಕಿ ನವಪ್ರಸೂನಮಂ ೪೧

ಕಿವಿಗಳ್ ಬೆಂದಪ್ಪುವೆಂಬಂತಿರೆ ಕರತಳದಿಂ ಮುಚ್ಚುಗುಂ ಕೇಳ್ದು ಕಿರ್ಚೆ
ರ್ದಪೊಲಾಗಳ್ [7]ಪಾಯ್ದು[7]ಪೋಪೋ ಎನುತುಮೆರ್ದೆಗಳಂ ಚಿಂತೆಗೆಯ್ವಂತ[8]ದಂ[8] ಘೂ
ಘುವನಂ ತಾನೆಂದೊಡಿನ್ನಾಂ ಪೊಗ[9]ಳ್ವದ[9] ಪಿರಿದುಂ ಭೀತಿಯಾದಪ್ಪುದೆಂ[10]ಬೀ
ಯ[10]ವೊ ಪೇಟಿನ್ ಲೀಲಾವತೀದೇವಿಯ ವಿರಹಮದಿಂತೆಂಬ ಜಿಹ್ವಾಂಕುರಂಗಳ್ ೪೨

ಆಗಳ್ ಬೀಸುವ ಚಾಮರಂಗಳ ಗಾಳಿಯಿನಗ್ಗಲಿಸಿದಂತೆಯುಂ, ಪಾಱಿಸುವ ಪಯೋಯಂತ್ರಕುಕಪಿಕಪಕ್ಷಾನಿಳನಿನಳವಿಗಟಿದಂತೆಯುಂ, ಬನದೊಳಗೆ ಬಾಯ್ಗವಿಯಪ್ಪ ತಳಿರುಮಂ ಪೂವುಮನೆಲ್ಲಿಯುಂ ಪಡೆಯದೆ ಪಸಿದು ಬಂದಸಿಯಳ ಮೆಯ್ಯೊಳ್

[1] ವೊ (ಕ ಖ) [2] ಳೆ (ಕ) [3] ಱಿಕ (ಖ) [4] ದಿ (ಕ) [5] ಬಿ (ಘ) [6] ವ (ಕ ಘ)
[7] ಪೊಯು (ಕ) ಪೊಯ್ಯು (ಘ) [8] ಡಂ (ಘ) [9] ಟ್ವಡೆ (ಘ) [10] ಬೇಯ (ಕ) ತಪ್ಪ (ಘ)

ಪೊಕ್ಕವ[1]ಳುದುರ್[1]ಕೊಳ್ವ ವಸವಹ್ನಿಯಂತೆಯುಂ, ಕಡುಗಾರಮಪ್ಪ ಕಡಲ ನೀರಡೋ ಜಕಮಾಗೆ ಕೆಳದಿಯರ್ ತುಳುಂಕುವ ಶೀತಳಾಮೋದಸ್ವಾದುಸಲಿಲಾಸಾರಕ್ಕೆ ಬಯಸಿ ಬಾತ್ತು ಬಂದು ಬಡಬಾಗ್ನಿ ಬಾಲಕಿಯೊಡಲೊಳಡಂಗಿದಂತೆಯುಂ, ಮನಸಿಜಂಗೆ ಮನಮನೆಡೆಗೊಟ್ಟಳೆಂಬ ಮುಸಿಸಿನಿಂ ಮಾನಿನಿಯುಸುರಿಪುವ ಹರಹುತಾಶನನಂತೆಯುಂ, ಮಿಡಿದೆ[2]ಡೆ[2]ಗಿಱಿದ ಪಯೋಧರಂಗ[3]ಳುಪಿನೊಳ್[3] ಸಿಡಿಲ್ದುದಱಿಂ ಸಿಡಿಲ ಕಿಚ್ಚಿನಂತೆಯುಂ, ಕುಚಮೆಂಬ ಕುಲಗಿರಿಗಳಿಂ ತಿಸರಮೆಂಬ ತೊಱೆಗಳಿಂ ಮೊಗಮೆಂಬ ಪೂಗೊಳಂಗಳಿಂ ಬಾಸೆಯೆಂಬ [4]ಬನದಿಂ[4] ಅಧರದಶನನಖಸಿಕುರುಂಬಮೆಂಬ ರತ್ನಂಗಳಿಂ ಕುಂತಳಮಧ್ಯದೇಶಾದಿಪ್ರದೇಶಂಗ[5]ಳಿಂದಾ[5]ಜಂಬಾಧರಿಯೆಂದೇ ಬಗೆದು ವಿಳಯಪ್ರೈಶ್ವಾಸನಂ ಸುಡುವಂತೆಯುಂ ಅಸಕಲಿತದುಸ್ಸಹವಿರಹದಹನದಾಹಕ್ಕೆ ಸೈರಿಸಲಾಱದೆ ಸನೆಯ ಪೂಪಿನ ತಳಿರ ತುಡುಗೆಗಳಂ ಪರಿದೀಡಾಡಿ ಪೊರಳ್ದು ತೆರಳ್ದು ತೆರೆಮಸಗಿ [6]ಮ[6]ಱುಗಿ—

ಮಗಮಗಿಸುತ್ತೆ ಪೊತ್ತಿ ಪೊಗೆವಂಗದ ಚಂದನದಣ್ಪು ಧೂಪಮಂ
ತೆಗಟಿಸೆ ತಾಪದಿಂದುರಿವ ಕಪ್ಪುರಮೊಪ್ಪುವ ದೀಪದಂದಮಂ
ಪೊಗಟಿಸೆ ರಾಸಿಗೆಯ್ದ ನನೆ ಕೇಸಡಿಗಿಂದೆಣೆಯಾದ ಕೆಂದಳಿರ್
ಸೊಗಯಿಸೆ ಮೋಹದೇವತೆಗೆ ತನ್ನನೆ ತಾಂ ಬಲಿಗೊಟ್ಟಳೆಂಬಿನಂ ೪೨

ಅಂತಿರ್ದಳಂ ಕಂಡು ಕಳಾವತಿ ಕೆಯ್ಗಳನೆತ್ತಿ ಕೆಳದಿಯರನೋಹೋ ಎಂದು ಮಾಣಿಸಿ—

ತಳಿರ್ಗಳ್ ಮೆಯ್ವೆಂಕೆಯಿಂದಂ ತೆಗಟಿದ ತಳಿರಂತಾದುವಾದಂ ಮೃಣಾಳೀ
ವಳಯಂ ಕೆಯ್ವೆಂಕೆಯಿಂದಂ ಕರಿಯ ಬಳೆಗಳಂತಾದುವೀ ಮಲ್ಲಿಕಾಕೋ
ಮಳೆಯಂಗಂ ಸೋಂಕೆ ಸೇವಂತಿಗೆಯಲರಲಸಿತುಂ ಬಾಯ ಕಂಪಿಂಗೆ ಪಾಯ್ತಂ
ದಳಿಗಳ್ [7]ಸು[7]ಯ್ವೆಂಕೆಯಿಂ ಸೀದವೊಲೆ ಕೊರಗಿ ಕೊಂಡಿರ್ದುವೇನೆಂಬ ಕಾಯ್ಪೋ ೪೩

ಕಪ್ಪುರದ ರಜಮನುರಿ[8]ಯಿಪು[8]
ದೊಪ್ಪುಗುಂದಾ ತಳಿ[9]ರ[9] ಕುಳಿರ್ವ [10]ತಿಳಿನೀರ್ಗಳುಮಂ[10]
ಪುಷ್ಪಕಮಾಗಿ ಕಸಲ್ದಪು
ದೆಪ್ಪುದು ಕಾಮಿನಿಯ ಮೆಯ್ಯ ಬೆಂಕೆಯದಣಕಂ ೪೪

ಅಸಿಯಳ ಕೆಯ್ಯಂಬುಜಮಂ
ಮುಸುಱುವ ಕಣ್ಬಸಿಯ ಮಂಜು ಕೊರಗಿಪುದುಚಿತಂ
ಬಿಸುಸುಯ್ಯಿಂ ನೆಯ್ದಿಲಸಾ
ಸ್ಯಸುಧಾಕರಬಿಂಬಮೇಕೆ ಕೊರಗಿಸಿದಪುದೋ ೪೫

---

[1] ಗ್ಗಳುದುರ್ದು (ಕ) ನಳ್ದು (ಘ) [2] ರೆ (ಘ) [3] ಳುವಿನೊಳ್ (ಕ) ಳೊಳ್ (ಘ) [4] ನದಿಯಿಂ (ಘ) [5] ಳಿನಾ (ಕ ಘ) [6] ತು (ಗ) [7] ಮೆ (ಘ) [8] ಪುವು (ಕ ಘ) [9] ರ್ತ (ಕ) [10] ನೀರ್ಗಳುಮಂತಾ (ಘ)

ನಾಸಾಚಂಪಕಸೋಷ್ಣ
ಶ್ವಾಸದೊಳಳಿ [1]ಮಟ್ಗಿ[1] ಮೂರ್ಛಿಸುಗೆ ಸಖಿಯ ಮುಖಾ
ಬ್ಜಾಸವಸೌರಭಸರಳ
ಶ್ವಾಸದೊಳದು ಪಾಯ್ದು [2]ಮೂರ್ಛೆ[2]ವೋ[3]ದು[3]ದು ಜೋದ್ಯಂ ೪೭

ಒದೆವಡೆದಸು[4]ಗೆ[4] ತಳಿರ್ತರ್ದೆ
ಗುದಿಪಮಸೊದವಿಸುವೊಡಾರೊ ಬಾರಿಪರೊಲ್ದ
ಪ್ಪಿದ ಕುರವಕಮಂಕುರಿತಂ
ಸುದತಿಗೆ ಕುರುವಾದು[5]ವಿಸ್ನುಮತಿ[5]ರುತಮುಂಟೇ ೪೮

ಗುಡುಗುಡನೆ [6]ಪರಿ[6]ವ ಕಣ್ಣೀ
ರ್ಗಡಲಂ ಕುಚಕುಂಭಸಂಭವಂ [7]ಪ[7]ರತಾಪಂ
ಕುಡಿದುಂ ಕಡೆಗಾಣಿಸಿದುದೆ
ಕಡುಪಿರಿದಾಗಿಯುಮುಡಂಗದೀ ವಿರಹಿಣಿ[8]ಯಾ[8] ೪೯

ಸರಸಮೆನಿಪ್ಪ ಮಾನಸ[9]ದೊ[9]ಳಲ್ಲದೆ ಪುಟ್ಟದು ದರ್ಶನಾಮೃತಂ
ಸ್ಮರಣ ಸರಿತ್ಪ್ರವಾಹದೊಳೆ ಪೊತ್ತುವುದಂತೆ ಹಿಮಾಂಶುಬಿಂಬದಿಂ
ದುರಿವುದು ತಣ್ಪುಗೆಯ್ಯೆ ತನಿವೆರ್ಚುವುದಾಳಿಯುರಂತರಂಗಮಂ
ಕೊರ[10]ಗೆ ಕವಲ್ತುದೀ ವಿರಹವಹ್ನಿಯದೇಂ[10] ವಿಪರೀತವೃತ್ತಿಯೋ ೫೦

ಅದುಕಾರಣದಿಂ—

ಬೀಸಿದೊಡೇಕೆ ನಂದುಗುಮೊ ಕಿಚ್ಚದಱಿಂ ಕದಳೀದಳಂಗಳಿಂ
ಬೀಸದಿರಾದುದೇಂ ಪೊಸತೆ ಪೇಟಿದು ಪೂಗಣೆಯಿಂದೆ ಪೂಗ[11]ಳಿಂ[11]
ಪಾಸಿ ಬಬಲ್ದು ಬೀಟದಿರು ಮಾಣದು ಕಾಣಗೆ ಶೀತಳಾಂಬುವಂ
ಸೂಸದಿರಕ್ಕ ರಾಗರಸದಿಂದವೆ ಮುನ್ನಿದು [12]ಮಾ[12]ಡಿತಲ್ಲ [13]ವೇ[13] ೫೧

ಎಂದು ನಿವಾರಿಸಿ ನೀವೀಕೆಗೆ ಕೂ[14]ಪಿ[14]ರಪ್ಪೊಡೆ ಪೋಗಿ ನಮ್ಮಾ ಚಂದ್ರಕಾಂತಮಯಮಪ್ಪ ಮಯೂರ[15]ಮೇಘ[15]ಮೆಂಬ ಕೇಳೀಶೈಲದ ಹಿಮಹಾಸಮೆಂಬ ಗುಹಾಗೇಹದ ಮುಂದೆ ಜಘನದ[16]ಘ್ನೆ[16]ಯುಮಂ ಕುಮುದಕಂಠಿಕೆಯುಮೆಂಬ ಕ್ರೀಡಾಕಮಲಾಕರಂಗಳನೊಳಗುಮಾಡಿ ಪರಾಗಪುಳಿನಿಯೆಂಬ ಕೃತಕತರಂಗಿಣಿಯ ತಡಿಯೊಳ್ ತಳಿರ್ವಂದರ್ಸಿಕ್ಕಿಯದಱೊಳಗೆ ಪುಷ್ಪಮಂಡಪಮಂ ಮಾಡಿ ಶಿಶಿರೋಪಚಾರಪರಿಕರಂ

1 ಮಗ್ಗಿ (ಕ) ಮುಗ್ಗಿ (ಘ) 2 ಮುಚ್ಚೆ (ಕ) 3 ಪು (ಘ) 4 ಕೆ (ಕ ಘ) 5 ದಿಸ್ವವತಿ (ಗ ಘ) 6 ಕವಿ (ಘ) 7 ಕು (ಕ) 8 ಯಂ (ಘ) 9 ರೊ (ಗ) 10 ಳಿಕನಲ್ದುದೀ ಯಿದೆ (ಕ) ಗಿ. . . ಯೊಳು (ಘ) 11 ಳಂ (ಕ ಘ) 12 ಮೂ (ಕ) 13 ದೇ (ಗ) 14 ರ್ಪ (ಕ) 15 ಘ ಪ್ರತಿಯಲ್ಲಿಲ್ಲ 16 ಗ್ಗ (ಘ)

ಗಳನಳವಡಿಸಿಂ, ಅದಲ್ಲದೀ[1]ಕೆಯ[1] ಮದನತಾಪಮನಾಱಿಸಲ್ ನೆಱೆಯದೆಂಬುದುಂ; ಆಕೆಗಳ್ ಪೋಗಿ ಬೇಗದಿಂ ಸಮೆಯೆ—

ಬರ್ಮನುಮಾ ವಿಶ್ವಕರ್ಮನುಂ ಶೋಭೆ[2]ಯಂ[2]
ನಿರ್ಮಿಸಲೆಂದು ವಧೂವರರೂಪಾಗಿ
ನಿರ್ಮಿಸಿದಂತೆ ಮಿಸುಗಿತ್ತು ೫೨

ಅದೆಂತೆಂದೊಡೆ—ಪಸಿಯರಿಸಿನದ [3]ಪಿ[3]ಡಿಯೆಲೆಯ ಪಿಂಡಿಗೆಯಿಂ ಕರ್ಬ್ರಾಳದ ಕಟ್ಟುಗಳಿಂ ಸುರ್ಬುಗೊಂಡ ಕರ್ಬಿನ ತಟ್ಟಿಗಳಿಂ ಬಿಸಿಲ್ ಪತ್ತೆ ಬಿಸುಗಂಪಂ ಬಿಡುವ [4]ಬಿ[4]ಳಿಯ ಬಾಳದ ಕೇರ್ಗಳೊಳಂ ಸೋಗೆಯುಂ ಸಮಱ [5]ಸಟ್ಟ[5] ಕರಿಯ ಕರ್ಬಿನ ಕಿಱುಗಂಬಂಗಳೊಳಂ ಪೊಂಬಾಳೆಯ ಪೊಸಗೊ[6]ಲೆ[6]ಯ[7]ಪೊರೆಯ[7]ನಿಟಿಪಿದಡಕೆಯ [8]ಸಸಿಯ[8] ತೋರಗಂಭಂಗಳೊಳಂ ತಳಿರ ನನೆಯ ಪೂವಿನ ಕಾಯ [9]ಗೊ[9]ನೆಗಳ್ವೆರಸಿ ದೆಳಮಾವಿನ ಬಲ್ಗೊಂಬುಗಳ [10]ಬೆ[10]ಳಗುಗಳೊಳಂ ತಾವರೆಯ ತೋರಗಾವುಗಳ ಗಟುಗಳೊಳಂ ಉತ್ಪಲನಾಳ ಪುಂಜದ ಪಂಜರದೊಳಂ ಅಸು[11]ಗೆ[11]ಯ ಪೊಸದಳಿರ ಪೊದಕೆಯೊಳಂ ಚಂದನ ಪಲ್ಲವದ ಚುಂಚುಲೋವೆಯೊಳಂ ಮೊಲ್ಲೆಯ ಮುಗುಳ ಮತ್ತವಾರಣಂ[12]ಗಳೊ[12]ಳಂ ಕೊಸಗಿನಲರ ಪೊಸಗೊಂಚಲ ಪೊಸಂತಿಲೊಳಂ ಪೊರೆಗಳೆದ ತೋರವಾಳೆಯ ದಾರವಂದ[13]†[13]ದೊಳಂ ಬಕುಳದ ಮೊಗ್ಗೆಯ ಗುಬಗಳೊಳಂ ಪದ್ಮಪತ್ರದ ಪಡಿಗಳೊಳಂ [14]ದವ[14]ನದೋವರಿಗಳೊಳಂ ಕೇದಗೆಯೆಸಳ ಕಟ್ಟುವಂಜರದೊಳಂ ಸಿರಿಸದಲರ ಸಜ್ಜೆಗಳೊಳಂ ಕುಂಕುಮದ ಕುಟ್ಟಿಮಂಗಳೊಳಂ ಕುಸುಮರಜದ ಜಗಲಿಗಳೊಳಂ ಎಳವಾಳೆಯ ತಿರುಳೆಲೆಯ ತೆರೆಸುತ್ತಿನೊಳಮೆಸೆವ ಪಸುರ್ವಂದರೊಳಗೆ—

ಪಾದರಿಯ ಸಿಂಧುವಾರದ
ಜಾದಿಯ ಮಲ್ಲಿಗೆಯ ಸಂಪಗೆಯ ಸುರಯಿಯ ಪೊಂ
ಗೇದಗೆಯಿರುವಂತಿಯ ಜೆ
ಲ್ವಾದಲರಿಂ ಸಮೆದ ಕುಸುಮಮಂಡಪಮೆಸೆಗುಂ ೫೩

ಮನಸಿಜನ ರತಿಯ ಮದುವೆಗೆ
ಮನವೊಸೆದು ವಸಂತನೆಂ[15]ತು[15] ಮಾಡಿದೊಡಂ ತಾ
ನಿನಿತೆಸೆಯದೆಂಬ[16]ನಿನ್ನಱ
ಯೆನಿ[16]ದಂ ಪಸುರ್ವಂದರಂದಮಂ ಮಿಗೆ ಪೊಗಟಲ್ ೫೪

ಎಂಬಿನಮೆಸೆಯೆ ಸಮೆದುದನೆಡೆಯಾಡುವ ಕೆಳದಿಯರಿಂ ಕೇಳ್ದು ಮಾಧವೀಮಂಡಪದಿಂ ಮಾನಿ[17]ನಿಯ[17]ಮುಖಮಂಡ[18]ನಮೆ[18]ಪೊಱಮಟ್ಟು ಪದ್ಮಾವತೀನಿಳಯಮಮಂ ಬಲ

[1] ಕೆಳದಿಯ (ಕ) ಘ ಪ್ರತಿಯಲ್ಲಿ ತ್ರಿಪದಿಯ ಪ್ರಾರಂಭದಲ್ಲಿ ಸುವ್ವಿಸುವ್ವಿ ಸುವ್ವಾಳೆಯೆಂಬ ಪಲ್ಲವಿಯಿದೆ [2] ಯಂ (ಗ) [3] ಪು (ಘ) [4] ಬ (ಗ) [5] ಕಟ್ಟದ (ಘ) [6] ನೆ (ಕ) [7] ಖಗ ಪ್ರತಿಗಳಲ್ಲಿಲ್ಲ [8] ಘ ಪ್ರತಿಯಲ್ಲಿಲ್ಲ [9] ಕೊ (ಕ) [10] ಲ (ಕ ಘ) [11] ಕೆ (ಕ) [12] ದೊ (ಕ) [13] ರ (ಕ) [14] ವದ (ಕ) [15] ದು (ಗ) [16] ನಾನಱಿಯೆನ (ಗ ಘ) [17] ಸೀ (ಘ) [18] ನೆ (ಗ ಘ)

ಗೊಂಡು ಬರ್ಪ ವಿಭ್ರಮೋರ್ವಸಿಗೆ ಪತ್ತುಸಾಸಿರ್ವರ್ ಕನ್ನೆಯರುಮಿದಿರ್ವೋಗಿ, ಕೆಲಬರ್ ಪಲ್ಲವಸತ್ತಿಗೆಗಳಂತೆ [1]ಪೊಳೆವ[1] ಪಲ್ಲವಸತ್ತಿಗೆಗಳನೆತ್ತಿಯುಂ, ಕೆಲಬರ್ ಮಱುದುಂಬಿ ಮುಸುಱಿ ಪೀಲಿದಳೆಗಳಂತೆ ತೋಱಪ ಪೂವಿನ [2]ತಳೆ[2]ಗಳಂ ತಳೆದುಂ, ಕೆಲಬರ್ ಮುತ್ತಿನ ಕೊಡೆಗಳಂತೆ ಮಿಸುಪ ಮಲ್ಲಿಗೆಯ ಮುಗುಳ [3]ಬೆಳ್ಗೊ[3]ಡೆಗಳಂ ಪಿಡಿದುಂ, ಕೆಲಬರಿಕ್ಕುವ ಕುಸುಮಚಾಮರಂಗಳೆಯ್ದದಂತೆ ಸೆಳ್ಳುಗರ ಬಳ್ಳಿವೆಳಗಂ ಬೆರಸುತುಂ, ಕೆಲಬರ್ ಬೀಸುವ ಪಾದರಿಯ ಪೂಗೊಂಚಲ ಸೀಗುರಿಗಳ್ ಸರಿಯವೆಂಬಂತೆಡಗೆಯ್ಯಿಂ ಬಿಡುಮುಡಿಯ[4]ಸೊ[4]ತ್ತುತುಂ, ಕೆಲಬರ್ ಸೂಸುವ ಕುಸುಮಾಕ್ಷತಂಗಳ್ [5]ಕೆಲ[5]ವೆಂಬಂತೆ ಶುದ್ಧಸ್ಮಿತಂಗಳಂ ಸೂಸುತುಂ, ಕೆಲಬರ್ ನಡೆವೆಡೆಯೊಳ್ ಪಾಸುವ ಪೂವಿನ [6]ಮ[6]ಡಿಯುಂ ಪಲ್ಲವಮುಂ ಕೊಱತೆಯೆಂಬಂತೆ ಕಾಲುಗುರ ಬೆಳ[7]ಗಂ[7] ತಳದ ಕೆಂಪುಮಂ [8]ಪಾ[8]ಸುತುಂ, ಕೆಲಬರ್ ಕೋಕಿಳಕಳಂ ಕಿಱಿದೆಂಬಂತೆ [9]ಗ[9]ಳರವಮುಂ ಕೆದಱುತುಂ, ಕೆಲಬರ್ ಬಾಳಭೃಂಗೀಮಂಗಳಗೀತಮಧುರಝಂಕಾರಂ ಸಾಲದೆಂಬಂತೆ [10]ನೂಪುರ[10]ರವಮಂ ಪರಪುತುಂ ಬಳಸಿವರೆ—ಕಳಾವತಿಯುಂ ತಮಾಳಿಕೆಯುಮಿ[11]ರ್ಕೆ[11]ಲದೊಳ್ ಕೈಗೊಟ್ಟು ಬರೆ—ಮಹೇಂದ್ರ ಮನೋಹರಿ ಮನೋಹರವಿಳಾಸದಿನಾ ವಿಳಾಸವತಿ ಬರ್ಪಾಗಳ್—

ಅಗಿದಪುದೀಗಳಾಂ ಪಿಡಿದ ಕೆಂದಳಮಿಾಯೆಡದೋ[12]ಳ್[12] ಕೆತ್ತುಗಳ್
ತಗುಳ್ದಪು[13]ವೆತ್ತುವೀ ಮಿಡುಕೆ ಮಾಣದೆ ಪಾಯ್ದುದೆ ಪೊಟ್ಟೆವಾಯ್ಸು[13] ಜ
ಕ್ಷುಗೆ ಪಿರಿದಾದುದಕ್ಕುಮೆ ಪರಿಸ್ಫುರಿತಂ ಪೆಱತೇನೊ ದೇವಿಯಿಾ
ಕೆಗೆ ವರ[14]ನಂ[14] ಮನೋಹರ[15]ನಸಿಂದು[15] ಕುಡಲ್ ಕಡುಗೂರ್ತೆಳಾಗಳೀ ೫೫

ಅದಲ್ಲದೆಯುಮಳ್ಳಿಗೊಂಜಿನೊಳ್ ತೆಱಂದಿಱದು ತಾಱಂಗೊಟ್ಟು ನಿಡುಸರವನಿಟ್ಟು ಪೂಗೊಂಬಿಂ[16]ಗೆ[16]ಪಾಯ್ದುಲರ್ವಟ್ಟಲೊಳ್ ತುಂಬಿ ತೀಳ್ದು ಬಳೆದಬಂಡಂ ಗಂಡುದುಂಬಿಯುಂ ತಾ[17]ನುಮುಂಡು[17] ಮುಂಡಾಡಿ ಪತ್ತಿಯ ಮೇಲೆ ಪತಿತಾಂಗಿಯಪ್ಪ [18]ಭ[18]ಂಗಿಯುಂ, ತಳಿರ್ವನೆಯೊಳಿರ್ದು ಕರೆವಿಂಜರಕ್ಕೆ ಬಂಜೆಗೊಂಬಂ ಬಿಟ್ಟುವಂದು ಬಿಂದುವಿಡುವ ಕಳಿಕೆಯುಮಂ, ಕಳಕಂಠಿಕೆಯ ಕ[19]ದಂಪಂ[19] ಕರ್ಚಿ ಕಳರವದಿನದಱೊಡನೆ ಕಳಕಳಿಸುವ ಕೋಕಿಳಕುಮಾರನುಂ, ಬರವಂ ಕಂಡು ಪುರುಡಿಸಿ ಪೆಱಗುಗೆಯ್ದು ಕಣ್ಣನೀರಂ ಗುಟಗುಟನೆ ಸರಿವ ಗಿಳಿವೆಣ್ಣ ಕಾಲಂ ಪಿಡಿದು ಪಣ್ಣಪಣ್ಣನೆ ಪೊರ್ದಿ[20] ಪಣ್ಣಂ[20] ಬಾಯ್ವಾಯೊಳ್ ಕುಡು[21]ವ[21] ಸೆವದಿಂದಂ ಬಿಡಿಸಿ ಛುಂಬಿಸುವ ಕೀರಕಾಮುಕನುಮಂ, ಮುಗಿಲ್ಗಡ[22]ಲಿಸ[22] ಗಿಡುವಿಂ[23]ಗೆ ನ[23]ಡೆದು ನರ್ತಿಸುವ ಮಯೂರಮಿಥು[24]ನ[24]ಮಂ ಬಯಸಿ ಬಂದು ಬಯಲ್ದಾವರೆಯ ಕುಸುಮದ ಕುಸುಂ

[1] ಖಗ ಪ್ರತಿಗಳಲ್ಲಿಲ್ಲ [2] ಸತ್ತಿಗೆ (ಫ) [3] ಚೇಪೊ (ಫ) [4] ನೆ (ಕ) [5] ನೆಱೆಯ (ಫ) [6] ಮು (ಕ) ಪು (ಫ) [7] ಗು (ಕ ಫ) [8] ಸೂ (ಕ) [9] ಕ (ಫ) [10] ಫ ಪ್ರತಿಯಲ್ಲಿಲ್ಲ [11] ಕ್ಕೆ (ಕ ಫ) [12] ಳಕಿ (ಗ) ಳಿಕೆ (ಫ) [13] ವಕ್ಕುವಿಾ ಪಾಯ್ದುದೆ ಪೊಟ್ಟೆವಾಮ (ಕ) ದಕ್ಕುವಿಾವಿಡಿ. . . ಪೊರ್ದೆವಾಮ (ಫ) [14] ಮಂ (ಫ) [15] ಮನಿಂದೆ (ಫ) [16] ದೆ (ಫ) [17] ನುಂ (ಫ) [18] ಭೃ (ಗ) [19] ದಪುಮುಂ (ಫ) [20] ಫ ಪ್ರತಿಯಲ್ಲಿಲ್ಲ [21] ಕನಿಡುವ (ಫ) [22] ವಿನ (ಕ) [23] ಕೆ (ಫ) [24] ನಂಗಳು (ಫ)

[1]ಕುಱಂ[1] ನೂಂಕಿ ಪೊಕ್ಕು ಕೂಡಿ ಕುಣಿಕುಣಿವ ಪೊಣರ್ವಕ್ಕಿಗಳಂ, ಬೇಡಿದ ವರವನೀವಂತಿ[2]ರ್ಪ[2] ಚಪ್ಪರದ ಪಿರಿಯ ಸಿರಿಯುಮಿಂದೀ ಮಂದಗಮನೆ ಮನೋವಲ್ಲಭ ನೊಳ್ ನೆರೆವುದನೆರಡಿಲ್ಲದೆ ನಿರೂಪಿಸಿದಪ್ಪುವೆಂದಾನಂದದಿಂ ಕಳಾವತಿಯಂತರ್ಗತದೊಳೆ ಒಗೆಯುತುಂ ಬರೆವರೆ—

ವಿಸ್ಮಯ[3]ರಸ[3]ದಿಂದಲ್ಲದೆ
ಕುಸ್ಮಸರಾದಿಗಳಿನಾಱದೀ[4]ವನಿತೆಯ[4] ತೀ
ವ್ರಸ್ಮರಶಿಖಿ[5]ಯೆ[5]ಂದಾ ಮಧು
ರಸ್ಮಿತೆಯರ್ ಸಮೆದರೆನಿ[6]ಕುಮಾ[6]ತಳಿರ್ವಸೆಯಂ ೫೪೬

ಅಂತು ಬಂದು ಪುಗುವಾಗಳ್—ತೋರಣಸ್ತಂಭಂಗಳಾಗಿ ಪೊಱೆಗಟ್ಟಿ ನಿಱಿಸಿದ ಜೊಂಡೆಗರ್ಬಿನ ತೆನೆಗಳಮಲ್ಲಿ ನೇಱಿದ ನೇಱಿಲ ಪಣ್ಗೊನೆಯ ಸೀಗುರಿಗಳಮ[7]ವ[7] ಱೊಳ್ ತಡಂಗಲಿಸಿ ತೂಗುವ ಪೊಂಬಾಡೆಯ ಪೊಸಚಾಮರಂಗ[8]ಳುಂ[8] ಪಾ[9]ಯ್ದು[9] ಗಿಳಿ ವಿಂಡಿನಂತೆ ಪ[10]ವ[10]ಣಿಸಿ [11]ಪ[11]ವಣಿಗೆಗೆಯ್ದ ಲ[12]ರ್ವ[12]ಲರ ಸೂಸಕದಿನೆಸೆವ ಸಹಕಾರದ ಪಸುರೆಲೆಯ ಪೊಸತೋರಣಂಗಳಂ [13]ತ್ರ[13]ದ್ವಾರದೇಶದೊಳ್ ನಿರ್ಮಿಸಿದ ಪೂವಿ [14]ನಂದ[14]ಣಂಗಳುಮಂ ಪಲ್ಲವಚ್ಛತ್ರಂಗಳುಮನವಲೋಕಿಸುತ್ತುಂ ಒಳ[15]†[15]ಪುಗುವಾಗಳ್—ಶರ್ಕೆಲದೊಳಾ ಕರ್ಕೇತನ[16]ದ[16] ಜೇಕೊರ್ಬವಿಗಳಿಂ ಕುಳಿರ್ವ ಮಳಯಜ[17]ದ ರಸ[17]ಮಂ ಸಿಂಪಿಸುವೀ ಸಾಲಭಂಜಿಕೆಗಳ ನಗೆಮೊಗದೊಳ್ ಬೆಳಗುಗಣ್ಣ ಬೆಳ್ವಳಗಂ ಸಿಂಪಿಸಿಯುಮಲ್ಲಿಂ ನಡೆದು ಪರಕಲಿಸಿ ಪರಿವ ಕರ್ಪೂರರಸದ ಪರಿಕಾಲೊಳ್ ಕಾಲಂ ನೀಡಿ ಸೇವುರದ ಮರಕತಮಣಿಕಿರಣ[16]ದೂರ್ವಾ[18]ಂ[18]ಕುರಂಗಳಿನಳಂಕರಿಸಿಯುಂ ಅಲ್ಲಿಂ ನಡೆದಿದಿರಂ ನಡೆತಂದಪ್ಪಿಕೊಂಡು ಪೆಱಮೆಟ್ಟಿ ಹಿಮೋಪಲಪುತ್ರಿಕೆಗಳ್ಗೆ ನಿಜಚ್ಛಾ [19]ಯೆಯನಪ್ಪಿ ಚೆಲ್ವನೊಪ್ಪಿಸಿ[19]ಯುಮಲ್ಲಿಂ ನಡೆದು ಮೆಲ್ಲನೆ ಬಂದು ಬಿಡುನಸೆಯ ಲಾಜೆಯಂ[20]ಸೂ[20]ಸುವ ಲತಾಪ್ರತಿಮೆಗಳ್ಗೆ ದರಹಾಸಕುಸುಮಮಂ ಸೂಸಿಯುಮಲ್ಲಿಂ ನಡೆದು ಮೆಲ್ಲೆಲರಲೆಪದಿಂ ಪರಿತಂದು ಮೊಲ್ಲೆಯ ಮುಗುಳಾಲಿ ಕಲ್ಲುಮಂ ಒಂದುಗೆ ಯರಲಿಂದ್ರಗೋಪಂಗಳುಮಂ ತುಷಾರಸುರಭಿಸಲಿಲಾ ಸಾರಮುಮಂ ಸುರಿವ ಜಂತ್ರದ ಮುಗಿಲ್ಗ ಪಾಂಗಪ್ರಭೆ[21]ಯೆಂಬೆಳ[21]ಮಿಂಚನೋಲಗಿಸಿಯುಮಲ್ಲಿಂ ನಡೆದು ಮುತ್ತಿನ ಸರಮನೆಟಿಲೆವಿಟ್ಟಂ[22]ತಡಿಗಡಿಗೆ[22]ಬಿಂದುಮಾಲೆಯಂ ಬಿಡುವ ಮೃಣಾಳ ನಾಳಂಗಳ ಧಾರಾಗೃಹಂಗಳ ಸುತ್ತಲುಂ[23]ಸಿಂದು ನಾಂದು[23]ಮುಡಿಸವಿಲನಾಡಿಸಿಯುಂ ಮಲ್ಲಿಂ ನಡೆದನವರತ ಮೇಳಾರಸದೊಳ್ದೊಡೆಯೊಳ್ [24]ಪೊಳಂಕಿದಂ[24]ತೆ ಪೊಳೆದು ಪಸುರ್ಗದಿರನಾಳ್ದು ನೀಳ್ದ[25]ಪಸುರ[25]ಲೆಯೆಂಬ ಪಸಿಯ ನೇತದ ಮೇ[26]ಲುದನೇ[26]ಪಾಡಿ

---

[1] ಕಂ (ಕ) [2] ರ್ದ (ಘ) [3] ತರ (ಘ) [4] ವಂತೆಯು (ಘ) [5] ಯಿಂ (ಗ) [6] ಪುವಾ (ಕ) ಪುದಾ (ಘ) [7] ದ (ಖ) [8] ಳುಮಂ (ಕ ಘ) [9] ಯ್ದುಂ (ಕ) [10] ದ (ಕ) [11] ಪೋ (ಘ) [12] ವೆ (ಕ ಘ) [13] ಗುಗುಳುತ್ತ (ಘ) [14] ತೋರ (ಘ) [15] ಗಂ (ಕ ಘ) [16] ಕಘಗಳಲ್ಲಿಲ್ಲ [17] ರಜ (ಘ) [18] ಘನಾಂ (ಘ) [19] . . . ಪಿಸಿ . . . (ಕ ಘ) ಯಂತಪಿಸಿ (ಗ) [20] ಪೂ (ಘ) [21] ಯಿಂಬೆಳು (ಘ) [22] ತೆಡೆವಿಡದೆ (ಕ ಘ) [23] ನಿಂಡನಾಂದ (ಗ) ನಾಂದ (ಘ) [24] ಪಳುಂಕಿನಂ (ಕ) ಪಳಂಕದಂ (ಘ) [25] ಪುದೆ (ಗ) [26] ಲದಂಮೆಲಿ (ಕ) ಲುದಂ ಮೇಲೀ (ಗ) ಲಲಿದು ಮೆಲಿದೀ (ಘ)

ಬೆಡಂಗನಾರಂಭಿಸುವ ರಂಭಾಸ್ತಂಭದೊಳ್ ತನುಲತೆಯಂ ಪ[1]ರ್ಬಿ[1]ಸಿಯುಮಲ್ಲಿಂ ನಡೆದು ಕ್ರೀಡನಶೀಲೆಯರಪ್ಪ ಬಾಲೆಯರಂ ನಾಲಗೆಗಳಿಂ ನೀರಂ ನೀಡಿಯೂಡಿದ ತಂಬುಲದ ರಸದಿಂ ತಾಮ್ರತುಂಡಂಗಳಾಗಿ ಪಸುರೆಲೆಯಿಂ ಪಸುರ್ಪು ಪಸಲೆಗವಿದ ಪಕ್ಕಂಗಳಿಂ ಗಿಳಿಗಳಂತೆ ತೋಱುವ ಕೋಗಿಲೆಗಳುಮಂ ಮೃಗಮದಕರ್ದಮದೊಳದ್ದಿ ಕೋಗಿಲೆಗಳಂತೆ ಮಾಡಿದ ಗಿಳಿಗಳುಮಂ ಗಳಪಿ ಗಿಳಿಗೆಡೆದು ವಿಸ್ಮಯಮನಾಗಿಸಿ ನಾಗಸಂಪಗೆಯ ಪೂಗೊಂಚಲ್ಗಳುಮನಸುಕೆಯ ಪೊಸದಳಿ[2]ರ್ಗಳು[2]ಮಂ ಭೇದಿಸಲ್ಬಾರದಂತು ಕೊಂಬುಗಳೊಳಿಂ ಬಱಿದೆ[3]ಟಲೆ[3]ವಿಡೆ ಕೌತುಕರಸಮುಮಂ ಕೊ[4]ನೆ[4]ಯ ಸೊನೆಯುಮಂ ಸುರಿವ ಬಾಳಚೂತದಾಳವಾಳದೊಳ್ ಚರಣನಖಕಿರಣಜಾಳಮಂ ತೀವಿಯುಮಲ್ಲಿಂ ನಡೆದು [5]ನವ[5]ಪಲ್ಲವಂಗಳಂ ಗಂಧಾಂಜನರ[6]ಸ[6]ದಿಂ ಪೊರೆದಶೋಕೆಗಳುಮಂ ಬಾಳಪ್ರವಾಳಂಗಳ[7]ನಲ[7]ತಗೆಯ ಬಣ್ಣಮನೂಡಿದ ತಮಾಲಂಗಳುಮಂ, ಮಲ್ಲಿಕಾಕುಸುಮಮಂಜರಿಯಂ ಮುಡಿಸಿದ ನವಮಾಲಿಕೆಗಳುಮಂ ನೋಡಿ ಮುಗುಳ್ನಗೆಯ ಮುಗುಳಿಂ ಪೂಱುತುಮಲ್ಲಿಂ ತಳರ್ದು—

ತಳಿರುಯ್ಯಲ್ ಕಣ್ಗೆವಂದತ್ತೆ[8]ಳ ಆ[8]ಡಕೆಯ ಕಂಭಂಗಳಿಂ ಕಂಜಸೂತ್ರೋಜ್ವಳರಜ್ಜುಭ್ರಾಜಿತಂ ಚಂದನೆದ ಮಣೆಯಿ[9]ನುನ್ಮತ್ತಭೃಂಗಾಂಗನಾಮಂಗಳಗೀತೋ[10]ನ್ಮಾದಿ[10]ಮೋ[11]ಗೇಱು[11]ದ ಕೃತ[12]ಕನೃತ್ಯನ್ಮ[12]ಯೂರಂಗಳಿಂ ನಿರ್ಮಳಮಾಳಾಚಾಮರಂ ಚಂಪಕಮುಕು[13]ಳ ಚ[13]ಲದ್ಘಂಟಿಕಾ[14]ಜಾಳ[14]ದಿಂದಂ ೫೭

ಅದಂ ನೋಡಿ ಸಖೀಜನಕೆ ಸಂ[15]ತಸ[15]ದ ಸೋಲ್ಮಾಯಿಸಮುಮಂ, ತುಂಬಿಗಾಣತಿಯರ್ಗೆ ಬಾಯ್ಗುಂಪಿನ ಬಾಯಿಸಮಂ ಬೀಱುತ್ತುಮಲ್ಲಿಂ ತಳರ್ದು, ಕೊಡಗೊಡದೊಳ್ ಪಿಡಿದು ತಂದು ತೀವಿದ ಚಂದನಪಲ್ಲವರಸದಿಂ ಕಿಱುತಂದಿಕ್ಕಿದ ಕಮಳಕುಮುದಕಲ್ಹಾರಂಗಳಿಂದೆಸೆದು ತೆರೆವಿಜ್ಜಣಿಗೆಯಿಂ ತುಂತುರ್ವನಿಯ ತುಱುಂಗಲಂ ತೂಱುವ ತ[16]ಗ್ಗೊಳಂ[16]ಗಳೊಳ್ ತಾಂ ಪೊಕ್ಕೊಡೆ ಮೆ[17]ಯ್ವೆಂ[17]ಕೆಯಿಂ [18]ನಿಳ್ಕಿ[18]ಗುಮೆಂಬಂತೆ ಮೆಯ್ನೆಱಲನೋಡಾಡಿಸಿಯುಮದಱ ಕುಮುದಂಗಳ್ ಮುಗಿಯದಂತು ಮೇ[19]ಲೆ[19]ನಮೆದ ತಮಾಳದ ತಳಿರ ಗಗನತಲದೊಳ್ ನೀರ್ವೂಗಳೆಂಬ ನಕ್ಷತ್ರಂಗಳ ನಡುವೆ ಕತ್ತುರಿ[20]ಯಿಂ[20]ಕಱು[21]ಯಂ[21] ಬರೆದು ಕೀಲಿಸಿದ ಶಶಿಮಣಿಶಶಾಂಕನಂ [22]ದೃಕ್ಚಕೋರನಿಂ[22] ಚಲ್ಲಮಾಡಿಸಿಯುಮಾ ಕೊಳದ ಕುಳಿರ್ವಜಲಮನೂ[23]ದಿಯೂದಿ[23]ಸಿಂಪಿಸುವ ಜಂತ್ರದಾನೆಯ ಕೆಯ್ಗೆ ಕರತಳದ ಕೆಂಪಿನ ಕೆಂದಳಿರಂ ನೀಡಿಯುಮಲ್ಲಿಂ ತಳರ್ದು ಸಿರಿಸದೆಸಱ ಪಸಲೆಯಂ ಕಾಲುಗುರ್ಗ[24]ಳೆಂಬ ಮಿಂ[24]ಚು

---

[1] ವ್ರ್ (ಫ) [2] ರು (ಕ ಫ) [3] ಳಲತೆ (ಕ) [4] ಸಗೆ (ಗ) [5] ವೀನ (ಫ) [6] ಜ (ಕ ಫ) [7] ಸು (ಫ) [8] ಳವ (ಕ) ಳಿಯ (ಫ) [9] ಮಣಿಗಳಿ (ಗ) [10] ನ್ನಾದ (ಕ) [11] ಗೇಱುಸಿ (ಕ) ಗೆಯ್ಸಿ (ಗ) [12] ಕೃತ್ಯ (ಕ) ಕಕುದುದ್ಯನ್ಮ (ಫ) [13] ರ (ಫ) [14] ನಾದ (ಫ) [15] ತೋಷ (ಫ) [16] ಱಳಸಂ (ಫ) [17] ಲ್ಚಂ (ಕ) [18] ನಿಂಕು (ಕ ಫ) ಗು (ಗ) [19] ಗೆ (ಫ) [20] ಯ (ಕ ಫ) [21] ಯಂ (ಫ) [22] ರಂಗಳಿಂ (ಕ) ಕುಚಕೋರಕಂಗಳಿಂ (ಫ) [23] ಡಿಮೂಡಿ (ಕ ಫ) [24] ಳ್ಮಿಂ (ಕ ಫ)

ವೆಳಗಿನ ಮುಱುಗ[1]ಳೆಂಬ[1] ಪನಿಪುಲ್ಲ ಮಸಗಿಸಿಯುಮದಱ ನಡುವಣ ಪುಷ್ಪರಜದ ಪುಲಿನಮಂ ಪ್ರಸಾದನ ಪ್ರಸೂನಪರಾಗಪಟಳದಿನಿ[2]ರ್ಮಡಿ[2]ಸಿಯುಮಲ್ಲಿಂ ತಳರ್ದು ಕರ್ಪೂರದ ರಜದ ಜಗುಲಿಯೊಳ್ ಜಗುಬ್ಬು ಮುಡಿಯ ಮುಗುಳ್ಗಳಿಂ [3]ಕಡೆ[3]ಯಿಕ್ಕಿಯುಮದಱ ಕೆಲದೊಳ್ ಕೆಳಗೆ ಪು[4]ಟಿಲ್ಗ[4]ಟ್ಟಿದ ಮುತ್ತಿನ ಪುಡಿಯ ಸುಣ್ಣಂಬಲೊ[5]ಳ್[5] ಮೇಗೆ ಮಂದಾನಿಲನಲೆಪದಿನಲೆವಂತಾಗಿ ತಳಿದು ನೇಱಿದ ನೇಱಿಲ ತಳಿರ ಬಾಳದ ಬಾಡೆಲೆಯ ಬಿಜ್ಜಣಿಗೆಗಳ ಗಾಳಿಯಿಂ ಕುಳಿರ್ಕೊರ್[6]ಬ್ಬ[6]ಹಂಚ್ಚಂದನರಸದಿಂ ನಾಂದಿ ಕೆಂದಳಿರಿಂ ಮುಸುಂಕಿದ ಪಸುರ್ಮಾಣಿಕ[7]ದ[7] ಕಳಸಂಗಳುಮ[8]ಸುಶೀರ[8]ರಸದಿಂ ತೋಯ್ದು ಸುಗಂಧಧವಳ ಪಿಪ್ಪಲದಳಂಗಳಂ ಪೊದೆಯಿಸಿದ ನೀಳಕಳಶಂಗಳುಮಂ ಲವಂಗರಸದೊ[9]ಳೋತ[9]ಲೆದು ತಮಾಳದ ತಳಿರಂ ಕವಿದ ಪವಳದ ಕಲಶಂಗಳುಮಂ ಬಗೆಯ ಪಲ್ಲಟಮಂ ಕಳೆವಂತೆ ಪಲ್ಲವಂಗಳಂ [10]ಕ[10]ಳೆದು ಪುಷ್ಪವಾಸನೆಗೆ ಪೂವನಿಕ್ಕುವಂತೆ ತೀವಿದ ತಿಳಿನೀರ್ಗಳೊಳ್ ಕರ್ಣಯಿದ್ದ ಲ[11]ನೆಟಲ[11]ನೀಡಾಡಿಯುಮದಱ ಕಡೆಯೊಳ್ ಕುಮುದಮಧುವಿ[12]ನಂದದಿ[12]ವಾಸಿಸಿದ ಬಿಸಜಬಾಳದಳದಳದಿಂ ಬಾಸಣಿಸಿದ ಚಂದ್ರಕಾಂತದ್ರವದಿಂ ತೀವಿದ ತಿಂಗಳಂತೆ ಕಣ್ಗೊಳಿಪುದನೊಳಗಿಕ್ಕಿದ ಕರ್ಣಯಿದ್ದ ಲನೆ[13]ಟಲ್ಗೆ[13]ಪಾಯ್ದು ಪೊಱಗಂ ಪೀರ್ದು ಬಱಿದೆ ಬಱಲ್ವ ಬಾಳಮಧುಕರಂಗಳಂ ಮಧುರಮಧುವನಿತ್ತು ಮಾಣಿಸುವಂತೆ ಮಧುಬಿಂದುವಂ ಬಿಡುವ ಲೀಲಾಕಮಲದಿಂ ಸೋದು ಕಳೆದೆತ್ತಿ ಕೆಂದಳದೊಳ್ ತಳೆದಿರುಳುಂ ಪಗಲುಂ ಇನಿಯನನಱಿಸಿ ಪರಿವ ಮನದೊಡನೆ ಪರಿದು ಪಿರಿದುಂ ನೀರಡಸಿದ ನೇತ್ರಪುತ್ರಿಕೆಗಳಂ ನೀರ್ಗುಡಿಯಿಸುವಂತೆ ತಳಿರಂ [14]ತಿಱಿ[14]ದು ನೀಡುಂ ಭಾವಿಸಿ ನೋಡಿ—

ಮುಸುಱುವ ಪಱಮೆಗ[15]ಳ[15]ಣಿವಿಣ
[16]ನು[16]ಸಿರ್ವೊರ್ಗದೆ ಮಾಣದೆಂದದೇಂ ಬಗೆದಳೊ ತ
ನ್ನೆ ಸೆವೀಕ್ಷಣಚಂದ್ರಿಕೆಯಿಂ
ದೊಸರ್ವಿಂದೂಪಳದ ಪೊಳೆವ ಕಲಶಮನಾಗಳ್ ೫೮

ಮತ್ತಮಲ್ಲಿಂ ನಡೆದೆ[17]ಳ ಅ[17]ಡಕೆಯ ದೋಣಿಗಳೊಳ್[18]ಪಾ[18]ಯ್ದು ಪುದಿಗತ್ತುರಿಯೊಳ್ ಪುದಿದ ಸುರಭಿಸಲಿಲದಿಂ ಬೆ[19]ದೆ[19]ವಡೆದು ಬಿತ್ತೆ ಪರಿಮಳದ [20]ಗಿಡು[20]ಗಳೆಂಬ ಪಿರಿಯ ಪೆಸರ್ಗೆ ಕೆಯ್ನೀಡುವಂತೆ ನಿಡುಗುಡಿಯಂ ನೀಡಿ ಬಳೆದುದ್ದವಾದ ದವನದ ಬಾಳ್ಗೆ[21]ಡ[21]ಬಳಗನುಮನವಱಿಡೆಗೆಡೆಗೆ ಬೆಳ್ಳಿಯ ಮೊಳೆಗಳಂತೆಸೆವ ಬಾಡೆಯಂಕುರದ [21]ಪೀ[21]ರನೊರೆದು ನೆಲವಡಲಿಗೆಗಳೊಳ್ ನೆಲೆವಡೆದೆಳದಳಿಸುವೆಳವಚ್ಚೆಯ ಬೆ[22]ಳ[22]ಗ್ಗೆಯಂತೆ ಬೆಳ್ಪೆಳಗಾಗಿ ಬಳ್ಳಳಂ ಬಳೆದು ಪೊಸದಳಿರ ಪೊಸಸಿರಿಯ ಭಾರದಿಂ[23]ಜೋ[23]

[1] ಳಿಂ (ಕ ಫ) [2] ರ್ವಿ (ಫ) [3] ಕಿಡಿ (ಕ) ಕೆಡೆ (ಫ) [4] ಟ್ಟಪ (ಕ) [5] ಳಂ (ಕ ಫ) [6] ಡುವ (ಫ) [7] ಗಳ (ಫ) [8] ನತಿಶೀತ (ಫ) [9] ಳ (ಫ) [10] ತ (ಕ) [11] ಫ ಪ್ರತಿಯಲ್ಲಿಲ್ಲ [12] ನಿಂದಧಿ (ಫ) [13] ರ (ಫ) [14] ತೆಱಿದೆ (ಫ) [15] ಣ (ಫ) [16] ಗು (ಕ) ಮು (ಗ) [17] ಳೆಯ (ಕ ಫ) [18] ಪೊ (ಕ ಫ) [19] ವೆಲೆ (ಕ) [20] ನೀರು (ಗ) [21] ಕೇತೆ (ಕ ಗ) [22] ಸ (ಫ) [23] ಚೋ (ಫ)

ಗಂಬೋದಂತೆ ಮಲಂಗಿದ ಜಾಗಂಗಳುಮನವಱೊಳ್ ಬೆರಸಿಯುಗೆವ್ರೊಯ್ದು ಕುಂಕುಮದಂಕುರಕ್ಕಂ ಮರುಗದ[1]ಮೋಳಿಗರ[1]ಮಿಳಿರ್ದು ಮಱಿದುಂಬಿಗಳ್ ಪಾಯ್ದು [2]ಮಱುಗು[2]ಗುಮೆಂದು ಕಾಪಂ ಕೊಟ್ಟಂತೆ ಬಳಸಿಗಮೆಬಲೆಬಿಟ್ಟ ಚಂಪಕಮಾಲೆಗಳ ಸವಸೊಂದೆವ[3]ಸಿಯಿಂ[3] ಬಳಯಿಸುವ ಪೊಕ್ಕಳವರ್ಪೆಳವಿದಿರ ಪೋಟ್ಗಳೊಳ್ ಪರಿವ ಪರಿಮಳಜಳದೊಳ್ ಮುನ್ನಮೆ ಮುಟ್ಟಿದೊಡೆ ಕಯ್ವೆಂಕೆಯಿಂ ಕೊರಗುಗುಮೆಂಬಂತೆ ಕರತಳಮನರ್ದಿ ತದ್ವನಕನಿಕಾಯಮುಮನಾ ಸುರಭಿಸಸ್ಯಂಗಳುಮನೆಳವಿಯಾಘ್ರಾ[4]ಹಿ[4]ಸುತ್ತುಂ ಸುತ್ತಲುಮಿರ್ದ ಪರಿಸ್ಪೃಶ್ಯ ದೃಶ್ಯಸಮಾಘ್ರೇಯ ಶಿಶಿರ ಸುರೂಪ ಸುರಭಿವಂಗಳ ದ್ರವ್ಯಂಗಳುಮನೀಕ್ಷಿಸುತ್ತುಂ ನಡೆದು—

ನನೆಕೇರಿಂ ಕಂಪಿ[5]ನಣ್ಪಿಂ[5] ಕುಸುಮಿತಲತಿಕಾದಂಡಸಂದೋಹದಿಂ ಕ
ರ್ಬಿನ ನಾಲ್ಕುಂ ಕಂಭದಿಂ ತಾವರೆಯ ಮುಕುಳದಿಂ ಮಾಲಿಕಾಬಂಧದಿಂ ಚಂ
ದನ[6]ದಣ್ಪಿಂ[6]ತೊಯ್ದ ಪೂಗೊಂಚಲ ಪೊದಕೆಗಳಿಂ ಸಾರಕರ್ಪೂರವೇದೀ
ಜನಿತಾಲಂಕಾರದಿಂದೊಪ್ಪುವ ನವಸುಮನೋಮಂಡಪಕ್ಕೆಯ್ದೆವಂದಳ್

ಅಂತು ಬಂದು—

ಶ್ರೀಶುಭ್ರಾಂಭೋಜದೊಳ್, ಭಾರತಿ ಕವಿಧವಳಾಸ್ಯೇಂದುವೊಳ್, ಗಂಗೆ ಹರ್ಮ್ಯ
-ದ್ರೀಶಾಗ್ರಗ್ರಾವದೊಳ್, ಭೂವಧು ಫಣಿಪಫಣಾಪೀಠದೊಳ್ ಪೊರ್ದಿ ನಿಲ್ವಂ
ತಾ ಶೋಭಾಭೂಷೆ ವಿದ್ಯಾಧರೆ ಮಧು[7]ರ[7]ಮೃದುಚ್ಛಾಯೆ ಸಾಮೋದಶೋಭಾ
ವೈಶದ್ಯೋತ್ತುಂಗದೊಳ್ ತಂ[8]ದಣಿ[8]ಪಿದ ಪಸೆಯೊಳ್ ದೇವಿ ಕುಳ್ಳಿರ್ದಳಾಗಳ್ ೬೦

ಅಲ್ಲಿ—

ನಗೆಮೊಗಮಬ್ಜಮಾಗೆ ಮಿಗೆ ಬಾಯ್ದೆಱೆ ಬಂದುಗೆಯಾಗೆ ಮೂಗು ಸಂ
ಪಗೆಮುಗುಳಾಗೆ ಕಣ್ಣಲರ್ದ ನೆಯ್ದಿಲ ಸಿಟ್ಟಸಱಾಗೆ ಮಿಕ್ಕ ಮೆಯ್
ಸೊಗಯಿಸಿ ಜೆಳ್ವೆಳಪ್ಪಲರ ಗೊಂಚಲನಾಂತ ಲತಾಳಿಯಾಗೆ ಚೆ
ಲ್ವೊಗೆವಿನೆಗಂ ವಿನಿರ್ಮಿಸಿದ ಪೆಂಡಿರ ಜಾತಿ ಕರಂ ಮನೋಹರಂ ೬೧

ಅಂತುಮಲ್ಲದೆಯುಂ ಪೆಱವುಮಱಿಕೆಯ ಕುಸುಮಂಗಳಿಂ ನಮೆದ ವಿಚಿತ್ರಪುತ್ರಿಕೆಗಳೊಳಗೆ—

ಬೀಣೆಯನಮರ್ಚಿ [9]ಕರ[9]ದೊಳ್
ಗೋ[10]ಣಿರಿಯುತ್ತಂ[10]ಕೆ ಕುಮುದಕಂಠಗತಾಳಿ
ಕ್ವಾಣದಿನೇಂ ಕರಮೆಸೆದುದೊ
ಮಾಣದೆ ಮೃದುಮಧುರನಾದದಿಂ ಪಾಡುವವೋಲ್ ೬೨

---

[1] ಮೊಳಿಗಳಂ (ಕ) ಮೊಳಿಗಂ (ಫ) [2] ಮುಱಿ (ಫ) [3] ಸಿಂ (ಗ) ಸಂ (ಫ) [4] ಣಿ (ಫ) [5] ನಿಂಪಿಂ (ಫ) [6] ದಿಂಪಿಂ (ಕ) ದಿರ್ಪಿಂ (ಫ) [7] ಶ್ರೀ (ಫ) [8] ದಿಬಿ (ಫ) [9] ಕುಚ (ಕ ಫ) [10] ಣೀವುತ್ತಿ (ಕ) ಣುಲಿವುತ್ತಿ (ಫ)

ಆಳಿಸಿ ಕುಚಾಗ್ರದೊಳ್ ಪಿಡಿ
ದಾಳವ್ರಿಣಿಯ ವಸಜಸೂ[1]ತ್ರ[1]ತಂತ್ರಿಯ[2]ದೆ[2]ನಿಸುಂ
ಗಾಳಿಯ ಕೋಳಿಂ ದನಿವಿಡೆ
ಜಾಳಾರೂಪಕಮೆ ಜಾಜಿಪಂತೆವೊಲೆಸೆಗುಂ

ಮುರಜದ ಮೊಟಗಿನ ಪಟಹ[3]ದ
ಕರಡೆಯ ಬೊಂಬುಳಿಯ ಪಕ್ಕವಾದ್ಯಮುಮಂ ಕಂ-
ಕರಿಯ ವಿಪಂಚಿಯ [4]ಬಂ[4]ಚದ
ಪರಿಕರಮುಮನಾಂತ ರೂಪುಗಳ್ ರಂಜಿಸುಗುಂ

ಅಳತೆಗೆ ಜೋಲ್ದ ಬಲ್ಮುಗುಳ [5]ಜೋಳೆಯಮಿಟ್ಟ ತಿಪುಂಡ್ರ[5] ಮಬ್ಜಿನೀ
ದಳದಳವಟ್ಟ ಕಂಚುಳಿಕೆ [6]ಕೆಂ[6]ದಳಿಗೊರ್ಂಚಲ ಚೆಲ್ಲಣಂ ಪ್ರವಾ
ಳಳತೆಯ ಬಾಲಗಚ್ಚೆ ಬಲಕಿಕ್ಕಿದ ಚಂಪಕಮಾಲೆ ಶೋಭೆಯಂ
ಬಳೆಯಿಸೆ ನಿಂದ ನಚ್ಚಣಿಯ ಭಾವಮನಾವನೊಱಲ್ದು ನೋ[7]ಡಿದಂ[7]

ಮತ್ತಂದು ಮಿಸುಪ ಪೂವಿನ
ಪುತ್ತಳಿಕೆಯ ತೊಳಪ ಸಂಪಗೆಯ ನಾಸಿಕೆಯಿಂ
ದೊತ್ತರಿಸಿದ ಮಧುವಿನ ಪನಿ
ಮುತ್ತಿನ ಮೂಗುತಿಯಿನಿಕ್ಕಿದಂತೆವೊಲೆಸೆಗುಂ

ಮಾಂಗಾಯ ಗೊಲೆಯ[8]ಸಂದಾ
ತಂಗೈಗೆ ಮರಲ್ದು[8] ಪಾಯ್ದು ಗಿಳಿ ಪಾಯಿಸಿದ
ತ್ರಿಂಗನೆಯ ರೂಪಕಕ್ಕೆ ಬೆ
ಡಂಗಂ ಗಿಳಿಯೋದಿಪಂಗನಾರೂಪಕದಾ ೬೮

ನರನಾರೀಪರಿಚುಂಬಿ ರೂಪಕಮದೇನಿಂಬಾಯ್ತೊ ಬಂಧೂಕಬಂ
ಧುರಪು[9]ಷ್ಪಾಧ[9]ರದಿಂ[10]ದಮ್ರುಟ್ದು[10]ಮಧುಗಳ್ ಪದ್ಮಾಕ್ಷಿನಿಸ್ಯಂದಿ[11]ಪ
ಕ್ಷ[11]ರಸಂ ಕೌಸುಮಕಾಯಮುಕ್ತಮಕರಂದಂ ತತ್ಸುಧಾಸಾರಮಂ
ಸ್ಮರರಾಗಪ್ರತಿಯಂ ವಿಡಂಬಿಸೆ ಲಸ[12]ತ್ಸ್ವೇದಾಂ[12]ಬುಸಂದೋಹಮಂ ೬೯

---

[1] ವ್ರ (ಕ) [2] ವೆ (ಕ) ಸೆ (ಘ) [3] ಳವ (ಗ) ವಳ (ಘ) [4] ಪಂ (ಕ) [5] ಜೋ . . . ರಿಪುಂಡ್ರ (ಕ) ಮಾಲೆಯ ವಿಟ್ಟತಿಪುಂಡ (ಗ) ಜೋ . . . (ಘ) [6] ಚೆಂ (ಕ) [7] ಡುವಂ) (ಗ) [8] ನುಂದಾ . . . ಳ್ದು (ಕ) ನುಂತೆಂದಾಂತಂಗೆ ಮುಗುಳ್ದು (ಗ) ನಾಂತಂ . . . ರುಳ್ದು (ಘ [9] ಪ್ಪಾದ (ಕ) ಪ್ಪೋತ್ಕ (ಘ) [10] ದೊಮಳ್ದ (ಗ) ದುಗುಳ್ದ (ಘ) [11] ಪಕ್ವ (ಕ) ಪುಷ್ಪ (ಗ) [12] ಶ್ವೇತಾಂ (ಗ)

ಮಾಲೆಯಂ ನೆಗಪಿ ಕನ್ನಡಿಯಂ ಪಿಡಿದಚ್ಚ ಪ
ಚ್ಚೋಲೆಯಂ ತಳೆದು ಚಾಮರಮಂ ಮುರಿದೆತ್ತಿ ತಾಂ
ಬೂಲಮಂ ತಳೆದೊಳಾಂತು ಮನೋಹರಮಪ್ಪಿನಂ
ಸಾಲಭಂಜಿಕೆಗಳೇನೆಸೆದಿರ್ದುವೊ ಸುತ್ತಲುಂ ೬೯

ಅರಿವೆಸನಾಗಲಿತ್ತವುವೆ ಪೂವಿನ ಪುತ್ತಳಿಗಳ್ಗೆ ನೋಟದಂ
ತಿರೆ ನನೆಗಣ್ಗಳಿಲ್ಲಿ ಕುರುಳಂತಿರೆ ಮುಂದಲೆಯಲ್ಲಿ ಜಾನೆಯಂ
ತಿರೆ ತನುಮಧ್ಯದಲ್ಲಿ ಕಱೆಯಂತಿರೆ ಕೆಂದುಟಿಯಲ್ಲಿ ಪುರ್ಬಿನಂ
ತಿರೆ ನೊಸಲಲ್ಲಿ ಪೋಲೆ[1]ಸರೆ[1]ದುಂಬಿ ನಿಲುಂಬಿದ ನೀಱದುಂಬಿಗಳ್ ೭೦

ಎಂಬಿನಮೆಸೆವ ವಿಚಿತ್ರಪುತ್ರಿಕೆಗಳ ಬಳಸಿನಿಂ ಮಿಸುಪ ಕುಸುಮ ಮಂಡಪದೊಳ್ —

ವಿದ್ಯುಲ್ಲೀಲಾನಿಕಾಯಂ ನವಘನಸಮಯಶ್ರೀಗೆ ಮಲ್ಲೀಚಯಂ ಚೈ
ತ್ರೋದ್ಯಾನಶ್ರೀಗೆ ದೀಪ್ತಿಪ್ರತತಿ ಶಶಿಕಲಾಶ್ರೀಗೆ ಹಂಸೀಸಮೂಹಂ
ಪ್ರೋದ್ಯತ್ಪಂಕೇಜಿನೀಶ್ರೀಗೊದವಿಸುವವೋಲಂದೊಪ್ಪಮಂ ಶೋಭೆಯಿಂಬಂ
ಮಾದ್ಯತ್ಕಾಂತಾಕದಂಬಂ ಬಳಸಿ ಬಳೆಯಿಸಿತ್ತಾ ಮಹಾಭಾಗೆಗಾಗಳ್ || ೭೧

ಅಂತು ಪುಷ್ಪ[2]ಪ[2]ತ್ರಿಕಾದ್ಯಗಣಿತಗಣಿಕಾಸಹಸ್ರೆಯಾಗಿ ಲೀಲಾವತಿ ರತಿವಿಲಾಸದಿಂದೊಡ್ಡೋಲಗಂಗೊಟ್ಟಿರೆ—

ಪದಪಂಕೇಜಾತದಿಂ ಕೆಂಪರುಣತರುಣರೇಣುಪ್ರಥಂ ಸೂಸೆ ತಳ್ತಿ
ತ್ತಿದ ಕುಂ[3]ಚಂ[3]ತಾನೆಸಲ್ ಪೂಮುಡಿಗೆ ಮುಸು[4]ಱಿರಲ್[4]ಮೇಲೆ ಭೃಂಗಾಳಿಗಳ್[5]ಮು[5]
ತ್ತಿದ ಬಾಯಿಂಬಾಗೆ ಭಾಳಂ ಶ್ರಮಜಲ[6]ಸರ[6]ಂಗಳ್ ಬೆಡಂಗಾಗೆ ಬಂದಳ್
ಮದನಕ್ಷ್ಮಾಪಾಲಗುಪ್ತೋಚಿತಚತುರಚರೀಲೀಲೆಯಿಂ ಬಾಲೆಯೊರ್ವಳ್ ೭೨

ಅಂತು ಪರಿತಂದು ಮಹೀತಳನಿಹಿತಕರತಳಪಲ್ಲವೆ ದುಕೂಲಪಲ್ಲವಮನಧರಪಲ್ಲವಕೆ ತೆಗೆದಂತೆ ದಂತದೀಪ್ತಿಧವಳಿತದಶನವಸನೆಯಾಗಿ ದೇವಿ ಬಿನ್ನಪಮೆಂದಿಂತೆಂದಳ್—

ನಿನಗೇನಂ ಪೇಳ್ವೆನಾ ಕಾಮನ ಕಲಿತನಮಂ ವೀರನಾದಂಗೆ ನೋಲ್ತಂ
ದಿನ ಬನ್ನಂ[7]ತ[7]ನ್ನ ಚಿನ್ನಂ ಬಿಡದುದನಱಿಯಂ, ಪಂದೆಯೇನೆಂದು ಮುಯ್ವಾಂ
ಪನೊ ವಿಕ್ರಾಂತಕ್ಕೆ ತಕ್ಕಂ ವಿದಿತಮತನುವೆಂಬಂತೆ ತನ್ನಲ್ಲಿ ತಾನೋ
ರ್ವನೆ ಬಿಲ್ಲಾಳಂತೆ ನೀನೋ[8]ರ್ವೆ[8]ಯೆ ಗುಱಿ ತನಗೆಂಬಂತೆ ಸೌರಂಭದಿಂದಂ ೭೩

---

[1] ನೆಲ (ಕ) ಗೆಲ (ಘ) [2] ಪು (ಘ) [3] ಭಂ (ಕ) [4] ಱಿಯುಂ (ಘ) [5] ಬ (ಕ ಘ)
[6] ಸಲಂ (ಕ) ಲವಂ (ಘ) [7] ಬ (ಗ) [8] ಬೆ (ಕ)

ಎಲರಂ ಮೊದಲಿಂದುವಿಂಗೆ ಬೆಸಸಂ ಸಾಕ್ಷೇಪದಿಂ ಪೇೞ್ವ ಕೋ
ಗಿಲೆಗಂ ತುಂಬಿಗಮೆಯ್ದೆ ಜೀವಿತಮನೀವಂತಾ ವಸಂತಂಗೆ ತೋ
[1]ಳ್ವ[1]ಲಮಂ ಒಣ್ಣಿಸುವೊಂದು ಪೌರುಷಮದೊಂದತ್ಯಾಸುರೋ[2]ತ್ಸೇಕ[2]ಮೊಂ
ದಲಘುಪ್ರಾಭವಮೊಂದಹಂಕೃತಮಿದೇಂ ಕಾಮಂಗೆ ಮೆಯ್ವೆತ್ತುದೋ ೭೪

ಸುರಭಿಸರಂಗಳಿಂ [3]ಮು[3]ಗುಳದೇಕೆಗ ಪೊತ್ತಸೊ ತಾಳ್ದಿರಲ್ಕೆ ಮುಂ
[4]ಬ[4]ಲಿಸಿದಸಕ್ಕುಮಿಕ್ಷುಧನುವಂ ಶಶಿಬಿಂಬದ ಪಂಗದೇಕೆ [5]ಚ[5]
ಪ್ಪರಿಕೆ[6]ಯೊಳ[6]ಪ್ಪುದೇಂ ತನಗೆ ಪೇೞ್ ಮಧುವಿಂ ಪುರುಳುಂಟೆ ತನ್ನ ಸೌಂ
ದರತೆ[7]ಯೊ[7] ಸೋಲಿಸಲ್ ನೆಱೆಯದೈ ಜಗಮಂ ಸಖಿ ಕಾಮದೇವನಾ ೭೫

ಕಂಡೊಡೆ ತನ್ನಂ ಲೋಕದ
ಗಂಡರನಾರೊಲ್ವರೆಂದು ಪೋಗ್ಗೊರ್ವನೆ ತಾಂ
ಪೆಂಡಿರ್ ಪಲರೆಂದು ಮಹೀ
ಮಂಡನನೇ[8]ಕರ್ದಿದಿರ್ಪ[8]ನಾಗನೇ ಕಂದರ್ಪಂ ೭೬

ನನೆಗಳ್ ತೀರ್ವನ್ನಮೆಚ್ಚಂ ನಿಸಗ್ಗಿನಿವಿರಿದಾತಂಕಮಂ ತಂದುಮಾಪಾ
[9]ಪ[9]ನಕೋಪಂ ಪೋ[10]ದು[10]ದೇ ಪೇೞ್ ತನಗಬಲೆಯೊಳೇಂ ವಿಕ್ರಮಂ ನಿಸ್ನೊಳೊಳ್ಗ
ರ್ಜಿಸ ಬಿಲ್ಲಂ ಪೂಡುತುಂ ಕೆಂದಳಿರ ದೊಣೆಗಳೊಳ್ ಮಾಧವಂ ಕೊಯ್ದು ಬಲ್ಪಾ
ವಿನ ಕೋಲಂ ತೀವುತಾಯಿರ್ದನೆ ಲಿಕುಚಕುಜಚ್ಛಾಯೆಯೊಳ್ ಪುಷ್ಪಚಾಪಂ ೭೭

ಎಂಬುದುಮಭೂತಪೂರ್ವ ಭೀತಿಕೃತಕಂಪನೆಯುಮನುಭೂತಕಾತರ ತರಳಿತಾಧರೆಯುಮ[11]ತಾ[11]ನವಸಾಧ್ವಸೋದಿತ ಬಿಂದುಮಂಜರೀಮಂಡಳೆಯುಮಾಗಿಯನವರತವಿಗಳಿತಬಹಳ ಬಾಷ್ಪಪ್ರವಾಹ[12]ವಿ[12]ಹಿತಲೋ[13]ಹಿ[13]ತಲೇಖಾಲುಳಿತಲೋಚನೆ ಲೀಲಾವತಿ ಭೋಂಕನೆರ್ದು ಕುಳ್ಳಿರ್ದುಂ ಕಾಮದೇವಂಗೆ ಕನಲ್ದು ಕಿಡಿಕಿಡಿವೋಗಿ ಸಿಡಿಲೆಡೆಯ್ಗೆ[14]ಯಿ[14]ನೇೞ್ದಳೆಂದೇ ಬಗೆದು—

ಸ್ಫುರಿತಸ್ಥೀತಾಧರಂ ಭ್ರೂಲಟಹಲಲಿತಭಾಳಸ್ಥಳಂ ಭ್ರಾಂತತಾ[15]ರೋ[15]
ದರದೂರಸ್ಫಾರನೇತ್ರಸ್ಖಲಿತಕಳರವೋದಾರಮುತ್ತಾನಸೃತ್ವ
ತ್ಕರಶಾಖಂ ಕಂಪಮಾನಸ್ತನಮತಿವಿಶದಸ್ವೇದಿವಕ್ತ್ರಂ ರತಾಂತಾ
ತುರಸಂರಂಭೋಪಮಂ ಶೋಭಿಸಿದುದು ಸಕಳಸ್ತ್ರೀಸಭಾಕ್ಷೋಭಮಾಗಳ್ ೭೮

ಅಲ್ಲಿಯೊರ್ವಳಪೂರ್ವಯೌವನಗರ್ವಪರ್ವತಾ[16]ಧಿ[16]ರೂಢೆ—

---

[1] ಳೊ (ಗ) [2] ಚ್ಛೇದ (ಘ) [3] ಮ (ಕ ಘ) [4] ಪ (ಕ ಘ) [5] ಪ (ಕ ಘ)
[6] ಗಳೊ (ಘ) [7] ಯೆ (ಗ ಘ) [8] ನ್ಯೆಗರೆದ (ಘ) [9] ದ (ಕ ಗ) [10] ಪು (ಕ)
[11] ಭ (ಕ ಘ) [12] ನಿ (ಘ) [13] ದಿ (ಗ) [14] ಯಿಂದಿರ್ದ (ಖ) ಯಿನೆರ್ದ (ಘ) [15] ಳೋ (ಕ) [16] ಘ ಪ್ರತಿಯಲ್ಲಿಲ್ಲ

ಆವನೇ ಗಾಸಂ ಸ್ಮರಂ ಸೀಂ ಮುನಿವನಿತುವರಂ ಬೇಟ್ಪುದೇ ದರ್ಪಕಂ ಸ
ಜ್ಜುವ ಪುಷ್ಪಾಸ್ತ್ರಂಗಳಂ ಕಾಮನ ಪೊರೆದ ಪಿಕಾನೀಕಮಂ ಕಂ[1]ತು[1] ಕೊಂಡಾ
ಡುವ ಚಂಚಚ್ಚಂದ್ರಸಂ ಮೂರ್ಛೆಲೆದು ಗೆಲಲಿ[2]ವೇ[2] ಸಾಲ[3]ವೇ[3] ದೇವಿಯೆನ್ನೀ
ಧವಳಾಪಾಂಗಂಗಳೆನ್ನೀ ಮೃದುಕಳರವಮೆನ್ನೀ ಲಸದ್ವಕ್ತ್ರಚಂದ್ರಂ ೭೯

ಎನೆ; ಮತ್ತೊರ್ವಳಭಿನವವಿಭ್ರಮಾ[4]ವ[4]ಲೇಪಲೋಪಿತರತಿವಿಳಾಸವಿ[5]ಭ್ರಮೆ[5]—

ಮದನಂ ಪೋಗದೆ ನಿಂದನಪ್ಪೊಡಿದಿರೊಳ್ ಭ್ರೂಚಾಪದಿಂದೆಯ್ದು ಪೊ
ಯ್ದೊಡಂ, ತೀಕ್ಷ್ಣಕಟಾಕ್ಷಶಾತಶರದಿಂ ಪಾದಾಗ್ರದೊಳ್ ಜೀಡೆ ಕು
ತ್ತಿದೊಡಂ ಮೆಯ್ಯಲಾಜುವನ್ನಮವನಂ ತೋಳ್ಪಾಸದೊಳ್ ಕಟ್ಟಿ ತೂ
ಗದೊಡಂ "ಪೋಡ[6]" ಮೊಲೆಪ್ಪೊತ್ತೆನೇ ಅವನ ಪೇಪಂಜೊತ್ತೆನಜ್ಞಾನನೇ ೮೦

ಎನೆ; ಮತ್ತೊರ್ವಳತಿಶಯಶೌರ್ಯಸೌಂದರ್ಯಸದವಯವಲಾವಣ್ಯಲಲಿತಗಾತ್ರೆ—

ದೇವಿ ಪಿರಿದಱಿಯೆನ್ನೀ
ಭ್ರೂವಿಕ್ಷೇಪದೊಳೆ ರೂಪುಗಾಣ್ಬುದು ತಡಮಾ
ಕಾವನನೆ ಮತ್ತಮೊರ್ವಂ
ಕಾವ[7]ನ[7] ಕುಸುಮೇಷುವಿಂಗೆ ಗುಱಿಯಂ ಮಾಡ್ಪಂ ೮೧

ಎನೆ; ಮತ್ತೊರ್ವಳನಮಶರನಾರಾಚನಿಶಿತಶ್ಯಾಮಸಿಸ್ನೀಮನರಳತರುಣ
ವಿದ್ಯುತ್ತರಂಗ ತರಳಾಪಾಂಗೆ—

ನಡೆ ನೋಟದಿಂದೆ ಬೆಮರಂ
ಪಡೆ[8]ದು[8] ಮ[9]ನೋಭವ[9]ನ ಮನಮುಮಂ ನನೆಪಿಲ್ಲಂ
ಪಿಡಿದಿಸುವ ಕೆಯ್ಯುಮಂ ಕೇಳ್
ನಡುಗಿಸದೊಡೆ ನಿನ್ನ ಕಳದಿಯಲ್ಲೆಂ ಕೆಳದೀ ೮೨

ಎನೆ; ಮತ್ತೊರ್ವಳ್ ನರಕತಿರೀಷಸುಕುಮಾರಕುಸುಮ ಮು[10]ರ್ಲಲಿತ[10]
ದೋರ್ಲತಾ ಲಲಿತೆ—

ಬಿಲ್ಲುಂಬೆಱಗುಂ ಮಾಡ್ಪಂ
ಫುಲ್ಲಶ[11]ರನನವನ[11]ಪ್ರಾಪಿಸಂಬಂ ನಿಜಧ
[12]ಮ್ಮಿಲ್ಲಕ್ಕೆ ನಿನನೆ[12]ಕ[13]ರ್ಬ[13]ನ
ಬಿಲ್ಲಂ ಪಿಡಿದಾಡಲೀವೆನೀ ಪ್ರಮದ ಜನಂ ೮೩

---

1 ಡು (ಗ)  2 ದೇ (ಘ)  3 ದೇ (ಘ)  4 ನ (ಘ)  5 ದ್ಯವೆ (ಕ ಘ)  6 ಪೋಣ್ (ಕ)  7 ನ (ಕ ಘ)  8 ಯಿಸಿ (ಕ)  9 ನಸಿಜ (ಕ)  10 ಲ್ಲರ್ಗಂ ಘ್ಯ (ಘ)  11 ರಂ ಎಸುವ (ಗ) ರಂಗ . . . (ಘ)  12 . . . ನಿನಗೆ (ಕ ಘ) ಮೆಲಕ್ಕೆ ನಿನಸೆ (ಗ)  13 ಬ್ಬಿಗ (ಘ)

[1]ಎಸೆ[1] ; ಮತ್ತೊರ್ವಳ್ ಸಹಜಸೌಭಾಗ್ಯಭೋಗಭವನೆ—

ಪಲವಾಳಾಪದೊಳೇನೊ ! ನೋಡಲೊಡವೆನ್ನಾಕಾರಮಂ ಕಂತು ತ
ನ್ನಲರ್ವಿಲ್ಲುಂ ಸರಲುಂ ಸ್ಮರೋಗ್ರಶಿಖಿಯುಂ ಸೀವಂತು ತನ್ನಿಂದುಮಂ
ಡಲಕಂ ತಾಂ ಮುಳಿವಂತು ತನ್ನ ಗಿಳಿಗಂ ಪೆಣ್ದುಂಬಿಗಂ ಗಂಡುಗೋ
ಗಿಲೆಗಂ ಸೈರಿಸದಂತು ತನ್ನ ಮಧುಗಂ ಕಾಯ್ವಂತು ಮಾಪ್ಪೆಂ ಸಖೀ ೮೪

ಎಸೆ; ಮತ್ತೊರ್ವ[2]ಳುಪ[2]ಹಸಿತಸುರಾಂಗನಾವಿಳಾಸರಂಗರಮಣೀಯಮುಖ
ಮಣಿಮುಕುರಿ—

ಕೆಯ್ವಿಡಿದರ[3]ಡಿ[3]ಯನಪ್ಪಲ್
ಮೆಯ್ವಾರದವೊಲ್ [4]ಸ[4]ರಂಗವಿರಹಿಗಳನಿಸಲ್
ಕೆಯ್ವಾರದವೊಲ್ ಮಾಬ್ಪವೆಂ
ಜಾಯ್ವೆಸೆಗೆಯ್ವಲ್ಕೆ ಗಳಪಲಱಿಯೆಂ ಕೆಳದೀ ೮೫

ಅಂತು ಮಧುಮತ್ತಕೋಕಿಳಕುಳದಂತೆ ಗಜಱಿ ಗರ್ಜಿಸಿ ಬೆಸನಂ ಬೇೞ್ವುದುಂ ; ಜೆಱಗುಂ ಸೆರಗುಮಾಗಿರ್ಕು[5]ಮುರ್ಕಿ[5]ದ[6]ಕು[6]ಂದಲೆವಾಯ್ದು ಪಂಚಶರಸಂ ಮಂಚದ ಕಾಲ್ಗೊಳ್ ತಂದು ಕಟ್ಟಿ ನಿನ್ನ ಪಗೆಯಂ ಬಗೆದಂತೆ ತೀರ್ಚಿ ತೋಱುವೆನೆಂದು ಬಂದು ಪೇೞ್ದ ಬಂಧೂಕಬಂಧು[7]ರಾಧರೆ[7]ಯನೆಲ್ಲಿ[8]ರ್ದ[8]ಂ ತೋಱು ತೋಱು ನಡೆ ನಡೆಯೆಂದು [9]ಮುಂದಿಟ್ಟು[9] ಮಂದೇತರಗಮನದಿಂ ಪೊಱಮಟ್ಟು ಕೆಲರುತ್ತುಂಗಕಠಿನಕುಚಕುಂಭೆಯರ್ ಮದನ ಮದಕರಿ [10]ಕರಿ [10]ಕರೇಣುನಿಕುರುಂಬದಂತೆಯುಂ, ಕೆಲರತಿಲಲಿತ ವಲ್ಗನವಿಲಸದಲಸಯಾನೆಯರನಂಗವಲ್ಲಭವಾಹವಾಹಿನಿಯಂತೆಯುಂ, ಕೆಲರುಚಿತ ಚೀತ್ಕಾರಚಕ್ರಚಾರುವಾಚಾಲಕಾಂಚೀಕಮನೀಯನಿತಂಬಿನಿಯರ್ ಮನ್ಮಥಮನೋರಥವ್ಯೂಹದಂತೆಯುಂ ಕೆಲರ್ ಕಟಾಕ್ಷಕುಂತಕಾಂತಭ್ರುಕುಟಿಕುಟಿಲಕಾರ್ಮುಕ ವಿಕಾರ[11]ಖಚಿ[11]ತವಿಕ್ರಾಂತೆಯರ್ ಕಂತುನೃಪತಿಪತ್ತಿಪತಾಕಿನಿಯಂತೆಯುಮೆಸೆದು ಕೈವೀಸಿದ ಕಾಮನೊಡ್ಡಣದಂ[12]ತೆ [12]ನಡೆವಾಗಳ್—

ದೆಸೆಯಂತಂ ತಾಗೆ ಮಂಜೀರಕಪಟಹಪಟುಧ್ವಾನಸಂತಾನಮುನ್ನ
ರ್ತಿಸೆ ಚಂಚಚ್ಚಿತ್ರಚೀನಾಂಚಳಭುಜಲತಿಕಾಕೇತನಂ ವ್ಯೋಮಮಂ ಚುಂ
ಬಿಸೆ ವೇಣೀ[13]ವ್ಯಸ್ತ[13]ಹಸ್ತಭ್ರಮಿತಕುಸುಮಮಾಳಾರಜೋರಾಜಿದೃಷ್ಟಿ
ಪ್ರಸರಪ್ರದ್ಯೋತಶಸ್ತ್ರಂ ನಡೆದುದು ವನಿತಾಸೈನ್ಯ[14]ಮಾ[14]ಲೋಕಭೂಸ್ಯಂ ೮೬

ಆವಲೀಲೋಸ್ಮಾಲತಾಂಘೋರುಹಕುಮುದಕುಳಂ ಭಂಜಿತೋನ್ಮಂಜರೀ ಪ
ಲ್ಲವಜಾಳಂ[15]ಪೀ[15]ತಶೀತೋದಕಮೆನಿಸಿದ ತತ್ಕಾಮಿನೀಸೈನ್ಯಯಾತ್ರೋ

---

[1] ಎಂದು (ಕ ಫ) [2] ಪ್ರ (ಕಫ) [3] ತಿ (ಫ) [4] ಸ್ಮ (ಫ) [5] ಮುಕ್ಕಿ (ಕ) [6] ಕ್ಕುಂ (ಕ) [7] ಪಾದಶ್ರೀ (ಫ) [8] ದಂ (ಕ) [9] ಕ ಪ್ರತಿಯಲ್ಲ [10] ಕಳಕದನ (ಕ) ಸಮದ (ಫ) [11] ಕಥಿ (ಕ ಗ ಫ) [12] ದವ (ಫ) [13] ಪ್ರಹಸ್ತ (ಕ) ಸ್ರಸ್ತ (ಗ) ಪ್ರಸ್ತ (ಫ) [14] ಮೂ (ಕ) [15] ಶೀ (ಫ)

ತ್ತವದೊಳ್ ತಾನಾ[1]ಯ್ತು[1]ಕಂಜೋತ್ಪಲವನತತಿ[2]ಕಂದಾ[2]ವಳೀಪಂ ಜಳಜ್ವಾ
ಲವನಂ ಶಾಖಾವಳೀಷಂ[3]ವಿಮಳತರಸ[3]ರಸಿಜಪ್ರಸಂಕಾವಳೀಷಂ ೮೭

ಮುಡಿಗಳ ಬಿಣ್ಪಿನಿಂ ಪದಕೊರಲ್ ಕುಚಕುಂಭದ ಭಾರದಿಂದಮೊ
ಕ್ಕುಡು ಪೊಱವಾರ ಬಿಗ್ಗೆ ಜಘನೋರ್ವಿ ನೊಕ್ಕುಡೆ ತಕ್ಕುವ ದೆಂದುಮಲ್ತೆ ಪೆ
ಣ್ಣುಡೆ ನಡೆಗೊಂಡೊಡಾ ಮುಡಿಗಳ ಕುಚದಾ ಪೊಱವಾರ ಬಿಣ್ಪಿನಿಂ
ಪೊಡವಿಯನಾಂತ ವಾಸುಕಿಯ ಮೂಱನೆ ಬಳ್ಕಿದುದೇಂ ವಿಚಿತ್ರಮೋ ೮೮

ಅಂತು ನಡೆದು ವನವಿಹಾರಪರಿಶ್ರಾಂತನಾಗಿ ನಾಗಸಂಪಗೆಯ ನೆಳಲಂ ಸಾರ್ದ ಲೀಲೇಕ್ಷುದಂಡಮುಮಂ ಗುಡಿದ ಮೊದಲೊಳೂಱ ಮಕರಂದಂ ಮಕರಂದದರುವ ಕೋಕ ಸುಕುಸುಮಂಗಳನಾಯ್ದು ನೀಡೆ ನಿಡುಗುಡಿತೆಯಿಂ ಕೊಂಡು ಪಲ್ಲವಪುಟಿಕೆಯೊಳ್ ತೀವ್ರತ್ತುಮಿರ್ದ ಕಂದರ್ಪದೇವನಂ ಕಂಡು ಪರಿಮುತ್ತುಗೊಂಡು ಪೊಡವಟ್ಟು ಕುಡುವ್ರರ್ಜನಿಂ ಜಡಿದು ಕಡೆಗಣ್ಣ ಬಾಸಿಗದಿಂ ಬಾಸುಳಾದಂತೆ ಬಡಿದು ಕೆಯ್ಯ ಪ್ರೊ[4]ಗಳನೆಂದು ಕೊಂಡು ಕರ್ಣನ ಕೋಲಂ ನೆಱದುಕೊಂಡು ತಳವೆಳಗಾದುದುಮಂ ಬಿಲ್ಲು ಬೆಂಡಾಗಿರ್ದುದುಮಂ ಕಂಡು ಕರುಣಿಸಿ—

ಸ್ಮರ ನಡೆ ನಡೆ ನಡೆಯದೊಡೆ
ಮ್ಮರಸಿಯ ಮುಂದಣ್ಗೆ ಪೂವಿನಿಂ ಪೆಡಗೈಗ
ಟ್ಟಿರಮುಯ್ವೆನೆಂದು ತತ್ತುಂ
ದಿರಯರ್ ಬಿಡೆ ಜಡಿದು ನುಡಿದು ಪಿಡಿದೇಳೆಮುಯ್ವರ್ ೮೯

ಆಗಳುತ್ತುಕೆಯರಪ್ಪ ನಟಿಯರ್ ರಸು ಭರವಸದಿಂ ತವಸಾಳಿಕೆ ಮುಂ ಪರಿತಂದವನ ಧನ್ವೇಕ್ಷುದಂಡಮುಮಂ [5]ನವ[5]ಕುಸುಮಮುಮಂ ನಿನ್ನ ಬಲ್ಲಾಳ ಬಿಲ್ಲ ನಂಬುಮಿವೆ ಕೊಳ್ಳೆಂದು ಮುಂದಿದಾಡುವ್ರಮಂ—

ಸ್ಮರನಂ ತಂದಿರೆ ತನ್ನಿ ಮೆಲ್ಲಿದನವಂ ಮಾಯಾವಿ ನೋಟಕ್ಕೆ ನಿ
ಷ್ಠುರನೋ ಸೌಮ್ಯನೊ ನೋಡಿದಪ್ಪೆನಿಳೆಯೊಳಾ ಕಾಮಂ ಕರಂ ಚೆಲ್ವನಂ
ಬರ ಮಾ[6]ತ್ರಲ್ಲದೆ[6] ಕಂ[7]ಡೆವಿ[7]ಲ್ಲೆಲ್ಲಿಗೆ ನೇಡಂತೆಂತವಂ ಸಿಲ್ಕಿದಂ
ಪಿಡಿದುಂ ಪೆಗ್ಗೊಳಿಪ್ರೋಗಲೀಗುಮೆ ದಿಟಕ್ಕೆನ್ನಾಣೆ ಎನ್ನಂ ಸ್ಮರಂ ೯೦

ಅವನ ನವಮಧುರಭಾವನು
ನವನ ಗಭೀರತೆಯನವನ ಪೊಸದೇಸೆಯ[9]ನಾ
ನ್ನವನ [10]ಸುಲಲಿತವಿಳಾಸ[10]ಮ
ನವ[11]ಗ್ರೈ[11]ಸಿದೆನಿದನಿನೆ ಭಾವಜ್ಞನೇ ಜಗದೊಳ್ ೯೧

---

[1] ಯ್ದು (ಗ) [2] ಬಿಂದಾ. (ಗ) [3] ವಿಮಳತರ (ಕ ಘ) [4] ೩ (ಘ) [5] ಗಡ (ಕ ... ಕೀ (ಘ) [6] ಮನ್ಮಥ (ಘ) [7] ತಂತಮು (ಘ) [8] ಡಿರಿ (ಕ) ಡರಿ (ಗ ಘ) [9] ನ (ಘ)
[10] ಲಸಲೀಲವಿಳಸ (ಕ) ಸಲ್ಲಲಿತಭಾವ (ಘ) [11] ನೆನಿ (ಘ)

# ದ್ವಾದಶಾಶ್ವಾಸಂ

ಶ್ರೀ[1]ಜಿ[1]ನಪತಿ ಪುಗೆ ಶುಭಗುಣ
ಭಾಜನನಂದೆಯ್ದೆ ವಂದು ಪನ್ನುರ್ವಂದರನೇಂ
ರಾಜಿಸಿದು[2]ದೊ[2] ಬದ್ದವಣಂ
ಬಾಜಿ[3]ಸಿದ[3]ವೊಲೊಗೆದ ಸಮದಶುಕಪಿಕನಿನದಂ ೧

ಅವನಂ ಶೃಂಗಾರದಿಂ ಪುಟ್ಟಿಸಿ,ಬಳೆಯಿಸಿ ಹೃ[4]ಚ್ಛ[4]ಯ್ಯೆಯೊಳ್,[5]ಯೌವ[5]ನಂ ತೀ
ವ್ರವ್ರದಂ/ಕಂಡಬ್ಬುಜಿಂ ಪೂಮುಡಿವಬ್ಬುಯಿಗೆಯಂ ಪುರ್ಬುವಿಲ್ಲಂ ಕಟಾಕ್ಷೇ
ಷುವನೀಯಲ್ಕೆಂದು/ಕಂದರ್ಪನನಭಿಮತರಾಜ್ಯಾಭಿಷೇಕಕ್ಕೆ ತರ್ಪಂ
ತೆ[6]ವೊ[6]ಲಾಗಳ್ ತಂದರುದ್ಯತ್ಕುಚಕಲಶಧರಾಕ್ರಾಂತೆಯರ್ ಕಾಂತೆಯರ್ಕಳ್ ೨

ಲತೆಯೊಡ್ಡುಂ ಕಾಮನುಂ ಚಂದ್ರನ ಬಳಘರನುಂ ಕಾಮನುಂ ಮೀನಕೇತು
ದ್ಯುತಿಯೊಡ್ಡುಂ ಕಾಮನುಂ ಕೋಕಿಲದ ಬಳಘರನುಂ ಕಾಮನುಂ ಬರ್ಪವೊಲ್ ದೋ
ಲ[7]ತಿ[7]ಕಾಲಂಕಾರೆಯರ್ ಪುಷ್ಪರತವದನೆಯರ್ ಸಂಚಳನ್ನೇತ್ರೆಯರ್[8]ಪ್ರೊ[8]ೀ
ಸ್ನತವಕ್ಷೋಜಾತೆಯರ್ ಪೋ ಬರೆ ಕರಮೆಸೆದಂ ಭಾರತೀಚಿತ್ರಚೋರಂ ೩

ಇರುಳ ಮೆಯ್ಯೊಳೆ ನಿದ್ರೆಯೊಳಿರ್ದ ಸೌಂ
ದರಿಯ ಚಿತ್ರಮನೀತನೆ ಕಳ್ದನಂ
ದರಸನಂ ಪಿಡಿದೋವದೆ ತರ್ಪವೋಲ್
ತರುಣಿಯರ್ ತರುತುಂ ಕರಮೊಪ್ಪಿದರ್ ೪

ಮುರಿದು ಕದಿರ್ವರಿದು ರಣಕೇ
ಸರಿಯಂ ಸುತ್ತಿಱಿದು ಗರ್ಭನಂಗೊಳ್ವಬಲಾ
ಸ್ಫುರಿತಾಕ್ಷಿ ರುಚಿಗಳನ್ನಿಸಂ
ಜರದೊಳ್ ಸಱಿಗೆಯದ್ದು ತರ್ಪವೊಲ್ ಸೊಗಯಿಸುಗುಂ ೫

ರಮಣನ ಪರಾಂಗಶೋಭೆಯ
ನೆಮೆಯಿಕ್ಕದೆ ನೋಡುತೆಯ್ದೆ ಬರುತಿರ್ಪಬಲಾ
ನವಉದಯಮೆಸೆದುದು ಕಣ್ಣಿಂ
ದಮೆ ಕ್ರೂಂಕಿ ಕಡಂಗಿ ನೂಂಕಿ ತರ್ಪವೊಲವನಂ ೬

---

[1] ಜ (ಘ ಚ) [2] ಪೊ (ಕ) [3] ಸುವ (ಘ) [4] ಚ್ಛಾ (ಕ ಗ ಚ) [5] ಜೀವ (ಕ ಗ) ಜವ್ವ (ಘ ಚ) [6] ಯೊ (ಕ) [7] ತಾಳಿ (ಕ) [8] ಸೋ (ಕ ಘ ಚ)

